# ಕರ್ನಾಟಕ ವಿಧಾನಮಂಡಲ


**ಕರ್ನಾಟಕ ಶಾಸಕಾಂಗ ಪತ್ರಿಕೆ**

**(ತ್ರೈಮಾಸಿಕ ಪತ್ರಿಕೆ)**

**ಜನವರಿ – ಫೆಬ್ರವರಿ – ಮಾರ್ಚ್ 2021**

**ಸಂಪುಟ–III ಸಂಖ್ಯೆ –1**



**ಪ್ರಕಟಣೆ:**

**ಸಂಶೋಧನಾ ಮತ್ತು ಉಲ್ಲೇಖನಾ ಶಾಖೆ,**

**ಕರ್ನಾಟಕ ವಿಧಾನ ಸಭೆ ಸಚಿವಾಲಯ, ವಿಧಾನಸೌಧ,**

**ಬೆಂಗಳೂರು – 560 233.**

## ವಿಶೇಷ ಸೂಚನೆ

ಕರ್ನಾಟಕ ಶಾಸಕಾಂಗ ಪತ್ರಿಕೆಯು ಕರ್ನಾಟಕ ವಿಧಾನ ಸಭೆ/ವಿಧಾನ ಪರಿಷತ್ತಿನ ಸದಸ್ಯರುಗಳ ಪರಾಮರ್ಶೆಗಾಗಿ ಪ್ರಕಟಿಸಲಾಗುತ್ತಿದ್ದು, ಇದು ಆಂತರಿಕ ಪ್ರಕಟಣೆಗೆ ಮಾತ್ರ ಸೀಮಿತವಾಗಿರುತ್ತದೆ.

ಈ ಪತ್ರಿಕೆಯಲ್ಲಿ ಅಳವಡಿಸಲಾಗಿರುವ ಮಾಹಿತಿಗಳು ವಿವಿಧ ದಿನ ಪತ್ರಿಕೆಗಳಲ್ಲಿ ಪ್ರಕಟವಾಗಿರುವ ಸುದ್ದಿಗಳ ಆಧಾರಿತವಾಗಿದ್ದು, ಇದರಲ್ಲಿ ನ್ಯೂನತೆ, ವ್ಯತ್ಯಾಸಗಳಿಂದ ಅಥವಾ ನಿಖರತೆಯ ಕೊರತೆಯಿಂದ ಯಾವುದೇ ವ್ಯಕ್ತಿಗೆ ಉಂಟಾಗಬಹುದಾದ ನಷ್ಟ/ಹಾನಿಗೆ ವಿಧಾನ ಸಭಾ ಸಚಿವಾಲಯವು ಯಾವುದೇ ರೀತಿ ಜವಾಬ್ದಾರವಾಗುವುದಿಲ್ಲ.

**ಸೂಚನೆ: ಪತ್ರಿಕೆಯು ವಿಧಾನ ಮಂಡಲದ ಅಂತರ್ಜಾಲ http:/kla.kar.nic.inನಲ್ಲೂ ಲಭ್ಯವಿದೆ.**

# ಮುನ್ನುಡಿ

ಕರ್ನಾಟಕ ವಿಧಾನಮಂಡಲದ ಸಂಶೋಧನಾ ಮತ್ತು ಉಲ್ಲೇಖನಾ ಶಾಖೆಯು ಉಭಯ ಸದನಗಳ ಮಾನ್ಯ ಸದಸ್ಯರುಗಳ ಉಪಯೋಗಕ್ಕಾಗಿ ಕರ್ನಾಟಕ ಶಾಸಕಾಂಗ ತ್ರೈಮಾಸಿಕ ಪತ್ರಿಕೆಯ ಸಂಪುಟ – III ರ ಒಂದನೇ ಸಂಚಿಕೆಯನ್ನು ಪ್ರಕಟಪಡಿಸುತ್ತಿದೆ.

ತ್ರೈಮಾಸಿಕ ಶಾಸಕಾಂಗ ಪತ್ರಿಕೆಯು ಮುಖ್ಯವಾಗಿ ಕರ್ನಾಟಕ ವಿಧಾನಮಂಡಲದ ಎರಡೂ ಸದನಗಳ ಶಾಸಕಾಂಗದ ಸುದ್ದಿಗಳು, ಲೋಕಸಭೆ, ರಾಜ್ಯಸಭೆಗಳ, ಸಂಸದೀಯ ವ್ಯವಹಾರಗಳಿಗೆ ಸಂಬಂಧಿಸಿದ ಪ್ರಮುಖ ಸುದ್ದಿಗಳು, ರಾಜ್ಯಗಳ, ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಹಾಗೂ ಇತರೆ ವಿಷಯಗಳನ್ನೊಳಗೊಂಡಿರುತ್ತದೆ.

ಈ ಸಂಚಿಕೆಯಲ್ಲಿ 2021ನೇ ಸಾಲಿನ ಜನವರಿ, ಫೆಬ್ರವರಿ ಮತ್ತು ಮಾರ್ಚ್ ತಿಂಗಳ ಅವಧಿಯಲ್ಲಿನ ಪ್ರಮುಖ ಸುದ್ದಿ, ಮಾಧ್ಯಮಗಳಲ್ಲಿ ಪ್ರಕಟವಾದ ದೈನಂದಿನ ಸುದ್ದಿಗಳನ್ನು ಸಂಗ್ರಹಿಸಿ ಪ್ರಕಟಿಸಲಾಗಿದೆ.

ಸಂಶೋಧನಾ ಮತ್ತು ಉಲ್ಲೇಖನಾ ವಿಭಾಗವು ಸಿದ್ಧಪಡಿಸಿ ಹೊರತರುತ್ತಿರುವ ಈ ಪತ್ರಿಕೆಯ ಗುಣಮಟ್ಟವನ್ನು ಉನ್ನತೀಕರಿಸಲು ಹಾಗೂ ಹೆಚ್ಚು ವಿಷಯಾಸಕ್ತವಾಗಿಸಲು ಇದರ ಬೆಳವಣಿಗೆಯ ಸುಧಾರಣೆಗೆ ಮಾನ್ಯ ಸದಸ್ಯರುಗಳಿಂದ ಅಮೂಲ್ಯ ಸಲಹೆ ಮತ್ತು ಸೂಚನೆಗಳನ್ನು ಬರಹ ರೂಪದಲ್ಲಿ ಸ್ವೀಕರಿಸಲು ಸದಾ ಸ್ವಾಗತವಿರುತ್ತದೆ.

**ಎಂ.ಕೆ.ವಿಶಾಲಾಕ್ಷಿ**
ಕಾರ್ಯದರ್ಶಿ(ಪ್ರ),
ಕರ್ನಾಟಕ ವಿಧಾನ ಸಭೆ.

ಬೆಂಗಳೂರು
ದಿನಾಂಕ: 29–7–2021

# ಕರ್ನಾಟಕ ಶಾಸಕಾಂಗ ಪತ್ರಿಕೆ

## (ತ್ರೈಮಾಸಿಕ ಪತ್ರಿಕೆ)

## ಜನವರಿ, ಫೆಬ್ರವರಿ ಮತ್ತು ಮಾರ್ಚ್ 2021

## ಸಂಪುಟ–III ಸಂಖ್ಯೆ – 1

## ಪರಿವಿಡಿ

| ಕ್ರಮ ಸಂಖ್ಯೆ | ವಿಷಯ | ಪುಟ ಸಂಖ್ಯೆ |
|---|---|---|
| | **ಭಾಗ–9** **ಅಂತರರಾಷ್ಟ್ರೀಯ ಸುದ್ದಿಗಳು** | |
| 1. | ಸ್ಪೀಕರ್ ಸ್ಥಾನಕ್ಕೆ ನ್ಯಾನ್ಸಿ ಪೆಲೂಸಿ ಆಯ್ಕೆ | 243 |
| 2. | ಅಮೆರಿಕ ಶೇಮ್ | 243 |
| 3. | ಶ್ವೇತಭವನಕ್ಕೆ ಕಪ್ಪು ಕಲೆ | 244 |
| 4. | ಸ್ಯಾನ್ ಫ್ರಾನ್ಸಿಸ್ಕೊ–ಬೆಂಗಳೂರು ನಾನ್ ಸ್ಟಾಪ್ ಏರ್ ಇಂಡಿಯಾ ವಿಮಾನ ಹಾರಾಟ | 245 |
| 5. | ಟ್ರಂಪ್‌ಗೆ ವಾಗ್ದಂಡನೆ ಕೂಡಲೇ ರಾಜೀನಾಮೆ ನೀಡಲು ಸ್ಪೀಕರ್ ಪೆಲೂಸಿ ಒತ್ತಡ | 245–246 |
| 6. | ಸೋಂಕು ಹೆಚ್ಚಳ : ಬೀಜಿಂಗ್‌ನಲ್ಲಿ ಹೈ ಅಲರ್ಟ್ | 246 |
| 7. | ಬ್ರಿಟನ್ ಸಂಸತ್ತಿನಲ್ಲಿ ಕಾಶ್ಮೀರ ವಿಷಯ ಚರ್ಚೆ: ಭಾರತ ಆಕ್ಷೇಪ | 246 |
| 8. | ಬೈಡೆನ್ ಸರ್ಕಾರದಲ್ಲಿ 2 ಕನ್ನಡಿಗರು ಸೇರಿ 20 ಮಂದಿ ಭಾರತೀಯರು | 246–247 |
| 9. | ಬೈಡೆನ್ ಈಗ ಅಮೆರಿಕ ಅಧ್ಯಕ್ಷ | 247 |
| 10. | ಟ್ರಂಪ್ ನೀತಿ ಮುಕ್ತಾಯ | 247–248 |
| 11. | ಕಡಿಮೆ ವೇತನ ಇದ್ರೂ ಸಿಗುತ್ತೆ ಗ್ರೀನ್ ಕಾರ್ಡ್:ವಲಸೆ ವಿಧೇಯಕದಲ್ಲಿದೆ ಅನುಕೂಲ | 249 |
| 12. | ಮಾನವಕುಲಕ್ಕೆ ಕಂಟಕವಾಗಲಿದೆಯೇ ಶಿಥಿಲ ಕಟ್ಟಡಗಳು | 249 |
| 13. | Tech giants, big biz groups laud Biden's immigration reforms | 249–251 |
| 14. | ಆಡಳಿತಾರೂಢ ಪಕ್ಷದಿಂದಲೇ ನೇಪಾಳ ಪ್ರಧಾನಿಯ ಉಚ್ಚಾಟನೆ | 252 |
| 15. | ಸಂಗಾತಿ ವೀಸಾ ನಿಷೇಧ ಹಿಂದಕ್ಕೆ | 252 |
| | **ಭಾಗ–10** **ಪ್ರಶಸ್ತಿಗಳು** | |
| 1. | ಸಂಗೀತ ನೃತ್ಯ ಅಕಾಡೆಮಿ ಪ್ರಶಸ್ತಿ ಪ್ರಕಟ | 253 |
| 2. | 121 ಪೊಲೀಸರಿಗೆ ಮುಖ್ಯಮಂತ್ರಿ ಪದಕ | 253 |
| 3. | ಜಾನಪದ ಅಕಾಡೆಮಿ ಪ್ರಶಸ್ತಿ ಪ್ರಕಟ | 253–254 |
| 4. | ಹಿರಿಯ ಕವಿ ಪ್ರೊ ಶಿವಪ್ರಕಾಶಗೆ ಅಂಬಿಕಾತನಯದತ್ತ ಪ್ರಶಸ್ತಿ | 254 |

ಸೂಚನೆ: – ಇಲ್ಲಿ ಆಯ್ಕೆ ಮಾಡಿರುವ ಲೇಖನಗಳು ಪ್ರಮುಖ ದಿನಪತ್ರಿಕೆಗಳಿಂದ ಆಯ್ದು ಪ್ರಕಟಿಸಲಾಗಿದೆ.
ಇಲ್ಲಿನ ಅಭಿಪ್ರಾಯಗಳು ಸಂಪೂರ್ಣ ಲೇಖಕರದ್ದಾಗಿರುತ್ತದೆ.

# ಭಾಗ–1

# ವಿಧಾನ ಮಂಡಲದ ಸುದ್ದಿಗಳು

## 1. ಪರಿಷತ್ ಗಲಾಟೆ ತನಿಖೆಗೆ ಸದನ ಸಮಿತಿ: ಸಂಘರ್ಷದ ಸ್ವರೂಪ

ವಿಧಾನ ಪರಿಷತ್ ಇತಿಹಾಸದಲ್ಲಿ ಕಪ್ಪುಚುಕ್ಕೆಯಾಗಿ ದಾಖಲಾದ ವಿದ್ಯಮಾನದ ತನಿಖೆಗೆ ಸಭಾಪತಿ ಪ್ರತಾಪಚಂದ್ರ ಶೆಟ್ಟಿ ಅವರು ಸದನ ಸಮಿತಿ ರಚನೆ ಮಾಡಿರುವ ತೀರ್ಮಾನವೂ ಇದೀಗ ಸಂಘರ್ಷದ ಸ್ವರೂಪ ಪಡೆದಿದೆ.

ಸದನ ಸಮಿತಿಯ ತನಿಖಾ ವ್ಯಾಪ್ತಿ ಪರಿಷತ್‌ನಲ್ಲಿ ಡಿಸೆಂಬರ್ 15 ರಂದು ನಡೆದ ಘಟನೆಗಷ್ಟೇ ತನಿಖೆ ಸೀಮಿತವಾಗದೆ ಉಪ ಸಭಾಪತಿ ಎಸ್.ಎಲ್. ಧರ್ಮೇಗೌಡರ ಆತ್ಮಹತ್ಯೆ ಪ್ರಕರಣವರೆಗೂ ವಿಸ್ತರಿಸುವ ಸಾಧ್ಯತೆ ಇರುವುದು. ಪಕ್ಷದಲ್ಲೇ ಇದ್ದರೂ ಜೆಡಿಎಸ್ ಪಾಲಿಗೆ ರೆಬಲ್ ಆಗಿರುವ ಮರಿತಿಬ್ಬೇಗೌಡರ ಅಧ್ಯಕ್ಷತೆಯ ಸಮಿತಿಯಲ್ಲಿ ಬಿಜೆಪಿ ಪಾಲಿಗೆ ಬಂಡಾಯಗಾರರಾಗಿರುವ ಹೆಚ್. ವಿಶ್ವನಾಥ್ ಇರುವುದು ಬಿಜೆಪಿ–ಜೆಡಿಎಸ್‌ಗೆ ನುಂಗಲಾರದ ತುತ್ತಾಗಿದೆ.

ಪ್ರಕರಣದಲ್ಲಿ ಪ್ರತ್ಯಕ್ಷ ಹಾಗೂ ಪರೋಕ್ಷ ಪಾಲ್ಗೊಳ್ಳುವಿಕೆ ಇರದ ಹಿರಿಯ ಸದಸ್ಯರನ್ನೊಳಗೊಂಡ ಸದನ ಸಮಿತಿ ರಚಿಸಲಾಗಿದೆ. ಮರಿತಿಬ್ಬೇಗೌಡರು ಉಪ ಸಭಾಪತಿಯಾಗಿ ಕೆಲಸ ಮಾಡಿದವರು. ಜೊತೆಗೆ ಕಾಂಗ್ರೆಸ್‌ನಿಂದ ಬಿ.ಕೆ.ಹರಿಪ್ರಸಾದ್, ಆರ್.ಬಿ.ತಿಮ್ಮಾಪುರ, ಬಿಜೆಪಿಯಿಂದ ಹೆಚ್.ವಿಶ್ವನಾಥ್, ಎಸ್.ವಿ.ಸಂಕನೂರ ಅವರನ್ನು ಸೇರಿಸಲಾಗಿದೆ. ಇದು ಸರಿಯಾಗಿಯೇ ಇದೆ ಎಂಬುದು ಸಭಾಪತಿಯವರ ವಾದ.

ಸಭಾಪತಿಯವರಿಗೆ ಅಧಿಕಾರ ಇದ್ದರೂ, ಸದನ ಸಮಿತಿ ರಚನೆ ಸದನದಲ್ಲೇ ತೀರ್ಮಾನ ಕೈಗೊಳ್ಳಬೇಕು. ಇಲ್ಲವೇ ಸಭಾನಾಯಕರು, ಪ್ರತಿಪಕ್ಷ ನಾಯಕರ ಜೊತೆ ಚರ್ಚಿಸಿ ಅವರ ಅಭಿಪ್ರಾಯ ಪಡೆದು ನಂತರ ತೀರ್ಮಾನ ಕೈಗೊಳ್ಳಬೇಕು. ಅದು ಸಂಪ್ರದಾಯ ಹಾಗೂ ಪದ್ಧತಿ ಎಂಬುದು ಬಿಜೆಪಿ–ಜೆಡಿಎಸ್ ಪ್ರತಿಪಾದನೆ.

ಈ ವಿಚಾರದಲ್ಲಿ ಮತ್ತೆ ರಾಜ್ಯಪಾಲರ ಮೊರೆ ಹೋಗುವ ಬಗ್ಗೆಯೂ ಬಿಜೆಪಿ–ಜೆಡಿಎಸ್ ಚಿಂತನೆ ನಡೆಸುತ್ತಿದೆ ಎಂದು ಮೂಲಗಳು ತಿಳಿಸಿವೆ. ಸದನ ಸಮಿತಿ ರಚನೆಯೂ ಸಂಘರ್ಷದ ಸ್ವರೂಪ ಪಡೆದಂತಾಗಿದೆ.

ಸದನ ಸಮಿತಿ ರಚನೆ ವಿಚಾರದಲ್ಲಿ ಸಭಾಪತಿಯವರು ಟಿಪ್ಪಣಿ ಮೂಲಕ ಸೂಚನೆ ನೀಡಿ ಮೂರು ದಿನ ಕಳೆದರೂ ಪರಿಷತ್ ಕಾರ್ಯದರ್ಶಿ ಅಧಿಕೃತ ಆದೇಶ ಹೊರಡಿಸಲಿಲ್ಲ, ಕಾರ್ಯದರ್ಶಿಯವರ ವಿರುದ್ಧವು ಕರ್ತವ್ಯ ಲೋಪ ಆರೋಪ ಇರುವುದರಿಂದ ಒಂದು ರೀತಿಯಲ್ಲಿ ಇಕ್ಕಟ್ಟಿನ ಸ್ಥಿತಿ ಉಂಟಾಗಿದೆ. ಸಭಾಪತಿಯವರ ಸೂಚನೆ ಪಾಲಿಸುವುದು ಕಾರ್ಯದರ್ಶಿಯವರ ಕರ್ತವ್ಯ. ಒಂದೊಮ್ಮೆ ಅವರು ಕ್ರಮ ಕೈಗೊಳ್ಳದಿದ್ದರೆ ಕಾರ್ಯದರ್ಶಿ ಅವರನ್ನು ರಜೆ ಮೇಲೆ ಕಳುಹಿಸಿ ಬೇರೊಬ್ಬರಿಗೆ ಆ ಹೊಣೆಗಾರಿಕೆ ವಹಿಸುವ ಅಧಿಕಾರವು ಸಭಾಪತಿಯವರಿಗೆ ಇದೆ ಎಂದು ಹೇಳಲಾಗಿದೆ. ಆಗ, ಪ್ರಕರಣ ಮತ್ತೊಂದು ಸ್ವರೂಪ ಪಡೆದುಕೊಳ್ಳುವ ಸಾಧ್ಯತೆಯು ಇದೆ.

**ತಾಂತ್ರಿಕ ಅಂತ್ಯದ ಉದ್ದೇಶ:** ಈ ಮಧ್ಯೆ, ಸಭಾಪತಿಯವರು ಸ್ವಯಂ ಪ್ರೇರಿತವಾಗಿ ರಾಜೀನಾಮೆ ಕೊಡಲು ಮುಂದಾಗಿ ಬಂಗಲೆ ಹಾಗೂ ಕಾರು ವಾಪಸ್ಸು ಮಾಡಿದ್ದರು. ಆದರೆ, ಪ್ರಕರಣ ಬೇರೆ–ಬೇರೆ ತಿರುವು ಪಡೆಯುತ್ತಿರುವುದರಿಂದ ತಾರ್ಕಿಕ ಅಂತ್ಯ ಕಾಣಿಸಲು ಸದನ ಸಮಿತಿ ರಚನೆಗೆ ತೀರ್ಮಾನಿಸಿದ್ದಾರೆ. ಈ ಪ್ರಕ್ರಿಯೆ ಮುಗಿದ ನಂತರ ರಾಜೀನಾಮೆ ಸಲ್ಲಿಸುವ ಸಾಧ್ಯತೆಯಿದೆ ಎಂದು ಹೇಳಲಾಗಿದೆ.

ಜನವರಿ 28ಕ್ಕೆ ವಿಧಾನಮಂಡಲ ಅಧಿವೇಶನ ನಿಗದಿಯಾಗುವ ಸಾಧ್ಯತೆಯಿದ್ದು, 14 ದಿನದ ಮುಂಚೆ ಸಭಾಪತಿ ವಿರುದ್ಧ ಅವಿಶ್ವಾಸ ನೋಟಿಸ್ ನೀಡಲು ಬಿಜೆಪಿ–ಜೆಡಿಎಸ್ ಸಿದ್ಧತೆ ನಡೆಸಿದೆ.

ಆಧಾರ: ಉದಯವಾಣಿ, ದಿನಾಂಕ:02.01.2021

## 2. 28 ರಿಂದ ಜಂಟಿ ಅಧಿವೇಶನ

ರಾಜ್ಯ ವಿಧಾನಮಂಡಲದ ಉಭಯ ಸದನಗಳ ಜಂಟಿ ಅಧಿವೇಶನವನ್ನು ಉದ್ದೇಶಿಸಿ ಜನವರಿ 28 ರಂದು ಬೆಳಗ್ಗೆ 11ಕ್ಕೆ ರಾಜ್ಯಪಾಲ ವಜೂಭಾಯಿ ವಾಲಾ ಭಾಷಣ ಮಾಡುವರು.

ಈ ಕುರಿತು ರಾಜ್ಯ ಸರ್ಕಾರ ಅಧಿಸೂಚನೆ ಪ್ರಕಟಿಸಿದ್ದು, ಜನವರಿ 28ರಿಂದ ಫೆಬ್ರವರಿ 5ರವರೆಗೆ ಅಧಿವೇಶನ ನಡೆಯಲಿದೆ. ಜನವರಿ 29ರಂದು ರಾಜ್ಯಪಾಲರ ಭಾಷಣದ ಮೇಲೆ ಚರ್ಚೆ ನಡೆಯಲಿದೆ. ಜನವರಿ 30 ಹಾಗೂ 31 ರಂದು ಶನಿವಾರ ಮತ್ತು ಭಾನುವಾರ ಕಲಾಪ ನಡೆಯುವುದಿಲ್ಲ. ಫೆಬ್ರವರಿ 1ರಿಂದ 5ರವರೆಗೆ ಅಧಿವೇಶನ ಮುಂದುವರಿಯುವುದು. ಈ ಬಾರಿ ಒಟ್ಟು ಏಳು ದಿನಗಳ ಕಾಲ ಕಲಾಪ ನಡೆಯಲಿದೆ.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:19.01.2021

## 3. ಶಾಸಕರಿಗೆ ಸಂಸದೀಯ ಪಟು ಪ್ರಶಸ್ತಿ

ಶಾಸನ ಸಭೆಯಲ್ಲಿ ತಮ್ಮ ಮಾತಿನ ಮೂಲಕ ಎಲ್ಲರನ್ನು ಸೆಳೆಯುವಂತಹ ಶಾಸಕರಿಗೆ ಅತ್ಯುತ್ತಮ ಸಂಸದೀಯ ಪಟು ಪ್ರಶಸ್ತಿ ನೀಡಲು ಉದ್ದೇಶಿಸಿದ್ದು, ಇದಕ್ಕಾಗಿ ವಿಧಾನಸಭಾಧ್ಯಕ್ಷರ ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು ರಚನೆ ಮಾಡಲಾಗಿದೆ.

ವಿಧಾನಮಂಡಲದಲ್ಲಿ ಇತ್ತೀಚಿನ ದಿನಗಳಲ್ಲಿ ಚುನಾಯಿತ ಸದಸ್ಯರು ಮಾತನಾಡುವುದೇ ಕಡಿಮೆ. ಮಾತನಾಡಿದರೂ ಅದು ಕೇವಲ ತಮ್ಮ ಕ್ಷೇತ್ರಕ್ಕೆ ಸೀಮಿತ ಇಲ್ಲವೆ ಸರ್ಕಾರದ ವಿರುದ್ಧದ ವಾಗ್ದಾಳಿಗೆ ಸೀಮಿತವಾಗುತ್ತಿದೆ. ಶಾಸಕರಾದವರು ಕೇವಲ ವಿಧಾನಸಭೆಗೆ ಬಂದು ಹೋಗುವುದಲ್ಲ. ಎಲ್ಲ ಪ್ರಮುಖ ವಿಷಯಗಳ ಚರ್ಚೆಯಲ್ಲಿ ಪಾಲ್ಗೊಂಡು ಅದನ್ನು ತಮ್ಮದೇ ಆದ ಮಾತಿನಲ್ಲಿ ಚರ್ಚೆ ಮಾಡಿದಲ್ಲಿ ಅದಕ್ಕೊಂದು ಅರ್ಥ ಬರುತ್ತದೆ. ಈ ಹಿಂದೆ ಶಾಸಕರಾದವರು ತಮ್ಮ ಮಾತಿನ ಮೂಲಕ ಎಲ್ಲರ ಗಮನ ಸೆಳೆಯುತ್ತಿದ್ದರು. ಶಾಸನ ಸಭೆಯಲ್ಲಿ ಅಂತಹ ವಾತಾವರಣ ಮೂಡಿಸಲು ವಿಧಾನ ಸಭೆಯ ಸದಸ್ಯರೊಬ್ಬರಿಗೆ ಪ್ರತಿ ವರ್ಷ ಅತ್ಯುತ್ತಮ ಸಂಸದೀಯ ಪಟು ಅಥವಾ ಅತ್ಯುತ್ತಮ ಶಾಸಕ ಎಂಬ ಪ್ರಶಸ್ತಿ ನೀಡಲು ವಿಧಾನಸಭಾಧ್ಯಕ್ಷರ ಅಧ್ಯಕ್ಷತೆಯಲ್ಲಿ ಆಯ್ಕೆ ಸಮಿತಿಯನ್ನು ರಚನೆ ಮಾಡಲಾಗಿದೆ.

ಸಮಿತಿಯಲ್ಲಿ ಉಪ ಸಭಾಧ್ಯಕ್ಷರು, ಮುಖ್ಯಮಂತ್ರಿ, ವಿರೋಧ ಪಕ್ಷದ ನಾಯಕರು, ಕಾನೂನು ಹಾಗೂ ಸಂಸದೀಯ ವ್ಯವಹಾರಗಳ ಸಚಿವರು, ಸಭಾಧ್ಯಕ್ಷರು ನಾಮ ನಿರ್ದೇಶನ ಮಾಡುವ ಒಬ್ಬರು ಸದಸ್ಯರಾಗಿರುತ್ತಾರೆ. ಸಮಿತಿಯ ಶಿಫಾರಸ್ಸಿನ ಮೇಲೆ ಪ್ರಶಸ್ತಿಗೆ ಆಯ್ಕೆಯಾದ ಶಾಸಕರ ಒಪ್ಪಿಗೆಯನ್ನು ಪಡೆಯಬೇಕು. ಒಬ್ಬ ಶಾಸಕರಿಗೆ ಜೀವಮಾನದಲ್ಲಿ ಒಮ್ಮೆ ಮಾತ್ರ ಪ್ರಶಸ್ತಿ ನೀಡಲಾಗುತ್ತದೆ. ಆದರೆ, ಸಭಾಧ್ಯಕ್ಷರು, ಉಪ ಸಭಾಧ್ಯಕ್ಷರು, ಸಂಸದೀಯ ಪದಾಧಿಕಾರಿಗಳು, ಸಚಿವರು, ಸಂಸದೀಯ ಕಾರ್ಯದರ್ಶಿಗಳನ್ನು ಅತ್ಯುತ್ತಮ ಶಾಸಕ ಪ್ರಶಸ್ತಿಗೆ ಪರಿಗಣಿಸುವುದಿಲ್ಲ. ಪ್ರಶಸ್ತಿ ಸಭಾಧ್ಯಕ್ಷರ ಸಹಿಯುಳ್ಳ ವಿಧಾನಸೌಧದ ಕಟ್ಟಡದ ಮುದ್ರೆಯುಳ್ಳ ಬೆಳ್ಳಿ ಪದಕವನ್ನು ಒಳಗೊಂಡಿರುತ್ತದೆ.

ಶಾಸಕರು ಕನ್ನಡ ಭಾಷೆಯಲ್ಲಿ ಪಾಂಡಿತ್ಯ ಹೊಂದಿರಬೇಕು. ಸದನದ ಒಳ–ಹೊರಗೆ ವಿಧಾನ ಸಭೆಯ ಕಾರ್ಯವಿಧಾನ ಹಾಗೂ ನಡವಳಿಕೆ ನಿಯಮಗಳ ಅರಿವು ಮತ್ತು ಪಾಲನೆ, ಸಭಾಧ್ಯಕ್ಷರು ನೀಡುವ ಸೂಚನೆಗಳನ್ನು ಅನುಸರಿಸುವ ಮತ್ತು ಗ್ರಹಿಸುವ ಸಾಮರ್ಥ್ಯ, ವಿಧಾನಮಂಡಲ ಮತ್ತು ವಿಧಾನ ಸಭೆಯ ಸಮಿತಿಗಳಲ್ಲಿ ಭಾಗವಹಿಸುವಿಕೆ, ಸದನದಲ್ಲಿ ಹಾಜರಾತಿ, ಇತರೆ ಸದಸ್ಯರೊಂದಿಗಿನ ಸೌಹಾರ್ದಯುತ ಸಂಬಂಧ, ಸದನದಲ್ಲಿ ಕೇಳಲಾದ ಪ್ರಶ್ನೆಗಳ ಗುಣಮಟ್ಟ ಪ್ರಸ್ತುತಪಡಿಸುವ ವಿಧಾನ, ಸದನದಲ್ಲಿ ಉಂಟಾಗುವ ಪ್ರತಿರೋಧ ಪರಿಸ್ಥಿತಿಗಳ ಕಾರ್ಯ ನಿರ್ವಹಣೆ ಸಂದರ್ಭದಲ್ಲಿ ತೋರುವ ಸಹಕಾರ ಮೊದಲಾದ ಅಂಶಗಳನ್ನು ಪ್ರಶಸ್ತಿ ಆಯ್ಕೆಗೆ ಪರಿಗಣಿಸಲಾಗಿದೆ.

1995ರಿಂದ ಅಸಾಧಾರಣ ಸಂಸದೀಯ ಪಟು ಪ್ರಶಸ್ತಿಯನ್ನು ಲೋಕಸಭೆ ಮತ್ತು ರಾಜ್ಯಸಭೆ ಸದಸ್ಯರಿಗೆ ನೀಡಲಾಗುತ್ತಿದೆ. ಅಲ್ಲದೆ, ಅಸ್ಸಾಂ, ರಾಜಸ್ಥಾನ, ಜಾರ್ಖಂಡ್, ಗುಜರಾತ್ ಮೊದಲಾದ ರಾಜ್ಯಗಳಲ್ಲೂ ಅತ್ಯುತ್ತಮ ಶಾಸಕ ಪ್ರಶಸ್ತಿ ನೀಡಲಾಗುತ್ತಿದೆ.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:21.01.2021

## 4. ಕೃಷಿ ಕಾಯಿದೆ ವಾಪಸ್ ಪಡೆಯಲು ಪಟ್ಟು

ರೈತ ವಿರೋಧಿ ಕಾಯಿದೆಗಳನ್ನು ವಾಪಸ್ ಪಡೆಯದಿದ್ದರೆ ರೈತರು ದಂಗೆ ಏಳುವುದು ಖಚಿತ ಎಂದು ಕೇಂದ್ರ ಮತ್ತು ರಾಜ್ಯ ಸರ್ಕಾರಗಳಿಗೆ ಮಾಜಿ ಸಿಎಂ ಸಿದ್ದರಾಮಯ್ಯ ಎಚ್ಚರಿಕೆ ನೀಡಿದರು.

ಕೇಂದ್ರ ಸರ್ಕಾರದ ಮೂರು ಕೃಷಿ ಕಾಯಿದೆಗಳು ರೈತ ವಿರೋಧಿ ಎಂದು ಆರೋಪಿಸಿ ಕಾಂಗ್ರೆಸ್ ಪಕ್ಷದಿಂದ ರಾಜಧಾನಿ ಬೆಂಗಳೂರಿನಲ್ಲಿ ನಡೆದ ಬೃಹತ್ ಪ್ರತಿಭಟನೆಯಲ್ಲಿ ಮಾತನಾಡಿದ ಅವರು "ಕಳೆದ 58 ದಿನಗಳಿಂದ ರೈತರು ದಿಲ್ಲಿಯಲ್ಲಿ ಹಗಲು, ರಾತ್ರಿ ಎನ್ನದೆ, ಚಳಿ, ಗಾಳಿ, ಮಳೆ, ಬಿಸಿಲು ಲೆಕ್ಕಿಸದೆ ಚಳುವಳಿ ನಡೆಸುತ್ತಿದ್ದಾರೆ. ಪ್ರಧಾನಿ ಮೋದಿಯವರಿಗೆ ಮನುಷ್ಯತ್ವ ಇದ್ದಿದ್ದರೆ ಅವರ ಚಳುವಳಿ ಹತ್ತಿಕ್ಕುವ ಪ್ರಯುತ್ನ ಮಾಡಬಾರದಿತ್ತು. ಹತ್ತು ಬಾರಿ ರೈತರ ಜೊತೆ ಕೇಂದ್ರ ಸರ್ಕಾರ ಮಾತುಕತೆ ನಡೆಸಿದೆ ಆದರೆ, ಈವರೆಗೆ ಪರಿಹಾರ ಕಂಡುಕೊಳ್ಳುವ ಪ್ರಯತ್ನ ಮಾಡಿಲ್ಲ. ಕೇಂದ್ರದ ಹಠಮಾರಿ ಧೋರಣೆ ಇದಕ್ಕೆ ಕಾರಣ ಎಂದು ಟೀಕಿಸಿದರು.

ರೈತರು ತಮ್ಮ ಒತ್ತಾಯಕ್ಕೆ ಬದ್ಧರಾಗಿದ್ದಾರೆ. ಅವರ ಬೇಡಿಕೆ ನ್ಯಾಯಯುತವಾಗಿದೆ. ಸುಪ್ರೀಂಕೋರ್ಟ್ ಮೂರು ಕಾಯಿದೆಗಳಿಗೆ ತಡೆ ಆದೇಶ ನೀಡಿದೆ. ಕಾಯಿದೆಗಳು ಸಂವಿಧಾನ ಬದ್ಧವಾಗಿ ಇದ್ದಿದ್ದರೆ ನ್ಯಾಯಾಲಯ ತಡೆಯಾಜ್ಞೆ ನೀಡುತ್ತಿರಲಿಲ್ಲ. ಈಸ್ಟ್ ಇಂಡಿಯಾ ಕಂಪನಿ ವಿರುದ್ಧ ಈ ಹಿಂದೆ ದೇಶದ ಜನತೆ ದಂಗೆ ಎದ್ದಿದ್ದರು. ಇದೀಗ 2ನೇ ಸ್ವಾತಂತ್ರ್ಯ ಹೋರಾಟ ಮಾಡುವ ಪರಿಸ್ಥಿತಿ ಬಂದಿದೆ". ಎಂದು ಗುಡುಗಿದರು.

ರೈತರನ್ನು ಉಳಿಸಬೇಕಾದರೆ, ಕೃಷಿ ಉತ್ಪನ್ನಗಳಿಗೆ ಸೂಕ್ತ ಬೆಲೆ ದೊರೆಯಬೇಕಾದರೆ ಈ ಕಾಯಿದೆಗಳನ್ನು ವಾಪಸ್ ಪಡೆಯಲೇಬೇಕು. ರೈತರಿಗೆ ಮಾರುಕಟ್ಟೆ ಒದಗಿಸುತ್ತೇವೆ. ಅವರ ಉತ್ಪನ್ನಗಳಿಗೆ ಮಾರುಕಟ್ಟೆ ಬೆಲೆ ನೀಡುತ್ತೇವೆ ಎಂದು ಬಿಜೆಪಿ ಅಧಿಕಾರಕ್ಕೆ ಬರುವ ಮುನ್ನ ಹೇಳಿತ್ತು. ಆದರೆ, ಈಗ ಅದಕ್ಕೆ ತದ್ವಿರುದ್ಧವಾಗಿ ನಡೆದು ಕೊಳ್ಳುತ್ತಿದೆ". ಎಂದು ಹರಿಹಾಯ್ದರು.

**ರೈತರ ಪರ ಹೋರಾಟ ಆರಂಭ:** ಕೆಪಿಸಿಸಿ ಆಧ್ಯಕ್ಷ ಡಿ.ಕೆ.ಶಿವಕುಮಾರ "ರೈತನಿಗೆ ಸಂಬಳ, ಬಡ್ತಿ, ನಿವೃತ್ತಿ ಮತ್ತು ಲಂಚ ಇಲ್ಲ. ಇಂತಹ ರೈತರು ದಿಲ್ಲಿ ಗಡಿಯಲ್ಲಿ ನಿಂತು ತಮಗೆ ಆಗುತ್ತಿರುವ ಅನ್ಯಾಯದ ವಿರುದ್ಧ ಪ್ರತಿಭಟಿಸುತ್ತಿದ್ದಾರೆ. ಮಹಾತ್ಮ ಗಾಂಧಿಯವರು ಸ್ವಾತಂತ್ರ್ಯ ಹೋರಾಟವನ್ನು ರೈತರ ಪರವಾಗಿ ಹೋರಾಡುವ ಮೂಲಕ ಆರಂಭಿಸಿದಂತೆ ನಾವು ಹೋರಾಟದ ದೀಪ ಹಚ್ಚುತ್ತಿದ್ದೇವೆ. ಕೊರೋನಾ ಸಮಯದಲ್ಲಿ ಜನಸಾಮಾನ್ಯರು, ಕಾರ್ಮಿಕರು, ರೈತರಿಗೆ ರಕ್ಷಣೆ ನೀಡಲು ಈ ಸರ್ಕಾರಕ್ಕೆ ಆಗಲಿಲ್ಲ. ಅವರಿಗೆ ಬೆಂಬಲ ಬೆಲೆ, ಪರಿಹಾರ ಕೊಡಲಿಲ್ಲ. ವೃತ್ತಿಯಲ್ಲಿದ್ದವರಿಗೆ ಹಣ ಕೊಡಲು ಆಗಲಿಲ್ಲ. ರೂ.20 ಲಕ್ಷ ಎಂದು ಘೋಷಣೆ ಮಾಡಿರುವ ಪರಿಹಾರ ಎಲ್ಲಿ ಹೋಯಿತು". ಎಂದು ಪ್ರಶ್ನಿಸಿದರು.

ಡಿಸೆಂಬರ್ 28ರಂದು ಕಾಂಗ್ರೆಸ್ ಸಂಸ್ಥಾಪನಾ ದಿನದಂದು ಎಲ್ಲರ ಜೊತೆ ಚರ್ಚೆ ಮಾಡಿ ಈ ವರ್ಷವನ್ನು ಸಂಘಟನೆ, ಹೋರಾಟದ ವರ್ಷ ಎಂದು ಘೋಷಿಸಿದಂತೆ ಹೋರಾಟಕ್ಕೆ ಮೊದಲ ಹೆಜ್ಜೆ ಇಡುತ್ತಿದ್ದೇವೆ. ಈ ವರ್ಷ ಕನಿಷ್ಠ 100 ಕ್ಷೇತ್ರಗಳಲ್ಲಿ ಹೋರಾಟ ಮಾಡುತ್ತೇವೆ. ಇದು ಕೇವಲ ರಾಜ್ಯ ಮಟ್ಟದ ಹೋರಾಟ ಅಲ್ಲ. ಎಲ್ಲ ತಾಲ್ಲೂಕಿನಲ್ಲೂ ಇರುವ ಸಮಸ್ಯೆ," ಎಂದರು

ಈ ಸರ್ಕಾರ ಇರೋದು ಕೇವಲ ಬಂಡವಾಳ ಶಾಹಿಗಳಿಗೆ, ಪ್ರತಿಭಟನೆ ಮಾಡುತ್ತಾ ಸತ್ತಿರುವ ರೈತರಿಗೆ ಗೌರವ ನೀಡದಿದ್ದರೆ, ಅನ್ನದಾತನ ರಕ್ಷಣೆ ಮಾಡದಿದ್ದರೆ ನಮ್ಮ ಜನ್ಮ ಸಾರ್ಥಕವಾಗುವುದಿಲ್ಲ. ಈ ಹಿನ್ನೆಲೆಯಲ್ಲಿ ನೀವೆಲ್ಲ ಇಂದು ಕೈ ಜೋಡಿಸಿದ್ದೀರಿ. ನಿಮ್ಮ ಧ್ವನಿ ಪ್ರಧಾನ ಮಂತ್ರಿಗಳು, ಮುಖ್ಯಮಂತ್ರಿಗಳಿಗೆ ತಲುಪಿದೆ," ಎಂದು ಡಿಕೆಶಿ ಹೇಳಿದರು.

**ಕಾಯಿದೆ ಮೇಲೆ 11 ಪ್ರಶ್ನೆಗಳು**

1. ಕೃಷಿ ಕಾಯಿದೆಯಂತಹ ಪ್ರಮುಖ ನಿರ್ಧಾರಕ್ಕೆ ಸಾಕಷ್ಟು ವಿಸ್ತೃತ ಚರ್ಚೆ, ವಿಮರ್ಶೆ ಅಗತ್ಯ, ಆದರೆ, ಆತುರವಾಗಿ ಸುಗ್ರೀವಾಜ್ಞೆ ಹಾಗೂ ಕಾನೂನು ಬಾಹಿರವಾಗಿ ಧ್ವನಿ ಮತ ಪಡೆದಿರುವುದು ಪ್ರಜಾಪ್ರಭುತ್ವ ಗೌರವಿಸುವ ಲಕ್ಷಣವೇ

2. ರೈತರನ್ನು ಖಲಿಸ್ತಾನಿಗಳು, ಪಾಕ್ ಏಜೆಂಟರು, ದೇಶದ್ರೋಹಿಗಳು ಎಂದು ಅವಮಾನಿಸಿ, ರೈತರನ್ನು ಹೇಡಿಗಳು ಎಂದಿದ್ದೀರಿ. ಈ ವಿಕೃತ ಮನಸ್ಥಿತಿ ಬಿಟ್ಟು ಸೌಜನ್ಯ ಕಲಿಯುವುದು ಯಾವಾಗ ಪ್ರತಿಭಟನೆ ರೈತರ ಹಕ್ಕು ಅರಿಯುವುದು ಯಾವಾಗ

3. ಕನಿಷ್ಠ ಬೆಂಬಲ ಬೆಲೆಯನ್ನು ಕೃಷಿ ಕಾಯಿದೆಯಿಂದ ಹೊರಗಿಟ್ಟಿರುವುದೇಕೆ ಲಿಖಿತ ಭರವಸೆ ಕೊಟ್ಟು ಕಾಯಿದೆಯಲ್ಲಿ ಸೇರಿಸಿಲ್ಲವೇಕೆ

4. ರಾಜ್ಯಗಳ ಹಿತಾಸಕ್ತಿ ಮರೆತು, ಎಲ್ಲ ರಾಜ್ಯಗಳ ಅಭಿಪ್ರಾಯ ಪಡೆಯದೆ ಅಸಂವಿಧಾನಿಕ ಮಾರ್ಗದಲ್ಲಿ ಕೃಷಿ ಕಾಯಿದೆಗಳನ್ನು ಜಾರಿಗೊಳಿಸಿದ್ದೇಕೆ

5. ರಿಲಯನ್ಸ್ ಸಂಸ್ಥೆ ಕೃಷಿ ಮಾರುಕಟ್ಟೆ ಪ್ರವೇಶಿಸುವುದಿಲ್ಲ ಎಂದು ಸುಳ್ಳು ಹೇಳಿಕೆ ನೀಡಿದ ಬೆನ್ನಲ್ಲೇ ಕರ್ನಾಟಕದಲ್ಲಿ ಖರೀದಿಗೆ ಮುಂದಾಗುತ್ತದೆ, ಅದಕ್ಕೆ ಬಿಜೆಪಿ ಕರ್ನಾಟಕ ಪ್ರಚಾರ ನೀಡುತ್ತದೆ. ಈ ನಾಟಕ ಏಕೆ

6. ಉದ್ಯಮಿಗಳ ಸಾಲ ಮನ್ನಾ ಮಾಡುತ್ತೀರಿ. ಆದರೆ, ಸಂಕಷ್ಟ ಎದುರಿಸುತ್ತಿರುವ ರೈತರ ಸಾಲ ಮನ್ನಾ ಮಾಡುವ ಮನಸ್ಸು ನಿಮಗೇಕಿಲ್ಲ ರೈತಾಪಿ ವರ್ಗದ ಹಿತರಕ್ಷಣೆಯ ನಿಮಗೆ ಆದ್ಯತೆಯಿಲ್ಲ ಏಕೆ

7. ಹಸಿರು ಟವೆಲ್ ಹಾಕಿಕೊಂಡು ರೈತರ ಪರ ಎನ್ನುವ ಯಡಿಯೂರಪ್ಪ ಈಗ ಕಾರ್ಪೊರೇಟರ್‌ಗಳ ಸಿಎಂ ಆಗಿ ಬದಲಾಗಿದ್ದೇಕೆ ಪ್ರವಾಹದಲ್ಲಿ ನೊಂದ ರೈತರಿಗೆ ಪರಿಹಾರವಿಲ್ಲ, ಮನೆ ಕಟ್ಟಿಸಲಿಲ್ಲ. ಸಾಂತ್ವನವಿಲ್ಲ, ಕೇಂದ್ರದಿಂದ ಪರಿಹಾರ ತರಲಾಗಲಿಲ್ಲ. ಉದ್ಯಮಿಗಳ ಸ್ನೇಹದ ಮುಂದೆ ಹಸಿರು ಟವೆಲ್ ಕಳೆದು ಹೋಯ್ತೆ

8. ಆದಾಯ ದ್ವಿಗುಣ ರೈತರದ್ದಲ್ಲ. ಅದಾನಿ, ಅಂಬಾನಿಗಳ ಆದಾಯ. ರಿಲಯನ್ಸ್ ಎಂಎಸ್‌ಪಿಗಿಂತ ಹೆಚ್ಚು ಖರೀದಿಸುತ್ತಿದೆ ಎಂದು ಸುಳ್ಳು ಹೇಳುವ ನೀವು ಎಂಎಸ್‌ಪಿಗಿಂತ ಮೇಲ್ಪಟ್ಟು ರಾಜ್ಯ ಸರ್ಕಾರ ನೀಡುತ್ತಿದ್ದ ಪ್ರೋತ್ಸಾಹ ಧನ ನಿಲ್ಲಿಸಿದ್ದೇಕೆ

9. ಕೃಷಿ ಕಾಯಿದೆಯಲ್ಲಿ ಅಧಿಕಾರಿಗಳು ಕಾಲಕಾಲಕ್ಕೆ ತರಬಹುದಾದ ನಿಯಮಗಳನ್ನು ಯಾರೂ ಪ್ರಶ್ನಿಸಿದಂತೆ ನಿಯಮ ರೂಪಿಸಿದ್ದೇಕೆ

10. ಒಪ್ಪಂದ ಕೃಷಿಯ ತಿದ್ದುಪಡಿಯಲ್ಲಿ ರೈತನಿಗೆ ಕಂಪನಿಗಳಿಂದ ಅನ್ಯಾಯವಾದಾಗ, ನ್ಯಾಯಾಲಯದ ಮೊರೆ ಹೋಗುವ ಅವಕಾಶವನ್ನು ಕಿತ್ತುಕೊಂಡಿದ್ದೀರಿ. ದಂಡಾಧಿಕಾರಿ, ಜಿಲ್ಲಾಧಿಕಾರಿಗಳ ತೀರ್ಮಾನವೇ ಅಂತಿಮಗೊಳಿಸಿ, ರೈತನಿಗೆ ನ್ಯಾಯಾಂಗದ ಬಾಗಿಲು ಮುಚ್ಚಿದ್ದು ಏಕೆ

11. ರೈತರೇ ಬೇಡ ಎನ್ನುತ್ತಿರುವ ಈ ಕಾನೂನುಗಳನ್ನು ಹಿಂತೆಗೆದುಕೊಳ್ಳಲು ಒಪ್ಪದೆ ಇಷ್ಟು ಮೊಂಡು ಹಠಕ್ಕೆ ಬಿದ್ದಿರುವ ನಿಮ್ಮ ಭಂಡತನಕ್ಕೆ ಕಾರಣಗಳೇನು

ಆಧಾರ: ವಿಜಯ ಕರ್ನಾಟಕ, ದಿನಾಂಕ:21.01.2021

## 5. ಬಂದೇ ಬಿಡ್ತು ವರ್ಷದ ಮೊದಲ ವಿಧಾನಮಂಡಲ ಅಧಿವೇಶನ

ವರ್ಷದ ಮೊದಲ ವಿಧಾನ ಮಂಡಲ ಅಧಿವೇಶನ ಇನ್ನು ಮೂರು ದಿನದಲ್ಲೇ ಆರಂಭವಾಗುತ್ತಿದೆ. ಜನವರಿ 28ರಿಂದ ಫೆಬ್ರವರಿ 5ರವರೆಗೆ ನಡೆಯುವ ಕಲಾಪದಲ್ಲಿ ಪಾಲ್ಗೊಳ್ಳಲು ಶಾಸಕರು ಉತ್ಸುಕರಾಗಿದ್ದು, ಈ ವರ್ಷವಾದರೂ ಹೆಚ್ಚು ದಿನ ಕಲಾಪ ನಡೆಯಬಹುದೆಂಬ ಹುರುಪಿನಲ್ಲಿದ್ದಾರೆ.

2020ನೇ ಸಾಲಿನಲ್ಲಿ ಕೊರೋನಾ ಕಾಡಿದ ಕಾರಣ ವಿಧಾನಮಂಡಲ ಅಧಿವೇಶನ ಕೂಡ ಸಾಂಕೇತಿಕವಾಯಿತು. ಚರ್ಚೆಗೆ ಅನೇಕ ಗಟ್ಟಿ ವಿಷಯಗಳಿದ್ದರೂ ಕೊರೋನಾ ಅಬ್ಬರದಲ್ಲಿ ಅಧಿವೇಶನ ಮಂಕಾಯಿತು.

ಜನವರಿ 28ರಂದು ಜಂಟಿ ಅಧಿವೇಶನ ನಡೆಯಲಿದ್ದು, ಈ ಮೂಲಕ ಈ ವರ್ಷದ ಅಧಿವೇಶನಕ್ಕೆ ಶುಭಾರಂಭವಾಗಲಿದೆ. ರಾಜ್ಯಪಾಲ ವಿ.ಆರ್.ವಾಲ ಎರಡೂ ಸದನಗಳನ್ನು ಉದ್ದೇಶಿಸಿ ಭಾಷಣ ಮಾಡಿ ಸರ್ಕಾರದ ಆಶಯ ಪ್ರಸ್ತುತ ಪಡಿಸಲಿದ್ದಾರೆ. ಬಳಿಕ ಜನವರಿ 29 ಹಾಗೂ ಫೆಬ್ರವರಿ 1ರಿಂದ 5ರವರೆಗೆ ರಾಜ್ಯಪಾಲರ ಭಾಷಣದ ಮೇಲೆ ಚರ್ಚೆಯನ್ನು ಬಳಸಿಕೊಳ್ಳಲಿದ್ದಾರೆ.

ತಕ್ಷಣಕ್ಕೆ ಪ್ರತಿಪಕ್ಷಗಳಿಗೆ ಸರ್ಕಾರವನ್ನು ಹಣಿಯಲು ಗಟ್ಟಿ ವಿಷಯವಿಲ್ಲ. ಆದರೂ ಸುಗ್ರೀವಾಜ್ಞೆ ರೂಪದಲ್ಲಿರುವ ಗೋಹತ್ಯೆ ನಿಷೇಧ ಕಾಯ್ದೆ, ಬಿಜೆಪಿಯಿಂದ ಒತ್ತಾಯ ಕೇಳಿಬರುತ್ತಿರುವ ಲವ್ ಜಿಹಾದ್ ಕಾಯ್ದೆ ಅಧಿವೇಶನದಲ್ಲಿ ಪ್ರಸ್ತಾಪವಾದರೆ ಅದರ ಬಗ್ಗೆ ಜಟಾಪಟಿ ನಡೆಯಬಹುದು. ಉಳಿದಂತೆ ಕೆಪಿಎಸ್ಸಿ ಪ್ರಶ್ನೆಪತ್ರಿಕೆ ಬಹಿರಂಗ ಪ್ರಕರಣ, ರಾಜ್ಯದ ಆರ್ಥಿಕ ಪರಿಸ್ಥಿತಿ, ಅಕ್ರಮ ಕಲ್ಲು ಗಣಿಗಾರಿಕೆ, ಅನುದಾನ ಹಂಚಿಕೆ, ಕೃಷಿ ಸಮಸ್ಯೆ ಬಗ್ಗೆ ಚರ್ಚೆಯಾಗಬಹುದೆಂಬ ನಿರೀಕ್ಷೆ ಇದೆ.

ಎಪಿಎಂಸಿ ತಿದ್ದುಪಡಿ ಕಾಯ್ದೆ, ಭೂ ಸುಧಾರಣಾ ತಿದ್ದುಪಡಿ ಕಾಯ್ದೆ ಕುರಿತಂತೆ ದನಿ ಎತ್ತಲು ಕಾಂಗ್ರೆಸ್ ಪ್ರಯತ್ನ ನಡೆಸಲುಬಹುದು. ಆ ಪಕ್ಷದಲ್ಲಿ ಈವರೆಗೂ ಚರ್ಚೆ ನಡೆದಿಲ್ಲ. ಜನವರಿ 28ರಂದು ನಡೆಯುವ ಶಾಸಕಾಂಗ ಪಕ್ಷದ ಸಭೆಯಲ್ಲಿ ಸದನದೊಳಗಿನ ಹೋರಾಟದ ಬಗ್ಗೆ ನಿರ್ಧಾರವಾಗಲಿದೆ. ಸಚಿವರ ಖಾತೆ ಪುನರ್ ಹಂಚಿಕೆ ಗೊಂದಲವು ಪ್ರತಿಪಕ್ಷಕ್ಕೆ ಅಸ್ತ್ರವಾಗಬಹುದು. ಜೊತೆಗೆ ವಿಧಾನಮಂಡಲದಲ್ಲಿ ಸಮರ್ಥನೆ ಮೂಲಕ ಸರ್ಕಾರವನ್ನು ಸದಾ ಕಾಪಾಡುತ್ತಿದ್ದ ಸಚಿವ ಜೆ.ಸಿ. ಮಾಧುಸ್ವಾಮಿ ಮತ್ತು ಸಮರ್ಥನೆ ಮೂಲಕವೇ ಪ್ರತಿಪಕ್ಷ ಕಾಂಗ್ರೆಸ್ ಮುಖಂಡರ ಬಾಯಿ ಮುಚ್ಚಿಸುತ್ತಿದ್ದ ಸಚಿವ ಡಾ.ಕೆ. ಸುಧಾಕರ್ ನಿಲುವು ಈ ಬಾರಿ ಹೇಗಿರುತ್ತದೆ ಎಂಬ ಕುತೂಹಲವಿದೆ. ಇವರಿಬ್ಬರ ಅಭಿಪ್ರಾಯವನ್ನು ಆಲಿಸದೇ ಏಕಾಏಕಿ ಖಾತೆ ಬದಲಿಸಿದ್ದು ಬೇಸರಕ್ಕೆ ಕಾರಣವಾಗಿದೆ. ಸಹಜವಾಗಿ ಇದು ಅಧಿವೇಶನದ ವೇಳೆ ಪ್ರತಿಫಲನವಾಗುವ ಸಾಧ್ಯತೆ ಹೆಚ್ಚಿದೆ.

**ಯಾವ ವರ್ಷ ಎಷ್ಟು ದಿನ ಕಲಾಪ**

| ವರ್ಷ | ದಿನ |
|---|---|
| 1955 | 75 |
| 1958 | 80 |
| 1963 | 98 |
| 1972 | 82 |
| 1973 | 97 |
| 2011 | 31 |
| 2012 | 57 |
| 2013 | 47 |
| 2014 | 53 |
| 2015 | 58 |
| 2016 | 35 |
| 2017 | 50 |
| 2018 | 33 |
| 2019 | 18 |
| 2020 | 31 |

ಆಧಾರ: ವಿಜಯವಾಣಿ, ದಿನಾಂಕ:25.01.2021

## 6. ಪಕ್ಷಗಳ ವಾಕ್ಸಮರಕ್ಕೆ ವೇದಿಕೆ ಸಜ್ಜು

ಸಂಪುಟ ವಿಸ್ತರಣೆ, ಖಾತೆಗಳ ಮರು ಹಂಚಿಕೆ ಕಸರತ್ತು ಮುಗಿದ ಬೆನ್ನಲ್ಲೇ ವಿಧಾನಮಂಡಲ ಅಧಿವೇಶನಕ್ಕೆ ವೇದಿಕೆ ಸಿದ್ಧವಾಗಿದೆ. ಫೆಬ್ರವರಿ 5ರವರೆಗೆ ನಡೆಯಲಿರುವ ಅಧಿವೇಶನದ ಮೊದಲ ದಿನ, ಜಂಟಿ ಸದನಗಳನ್ನು ಉದ್ದೇಶಿಸಿ ರಾಜ್ಯಪಾಲ ವಜುಭಾಯಿ ವಾಲಾ ಮಾತನಾಡಲಿದ್ದಾರೆ.

ಕೋವಿಡ್ ನಿರ್ವಹಣೆಯ ಜೊತೆಗೆ ರಾಜ್ಯ ಸರ್ಕಾರದ ಅಭಿವೃದ್ಧಿಯ ವಿಷಯವನ್ನು ರಾಜ್ಯಪಾಲರು ತಮ್ಮ ಭಾಷಣದಲ್ಲಿ ಪ್ರಸ್ತಾಪಿಸಲಿದ್ದಾರೆ. ರಾಜ್ಯಪಾಲರ ಭಾಷಣದ ಮೇಲಿನ ಚರ್ಚೆವೇಳೆ ಆಡಳಿತ–ವಿರೋಧ ಪಕ್ಷದ ನಡುವೆ ವಾಕ್ಸಮರ ನಡೆಯುವುದು ಖಚಿತ. ಸಂಪುಟದಲ್ಲಿ ಅವಕಾಶ ಸಿಗದ ಸಚಿವರ ಅಸಮಾಧಾನ, ಅನುದಾನ ವಿಳಂಬದ ಬಗ್ಗೆ ಶಾಸಕರ ಅಪಸ್ವರ, ಕೃಷಿ ಕಾಯ್ದೆ ವಿರೋಧಿಸಿ ರೈತರು ನಡೆಸುತ್ತಿರುವ ಪ್ರತಿಭಟನೆ ಎರಡೂ ಸದನಗಳಲ್ಲಿ ಪ್ರತಿಧ್ವನಿಸಲಿದೆ.

ವಿರೋಧ ಪಕ್ಷದ ನಾಯಕ ಸಿದ್ದರಾಮಯ್ಯ ಅಧ್ಯಕ್ಷತೆಯಲ್ಲಿ ಕಾಂಗ್ರೆಸ್ ಶಾಸಕಾಂಗ ಸಭೆ ನಡೆಯಲಿದೆ. ಸರ್ಕಾರ ವಿರುದ್ಧ ಯಾವೆಲ್ಲ ವಿಚಾರವನ್ನು ಎತ್ತಿಕೊಳ್ಳಬೇಕು ಎಂಬ ಬಗ್ಗೆ ಈ ಸಭೆಯಲ್ಲಿ ಚರ್ಚೆ ನಡೆಯಲಿದೆ. ಕೋವಿಡ್ ನಿರ್ವಹಣೆ, ಆಡಳಿತ ವೈಫಲ್ಯ, ಅಭಿವೃದ್ಧಿ ಕೆಲಸಗಳಲ್ಲಿ ಹಿನ್ನಡೆ, ಅತಿವೃಷ್ಟಿ ಪರಿಹಾರ ವಿಷಯಗಳನ್ನು ಅಸ್ತ್ರವಾಗಿ ಬಳಸಿಕೊಂಡು ಸದನದಲ್ಲಿ ಹೋರಾಟ ನಡೆಸಲು ಕಾಂಗ್ರೆಸ್ ನಾಯಕರು ನಿರ್ಧರಿಸಿದ್ದಾರೆ.

ರೈತರ ಸಮಸ್ಯೆಗಳು, ಕೃಷಿ ಕಾಯ್ದೆಗಳ ಬಗ್ಗೆಯೂ ಸದನದಲ್ಲಿ ಪ್ರಸ್ತಾಪಿಸಲು ಕಾಂಗ್ರೆಸ್ ಮುಂದಾಗಿದೆ. ಇತ್ತೀಚಿಗೆ ರಾಜ್ಯ ಪ್ರವಾಸ ಮಾಡಿದ್ದ ಅಮಿತ್ ಶಾ, ಎನ್‌ಡಿಎ ಸರ್ಕಾರದ ಅವಧಿಯಲ್ಲಿ ರಾಜ್ಯಕ್ಕೆ ಸಿಕ್ಕಿದ ಅನುದಾನ ಪಟ್ಟಿ ನೀಡಿದ್ದರು. ಅಮಿತ್ ಶಾ ಸುಳ್ಳು ಅಂಕಿ–ಅಂಶ ನೀಡಿದ್ದಾರೆಂದು ಆಕ್ರೋಶ ವ್ಯಕ್ತಪಡಿಸಿದ್ದ ಸಿದ್ದರಾಮಯ್ಯ, ಆ ವಿಚಾರದಲ್ಲೂ ರಾಜ್ಯ ಸರ್ಕಾರವನ್ನು ತರಾಟೆಗೆ ತೆಗೆದುಕೊಳ್ಳುವ ಸಾಧ್ಯತೆ ಇದೆ.

ಗೋಹತ್ಯೆ ನಿಷೇಧ ಕಾಯ್ದೆಯ ಮಸೂದೆಯನ್ನು ಪ್ರಸಕ್ತ ಅಧಿವೇಶನದಲ್ಲಿ ವಿಧಾನ ಪರಿಷತ್‌ನಲ್ಲಿ ಮಂಡಿಸಲು ಬಿಜೆಪಿ ಸಿದ್ಧತೆ ನಡೆಸಿದೆ. ಕಾಂಗ್ರೆಸ್ ಈ ಮಸೂದೆಯನ್ನು ಈಗಾಗಲೇ ವಿರೋಧಿಸಿದ್ದು ಜೆಡಿಎಸ್ ನಡೆ ಕುತೂಹಲ ಮೂಡಿಸಿದೆ. ಗೋಹತ್ಯೆ ನಿಷೇಧವನ್ನು ಸರ್ಕಾರ ಸುಗ್ರೀವಾಜ್ಞೆ ಮೂಲಕ ಜಾರಿಗೆ ತಂದಿದೆ.

ಹೊಸದಾಗಿ ಸಂಪುಟಕ್ಕೆ ಸೇರ್ಪಡೆ ಆಗಿರುವ ಏಳು ಸಚಿವರು ವಿರೋಧ ಪಕ್ಷಗಳ ಟೀಕಾಸ್ತ್ರಗಳನ್ನು ಎದುರಿಸಬೇಕಾಗಿದೆ.

ಆಧಾರ: ಪ್ರಜಾವಾಣಿ, ದಿನಾಂಕ:27.01.2021

## 7. ಇಂದಿನಿಂದ ಅಧಿವೇಶನ: ಸಾರ್ವಜನಿಕರಿಗಿಲ್ಲ ಪ್ರವೇಶ, 11 ವಿಧೇಯಕಗಳ ಮಂಡನೆ

ಹದಿನೈದನೇ ವಿಧಾನಮಂಡಲದ 9ನೇ ಅಧಿವೇಶನ ಜನವರಿ 28ರಿಂದ ಆರಂಭಗೊಳ್ಳಲಿದ್ದು, ಈ ಬಾರಿ 11 ವಿಧೇಯಕಗಳು ಮತ್ತು ಮೂರು ಸುಗ್ರೀವಾಜ್ಞೆಗಳು ಅಂಗೀಕಾರಕ್ಕಾಗಿ ಸದನದ ಮುಂದೆ ಬರಲಿವೆ. ಸಂಪ್ರದಾಯದಂತೆ ವರ್ಷದ ಮೊದಲ ಜಂಟಿ ಅಧಿವೇಶನವನ್ನು ಉದ್ಘಾಟಿಸಿ ರಾಜ್ಯಪಾಲ ವಜೂಭಾಯಿ ವಾಲಾ ಭಾಷಣ ಮಾಡುವರು.

ಕೋವಿಡ್ ಸಂಬಂಧಿಸಿದಂತೆ ಕಳೆದೆರಡು ಅಧಿವೇಶನಗಳಲ್ಲಿ ಇದ್ದ ಮಾರ್ಗಸೂಚಿಗಳೆಲ್ಲಾ ಈ ಬಾರಿಯೂ ಇರುತ್ತದೆ. ಸಾರ್ವಜನಿಕರಿಗೆ ಪ್ರವೇಶ ಇರುವುದಿಲ್ಲ. ಬಜೆಟ್ ಅಧಿವೇಶನ ಮಾರ್ಚ್ ತಿಂಗಳಲ್ಲಿ ನಡೆಯಲಿದೆ ಎಂದು ಮಾನ್ಯ ಸಭಾಧ್ಯಕ್ಷರವರು ಪತ್ರಕರ್ತರಿಗೆ ತಿಳಿಸಿದರು.

ಅಧಿವೇಶನ ಸಿದ್ಧತೆಗಳನ್ನು ಪರಿಶೀಲಿಸಿದ ನಂತರ ಮಾಧ್ಯಮಗಳೊಂದಿಗೆ ಮಾತನಾಡಿದ ಅವರು ಮಾಸ್ಕ್ ಮತ್ತು ಸಾಮಾಜಿಕ ಅಂತರ ನಿಯಮಗಳನ್ನು ಸದಸ್ಯರು ಸೇರಿದಂತೆ ಅಧಿವೇಶನದ ಕರ್ತವ್ಯದಲ್ಲಿ ಇರುವವರೆಲ್ಲ ಪಾಲಿಸಬೇಕು ಎಂದು ಹೇಳಿದರು.

ಅನಾರೋಗ್ಯ ಇದ್ದವರು ಸದನಕ್ಕೆ ಬಾರದೇ ಇರುವುದು ಒಳ್ಳೆಯದು. ಕೋವಿಡ್ (ಆರ್‌ಟಿ–ಪಿಸಿಆರ್) ಪರೀಕ್ಷೆ ಕಡ್ಡಾಯವಲ್ಲ. ಆದರೆ ಅಗತ್ಯ ಇದ್ದವರು ಮಾಡಿಸಿಕೊಳ್ಳಲು ಅನುಕೂಲವಾಗುವಂತೆ ಒಂದು ವೈದ್ಯಕೀಯ ತಂಡವನ್ನು ಬ್ಯಾಂಕ್ವೆಟ್ ಹಾಲ್‌ನಲ್ಲಿ ನಿಯೋಜಿಸಲಾಗಿದೆ ಎಂದು ಹೇಳಿದರು.

ಮೊದಲ ದಿನವಾದ ಗುರುವಾರ ಉಭಯ ಸದನಗಳನ್ನು ಉದ್ದೇಶಿಸಿ ಬೆಳಿಗ್ಗೆ 11ಕ್ಕೆ ರಾಜ್ಯಪಾಲರು ಭಾಷಣ ಮಾಡುವರು. ನಂತರ ಸಂತಾಪ ಸೂಚನೆ ನಡೆದು ಸದನ ಶುಕ್ರವಾರಕ್ಕೆ ಮುಂದೂಡಲ್ಪಡಲಿದೆ. ಒಂದು ದೇಶ, ಒಂದು ಚುನಾವಣೆ ಕುರಿತಾದ ವಿಸ್ತೃತ ಚರ್ಚೆ ಪ್ರಸಕ್ತ ಅಧಿವೇಶನದಲ್ಲಿ ನಡೆಯುವ ಸಾಧ್ಯತೆ ಇದೆ ಎಂದರು. ಸದಸ್ಯರ ಗನ್‌ಮ್ಯಾನ್ ಮತ್ತು ಸಹಾಯಕರಿಗೆ ಈ ಬಾರಿಯೂ ಮೊಗಸಾಲೆ ಪ್ರವೇಶ ನಿರ್ಬಂಧಿತ. ಇವರಿಗೆ ಬ್ಯಾಂಕ್ವೆಟ್ ಹಾಲ್ ಬಳಿ ಆಸನದ ವ್ಯವಸ್ಥೆ ಕಲ್ಪಿಸಲಾಗಿದೆ ಎಂದರು.

**ಮಹತ್ವದ ವಿಧೇಯಕಗಳು:** ಕೆಲವು ಖಾಸಗಿ ಬ್ಯಾಂಕುಗಳಲ್ಲಿ ಠೇವಣಿದಾರರಿಗೆ ಆಗುತ್ತಿರುವ ಅನ್ಯಾಯದ ಹಿನ್ನೆಲೆಯಲ್ಲಿ ಸಾರ್ವಜನಿಕರ ಹಿತ ಕಾಪಾಡಲು 'ಕರ್ನಾಟಕ ಹಣಕಾಸು ಸಂಸ್ಥೆಗಳಲ್ಲಿ ಠೇವಣಿದಾರರ ಹಿತಾಸಕ್ತಿ ಸಂರಕ್ಷಣೆ (ತಿದ್ದುಪಡಿ) ವಿಧೇಯಕ' ಹಾಗೂ 'ಕರ್ನಾಟಕ ಸಾಂಕ್ರಾಮಿಕ ರೋಗಗಳು (ತಿದ್ದುಪಡಿ) ವಿಧೇಯಕ' ಪ್ರಸಕ್ತ ಅಧಿವೇಶನದಲ್ಲಿ ಚರ್ಚೆಗೆ ಬರಲಿರುವ ಪ್ರಮುಖ ಮಸೂದೆಗಳು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:28.01.2021.

## 8. ಕಲಾಪವನ್ನು ಕಾಡಲಿದೆ ಕೃಷಿ ಕಾಯಿದೆ, ಜಿಲೆಟಿನ್ ಸ್ಫೋಟ

ರಾಜ್ಯ ವಿಧಾನಮಂಡಲ ಅಧಿವೇಶನ ಪ್ರಾರಂಭವಾಗಲಿದ್ದು, ಜಂಟಿ ಸದನ ಉದ್ದೇಶಿಸಿ ರಾಜ್ಯಪಾಲರು ಭಾಷಣ ಮಾಡಲಿದ್ದಾರೆ. ಸಂಪುಟ ವಿಸ್ತರಣೆ ಬಳಿಕ ಖಾತೆ ಹಂಚಿಕೆಯಲ್ಲಿ ಮೂರು ಬಾರಿ ಬದಲಾವಣೆ ಮಾಡಲಾಗಿದೆ. ಈ ನಡುವೆಯೂ ಕೆಲ ಸಚಿವರು ಸಮಾಧಾನಗೊಂಡಿಲ್ಲ. ಇದರ ನಡುವೆ ಅಧಿವೇಶನ ಪ್ರಾರಂಭವಾಗುತ್ತಿದೆ.

ಮತ್ತೊಂದೆಡೆ ಕೃಷಿ ಸಂಬಂಧಿತ ಕಾಯಿದೆ ಜಾರಿ ಮತ್ತು ದೇಶಾದ್ಯಂತ ನಡೆದ ರೈತರ ಪ್ರತಿಭಟನೆಗಳ ಮೇಲೆ ಪ್ರಮುಖವಾಗಿ ಬೆಳಕು ಚೆಲ್ಲುವ ಸಾಧ್ಯತೆ ಇದೆ. ಮುಖ್ಯಮಂತ್ರಿ ತವರು ಜಿಲ್ಲೆಯಾದ ಶಿವಮೊಗ್ಗದಲ್ಲಿ ಜಿಲೆಟಿನ್ ಸ್ಫೋಟದ ನಂತರ ಬಯಲಾಗುತ್ತಿರುವ ಅಕ್ರಮ ಗಣಿಗಾರಿಕೆಗಳು ಈಗಾಗಲೇ ರಾಜಕೀಯ ಕೆಸರೆರಚಾಟಕ್ಕೆ ನಾಂದಿಯಾಗಿದೆ. ಅವಿಶ್ವಾಸ ವಿಚಾರದಲ್ಲಿ ವಿಧಾನ ಪರಿಷತ್‌ನಲ್ಲಿ ನಡೆದ ಉಪ ಸಭಾಪತಿಯವರ ಎಳೆದಾಟ ಮತ್ತು ಆ ನಂತರದ ದಿನಗಳಲ್ಲಿ ಅವರ ಆತ್ಮಹತ್ಯೆ ಘಟನೆ ಗಂಭೀರ ಚರ್ಚೆಗೆ ಒಳಗಾಗುವ ಸಾಧ್ಯತೆ ಇದೆ. ಎಫ್‌ಡಿಎ ಪ್ರಶ್ನೆ ಪತ್ರಿಕೆ ಸೋರಿಕೆಯಿಂದ ನೊಂದ ಸಾವಿರಾರು ಅಭ್ಯರ್ಥಿಗಳ ನೋವು ಸೇರಿದಂತೆ ಅನೇಕ ವಿಚಾರಗಳ ಬಗ್ಗೆ ಸರ್ಕಾರದ ವಿರುದ್ಧ ವಾಗ್ದಾಳಿ ನಡೆಸಲು ಪ್ರತಿಪಕ್ಷಗಳ ಸಜ್ಜಾಗಿವೆ.

**ಕೋವಿಡ್ ಮುಂಜಾಗ್ರತಾ ಕ್ರಮ:** ಈ ಬಾರಿಯ ಅಧಿವೇಶನದಲ್ಲೂ ಕೋವಿಡ್ ಮುಂಜಾಗ್ರತಾ ಕ್ರಮ ಕೈಗೊಳ್ಳಲಾಗುತ್ತಿದೆ. ಅದರಂತೆ ಶಾಸಕರು, ಅಧಿಕಾರಿಗಳು ಹಾಗೂ ಕಲಾಪದ ವರದಿ ಮಾಡುವ ಮಾಧ್ಯಮ ಪ್ರತಿನಿಧಿಗಳು ಮಾಸ್ಕ್ ಧರಿಸುವುದು ಕಡ್ಡಾಯ. ಸಾಮಾಜಿಕ ಅಂತರವನ್ನೂ ಕಾಯ್ದು ಕೊಳ್ಳಬೇಕಾಗುತ್ತದೆ ಎಂದು ಸಭಾಧ್ಯಕ್ಷರು ಸುದ್ದಿಗೋಷ್ಠಿಯಲ್ಲಿ ತಿಳಿಸಿದ್ದಾರೆ.

ಕರ್ನಾಟಕ ಅಂಗಡಿಗಳು ಮತ್ತು ವಾಣಿಜ್ಯ ಸಂಸ್ಥೆಗಳ(ಎರಡನೇ ತಿದ್ದುಪಡಿ) ವಿಧೇಯಕ ಸೇರಿದಂತೆ ಸುಗ್ರೀವಾಜ್ಞೆ ಹೊರಡಿಸಲಾಗಿರುವ 3 ವಿಧೇಯಕಗಳನ್ನು ಈ ಬಾರಿ ಸದನದಲ್ಲಿ ಮಂಡಿಸಲಾಗುತ್ತದೆ. ಉಳಿದಂತೆ ಪ್ರಶ್ನೋತ್ತರ, ಶೂನ್ಯ ವೇಳೆ, ಗಮನ ಸೆಳೆಯುವ ಸೂಚನೆ, ನಿಲುವಳಿ ಸೂಚನೆ, ನಿಯಮ 69ರ ಸೂಚನೆ, ಖಾಸಗಿ ಸದಸ್ಯರ ಕಾರ್ಯಕಲಾಪಕ್ಕೆ ಅವಕಾಶ ಇರುತ್ತದೆ ಎಂದು ಹೇಳಿದರು. ಈ ಮಧ್ಯೆ ರಾಜಭವನಕ್ಕೆ ತೆರಳಿ ರಾಜ್ಯಪಾಲ ವಿ.ಆರ್. ವಾಲಾ ಅವರನ್ನು ಭೇಟಿಯಾದ ಸಭಾಧ್ಯಕ್ಷರು ಜಂಟಿ ಸದನ ಉದ್ದೇಶಿಸಿ ಭಾಷಣ ಮಾಡಲು ಆಗಮಿಸುವಂತೆ ಆಮಂತ್ರಣ ನೀಡಿದರು.

**ಗೋಹತ್ಯೆ ನಿಷೇಧ ವಿಧೇಯಕ ಬಾಕಿ:** ಈ ನಡುವೆ ಗೋಹತ್ಯೆ ನಿಷೇಧ ಕುರಿತ ವಿಧೇಯಕ ಪರಿಷತ್‌ನಲ್ಲಿ ಮಂಡನೆಯಾಗುವುದು ಬಾಕಿಯಿದೆ. ಈ ವಿಧೇಯಕ ಸಂಬಂಧ ಈಗಾಗಲೇ ಸುಗ್ರೀವಾಜ್ಞೆ ಹೊರಡಿಸಲಾಗಿದೆ. ಪರಿಷತ್‌ನಲ್ಲಿ ಈ ಬಾರಿ ವಿಧೇಯಕ ಮಂಡಿಸಲಾಗುತ್ತದೆ. ಇದು ಸಾಕಷ್ಟು ವಾಗ್ವಾದಕ್ಕೆ ಎಡೆಮಾಡಿ ಕೊಡುವ ಎಲ್ಲ ಸಾಧ್ಯತೆಯೂ ಇದೆ.

ಆಧಾರ: ವಿಜಯ ಕರ್ನಾಟಕ, ದಿನಾಂಕ:28.01.2021

## 9. ಹೊರಟ್ಟಿ ಸಭಾಪತಿ, ಪ್ರಾಣೇಶ್ ಉಪ ಸಭಾಪತಿ

ವಿಧಾನ ಪರಿಷತ್ ಸಭಾಪತಿ ಸ್ಥಾನವನ್ನು ಜೆಡಿಎಸ್‌ಗೆ ಬಿಟ್ಟು ಕೊಡಲು ನಿರ್ಧರಿಸಿರುವ ಬಿಜೆಪಿಯು ಉಪ ಸಭಾಪತಿ ಸ್ಥಾನಕ್ಕೆ ಎಂ.ಕೆ. ಪ್ರಾಣೇಶ್ ಅವರನ್ನು ಕಣಕ್ಕಿಳಿಸಲಿದೆ.

ಮುಖ್ಯಮಂತ್ರಿ ಅವರ ಅಧ್ಯಕ್ಷತೆಯಲ್ಲಿ ನಡೆದ ವಿಧಾನ ಪರಿಷತ್ ಸದಸ್ಯರ ಸಭೆಯಲ್ಲಿ ಈ ತೀರ್ಮಾನ ತೆಗೆದುಕೊಳ್ಳಲಾಗಿದೆ ಎಂದು ಮೂಲಗಳು ತಿಳಿಸಿವೆ. ಸಭಾಪತಿ ಸ್ಥಾನಕ್ಕೆ ಹಿರಿಯ ಸದಸ್ಯ ಬಸವರಾಜ ಹೊರಟ್ಟಿ ಅವರ ಹೆಸರನ್ನು ಜೆಡಿಎಸ್ ಈಗಾಗಲೇ ಅಂತಿಮಗೊಳಿಸಿದೆ. ಈ ಮೂಲಕ ಮೇಲ್ಮನೆಯಲ್ಲಿ ಬಿಜೆಪಿ–ಜೆಡಿಎಸ್ ಮೈತ್ರಿ ಮಾಡಿಕೊಂಡಿವೆ.

ಪ್ರಾಣೇಶ್ ಅವರು ಬೆಳಿಗ್ಗೆ 10 ಗಂಟೆಗೆ ಉಪ ಸಭಾಪತಿ ಸ್ಥಾನಕ್ಕೆ ನಾಮಪತ್ರ ಸಲ್ಲಿಸಲಿದ್ದಾರೆ ಎಂದು ಪರಿಷತ್ ಸರ್ಕಾರಿ ಮುಖ್ಯ ಸಚೇತಕ ಮಹಾಂತೇಶ ಕವಟಗಿಮಠ ತಿಳಿಸಿದ್ದಾರೆ. ಬಸವರಾಜ ಹೊರಟ್ಟಿ ಅವರನ್ನು ಸಭಾಪತಿ ಮಾಡಲು ಮುಖ್ಯಮಂತ್ರಿ ಅವರು ಪಕ್ಷದ ರಾಷ್ಟ್ರೀಯ ಅಧ್ಯಕ್ಷ ಜೆ.ಪಿ.ನಡ್ಡಾ ಮತ್ತು ಗೃಹ ಸಚಿವರಾದ ಅಮಿತ್ ಶಾ ಅವರ ಅನುಮತಿ ಪಡೆದಿದ್ದಾರೆ. ಹೊರಟ್ಟಿಯವರ ವಿವರವನ್ನು ಪಡೆದ ಬಳಿಕ ವರಿಷ್ಠರು ಒಪ್ಪಿಗೆ ನೀಡಿದರು ಎಂದು ಬಿಜೆಪಿ ಮೂಲಗಳು ಹೇಳಿವೆ.

**ಬಿಎಸ್‌ವೈ ಭೇಟಿ ಮಾಡಿದ ಹೊರಟ್ಟಿ:** ಸಭೆಗೂ ಮುನ್ನ ಜೆಡಿಎಸ್ ರಾಷ್ಟ್ರೀಯ ಅಧ್ಯಕ್ಷ ಹೆಚ್.ಡಿ ದೇವೇಗೌಡ ಅವರ ಸೂಚನೆಯ ಮೇರೆಗೆ ಬಸವರಾಜ್ ಹೊರಟ್ಟಿ ಅವರು ಮುಖ್ಯಮಂತ್ರಿ ಅವರನ್ನು ಭೇಟಿ ಮಾಡಿ ಮಾತುಕತೆ ನಡೆಸಿದರು. ಸಭಾಪತಿ ಸ್ಥಾನವನ್ನು ಜೆಡಿಎಸ್‌ಗೆ ಬಿಟ್ಟುಕೊಡಬೇಕು ಎಂದು ಅವರು ಮನವಿ ಮಾಡಿದರು.

ಪರಿಷತ್ ಸಭಾಪತಿ ಪ್ರತಾಪಚಂದ್ರ ಶೆಟ್ಟಿ ವಿರುದ್ಧ ಎರಡನೇ ಬಾರಿ ಬಿಜೆಪಿ ಅವಿಶ್ವಾಸ ಮಂಡಿಸಿದ್ದು, ಇದಕ್ಕೆ ಜೆಡಿಎಸ್ ಬೆಂಬಲ ವ್ಯಕ್ತಪಡಿಸಿದೆ. ಉಪ ಸಭಾಪತಿ ಹುದ್ದೆಗೆ ಆಯ್ಕೆ ಆದ ತಕ್ಷಣವೇ ಸಭಾಪತಿ ಪ್ರತಾಪಚಂದ್ರ ಶೆಟ್ಟಿ ರಾಜೀನಾಮೆ ನೀಡಲಿದ್ದಾರೆ ಎಂದು ಮೂಲಗಳು ಹೇಳಿವೆ.

ಕಳೆದ ಅಧಿವೇಶನದ ವೇಳೆಯೂ ಬಿಜೆಪಿ ಮತ್ತು ಜೆಡಿಎಸ್ ಸಭಾಪತಿ ವಿರುದ್ಧ ಅವಿಶ್ವಾಸ ನೋಟಿಸ್ ನೀಡಿದ್ದವು. ನೋಟಿಸ್ ಕ್ರಮಬದ್ಧವಾಗಿಲ್ಲ ಎಂದು ತಳ್ಳಿಹಾಕಲಾಯಿತು. ಸರ್ಕಾರ ಒಂದು ದಿನದ ಅಧಿವೇಶನ ಕರೆದು(ಡಿಸೆಂಬರ್–15) ಪುನಃ ಅವಿಶ್ವಾಸ ಪ್ರಸ್ತಾಪಿಸುವ ಪ್ರಯತ್ನ ಭಾರಿ ಗಲಾಟೆಗೆ ಕಾರಣವಾಯಿತು. ಅಂದು ಸಭಾಪತಿ ಪೀಠದ ಮೇಲಿದ್ದ ಉಪ ಸಭಾಪತಿ ಎಸ್.ಎಲ್.ಧರ್ಮೇಗೌಡ ಅವರನ್ನು ಎಳೆದು ಹಾಕಲಾಗಿತ್ತು. ಈ ವಿದ್ಯಮಾನ ರಾಷ್ಟ್ರಮಟ್ಟದಲ್ಲಿ ಗಮನಸೆಳೆದಿತ್ತು.

**ಪ್ರಾಣೇಶ್ 11 ತಿಂಗಳ ಅವಧಿ:** ನಗರ ಸ್ಥಳೀಯ ಸಂಸ್ಥೆಗಳಿಂದ ಆಯ್ಕೆಯಾಗಿರುವ ಬಿಜೆಪಿಯ ಎಂ.ಕೆ. ಪ್ರಾಣೇಶ್ ಸದಸ್ಯತ್ವದ ಅವಧಿ ಇನ್ನು 11 ತಿಂಗಳು ಬಾಕಿ ಇದೆ. ಇವರು ಬಿಜೆಪಿ ರಾಷ್ಟ್ರೀಯ ಪ್ರಧಾನ ಕಾರ್ಯದರ್ಶಿ, ಶಾಸಕ ಸಿ.ಟಿ.ರವಿ ಸಂಬಂಧಿಯೂ ಹೌದು. ಶಿಕ್ಷಕರ ಕ್ಷೇತ್ರದಿಂದ ಆಯ್ಕೆಯಾಗಿರುವ ಬಸವರಾಜ್ ಹೊರಟ್ಟಿ ಅವಧಿ ಒಂದೂವರೆ ವರ್ಷ ಬಾಕಿ ಇದೆ.

ಆಧಾರ: ಪ್ರಜಾವಾಣಿ, ದಿನಾಂಕ:28.01.2021.

## 10.ಕಲಾಪ ಫಲಪ್ರದವಾಗಲಿ ಗುಣಮಟ್ಟದ ಚರ್ಚೆಗೆ ನಾಂದಿ ಹಾಡಿ

ವಿಧಾನ ಪರಿಷತ್ ಸಭಾಪತಿ ವಿರುದ್ಧ ಅವಿಶ್ವಾಸ ನಿರ್ಣಯ ಮಂಡಿಸುವ ಸಂಬಂಧ ನಡೆದ ಗಲಾಟೆಯ ಬಳಿಕ ನಡೆಯಲಿರುವ ವಿಧಾನ ಮಂಡಲ ಅಧಿವೇಶನದ ಮೇಲೆ ಎಲ್ಲರ ದೃಷ್ಟಿ ನೆಟ್ಟಿದೆ.

ಗುರುವಾರ ಆರಂಭವಾಗಿ ಫೆಬ್ರವರಿ 5ರವರೆಗೆ ಒಟ್ಟು 7 ದಿನಗಳ ಕಾಲ ಅಧಿವೇಶನ ಕಲಾಪ ನಡೆಯಲಿದೆ. ರಾಜ್ಯಪಾಲರು ಉಭಯ ಸದನಗಳ ಸದಸ್ಯರನ್ನು ಉದ್ದೇಶಿಸಿ ಭಾಷಣ ಮಾಡುವ ಮೂಲಕ ಸರ್ಕಾರದ ಸಾಧನೆ ಮತ್ತು ಕಾರ್ಯವೈಖರಿಯನ್ನು ತೆರದಿಡಲಿದ್ದಾರೆ. ಸಂಪುಟ ವಿಸ್ತರಣೆ ಬಳಿಕ ಖಾತೆ ಹಂಚಿಕೆಯಲ್ಲಿ ಮೂರು ಬಾರಿ ಬದಲಾವಣೆ ಮಾಡಲಾಗಿದೆ. ಕೃಷಿ ಸಂಬಂಧಿತ ಕಾಯಿದೆ ಜಾರಿ ಮತ್ತು ದೇಶಾದ್ಯಂತ ನಡೆದ ರೈತರ ಪ್ರತಿಭಟನೆಗಳು, ಮುಖ್ಯಮಂತ್ರಿ ತವರು ಜಿಲ್ಲೆಯಾದ ಶಿವಮೊಗ್ಗದಲ್ಲಿ ಜಿಲೆಟಿನ್ ಸ್ಫೋಟದ ನಂತರ ಬಯಲಾಗುತ್ತಿರುವ ಅಕ್ರಮ ಗಣಿಗಾರಿಕೆಗಳು, ಉಪ ಸಭಾಪತಿಯವರ ಎಳೆದಾಟ ಮತ್ತು ಆ ನಂತರ ದಿನಗಳಲ್ಲಿ ಅವರ ಆತ್ಮಹತ್ಯೆ ಮತ್ತು ಶಾಸಕರ ನಡವಳಿಕೆಗಳು, ಎಫ್‌ಡಿಎ ಪ್ರಶ್ನೆಪತ್ರಿಕೆ ಸೋರಿಕೆಯಂತ ಅನೇಕ ವಿಷಯಗಳು ಅಧಿವೇಶನದಲ್ಲಿ ಚರ್ಚೆಗೆ ಬರುವ ಸಾಧ್ಯತೆಗಳಿವೆ. ಈ ನಡುವೆ ಪರಿಷತ್‌ನಲ್ಲಿ ಗೋಹತ್ಯೆ ನಿಷೇಧ ವಿಧೇಯಕ ಮಂಡಿಸಲಾಗುತ್ತದೆ. ಇದೇ ಸಾಕಷ್ಟು ವಾಗ್ವಾದಕ್ಕೆ ಎಡೆಮಾಡಿ ಕೊಡುವ ಎಲ್ಲ ಸಾಧ್ಯತೆಯೂ ಇದೆ. ರಾಜ್ಯ ಸರ್ಕಾರಕ್ಕೆ ಸವಾಲೊಡ್ಡುವ ಈ ಎಲ್ಲ ವಿಷಯಗಳನ್ನು ಪ್ರಸ್ತಾಪಿಸಲು ಪ್ರತಿಪಕ್ಷಗಳು ಸಜ್ಜಾದಂತಿವೆ. ಆಡಳಿತತ್ಮಾಕ ವಿಷಯದಲ್ಲಿ ಸರ್ಕಾರದ ವಿಫಲತೆ ಬಗ್ಗೆ ಆರೋಪಿಸಿ ಕಾಂಗ್ರೆಸ್ ನಿಲುವಳಿ ಸೂಚನೆ ಮಂಡಿಸುವ ನಿರೀಕ್ಷೆಯೂ ಇದೆ. ಜೆಡಿಸ್‌ನಿಂದಲೂ ಕಾರ್ಯತಂತ್ರ ರೂಪಿಸಲಾಗುತ್ತಿದೆ. ಕರ್ನಾಟಕ ಅಂಗಡಿಗಳು ಮತ್ತು ವಾಣಿಜ್ಯ ಸಂಸ್ಥೆಗಳ(ಎರಡನೇ ತಿದ್ದುಪಡಿ) ವಿಧೇಯಕ ಸೇರಿದಂತೆ ಸುಗ್ರೀವಾಜ್ಞೆ ಹೊರಡಿಸಲಾಗಿರುವ ಮೂರೂ ವಿಧೇಯಕಗಳನ್ನು ಈ ಬಾರಿ ಸದನದಲ್ಲಿ ಮಂಡಿಸಲಾಗುತ್ತದೆ.

ಶಾಸಕಾಂಗ ಉನ್ನತ ಸ್ಥಾನವಾಗಿರುವ ವಿಧಾನ ಸಭೆಯಲ್ಲಿ ಫಲಪ್ರದ ಚರ್ಚೆಯನ್ನು ಈ ನಾಡಿನ ಜನ ನಿರೀಕ್ಷಿಸುತ್ತಾರೆ. ತಮ್ಮ ರಾಜಕೀಯ ಅನುಕೂಲ ಸಿಂಧುತ್ವಕ್ಕಾಗಿ ಆಡಳಿತ ಮತ್ತು ಪ್ರತಿಪಕ್ಷಗಳ ಅವಕಾಶ ಮಾಡಿಕೊಡಬಾರದು, ಪ್ರಜಾಪ್ರಭುತ್ವ ನಿಂತಿರುವುದೇ ಅಭಿಪ್ರಾಯ, ಭಿನ್ನಾಭಿಪ್ರಾಯ ಮತ್ತು ಚರ್ಚೆ ತತ್ವಗಳ ಮೇಲೆ, ಹಾಗಾಗಿ, ಜನರಿಗೆ ಅನುಕೂಲವಾಗುವ ರೀತಿಯಲ್ಲಿ ಅತ್ಯಮೂಲ್ಯವಾದ ಸಮಯವನ್ನು ಒಂದುಚೂರು ವ್ಯರ್ಥವಾಗದಂತೆ ಬಳಸಿಕೊಳ್ಳಬೇಕಾದ ಹೊಣೆಗಾರಿಕೆ ಪ್ರತಿಯೊಬ್ಬ ಸದಸ್ಯರ ಮೇಲೂ ಇದೆ.

ಕಾರಣಾಂತರಗಳಿಂದಾಗಿ ಕಳೆದ ಎರಡು ವರ್ಷಗಳ ಸರ್ಕಾರ ಇನ್ನೂ ಸಮಾಜದ ತಳಮಟ್ಟದ ಜನರಿಗೆ ತಲುಪಲು ಸಾಧ್ಯವಾಗಿಲ್ಲ. ಅದಕ್ಕೆ ಅದರದ್ದೇ ಕಾರಣಗಳಿವೆ. ಆಡಳಿತ ವ್ಯವಸ್ಥೆ ಜಿಡ್ಡುಗಟ್ಟಿದ್ದು ಮಾತ್ರವಲ್ಲದೇ ನೈಸರ್ಗಿಕ ಕಾರಣಗಳನ್ನು ನೀಡಬಹುದು. ಇದರ ಹೊರತಾಗಿಯೂ ಸರ್ಕಾರವೊಂದು ಸಕ್ರಿಯವಾಗಿ ಲೋಪಗಳನ್ನು ಎತ್ತಿ ಹಿಡಿದು ಅಂತಿಮವಾಗಿ ಜನಕಲ್ಯಾಣಕ್ಕೆ ಸಹಕರಿಸಬೇಕು. ಇದಕ್ಕೆಲ್ಲ ವಿಧಾನಮಂಡಲದ ಅಧಿವೇಶನವು ಅತ್ಯುತ್ತಮ ವೇದಿಕೆಯಾಗಿದೆ. ಇಲ್ಲಿ ಕೇವಲ ಕಾಯಿದೆ, ಕಾನೂನುಗಳೇ ಮಾತ್ರವೇ ರೂಪಿತವಾಗುವುದಿಲ್ಲ. ಇಲ್ಲಿನ ನಡೆ, ನುಡಿ ಎಲ್ಲವೂ ಅನುಕರಣೀಯವಾಗಿರುತ್ತದೆ.

ಕರ್ನಾಟಕದ ವಿಧಾನಮಂಡಲ ಅಧಿವೇಶನಕ್ಕೆ ಘನವಾದ ಇತಿಹಾಸವಿದೆ. ಸಂಸದೀಯ ವ್ಯವಹಾರಗಳಲ್ಲಿ ಇಡೀ ದೇಶಕ್ಕೆ ಮೇಲ್ಪಂಕ್ತಿ ಹಾಕಿಕೊಟ್ಟ ಹೆಚ್ಚುಗಾರಿಕೆ ನಮ್ಮದು. ಕೆಲವು ವರ್ಷಗಳಿಂದ ಅಧಿವೇಶನದ ಘನ ಉದ್ದೇಶ ಈಡೇರುತ್ತಿಲ್ಲ. ಕೇವಲ ಕಾಟಾಚಾರಕ್ಕೆ ಎಂಬಂತೆ ಕಲಾಪಗಳು ನಡಯುತ್ತಿವೆ. ಇಲ್ಲವೇ ಆಡಳಿತ ಮತ್ತು ಪ್ರತಿಪಕ್ಷಗಳ ಅಹಂಗೆ ಅಧಿವೇಶನವೇ ಬಲಿಯಾಗುತ್ತಿವೆ. ಇಂದಿನಿಂದ ನಡೆಯಲಿರುವ ಈ ಅಧಿವೇಶನ ಇಂಥ ಯಾವುದೇ ಅಪಹಾಸ್ಯಗಳಿಗೆ ಆಸ್ಪದ ಮಾಡಿಕೊಡಬಾರದು. ಎಲ್ಲ ಸದಸ್ಯರು ಅಧಿವೇಶನದ ಯಶಸ್ಸಿಗೆ ಶ್ರಮಿಸಬೇಕು. ಇದೊಂದು ಅತ್ಯಂತ ಫಲಪ್ರದ ಅಧಿವೇಶನವಾಗಿ ದಾಖಲಾಗಬೇಕು.

ಆಧಾರ: ವಿಜಯ ಕರ್ನಾಟಕ, ದಿನಾಂಕ:28.01.2021.

## 11. ಫಲಪ್ರದವಾಗಲಿ ವಿಧಾನಮಂಡಲ ಅಧಿವೇಶನ

ಇಂದಿನಿಂದ ರಾಜ್ಯ ವಿಧಾನಮಂಡಲದ ಜಂಟಿ ಅಧಿವೇಶನ ಪ್ರಾರಂಭವಾಗಿದೆ. ಸಹಜವಾಗಿಯೇ ವಿಧಾನಮಂಡಲ ಅಧಿವೇಶನದಲ್ಲಿ ರಾಜ್ಯದ ಜನಸಾಮಾನ್ಯರ ಸಮಸ್ಯೆಗಳ ಬಗ್ಗೆ ಚರ್ಚೆ ಹಾಗೂ ಪರಿಹಾರ, ಪ್ರಮುಖ ಕಾನೂನು ರಚನೆ ಸೇರಿ ಪ್ರಮುಖ ವಿಷಯಗಳ ಬಗ್ಗೆ ಫಲಪ್ರದ ಚರ್ಚೆಗಳು ನಡೆಯಲಿ ಎಂಬ

ನಿರೀಕ್ಷೆಯಿದೆ. ಮೊದಲ ದಿನ ರಾಜ್ಯಪಾಲರು ಜಂಟಿ ಸದನ ಉದ್ದೇಶಿಸಿ ಮಾತನಾಡಿದ ನಂತರ ಇತರೆ ಕಾರ್ಯಕಲಾಪಗಳು ಮುಂದುವರೆಯಲಿವೆ.

ಇತ್ತೀಚಿಗಿನ ಅಧಿವೇಶನ ಗಮನಿಸಿದರೆ ಗಲಾಟೆ, ಕೋಲಾಹಲ ಗದ್ದಲದಲ್ಲೇ ಕಲಾಪ ಮುಗಿಯುತ್ತಿದೆ. ಯಾವುದೇ ವಿಷಯ ಅಥವಾ ಯೋಜನೆಗಳ ಕುರಿತು ಸಮಗ್ರ ಚರ್ಚೆ, ಪರ–ವಿರೋಧ ಅಭಿಪ್ರಾಯ ಆಲಿಸುವಿಕೆ, ಮನವರಿಕೆ ಕೆಲಸವೇ ಆಗುತ್ತಿಲ್ಲ.

ಒಂದೆಡೆ ಪ್ರತಿಪಕ್ಷ ವಿರೋಧಿಸಬೇಕೆಂಬ ಕಾರಣಕ್ಕಾಗಿಯೇ ವಿರೋಧ ವ್ಯಕ್ತಪಡಿಸಿ ಸಭಾತ್ಯಾಗ ಮಾಡಿದರೆ, ಇನ್ನೊಂದೆಡೆ ಬಹುಮತ ಇದೆ ಎನ್ನುವ ಕಾರಣಕ್ಕೆ ಆಡಳಿತ ಪಕ್ಷ ಧ್ವನಿಮತದ ಮೂಲಕ ಅಂಗೀಕಾರ ಮಾಡಿಕೊಂಡು ನಾವು ಮಾಡಿದ್ದೇ ಸರಿ ಎಂಬ ವರ್ತನೆ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಸರಿಯಿಲ್ಲ. ಮಹತ್ವದ ವಿಧೇಯಕಗಳ ವಿಚಾರದಲ್ಲೂ ಇದೇ ರೀತಿಯ ತೀರ್ಮಾನ ಆಗುತ್ತಿದೆ. ಜೊತೆಗೆ, ಕೆಲವು ವಿಧೇಯಕಗಳು ವಿಧಾನಸಭೆಯಲ್ಲಿ ಅಂಗೀಕಾರವಾದರೆ, ಪರಿಷತ್‌ನಲ್ಲಿ ಅಂಗೀಕಾರವಾಗದೆ ವಾಪಸ್ಸು ಕಳುಹಿಸಿದ್ದೂ ಇದೆ.

ಕಲಾಪ ಸಲಹಾ ಸಮಿತಿಯಲ್ಲಿ ಎಲ್ಲ ಪಕ್ಷದ ನಾಯಕರು ಕುಳಿತು ಚರ್ಚಿಸಿದರೂ ಸದನದಲ್ಲಿ ಒಮ್ಮತ ಅಥವಾ ಸಹಮತ ಕಂಡು ಬರುವುದಿಲ್ಲ. ಇದರಿಂದ ಗದ್ದಲ, ಕೋಲಾಹಲವುಂಟಾಗಿ ಸದನ ಮುಂದೂಡಿಕೆಯಾಗುವುದು ಸಾಮಾನ್ಯವಾಗಿದೆ. ಇಡೀ ದಿನದ ಕಲಾಪದಲ್ಲಿ ಒಂದೆರಡು ಗಂಟೆ ಮಾತ್ರ ಚರ್ಚೆ ನಡೆದದ್ದನ್ನೂ ನೋಡಿದ್ದೇವೆ. ಇಷ್ಟಕ್ಕೆ ಅಧಿಕಾರಿಗಳನ್ನು ಗುಡ್ಡೆ ಹಾಕಿಕೊಂಡು ಸಾರ್ವಜನಿಕರ ತೆರಿಗೆ ಹಣ ಪೋಲುಮಾಡಬೇಕಾ ಎನ್ನುವ ಪ್ರಶ್ನೆ ಈ ಕಾರಣಕ್ಕಾಗಿಯೇ ಆಗಾಗ ಎದುರಾಗುತ್ತಿರುವುದು. ಈ ಬಗ್ಗೆ ಆಡಳಿತ ಹಾಗೂ ಪ್ರತಿಪಕ್ಷ ಆತ್ಮಾವಲೋಕನ ಮಾಡಿಕೊಳ್ಳಬೇಕು.

ವರ್ಷಕ್ಕೆ ಕನಿಷ್ಠ 60 ದಿನ ಅಧಿವೇಶನ ನಡೆಸಬೇಕು ಎಂಬ ತೀರ್ಮಾನವಾಗಿದೆ. 2002 ರಿಂದ ಇದುವರೆಗೂ ಅದು ಪಾಲನೆಯಾಗಿಲ್ಲ ಈ ವರ್ಷವಾದರೂ 60 ದಿನ ಕಲಾಪ ನಡೆಯುವಂತಾಗಲಿ. ರಾಜ್ಯದ ಆರ್ಥಿಕ ಸ್ಥಿತಿಗೆ ಕೋವಿಡ್ ಸಮಯದಲ್ಲಿ ಎದುರಾಗಿರುವ ಸಂಕಷ್ಟ ಅಷ್ಟಿಷ್ಟಲ್ಲ. ಇನ್ನು ಲಾಕ್‌ಡೌನ್ ಸಮಯದಲ್ಲಿ ನಂತರದ ನಿರ್ಬಂಧಗಳು ಹಾಗೂ ಆರ್ಥಿಕ ಕೊರತೆಯಿಂದಾಗಿ ಅನೇಕ ಅಭಿವೃದ್ಧಿ ಅಯೋಜನೆಗಳು ಅನುಷ್ಠಾನಕ್ಕೆ ಬರದೆ ನಿಂತಿವೆ. ಆಡಳಿತ ಪಕ್ಷ ಹಾಗೂ ವಿರೋಧ ಪಕ್ಷಗಳು ಸಾರ್ವಜನಿಕರ ಹಿತದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಮಹತ್ವದ ಕಾನೂನು, ಯೋಜನೆಗಳ ವಿಚಾರದಲ್ಲಿ ಚರ್ಚೆ, ಪರ–ವಿರೋಧ ಅಭಿಪ್ರಾಯ ಎಲ್ಲದಕ್ಕೂ ಅವಕಾಶ ಇರುವಂತೆ ಮಾಡಿ, ಅಂತಿಮವಾಗಿ ಜನಹಿತಕ್ಕಾಗಿ ಸರ್ವಸಮ್ಮತ ನಿರ್ಧಾರ ಕೈಗೊಳ್ಳಬೇಕು. ಅಧಿವೇಶನ ಎನ್ನುವುದು ಬಲಪ್ರದರ್ಶನದ ಅಖಾಡವಾಗದಿರಲಿ ಇಲ್ಲಿ ಯಾರೂ ಸಹ ಸೋಲು ಗೆಲುವು ಎಂದು ಭಾವಿಸಬೇಕಿಲ್ಲ. ಜನರ ಸಮಸ್ಯೆಗಳಿಗೆ ಪರಿಹಾರ ಮುಖ್ಯ.

ಆಧಾರ: ಉದಯವಾಣಿ, ದಿನಾಂಕ:28.01.2021

## 12. ಕೊನೆ ಕ್ಷಣದವರೆಗೆ ರಾಜೀನಾಮೆ ಬೇಡ

ಒಂದೆಡೆ ವಿಧಾನ ಪರಿಷತ್ ಸಭಾಪತಿ ಗಾದಿ ಮೇಲೆ ಕೂರಲು ಬಸವರಾಜ್ ಹೊರಟ್ಟಿ ಅವರು ಸಿದ್ಧತೆ ಆರಂಭಿಸಿದ್ದರೆ, ಇನ್ನೊಂದೆಡೆ ಕಾಂಗ್ರೆಸ್ ನಾಯಕರು ಇನ್ನಷ್ಟು ದಿನ ಸಭಾಪತಿ ಸ್ಥಾನದಲ್ಲಿ ಪ್ರತಾಪಚಂದ್ರ ಶೆಟ್ಟಿ ಅವರನ್ನು ಮುಂದುವರಿಸಲು ಕಸರತ್ತು ನಡೆಸಿದ್ದಾರೆ.

ಉಪ ಸಭಾಪತಿ ಚುನಾವಣೆ ಮುಗಿಯುತ್ತಿದ್ದಂತೆ ತಮ್ಮ ಸ್ಥಾನಕ್ಕೆ ರಾಜೀನಾಮೆ ನೀಡುವ ಲೆಕ್ಕಾಚಾರದಲ್ಲಿ ಪ್ರತಾಪಚಂದ್ರ ಶೆಟ್ಟಿ ಅವರಿದ್ದರು. ಕಾಂಗ್ರೆಸ್ ಶಾಸಕಾಂಗ ಸಭೆಯಲ್ಲಿ, ಇನ್ನಷ್ಟು ದಿನ ಮುಂದುವರಿಸುವ ತೀರ್ಮಾನಕ್ಕೆ ಬರಲಾಗಿದೆ. ಆದ್ದರಿಂದ ಪ್ರತಾಪ್‌ಚಂದ್ರ ಶೆಟ್ಟಿ ಅವರು ರಾಜೀನಾಮೆ ನೀಡಲು ಮುಂದಾಗಿದ್ದರೂ ಜಿದ್ದಿಗೆ ಬಿದ್ದಿರುವ ಕಾಂಗ್ರೆಸ್, ಸಭಾಪತಿ ಸ್ಥಾನದಲ್ಲಿ ಪ್ರತಾಪಚಂದ್ರ ಶೆಟ್ಟಿ ಅವರನ್ನು ಮುಂದುವರಿಸಲು ಮುಂದಾಗಿದೆ. ಸಭಾಪತಿ ಅವರ ವಿರುದ್ಧ ಜೆಡಿಎಸ್, ಬಿಜೆಪಿ ಮಂಡಿಸಿರುವ ಅವಿಶ್ವಾಸ ನಿರ್ಣಯ ಫೆಬ್ರವರಿ 1 ಕ್ಕೆ ಕೊನೆಗೊಳ್ಳಲಿದೆ. ಈ ಸಂಬಂಧ ಫೆಬ್ರವರಿ 1 ರಿಂದ ಅವಿಶ್ವಾಸ

ನಿರ್ಣಯದ ಬಗ್ಗೆ ಅಧಿವೇಶನದಲ್ಲಿ ಚರ್ಚೆ ಕೈಗೆತ್ತಿಕೊಳ್ಳಬಹುದಾಗಿದೆ. ಅಲ್ಲಿಯವರೆಗೆ ರಾಜೀನಾಮೆ ನೀಡುವುದು ಬೇಡ ಎನ್ನುವ ಲೆಕ್ಕಾಚಾರದಲ್ಲಿ ಕಾಂಗ್ರೆಸ್ ಇದೆ.

**ತಾಂತ್ರಿಕ ಕಾರಣ ಹುಡುಕಲು ಕೈ ಚಿಂತನೆ:** ಸಭಾಪತಿ ವಿರುದ್ಧ ಮಂಡನೆಯಾಗಿರುವ ಅವಿಶ್ವಾಸ ನಿರ್ಣಯದಲ್ಲಿ ಯಾವುದಾದರೂ ತಾಂತ್ರಿಕ ಕಾರಣವನ್ನು ಹುಡುಕಿ ಸಭಾಪತಿಗಳನ್ನು ಮುಂದುವರಿಸುವ ಲೆಕ್ಕಾಚಾರದಲ್ಲಿ ಕಾಂಗ್ರೆಸ್ ಇದೆ.

ಡಿಸೆಂಬರ್ 5ರಂದು ಮೇಲ್ಮನೆಯಲ್ಲಿ ಅವಿಶ್ವಾಸ ನಿರ್ಣಯ ಸಂಬಂಧ ನಡೆದ ಗದ್ದಲದ ಬಗ್ಗೆ ವರದಿ ನೀಡಲು ಸಭಾಪತಿ ಅವರು ಸದನ ಸಮಿತಿ ರಚಿಸಿದ್ದರು. ಐವರ ಪೈಕಿ ಈಗಾಗಲೇ ಬಿಜೆಪಿಯ ಇಬ್ಬರು ರಾಜೀನಾಮೆ ನೀಡಿರುವುದರಿಂದ ಮೂವರು ಸದಸ್ಯರ ಸಮಿತಿ ಸಭಾಪತಿಗಳಿಗೆ ಮಧ್ಯಂತರ ವರದಿ ನೀಡುವುದಲ್ಲದೇ, ಸಂಪೂರ್ಣ ವರದಿ ನೀಡಲು ಮೂರು ತಿಂಗಳ ಕಾಲಾವಕಾಶ ಕೇಳಿದೆ.

ಈ ವರದಿ ಸದನದಲ್ಲಿ ಮಂಡನೆಯಾಗಬೇಕು. ಮಂಡನೆಯಾದರೆ ಇದು ಸದನದ ಆಸ್ತಿಯಾಗಲಿದೆ. ಮಧ್ಯಂತರ ವರದಿ ಮೇಲೆ ಕ್ರಮ ಕೈಗೊಳ್ಳಲು ಆಗುವುದಿಲ್ಲ ಸಂಪೂರ್ಣ ವರದಿ ನೀಡಲು ಕಾಲಾವಕಾಶ ನೀಡಬೇಕಾಗುತ್ತದೆ. ಅಲ್ಲಿಯವರೆಗೆ ಸಭಾಧ್ಯಕ್ಷ ಸ್ಥಾನದಲ್ಲಿ ತಾವು ಮುಂದುವರಿಯಬಹುದಾಗಿದೆ. ಎಂಬುದು ಕಾಂಗ್ರೆಸ್‌ನ ನಿಲುವಾಗಿದೆ. ಸಭಾಪತಿ ಸ್ಥಾನಕ್ಕೆ ಅನಗತ್ಯ ಧಕ್ಕೆ ತಂದ ಘಟನೆಯ ಸಂಪೂರ್ಣ ವರದಿ ಬರುವವರೆಗೆ ತಾವು ಹುದ್ದೆಯಲ್ಲಿ ಮುಂದುವರಿಯಬೇಕು. ಅಲ್ಲಿಯವರೆಗೆ ಯಾವುದೇ ನಿರ್ಧಾರ ಕೈಗೊಳ್ಳುವುದು ಬೇಡ ಎಂಬುದು ಕಾಂಗ್ರೆಸ್‌ನ ಅಚಲ ನಿರ್ಧಾರವಾಗಿದೆ.

ಆಧಾರ: ವಿಶ್ವವಾಣಿ, ದಿನಾಂಕ:29.01.2021.

## 13.ಬಿಎಸಿ ಸಭೆ ಬಹಿಷ್ಕರಿಸಿದ ಕಾಂಗ್ರೆಸ್

ಹಾಲಿ ಅಧಿವೇಶನದ ಕಲಾಪ ಸಲಹಾ ಸಮಿತಿ (ಬಿಎಸಿ) ಸಭೆ ಬಹಿಷ್ಕರಿಸಲು ಪ್ರತಿಪಕ್ಷ ಕಾಂಗ್ರೆಸ್ ತೀರ್ಮಾನಿಸಿದೆ. ಇದರೊಂದಿಗೆ ಸದನದಲ್ಲಿ ಗದ್ದಲದ ವಾತಾವರಣ ನಿರ್ಮಾಣದ ಸುಳಿವು ಸಿಕ್ಕಂತಾಗಿದೆ. ಕಳೆದ ಅಧಿವೇಶನದಲ್ಲಿ ಚರ್ಚೆಗೆ ಅವಕಾಶ ನೀಡದೆ ಗೋಹತ್ಯೆ ನಿಷೇಧ ಕುರಿತ ವಿಧೇಯಕ ಪಾಸು ಮಾಡಿಕೊಂಡಿದ್ದನ್ನು ವಿರೋಧಿಸಿ ಈ ಪ್ರತಿಭಟನೆ ಮಾಡಲು ಕಾಂಗ್ರೆಸ್ ನಿರ್ಧರಿಸಿದೆ, ಬಿಎಸಿಯಲ್ಲಿ ಪ್ರಸ್ತಾಪ ಮಾಡದೆ ಈ ವಿಧೇಯಕ ಮಂಡಿಸಲಾಯಿತು ಎನ್ನುವುದು ಕಾಂಗ್ರೆಸ್ ಆರೋಪವಾಗಿದೆ. ಪ್ರತಿಪಕ್ಷದ ನಾಯಕ ಸಿದ್ದರಾಮಯ್ಯ ನೇತೃತ್ವದಲ್ಲಿ ನಡೆದ ಸಿಎಲ್‌ಪಿ ಸಭೆಯಲ್ಲಿ ಈ ಸಂಬಂಧ ಸಮಲೋಚಿಸಲಾಯಿತು. ಬಿಎಸಿ ಬಹಿಷ್ಕರಿಸುವ ನಿಲುವು ತಳೆಯಲಾಯಿತು.

**ಬೊಮ್ಮಾಯಿ ಸಂಧಾನ:** ಈ ಮಧ್ಯೆ ಗೃಹ, ಕಾನೂನು ಮತ್ತು ಸಂಸದೀಯ ಸಚಿವ ಬಸವರಾಜ ಬೊಮ್ಮಯಿ ಅವರು ಸಿದ್ದರಾಮಯ್ಯ ಅವರಿಗೆ ಕರೆ ಮಾಡಿ ಬಿಎಸಿಗೆ ಆಗಮಿಸುವಂತೆ ಮನವಿ ಮಾಡಿಕೊಂಡಿದ್ದಾರೆ. ಈ ಸಂಬಂಧ ಪಕ್ಷದ ಹಿರಿಯ ನಾಯಕರೊಂದಿಗೆ ಚರ್ಚಿಸಿ ಸೂಕ್ತ ನಿರ್ಧಾರಕ್ಕೆ ಬರುವ ಇಂಗಿತವನ್ನು ಸಿದ್ದರಾಮಯ್ಯ ವ್ಯಕ್ತಪಡಿಸಿದ್ದಾರೆ ಎಂದು ತಿಳಿದು ಬಂದಿದೆ.

ಆಧಾರ: ವಿಜಯ ಕರ್ನಾಟಕ, ದಿನಾಂಕ:29.01.2021.

## 14. ಬೆಳಗಾವಿ ಅಧಿವೇಶನ ನಡೆಸದ್ದಕ್ಕೆ ಸದನದಲ್ಲಿ ಕಾಂಗ್ರೆಸ್ ಪ್ರತಿಭಟನೆ

ಕಳೆದ ಎರಡು ವರ್ಷಗಳಿಂದ ಬೆಳಗಾವಿ ಆಧಿವೇಶನ ನಡೆಸದಿರುವುದಕ್ಕೆ ಆಕ್ಷೇಪ ವ್ಯಕ್ತಪಡಿಸಿದ ಕಾಂಗ್ರೆಸ್ ಸದಸ್ಯರು ರಾಜ್ಯಪಾಲರ ಭಾಷಣ ಆರಂಭವಾಗುತ್ತಿದ್ದಂತೆ ಭಿತ್ತಿಪತ್ರ ತೋರಿಸಿ ಕೆಲ ನಿಮಿಷ ಪ್ರತಿಭಟನೆ ನಡೆಸಿದ ಪ್ರಸಂಗ ನಡೆಯಿತು.

ಜಂಟಿ ಅಧಿವೇಶನ ಉದ್ದೇಶಿಸಿ ಮಾತನಾಡಲು ರಾಜ್ಯಪಾಲ ವಿ.ಆರ್. ವಾಲಾ ವಿಧಾನ ಸಭೆಗೆ ಆಗಮಿಸಿ ಸಭಾಧ್ಯಕ್ಷರ ಸ್ಥಾನವನ್ನು ಅಲಂಕರಿಸಿದರು. ಭಾಷಣ ಆರಂಭಿಸುತ್ತಿದ್ದಂತೆ ಕಾಂಗ್ರೆಸ್ ಸದಸ್ಯರಾದ ಪ್ರಕಾಶ್ ರಾಥೋಡ, ಬಿ.ಕೆ. ಹರಿಪ್ರಸಾದ್ ಸೇರಿದಂತೆ ಇತರರು ಭಿತ್ತಿಪತ್ರ ಹಿಡಿದು ಬೆಳಗಾವಿಯಲ್ಲಿ

ಅಧಿವೇಶನ ನಡೆಸಿಲ್ಲ. ಮುಖ್ಯಮಂತ್ರಿ ನೇತೃತ್ವದ ಬಿಜೆಪಿ ಸರ್ಕಾರವು ಉತ್ತರ ಕರ್ನಾಟಕ ಭಾಗವನ್ನು ನಿರ್ಲಕ್ಷ್ಯಿಸಿದೆ ಎಂದು ಆರೋಪಿಸಿದರು. ಕಾಂಗ್ರೆಸ್ ಸದಸ್ಯರ ಪ್ರತಿಭಟನೆಗೆ ಸೊಪ್ಪು ಹಾಕದ ರಾಜ್ಯಪಾಲರು ತಮ್ಮ ಪಾಡಿಗೆ ಭಾಷಣವನ್ನು ಮುಂದುವರಿಸಿದರು. ರಾಜ್ಯಪಾಲರ ಭಾಷಣದ ಪ್ರತಿ ಹಂಚಿಕೆ ಮಾಡಲು ಆರಂಭಿಸಿದ ಬಳಿಕ ಪ್ರತಿಭಟನೆ ನಡೆಸುತ್ತಿದ್ದ ಸದಸ್ಯರು ಸುಮ್ಮನೆ ಕುಳಿತು ರಾಜ್ಯಪಾಲರ ಭಾಷಣವನ್ನು ಆಲಿಸಿದರು.

ಆಧಾರ: ಕನ್ನಡಪ್ರಭ, ದಿನಾಂಕ:29.01.2021.

## 15. ಭಾಷಣದ ನಡುವೆ ಪ್ರತಿರೋಧ

ವಿಧಾನ ಸಭೆ ಜಂಟಿ ಅಧಿವೇಶನದಲ್ಲಿ ರಾಜ್ಯಪಾಲರು ಭಾಷಣ ಆರಂಭಿಸುತ್ತಿದ್ದಂತೆ ಪ್ರತಿಪಕ್ಷ ಕಾಂಗ್ರೆಸ್ ಸದಸ್ಯರು ಒಂದು ನಿಮಿಷ ಸಾಂಕೇತಿಕ ಧರಣಿ ನಡೆಸಿದರು. ಭಾಷಣಕ್ಕೆ ಅಡ್ಡಿಯಾದರೂ, ರಾಜ್ಯಪಾಲರು ಓದು ನಿಲ್ಲಿಸಲಿಲ್ಲ. ಇತ್ತ ಪ್ರತಿಪಕ್ಷನಾಯಕ ಸಿದ್ದರಾಮಯ್ಯ ಆದಿಯಾಗಿ ಕಾಂಗ್ರೆಸ್ ಸದಸ್ಯರು ಎದ್ದು ನಿಂತು ಭಿತ್ತಿ ಪತ್ರ ಹಿಡಿದು ಸಣ್ಣದಾಗಿ ಘೋಷಣೆ ಹಾಕಿದರು. ಬೆಳಗಾವಿಯಲ್ಲಿ ಒಂದೂವರೆ ವರ್ಷದಿಂದ ಅಧಿವೇಶನ ನಡೆಸಿಲ್ಲ, ಉತ್ತರ ಕರ್ನಾಟಕ ಭಾಗದ ನೆರೆ ಪೀಡಿತ ಪ್ರದೇಶಗಳಿಗೆ ಸರ್ಕಾರ ಸರಿಯಾದ ಪರಿಹಾರ ನೀಡಿಲ್ಲ, ಮಹಾಜನ್ ವರದಿಯೇ ಅಂತಿಮ ಹಾಗೂ ನಂಜುಂಡಪ್ಪ ವರದಿ ಸಂಪೂರ್ಣ ಜಾರಿ ಮಾಡಬೇಕೆಂದು ಆಗ್ರಹಿಸಲಾಯಿತು. ಬೆಳಗ್ಗೆ ನಡೆದ ಶಾಸಕಾಂಗ ಪಕ್ಷದ ಸಭೆಯಲ್ಲಿ ಈ ರೀತಿ ಹೋರಾಟ ನಡೆಸಲು ನಿರ್ಣಯಿಸಲಾಗಿತ್ತು. ಜೊತೆಗೆ ಮುಂದೆ ನಡೆಯುವ ಕಲಾಪ ಸಲಹಾ ಸಮಿತಿ ಸಭೆಯಿಂದ ದೂರ ಉಳಿಯುವ ಮೂಲಕ ಪ್ರತಿಭಟನೆ ನಡೆಸಲೂ ಸಹ ನಿರ್ಧರಿಸಲಾಯಿತು, ಕಳೆದ ಅಧಿವೇಶನದಲ್ಲಿ ಕಲಾಪ ಸಲಹಾ ಸಮಿತಿ ಸಭೆಯಲ್ಲಿ ಕೈಗೊಂಡ ನಿರ್ಧಾರಕ್ಕೆ ವಿರುದ್ಧವಾಗಿ ಸರ್ಕಾರ ನಡೆದುಕೊಂಡಿದೆ. ಹೀಗಾಗಿ ಸಭೆಗೆ ಮಹತ್ವ ಇಲ್ಲ. ಅಲ್ಲಿಗೆ ಹೋಗಿ ಚರ್ಚೆ ಮಾಡುವ ಅಗತ್ಯವಿಲ್ಲ ಎಂಬ ಅಭಿಪ್ರಾಯಕ್ಕೆ ಬರಲಾಯಿತು.

**ರಾಜ್ಯಪಾಲರಿಂದ ಸುಳ್ಳಿನ ಸರಮಾಲೆ:** ಜಂಟಿ ಅಧಿವೇಶನ ಉದ್ದೇಶಿಸಿ ರಾಜ್ಯಪಾಲರು ಮಾಡಿದ ಭಾಷಣ ಸುಳ್ಳಿನ ಕಂತೆ. ಕೇವಲ ಸುಳ್ಳುಗಳ ಸರಮಾಲೆಯನ್ನು ಸರ್ಕಾರ ರಾಜ್ಯಪಾಲರ ಮೂಲಕ ಹೇಳಿಸಿದೆ ಎಂದು ಪ್ರತಿಪಕ್ಷನಾಯಕ ಸಿದ್ದರಾಮಯ್ಯ ಅಭಿಪ್ರಾಯ ನೀಡಿದ್ದಾರೆ. ಸುದ್ದಿಗಾರರೊಂದಿಗೆ ಮಾತನಾಡಿದ ಅವರು, ರಾಜ್ಯದ ಇತಿಹಾಸದಲ್ಲಿಯೇ ಇಂತಹ ಕಳಪೆ ಭಾಷಣವನ್ನು ಕೇಳಿರಲಿಲ್ಲ. ರಾಜ್ಯ ಬಿಜೆಪಿ ಸರ್ಕಾರದ ಸಾಧನೆ ಶೂನ್ಯ. ರಾಜ್ಯಪಾಲರು ಭಾಷಣದಲ್ಲಿ ಸರ್ಕಾರದ ಸಾಧನೆಗಳನ್ನು ಹೇಳಿಯೇ ಇಲ್ಲ ಎಂದರು. ರಾಜ್ಯಪಾಲರು ಹೇಳಿದ ಸರ್ಕಾರದ ಸಾಧನೆಗಳೆಲ್ಲವು ನಮ್ಮ ಅವಧಿಯಲ್ಲಿ ಆಗಿರುವಂಥದ್ದು. ಈ ಭಾಷಣದಲ್ಲಿ ಗೊತ್ತು – ಗುರಿ ಎಂಬುದೇ ಇಲ್ಲ ಎಂದ ಅವರು ಯಾವುದೇ ಸರ್ಕಾರಕ್ಕೆ ಒಂದು ದೂರದೃಷ್ಟಿ ಇರಬೇಕು. ಈ ಸರ್ಕಾರದ ಅವಧಿ ಇನ್ನೂ ಎರಡೂವರೆ ವರ್ಷ ಇದೆ. ಈ ಅವಧಿಯಲ್ಲಿ ನಾವು ಏನು ಮಾಡಲಿದ್ದೇವೆ ಎಂಬುದನ್ನು ಹೇಳಬೇಕಿತ್ತು ಎಂದು ಹೇಳಿದರು. ಎಲ್ಲದಕ್ಕೂ ಸರ್ಕಾರ ಕೊರೋನಾ ನೆಪ ಹೇಳುತ್ತಿದೆ. ಹಣಕಾಸು ಪರಿಸ್ಥಿತಿ ಹದಗೆಡಲು, ಅಭಿವೃದ್ಧಿ ಕಾರ್ಯ ಕುಂಠಿತಗೊಳ್ಳಲು, ಶಾಸಕರ ಪ್ರದೇಶಾಭಿವೃದ್ಧಿ ನಿಧಿ ಬಿಡುಗಡೆ ಮಾಡದಿರಲು ಕೊರೋನಾ ಕಾರಣ ಎಂದು ಸಿಎಂ ಹೇಳುತ್ತಾರೆ ಎಂದರು. ಕೋಟ್ಯಂತರ ರೂಪಾಯಿ ಖರ್ಚು ಮಾಡಿ ಬೆಳಗಾವಿಯಲ್ಲಿ ಸುವರ್ಣಸೌಧ ಕಟ್ಟಿಸಿದ್ದು ಏಕೆ, ವರ್ಷಕ್ಕೆ ಒಮ್ಮೆಯಾದರೂ ಬೆಳಗಾವಿಯಲ್ಲಿ ಅಧಿವೇಶನ ನಡೆಯಲೇಬೇಕು. ಇದು ನಮ್ಮ ಆಗ್ರಹ ಎಂದರು.

ಆಧಾರ: ವಿಜಯವಾಣಿ, ದಿನಾಂಕ:29.01.2021.

## 16. ರಾಜ್ಯದಲ್ಲಿ ಅಭಿವೃದ್ಧಿ ಯೋಜನೆಗಳಿಗೆ ವೇಗ

ಕೊರೋನಾ ಸಂಕಷ್ಟದ ನಡುವೆಯೂ ರಾಜ್ಯದಲ್ಲಿ ಸಂಪನ್ಮೂಲ ಕ್ರೋಢೀಕರಣ ಆಶಾದಾಯಕವಾಗಿದ್ದು ಅಭಿವೃದ್ಧಿ ಯೋಜನೆಗಳ ವೇಗ ಹೆಚ್ಚಿಸಲಾಗಿದೆ. ಜನಪರ ಕಾರ್ಯಕ್ರಮಗಳ ಜಾರಿಯಲ್ಲಿ ಹಿಂದೆ ಬಿದ್ದಿಲ್ಲ ಎಂದು ರಾಜ್ಯಪಾಲ ವಜೂಬಾಯಿ ವಾಲಾ ಪ್ರತಿಪಾದಿಸಿದ್ದಾರೆ.

ಜಂಟಿ ಅಧಿವೇಶನ ಉದ್ದೇಶಿಸಿ ಭಾಷಣ ಮಾಡಿ, ಕೊರೋನಾ ಹಾಗೂ ಪ್ರವಾಹ ಪರಿಸ್ಥಿತಿ ಸಮರ್ಥ ನಿರ್ವಹಣೆ, ಗ್ರಾಮೀಣ ಭಾಗದ ಜನರಿಗೆ ಉದ್ಯೋಗ ಖಾತರಿ ಯೋಜನೆಯಡಿ ಕೆಲಸ, ಕಾರ್ಮಿಕರು, ರೈತರಿಗೆ ಪ್ಯಾಕೇಜ್, ಶಿಕ್ಷಕರು ಮತ್ತು ಪೋಷಕರ ಸಹಾಯವಾಣಿ, ಯು–ಟ್ಯೂಬ್ ವಾಹಿನಿ ಸ್ಥಾಪನೆ ಸೇರಿ ಸರ್ಕಾರದ ಕಳೆದೊಂದು ವರ್ಷದ ಸಾಧನೆಗಳ ಪಟ್ಟಿ ಮುಂದಿಟ್ಟರು.

ತೀವ್ರ ವಿವಾದ ಹಾಗೂ ಕೋಲಾಹಲಕ್ಕೆ ಕಾರಣವಾದ ಭೂ ಸುಧಾರಣೆ ಕಾಯ್ದೆ, ಎಪಿಎಂಸಿ, ಕಾಯ್ದೆ ಗೋಹತ್ಯೆ ನಿಷೇಧ ವಿಧೇಯಕ ಕುರಿತು ತಮ್ಮ ಭಾಷಣದಲ್ಲಿ ಪ್ರಸ್ತಾಪ ಮಾಡದಿರುವುದು ಅಚ್ಚರಿ ಮೂಡಿಸಿದೆ.

**ತೆರಿಗೆ ಸಂಗ್ರಹ:** ರಾಜ್ಯಪಾಲರು ತಮ್ಮ ಭಾಷಣದಲ್ಲಿ ತೆರಿಗೆ ಸಂಗ್ರಹ ಪ್ರಮುಖವಾಗಿ ಪ್ರಸ್ತಾಪಿಸಿದ್ದು ರೂ.30,467 ಕೋಟಿ ವಾಣಿಜ್ಯ ತೆರಿಗೆ ಹಾಗೂ ರೂ. 16,788 ಕೋಟಿ ಅಬಕಾರಿ ತೆರಿಗೆ ಸಂಗ್ರಹ ಮಾಡಿ ಅಭಿವೃದ್ಧಿ ಕಾಮಗಾರಿ ಸುಗಮವಾಗಿ ಮುಂದುವರೆಸಿದೆ ಎಂದು ಹೇಳಿದರಲ್ಲದೆ, ಕರ್ನಾಟಕವು ನಾವಿನ್ಯ ಸೂಚ್ಯಂಕದಲ್ಲಿ ಮೊದಲ ಸ್ಥಾನ, ಹಾಲು ಉತ್ಪಾದನೆಯಲ್ಲಿ ಎರಡನೇ ಸ್ಥಾನ, 11 ಸುಸ್ಥಿರ ಅಭಿವೃದ್ಧಿ ಗುರಿಯಲ್ಲಿ ಮಂಚೂಣಿಯಲ್ಲಿದೆ ಎಂದರು.

ಸರ್ಕಾರವು ರೂ.300 ಕೋಟಿ ವೆಚ್ಚದಲ್ಲಿ ರಾಮನಗರ, ಚಿಕ್ಕಬಳ್ಳಾಪುರ, ಬೆಂಗಳೂರು, ಮಂಡ್ಯ, ಕೊಪ್ಪಳ, ಬೆಳಗಾವಿ, ಉಡುಪಿ ಜಿಲ್ಲೆಗಳ ಕೆರೆಗಳಿಗೆ ಸಂಸ್ಕರಿಸಿದ ನೀರು ತುಂಬಿಸಲು ಯೋಜನೆ ರೂಪಿಸಲಾಗಿದೆ. ಇದೇ ರೀತಿ ರೂ.142 ಕೋಟಿ ಯೋಜನೆ ಬಳ್ಳಾರಿ, ಚಿತ್ರದುರ್ಗ, ಹುಬ್ಬಳ್ಳಿ–ಧಾರವಾಡದಲ್ಲೂ ರೂಪಿಸಲು ಉದ್ದೇಶಿಸಲಾಗಿದೆ ಎಂದು ವಿವರಿಸಿದರು.

"ನನ್ನ ಶಾಲೆ ನನ್ನ ಕೊಡುಗೆ" ಕಾರ್ಯಕ್ರಮದಡಿ ಜನಪ್ರತಿನಿಧಿಗಳು ಸೇರಿ 1,500 ಶಾಲೆ ದತ್ತು ಪಡೆದಿದ್ದಾರೆ. ಗುಣಮಟ್ಟದ ಉನ್ನತ ಶಿಕ್ಷಣಕ್ಕೆ ಒತ್ತು ನೀಡಲಾಗಿದೆ. 150 ಸರ್ಕಾರಿ ಕೈಗಾರಿಕಾ ಸಂಸ್ಥೆಗಳ ಉನ್ನತೀಕರಣಕ್ಕಾಗಿ ಟಾಟಾ ಟೆಕ್ನಾಲಜಿ ಜೊತೆ ಒಡಂಬಡಿಕೆ ಮಾಡಿಕೊಳ್ಳಲಾಗಿದೆ. ಕೇಂದ್ರ ಪುರಸ್ಕೃತ ಯೋಜನೆಯಡಿ ಚಿಕ್ಕಬಳ್ಳಾಪುರ, ಹಾವೇರಿ, ಯಾದಗಿರಿ, ಚಿಕ್ಕಮಗಳೂರಿನಲ್ಲಿ ತಲಾ ರೂ. 325 ಕೋಟಿ ವೆಚ್ಚದಲ್ಲಿ ಹೊಸ ವೈದ್ಯಕೀಯ ಕಾಲೇಜು ಸ್ಥಾಪಿಸಲು ಅನುಮತಿ ನೀಡಲಾಗಿದೆ ಎಂದು ತಿಳಿಸಿದರು.

**ಕಲ್ಯಾಣ ಕರ್ನಾಟಕ:** 2020–21ನೇ ಸಾಲಿನಲ್ಲಿ ಕಲ್ಯಾಣ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಗೆ ರೂ.1,132 ಕೋಟಿ ಒದಗಿಸಲಾಗಿದೆ. ಮಾನವ ಸಂಪನ್ಮೂಲ ಸಾಂಸ್ಕೃತಿಕ ಸಂಘ ಸ್ಥಾಪನೆಗೆ ರೂ.300 ಕೋಟಿ ನೆರವು ಘೋಷಿಸಲಾಗಿದೆ. ಕಲಬುರಗಿಯಲ್ಲಿ 300 ಹಾಸಿಗೆ ಸಾಮರ್ಥ್ಯದ ಜಯದೇವ ಹೃದ್ರೋಗ ಆಸ್ಪತ್ರೆ ನಿರ್ಮಿಸಲಾಗುವುದು. ಪರಿಶಿಷ್ಟ ಜಾತಿ ಅಭಿವೃದ್ಧಿಗಾಗಿ ರೂ. 17,683 ಕೋಟಿ, ಪರಿಶಿಷ್ಟ ಪಂಗಡ ಅಭಿವೃದ್ಧಿಗೆ ರೂ7,754 ಕೋಟಿ ನೆರವು ಒದಗಿಸಿ ಭೂ ಚೇತನ ಯೋಜನೆಯಡಿ 3,061 ಫಲಾನುಭವಿಗಳಿಗೆ ಜಮೀನು ಖರೀದಿಸಿ ನೀಡಲಾಗಿದೆ ಎಂದು ಹೇಳಿದರು.

**ಪ್ರಮುಖಾಂಶ:**

- ರೂ.5ಲಕ್ಷ ಕೋಟಿ ಹೂಡಿಕೆ 20 ಲಕ್ಷ ಉದ್ಯೋಗ ಸೃಷ್ಟಿ ಗುರಿ, ಹೊಸ ಪ್ರವಾಸೋದ್ಯಮ ನೀತಿಯಲ್ಲಿ ಹೂಡಿಕೆಗೆ ಉತ್ತೇಜನ.
- ಪ್ರಸಕ್ತ ವರ್ಷ 653 ಸಬ್ ಇನ್ಸ್‌ಪೆಕ್ಟರ್, 6,685 ಪೊಲೀಸ್ ಪೇದೆ ನೇಮಕ.
- ಕೊರೋನಾ ಸಂದರ್ಭದಲ್ಲಿ 63.59 ಲಕ್ಷ ಫಲಾನುಭವಿಗಳಿಗೆ ರೂ.5,372 ಕೋಟಿ ನೆರವು.
- 61,379 ಮೆ. ಟನ್ ಭತ್ತ, 1.93 ಲಕ್ಷ, ಮೆ. ಟನ್ ರಾಗಿ. 9,256 ಮೆ. ಟನ್ ಜೋಳ ಬೆಂಬಲ ಬೆಲೆಯಡಿ ಖರೀದಿ.

- ಪಿಎಂ. ಕೃಷಿ ಪಂಚಾಯಿತಿಯಡಿ 2.76 ಲಕ್ಷ ರೈತರಿಗೆ ನೆರವು.
- 1.4 ಲಕ್ಷ ರೈತರಿಗೆ ರೂ.296 ಕೋಟಿ ಬೆಳೆ ವಿಮೆ.

ಆಧಾರ: ಉದಯವಾಣಿ, ದಿನಾಂಕ:29.01.2021.

## 17.ಅಗಲಿದ ಗಣ್ಯರಿಗೆ ಸಂತಾಪ

ವಿಧಿವಶರಾದ ಜೆಡಿಎಸ್ ಶಾಸಕ ಎಂ.ಸಿ.ಮನಗೂಳಿ, ಇತ್ತೀಚೆಗೆ ಮೃತಪಟ್ಟ ಪರಿಷತ್ ಉಪ ಸಭಾಪತಿ ಎಸ್.ಎಲ್.ಧರ್ಮೇಗೌಡ ಸೇರಿ ಇತರೆ ಗಣ್ಯರ ನಿಧನಕ್ಕೆ ವಿಧಾನಮಂಡಲದ ಉಭಯ ಸದನದಲ್ಲಿ ಸಂತಾಪ ಸಲ್ಲಿಸಲಾಯಿತು.

ವಿಧಾನಸಭೆಯಲ್ಲಿ ಸಂತಾಪ ಸೂಚನೆಯನ್ನು ವಿಧಾನ ಸಭಾಧ್ಯಕ್ಷರು ಮಂಡಿಸಿದರು. ಎಸ್.ಎಲ್.ಧರ್ಮೇಗೌಡ, ಮಾಜಿ ಸಚಿವರಾದ ಎಂ.ಸಿ.ಮನಗೂಳಿ, ರೇಣುಕ ರಾಜೇಂದ್ರನ್, ಪ್ರೇಮಾನಂದ ಜೈವಂತ, ಮಾಜಿ ಶಾಸಕ ಬಸವಂತರೆಡ್ಡಿ ಪಾಟೀಲ್ ಮೋತಕಪಲ್ಲಿ, ಕೇಂದ್ರದ ಮಾಜಿ ಸಚಿವ ಬೂಟಾಸಿಂಗ್, ಆರ್.ಎನ್.ಎಸ್ ಉದ್ಯಮ ಸಮೂಹದ ಸ್ಥಾಪಕ ಡಾ.ಆರ್.ಎನ್. ಶೆಟ್ಟಿ, ಡಾ.ಬನ್ನಂಜೆ ಗೋವಿಂದಾಚಾರ್ಯ, ಬೆಂಗಳೂರಿನ ರಾಮಕೃಷ್ಣ ಮಠದ ಅಧ್ಯಕ್ಷರಾಗಿದ್ದ ಹರ್ಷಾನಂದ ಸ್ವಾಮೀಜಿ, ವೈಮಾನಿಕ ವಿಜ್ಞಾನಿ ರೊದ್ದಂ ನರಸಿಂಹ ಅವರ ನಿಧನಕ್ಕೆ ಸಂತಾಪ ಸಲ್ಲಿಸಿದರು.

**ಅಣ್ಣನ ನೆನೆದು ಭಾವುಕ:** ಅಣ್ಣನ ಬಗ್ಗೆ ಆಡಿದ ಗುಣಗಾನದ ಮಾತುಗಳಿಗೆ ತಮ್ಮ ಭಾವುಕಗೊಂಡ ಪ್ರಸಂಗಕ್ಕೆ ಮೇಲ್ಮನೆ ಸಾಕ್ಷಿಯಾಯಿತು. ಅಗಲಿದ ಗಣ್ಯರ ಕುರಿತ ಸಂತಾಪ ಸೂಚನೆ ಮಂಡನೆ ವೇಳೆ ಎಸ್.ಎಲ್. ಧರ್ಮೇಗೌಡ ಅವರ ಕುರಿತು ಸಭಾನಾಯಕ ಕೋಟ ಶ್ರೀನಿವಾಸ ಪೂಜಾರಿ, ಪ್ರತಿಪಕ್ಷದ ನಾಯಕ ಎಸ್.ಆರ್. ಪಾಟೀಲ್, ಜೆಡಿಎಸ್ ನಾಯಕ ಬಸವರಾಜ ಹೊರಟ್ಟಿ ಮಾತನಾಡಿದರು. ಈ ವೇಳೆ ತಮ್ಮ ಆಸನದಲ್ಲಿ ಕೂತಿದ್ದ ಧರ್ಮೇಗೌಡರ ಕಿರಿಯ ಸಹೋದರ ಎಸ್.ಎಲ್. ಭೋಜೇಗೌಡ ಭಾವುಕರಾದಂತೆ ಕಂಡು ಬಂದರು. ಅಣ್ಣನ ಬಗ್ಗೆ ಗುಣಗಾನದ ಮಾತುಗಳನ್ನು ಆಡುತ್ತಿದ್ದಾಗ ಭೋಜೇಗೌಡ ಕರ ವಸ್ತ್ರದಿಂದ ತಮ್ಮ ಕಣ್ಣುಗಳನ್ನು ಒರೆಸಿಕೊಳ್ಳುತ್ತಿದ್ದರು.

ಆಧಾರ: ಉದಯವಾಣಿ, ದಿನಾಂಕ:29.01.2021.

## 18. ಡಿಸೆಂಬರ 15 ರ ಅಹಿತಕರ ಘಟನೆ: ಪರಿಷತ್ ಸಮಿತಿ ಶಿಫಾರಸ್ಸು

ಡಿಸೆಂಬರ್ 15 ರಂದು ನಡೆದ ಅಹಿತಕರ ಘಟನೆ ಹಿನ್ನೆಲೆಯಲ್ಲಿ ಮೂವರು ಸಚಿವರು ಸೇರಿದಂತೆ 15 ಮಂದಿ ವಿರುದ್ಧ ಕ್ರಮ ಕೈಗೊಳ್ಳಬೇಕು. ಪರಿಷತ್ ಕಾರ್ಯದರ್ಶಿ ವಿರುದ್ಧ ಇಲಾಖಾ ವಿಚಾರಣೆಗೆ ವಿಶೇಷ ಮಂಡಳಿ ರಚಿಸಬೇಕು ಎಂದು ಮೇಲ್ಮನೆಯ ಸದನ ಸಮಿತಿ ಶಿಫಾರಸ್ಸು ಮಾಡಿದೆ.

ಡಿ.ಸಿ.ಎಂ ಅಶ್ವತ್ಥನಾರಾಯಣ, ಸಚಿವರಾಗಿರುವ ಕೋಟ ಶ್ರೀನಿವಾಸ ಪೂಜಾರಿ, ಜೆ.ಸಿ, ಮಾಧುಸ್ವಾಮಿ ಪರೋಕ್ಷವಾಗಿ ಗಲಭೆಗೆ ಕುಮ್ಮಕ್ಕು ನೀಡಿದ್ದಾರೆ. ಅವರು ಯಾವುದೇ ಜವಾಬ್ದಾರಿಯುತ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುವುದು ಸೂಕ್ತವಲ್ಲ ಎಂದು ಸದನ ಸಮಿತಿಯ ಮಧ್ಯಂತರ ವರದಿ ಹೇಳಿದೆ.

ಮರಿತಿಬ್ಬೇಗೌಡ ನೇತೃತ್ವದಲ್ಲಿ ಬಿ.ಕೆ.ಹರಿಪ್ರಸಾದ್, ಆರ್.ಬಿ.ತಿಮ್ಮಾಪುರ ಸೇರಿದಂತೆ ಮೂವರು ಸದಸ್ಯರನ್ನೊಳಗೊಂಡ ಸದನ ಸಮಿತಿಯು 84 ಪುಟಗಳ ಮಧ್ಯಂತರ ವರದಿಯನ್ನು ಸಿ.ಡಿ. ಸಹಿತ ಸದನಕ್ಕೆ ಸಲ್ಲಿಸಿತು. ಸಮಿತಿ ರಚನೆಯ ಹಿನ್ನೆಲೆ, ಘಟನಾವಳಿಗಳ ಅಂಶಗಳು, ವಿಡಿಯೋ ತುಣುಕುಗಳಲ್ಲಿ ಕಂಡುಬಂದ ದೃಶ್ಯಗಳ ವಿವರಣೆ, ಕಾರ್ಯದರ್ಶಿಗಳ ವಿಚಾರಣೆ, ಸಮರ್ಥನೆಗಳು ಸೇರಿದಂತೆ ಇನ್ನಿತರ ಮಾಹಿತಿಗಳನ್ನು ಉಲ್ಲೇಖಿಸಲಾಗಿದೆ.

ಬಿಜೆಪಿಯ 7, ಕಾಂಗ್ರೆಸ್ 6 ಮತ್ತು ಜೆಡಿಎಸ್‌ನ ಇಬ್ಬರು ಸದಸ್ಯರ ವಿರುದ್ಧ ಕ್ರಮಕ್ಕೆ ಮಧ್ಯಂತರ ವರದಿ ಶಿಫಾರಸ್ಸು ಮಾಡಿದೆ. ಇದರಲ್ಲಿ ಡಿಸಿಎಂ ಅಶ್ವತನಾರಾಯಣ, ಸಚಿವರಾದ ಕೋಟ ಶ್ರೀನಿವಾಸ

ಪೂಜಾರಿ, ಜೆ.ಸಿ. ಮಾಧುಸ್ವಾಮಿ, ನೂತನ ಉಪ ಸಭಾಪತಿ ಎಂ.ಕೆ ಪ್ರಾಣೇಶ್, ಜೆಡಿಎಸ್–ಬಿಜೆಪಿಯ ಸಂಭಾವ್ಯ ಪರಿಷತ್ ಸಭಾಪತಿ ಅಭ್ಯರ್ಥಿ ಬಸವರಾಜ್ ಹೊರಟ್ಟಿ ಅವರು ಸೇರಿದ್ದಾರೆ.

**ವರದಿಯಲ್ಲೇನಿದೆ :** ಸಭಾ ನಾಯಕ ಕೋಟ ಶ್ರೀನಿವಾಸ ಪೂಜಾರಿ ಸೇರಿದಂತೆ ಮೂವರು ಸಚಿವರು ಜವಾಬ್ದಾರಿ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುವುದು ಸೂಕ್ತವಲ್ಲ ಹಾಗೂ ನೂತನ ಉಪ ಸಭಾಪತಿ ಪ್ರಾಣೇಶ್, ಹಿರಿಯ ಸದಸ್ಯ ಬಸವರಾಜ ಹೊರಟ್ಟಿ ಸೇರಿದಂತೆ ಕೆಲವು ಸದಸ್ಯರನ್ನು ಕನಿಷ್ಠ ಒಂದರಿಂದ ಗರಿಷ್ಠ ಎರಡು ಅಧಿವೇಶನಗಳಿಗೆ ಪ್ರವೇಶ ನಿರ್ಬಂಧಿಸುವಂತೆ ಶಿಫಾರಸ್ಸು ಮಾಡಲಾಗಿದೆ.

ಉಪ ಸಭಾಪತಿಗಳು ನಿಯಮ ಬಾಹಿರವಾಗಿ ಪೀಠ ಅಲಂಕರಿಸಲು ಪ್ರಚೋದಿಸಿದ ಉಪ ಮುಖ್ಯಮಂತ್ರಿ ಡಾ.ಸಿ.ಎನ್.ಅಶ್ವತ್ಥನಾರಾಯಣ ಮತ್ತು ಸಚಿವ ಜೆ.ಸಿ.ಮಾಧುಸ್ವಾಮಿ ಅವರ ನಡೆ ಅಸಂಸದೀಯ ಮತ್ತು ಕಾನೂನುಬಾಹಿರ ನಡವಳಿಕೆ ಎಂದು ಸಮಿತಿ ಖಂಡಿಸಿದೆ. ಇದು ಘಟನೆಗೆ ಮೂಲ ಪ್ರೇರಣೆ ಆಗಿರುವುದು ಚಿತ್ರೀಕರಣಗೊಂಡ ಸರ್ಕಾರಿ ಮತ್ತು ಖಾಸಗಿ ಮಾಧ್ಯಮಗಳ ಸಿ.ಡಿ.ಗಳಿಂದ ದೃಢಪಟ್ಟಿದೆ ಅದೇ ರೀತಿ ಕೋಟ ಶ್ರೀನಿವಾಸ ಪೂಜಾರಿ ಅವರು ಅಂದು ಸಭಾಪತಿಗಳ ಪೀಠದ ಬಳಿ ಬಂದು ಅರುಣ್ ಶಹಾಪುರ ಅವರಿಗೆ ಕೈಸನ್ನೆ ಮಾಡಿ ಪ್ರಚೋದಿಸಿದ್ದಾರೆ. ಈ ವರ್ತನೆ ಖಂಡನೀಯವಾಗಿದ್ದು, ಸರ್ಕಾರದ ಯಾವುದೇ ಜವಾಬ್ದಾರಿ ಹುದ್ದೆಗಳಲ್ಲಿ ಕಾರ್ಯನಿರ್ವಹಿಸಬಾರದು ಮತ್ತು ಮುಂದಿನ ಎರಡು ಅಧಿವೇಶನದ ಅವಧಿಯ ಕಾರ್ಯಕಲಾಪಗಳಿಗೆ ನಿರ್ಬಂಧ ವಿಧಿಸಬೇಕು ಎಂದು ಸದನ ಸಮಿತಿ ಸದಸ್ಯರು ಅಭಿಪ್ರಾಯಪಟ್ಟಿದ್ದಾರೆ.

ಸದಸ್ಯರಾದ ಎಂ.ಕೆ. ಪ್ರಾಣೇಶ್, ವೈ.ಎ. ನಾರಾಯಣಸ್ವಾಮಿ ಮತ್ತು ಅರುಣ್ ಶಹಾಪುರ್ ಅವರು, ಸಭಾಪತಿಗಳ ಪ್ರವೇಶ ದ್ವಾರವನ್ನು ಮುಚ್ಚುವ ಮೂಲಕ ಅಸಂಸದೀಯ ಮತ್ತು ಕಾನೂನು ಬಾಹಿರ ನಡವಳಿಕೆ ತೋರಿರುವುದು ದೃಶ್ಯಾವಳಿಗಳಲ್ಲಿ ಹಾಗೂ ಮಾರ್ಷಲ್ ಸಿಬ್ಬಂದಿ ಹೇಳಿಕೆಗಳಿಂದ ದೃಢಪಟ್ಟಿದೆ. ಆದ್ದರಿಂದ ಮೂವರನ್ನು ಮುಂದಿನ ಎರಡು ಅಧಿವೇಶನದ ಅವಧಿಯ ಕಾರ್ಯಕಲಾಪಗಳಿಗೆ ನಿರ್ಬಂಧಿಸಬೇಕು.

ಉಪ ಸಭಾಪತಿಗಳನ್ನು ಪ್ರತಿಪಕ್ಷದ ಮುಖ್ಯ ಸಚೇತಕ ಎಂ, ನಾರಾಯಣಸ್ವಾಮಿ, ಸದಸ್ಯರಾದ ನಜೀರ್ ಅಹ್ಮದ್, ಶ್ರೀನಿವಾಸ ಮಾನೆ, ಪ್ರಕಾಶ್ ಕೆ, ರಾಥೋಡ್ ಎಳೆದಾಡಿದ್ದರೆ. ಇದೇ ವೇಳೆ ಸದನವನ್ನು ಅನಿರ್ದಿಷ್ಟಾವಧಿ ಮುಂದೂಡುವ ಪೂರ್ವದಲ್ಲಿ ಸಭಾಪತಿಗಳ ಪೀಠದ ಮೇಲೆ ಚಂದ್ರಶೇಖರ್ ಪಾಟೀಲ ಆಸೀನರಾಗಿದ್ದಾರೆ. ನಾಲ್ವರನ್ನು ಒಂದು ಅಧಿವೇಶನ ಅವಧಿಗೆ ಪ್ರವೇಶ ನಿರ್ಬಂಧಿಸಬೇಕು.

ಸಭಾಪತಿ ಪೀಠಕ್ಕೆ ಉಪ ಸಭಾಪತಿಗಳನ್ನು ತಂದು ಕೂರಿಸಿದ ಸದಸ್ಯ ಬಸವರಾಜ ಹೊರಟ್ಟಿ ಹಾಗೂ ಉಪ ಸಭಾಪತಿಗಳನ್ನು ಪೀಠದಿಂದ ಎಳೆದು ಕೆಳಗಿಳಿಸಿದ ಕೆ.ಟಿ. ಶ್ರೀ ಕಂಠೇಗೌಡ ಹಾಗೂ ಗೋವಿಂದರಾಜ್ ಅವರನ್ನು ಸದನ ಸಮಿತಿ ಎದುರು ಹೇಳಿಕೆ ಹಂಚಿಕೊಳ್ಳಲು ಮುಕ್ತ ಅವಕಾಶ ಇದ್ದರೂ ಮಾಧ್ಯಮಗಳ ಮುಂದೆ ಹೋದ ಸದಸ್ಯರಾದ ಆಯನೂರು ಮಂಜುನಾಥ, ಡಾ.ವೈ.ಎ ನಾರಾಯಣಸ್ವಾಮಿ ಅವರನ್ನು ಮುಂದಿನ ಎರಡು ಅಧಿವೇಶನಕ್ಕೆ ನಿರ್ಬಂಧ ವಿಧಿಸಬೇಕು ಎಂದು ಶಿಫಾರಸ್ಸು ಮಾಡಲಾಗಿದೆ.

**ಕಾರ್ಯದರ್ಶಿ ವಿರುದ್ಧವೂ ಕ್ರಮ:** ಅಂದು ನಡೆದ ಘಟನೆ ಕುರಿತು ವಿಧಾನ ಪರಿಷತ್ ಕಾರ್ಯದರ್ಶಿ ಕೆ.ಆರ್.ಮಹಾಲಕ್ಷ್ಮಿ ತಮ್ಮ ಜವಾಬ್ದಾರಿ ಮತ್ತು ಕರ್ತವ್ಯ ನಿರ್ವಹಣೆಯಲ್ಲಿ ವಿಫಲರಾಗಿದ್ದು, ಇದರಿಂದ ಸದನ ಮತ್ತು ಸಭಾಪತಿ ಪೀಠದ ಘನತೆಗೆ ಚ್ಯುತಿ ಉಂಟಾಗಿದೆ. ಈ ನಡವಳಿಕೆಯನ್ನು ಸದನದ ನಿಂದನೆ ಎಂದು ಪರಿಗಣಿಸಿರುವ ಸಮಿತಿ, ಘಟನೆಯ ಬಗ್ಗೆ ಅಂತಿಮ ವರದಿ ಸಲ್ಲಿಸುವವರೆಗೆ ಕಾರ್ಯದರ್ಶಿ ಸ್ಥಾನದಲ್ಲಿ ಕಾರ್ಯನಿರ್ವಹಿಸದಂತೆ ನಿರ್ಬಂಧಿಸಬೇಕು ಎಂದು ಹೇಳಿದೆ. ಅಲ್ಲದೆ, ಕಾರ್ಯದರ್ಶಿ ವರ್ತನೆ ಬಗ್ಗೆ ನಿವೃತ್ತ ನ್ಯಾಯಧೀಶರ ನೇತೃತ್ವದಲ್ಲಿ ಇಲಾಖಾ ವಿಚಾರಣೆಗೆ ಒಳಪಡಿಸಲು ಕ್ರಮ ವಹಿಸುವಂತೆ ವಿಶೇಷ ಮಂಡಳಿ ರಚಿಸಬೇಕು ಎಂದು ತಿಳಿಸಿದೆ.

ಆಧಾರ: ಉದಯವಾಣಿ, ದಿನಾಂಕ:30.01.2021.

## 19.ಉಪ ಸಭಾಪತಿಯಾಗಿ ಬಿಜೆಪಿ ಪ್ರಾಣೇಶ್ ಆಯ್ಕೆ

ವಿಧಾನ ಪರಿಷತ್ ಉಪ ಸಭಾಪತಿ ಸ್ಥಾನಕ್ಕೆ ನಡೆದ ಚುನಾವಣೆಯಲ್ಲಿ ಬಿಜೆಪಿಯ ಎಂ.ಕೆ. ಪ್ರಾಣೇಶ್ ಆಯ್ಕೆಯಾಗಿದ್ದಾರೆ. ನಡೆದ ಚುನಾವಣೆಯಲ್ಲಿ ಬಿಜೆಪಿ ಹಾಗೂ ಜೆಡಿಎಸ್‌ನ 41 ಸದಸ್ಯರು ಎಂ.ಕೆ. ಪ್ರಾಣೇಶ್ ಅವರ ಪರವಾಗಿ ಮತ ಹಾಕಿದರು. ಕಾಂಗ್ರೆಸ್ ಅಭ್ಯರ್ಥಿಯಾಗಿ ಕಣಕ್ಕಿಳಿದಿದ್ದ ಕೆ.ಸಿ. ಕೊಂಡಯ್ಯ ಅವರು 24 ಮತಗಳನ್ನು ಪಡೆದುಕೊಂಡರು.

ಕಲಾಪದ ಆರಂಭದಲ್ಲಿ ಕಾಗದ ಪತ್ರಗಳ ಮಂಡನೆ, ಡಿಸೆಂಬರ್ 15 ರಂದು ಸದನದಲ್ಲಿ ನಡೆದ ಅಹಿತಕರ ಘಟನೆ ನಂತರ ಸಭಾಪತಿ ಕೆ.ಪ್ರತಾಪಚಂದ್ರ ಶೆಟ್ಟಿ ಅವರು ಉಪ ಸಭಾಪತಿ ಚುನಾವಣೆ ಪ್ರಕ್ರಿಯೆ ಆರಂಭಿಸಿದರು.

ಬಿಜೆಪಿ ಹಾಗೂ ಕಾಂಗ್ರೆಸ್ ಸದಸ್ಯರು ಕ್ರಮವಾಗಿ ಎಂ.ಕೆ. ಪ್ರಾಣೇಶ್ ಮತ್ತು ಕೆ.ಸಿ. ಕೊಂಡಯ್ಯ ಅವರ ಹೆಸರನ್ನು ಉಪ ಸಭಾಪತಿ ಸ್ಥಾನಕ್ಕೆ ಚುನಾಯಿಸಬೇಕೆಂದು ಸೂಚಿಸಿ ಅನುಮೋದಿಸಿದರು. ಈ ಮಧ್ಯೆ ಮತ ವಿಭಜನೆ ಮಾಡಬೇಕೆಂದು ಕಾಂಗ್ರೆಸ್ ಸದಸ್ಯರು ಸಭಾಪತಿಗಳಿಗೆ ಮನವಿ ಮಾಡಿದರು.

ನಂತರ ಸಭಾಪತಿಗಳು ಮತ ವಿಭಜನೆ ಪ್ರಕ್ರಿಯೆ ನಡೆಸಿ, ಎಂ.ಕೆ. ಪ್ರಾಣೇಶ್ ಉಪ ಸಭಾಪತಿಯಾಗಿ ಆಯ್ಕೆಯಾಗಿದ್ದಾರೆಂದು ಘೋಷಿಸಿದರು.

**ಸದಸ್ಯರ ಅಭಿನಂದನೆ :** ಉಪ ಸಭಾಪತಿಯಾಗಿ ಆಯ್ಕೆಯಾದ ಎಂ.ಕೆ.ಪ್ರಾಣೇಶ್ ಅವರನ್ನು ಸಭಾನಾಯಕ ಕೋಟ ಶ್ರೀನಿವಾಸ ಪೂಜಾರಿ, ಪ್ರತಿಪಕ್ಷದ ನಾಯಕ ಎಸ್.ಆರ್.ಪಾಟೀಲ್, ಕಾನೂನು ಸಚಿವ ಬಸವರಾಜ್ ಬೊಮ್ಮಾಯಿ, ಸದಸ್ಯರಾದ ಹೆಚ್.ವಿಶ್ವನಾಥ್, ಬಸವರಾಜ್ ಹೊರಟ್ಟಿ, ಕೆ.ಸಿ. ಕೊಂಡಯ್ಯ, ಎಂ.ನಾರಾಯಣ ಸ್ವಾಮಿ, ಮಹಾಂತೇಶ್ ಕವಟಗಿಮಠ, ಸುನೀಲ್ ಸುಬ್ರಮಣಿ, ಅಪ್ಪಾಜಿ ಗೌಡ, ಶ್ರೀಕಂಠೇಗೌಡ, ಪ್ರತಾಪ ಸಿಂಹನಾಯಕ್, ಪುಟ್ಟಣ್ಣ, ತೇಜಸ್ವಿನಿಗೌಡ ಅವರು ಅಭಿನಂದಿಸಿ, ಶುಭ ಹಾರೈಸಿದರು.

ಆಧಾರ: ಕನ್ನಡಪ್ರಭ, ದಿನಾಂಕ:30.01.2021.

## 20. ಒಂದೇ ದಿನ ಹನ್ನೊಂದು ವಿಧೇಯಕಗಳ ಮಂಡನೆ

ವಿಧಾನ ಸಭೆಯಲ್ಲಿ ಕಲಾಪ ಆರಂಭವಾದ ಎರಡನೇ ದಿನಕ್ಕೆ 11 ವಿಧೇಯಕಗಳನ್ನು ಮಂಡನೆ ಮಾಡಲಾಗಿದೆ. 8 ತಿದ್ದುಪಡಿ ವಿಧೇಯಕಗಳು ಹಾಗೂ 3 ಹೊಸ ಖಾಸಗಿ ವಿಶ್ವ ವಿದ್ಯಾಲಯಗಳ ರಚನೆಗೆ ವಿಧೇಯಕಗಳನ್ನು ಮಂಡನೆ ಮಾಡಲಾಗಿದೆ.

ಕಲಾಪ ಮುಗಿಯುವ ಕೊನೆಯ ದಿನಗಳಲ್ಲಿ ವಿಧೇಯಕಗಳನ್ನು ಮಂಡನೆ ಮಾಡುವುದರಿಂದ ಸದಸ್ಯರಿಗೆ ವಿಧೇಯಕಗಳ ಬಗ್ಗೆ ಸರಿಯಾದ ಮಾಹಿತಿ ದೊರೆಯದೆ ಚರ್ಚೆಯಲ್ಲಿ ಪಾಲ್ಗೊಳ್ಳಲು ಸಾಧ್ಯವಾಗುವುದಿಲ್ಲ ಎಂಬ ಆರೋಪದ ಹಿನ್ನೆಲೆಯಲ್ಲಿ ಆರಂಭದಲ್ಲಿಯೇ ವಿಧೇಯಕಗಳ ಮಂಡನೆ ಮಾಡಲಾಗಿದೆ.

ಬೆಂಗಳೂರು ಮಹಾನಗರ ಪಾಲಿಕೆ ಹೊರತುಪಡಿಸಿ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಆಸ್ತಿ ತೆರಿಗೆ ಹೆಚ್ಚಳ ಮಾಡುವ ವಿಧೇಯಕ, ಕರ್ನಾಟಕ ಪೌರ ಸಭೆಗಳ ಎರಡನೇ ತಿದ್ದುಪಡಿ ವಿಧೇಯಕ, ಕರ್ನಾಟಕ ಮೋಟಾರು ವಾಹನ ತೆರಿಗೆ ನಿರ್ಧರಣೆ (ಎರಡನೇ ತಿದ್ದುಪಡಿ) ವಿಧೇಯಕ, ಕರ್ನಾಟಕ ಸಾಂಕ್ರಾಮಿಕ ರೋಗಗಳ ತಿದ್ದುಪಡಿ ವಿಧೇಯಕ, ಕರ್ನಾಟಕ ಲೋಕಾಯುಕ್ತ ಮೂರನೇ ತಿದ್ದುಪಡಿ ವಿಧೇಯಕ, ಕರ್ನಾಟಕ ಹಣಕಾಸು ಸಂಸ್ಥೆಗಳಲ್ಲಿ ಠೇವಣಿದಾರರ ಹಿತಾಸಕ್ತಿ ಸಂರಕ್ಷಣೆ ತಿದ್ದುಪಡಿ ವಿಧೇಯಕ, ಕರ್ನಾಟಕ ಪೌರ ಸಭೆಗಳು ಮತ್ತು ಕೆಲವು ಇತರ ಕಾನೂನುಗಳ ತಿದ್ದುಪಡಿಗೆ ವಿಧೇಯಕಗಳನ್ನು ಮಂಡಿಸಲಾಗಿದೆ.

**ಖಾಸಗಿ ವಿವಿ ವಿಧೇಯಕಗಳ ಮಂಡನೆ:** ರಾಜ್ಯದಲ್ಲಿ ಹೊಸದಾಗಿ ಮೂರು ಖಾಸಗಿ ವಿಶ್ವವಿದ್ಯಾಲಯ ತೆರೆಯಲು ವಿಧೇಯಕಗಳನ್ನು ಮಂಡಿಸಲಾಗಿದೆ. ಏಟ್ರೀಯಾ ವಿಶ್ವವಿದ್ಯಾಲಯ, ವಿದ್ಯಾ

ಶಿಲ್ಪ ವಿಶ್ವವಿದ್ಯಾಲಯ, ಶ್ರೀ ಜಗದ್ಗುರು ಮುರುಘರಾಜೇಂದ್ರ ವಿಶ್ವವಿದ್ಯಾಲಯಗಳ ರಚನೆಗೆ ವಿಧಾನ ಸಭೆಯಲ್ಲಿ ವಿಧೇಯಕಗಳನ್ನು ಮಂಡಿಸಲಾಯಿತು.

ಬೆಂಗಳೂರು ಡಾ. ಬಿ.ಆರ್.ಅಂಬೇಡ್ಕರ್ ಅರ್ಥಶಾಸ್ತ್ರ ವಿಶ್ವವಿದ್ಯಾಲಯಕ್ಕೆ ಮರು ನಾಮಕರಣಕ್ಕೆ ತಿದ್ದುಪಡಿ ವಿಧೇಯಕ ಹಾಗೂ ಬಾಗಲಕೋಟೆ ತೋಟಗಾರಿಕೆ ವಿಶ್ವವಿದ್ಯಾಲಯದ ವ್ಯವಸ್ಥಾಪನಾ ಮಂಡಳಿಯ ಸದಸ್ಯರ ಸಂಖ್ಯೆ ಕಡಿಮೆ ಮಾಡಲು ತಿದ್ದುಪಡಿ ವಿಧೇಯಕ ಮಂಡನೆ ಮಾಡಲಾಗಿದೆ.

**ಜಿಐ ಟ್ಯಾಗ್ ಹೊಂದಿರುವ ಉತ್ಪನ್ನಗಳ ಮಾರುಕಟ್ಟೆ ಮಳಿಗೆ:** ಚನ್ನಪಟ್ಟಣ ಬೊಂಬೆ, ನವಲಗುಂದ ಜಮಖಾನಾ, ಕೊಲ್ಲಾಪುರ ಚಪ್ಪಲಿ, ಉಡುಪಿ ಮಲ್ಲಿಗೆ, ಮುಟ್ಟಗುಳ್ಳ ಬದನೆಕಾಯಿ, ಕಮಲಾಪುರ ಕೆಂಪುಬಾಳೆ ಹಣ್ಣು ಸೇರಿ ಕೇಂದ್ರದ ಜಿಯಾಗ್ರಾಫಿಕಲ್ ಇಂಡಿಕೇಷನ್ ಟ್ಯಾಗ್ ನೋಂದಣಿ ಹೊಂದಿರುವ ಉತ್ಪನ್ನಗಳ ಮಾರುಕಟ್ಟೆಗೆ ವಿಮಾನ, ರೈಲ್ವೆ, ಬಸ್ ನಿಲ್ದಾಣಗಳಲ್ಲಿ ಮಳಿಗೆ ತೆರೆಯಲಾಗವುದು ಎಂದು ಕೈಗಾರಿಕೆ ಸಚಿವ ಜಗದೀಶ ಶೆಟ್ಟರ್ ತಿಳಿಸಿದ್ದಾರೆ. ಪ್ರಶ್ನೋತ್ತರ ವೇಳೆ ಕಾಂಗ್ರೆಸ್‌ನ ಅಬ್ಬಯ್ಯ ಪ್ರಸಾದ್ ಪ್ರಶ್ನೆಗೆ ಉತ್ತರಿಸಿ, ರಾಜ್ಯದಲ್ಲಿ 42 ಉತ್ಪನ್ನಗಳು ಜಿಐಟಿ ನೋಂದಣಿ ಹೊಂದಿದ್ದು ಅವುಗಳ ಬಗ್ಗೆ ಹೆಚ್ಚು ಪ್ರಚಾರ ಹಾಗೂ ಮಾರುಕಟ್ಟೆ ವಿಸ್ತರಿಸಲು ಕ್ರಮ ಕೈಗೊಳ್ಳಲಾಗಿದೆ. ವಿದೇಶಿ ಪ್ರವಾಸಿಗರು ಹಾಗೂ ದೇಶೀಯ ಪ್ರವಾಸಿಗರಿಗೆ ಅವುಗಳನ್ನು ಪರಿಚಯಿಸಲು ವಿಮಾನ, ಬಸ್ ಹಾಗೂ ರೈಲ್ವೆ ನಿಲ್ದಾಣಗಳಲ್ಲಿ ಮಳಿಗೆ ತೆರೆಯಲಾಗುವುದು ಎಂದು ಹೇಳಿದರು. ಈ ಉತ್ಪನ್ನಗಳ ರಫ್ತು ಹೆಚ್ಚಳಕ್ಕೂ ಕ್ರಮ ಕೈಗೊಳ್ಳಲಾಗುವುದು. ಬಹು ಬೇಡಿಕೆಯ ಉತ್ಪನ್ನಗಳು ಇದರಲ್ಲಿವೆ ಎಂದು ಹೇಳಿದರು.

ಆಧಾರ: ವಿಜಯವಾಣಿ, ದಿನಾಂಕ:30.01.2021.

## 21. ಸದನದಲ್ಲಿ ಮೊಬೈಲ್ ನಿರ್ಬಂಧಕ್ಕೆ ಚರ್ಚಿಸಿ ಕ್ರಮ: ಪ್ರಾಣೇಶ್

ವಿಧಾನಸಭೆ ಹಾಗೂ ವಿಧಾನ ಪರಿಷತ್ ಸಭಾಧ್ಯಕ್ಷರ ಜೊತೆ ಚರ್ಚಿಸಿ ಸದನಗಳಲ್ಲಿ ಮೊಬೈಲ್ ಬಳಕೆ ನಿರ್ಬಂಧಿಸುವ ಕುರಿತು ತೀರ್ಮಾನ ತೆಗೆದುಕೊಳ್ಳಲಾಗುವುದು ಎಂದು ನೂತನ ಉಪ ಸಭಾಪತಿ ಎಂ.ಕೆ.ಪ್ರಾಣೇಶ್ ಹೇಳಿದರು. ಪ್ರಕಾಶ್ ಕೆ.ರಾಥೋಡ್ ಪರಿಷತ್‌ನಲ್ಲಿ ಮೊಬೈಲ್‌ನಲ್ಲಿ ಅಶ್ಲೀಲ ದೃಶ್ಯಗಳನ್ನು ವೀಕ್ಷಿಸುತ್ತಿರುವುದು ಮಾಧ್ಯಮಗಳಲ್ಲಿ ಗಮನಿಸಿದ್ದೇವೆ. ಈ ಬಗ್ಗೆ ಎರಡೂ ಸದನದ ಸಭಾಪತಿಗಳ ಜೊತೆ ಚರ್ಚಿಸುತ್ತೇವೆ. ಸದನ ನಡೆಯುವಾಗ ಮೊಬೈಲ್ ಜಾಮರ ಅಳವಡಿಸಲಾಗಿರುತ್ತದೆ ಎಂದರು. ಸದನಕ್ಕೆ ಮೊಬೈಲ್ ಕೊಂಡೊಯ್ಯುವುದನ್ನು ನಿರ್ಬಂಧಿಸಲು ಅಡೆತಡೆ ಇಲ್ಲ ಎಂದರು.

ಆಧಾರ: ಕನ್ನಡಪ್ರಭ, ದಿನಾಂಕ:31.01.2021.

## 22. 5 ಖಾಸಗಿ ವಿವಿಗಳ ಸ್ಥಾಪನೆ ವಿಧೇಯಕ ಪಾಸ್

ಜಗದ್ಗುರು ಮುರುಘಾರಾಜೇಂದ್ರ ವಿಶ್ವವಿದ್ಯಾಲಯ ವಿಧೇಯಕ–2020 ಸೇರಿದಂತೆ ಒಟ್ಟು 5 ಖಾಸಗಿ ವಿಶ್ವವಿದ್ಯಾಲಯಗಳ ಸ್ಥಾಪನೆಗೆ ಅವಕಾಶ ಕಲ್ಪಿಸುವ ವಿಧೇಯಕಗಳಿಗೆ ವಿಧಾನಸಭೆ ಅನುಮೋದನೆ ನೀಡಿತು.

ಉನ್ನತ ಶಿಕ್ಷಣ ಖಾತೆ ಹೊಂದಿರುವ ಡಿಸಿಎಂ ಡಾ.ಸಿ.ಎನ್. ಅಶ್ವತ್ಥನಾರಾಯಣ, "ವಿಧೇಯಕಗಳ ಬಗ್ಗೆ ವಿವರಣೆ ನೀಡಿ ಹಾಗೂ ಪ್ರತಿಪಕ್ಷಗಳ ಸದಸ್ಯರ ಆಕ್ಷೇಪಗಳಿಗೂ ಸಮಜಾಯಿಷಿ ನೀಡಿದ ಬಳಿಕ ಸದನ ಸರ್ವಾನುಮತದಿಂದ ಒಪ್ಪಿಗೆ ನೀಡಿತು.

"ಗುಣಮಟ್ಟದ ಶಿಕ್ಷಣ ನೀಡುವಲ್ಲಿ ಖಾಸಗಿ ವಿವಿಗಳ ಪಾತ್ರ ದೊಡ್ಡದಿದೆ. ಸದ್ಯ 3 ಕೋಟಿ ವಿದ್ಯಾರ್ಥಿಗಳು ಉನ್ನತ ಶಿಕ್ಷಣ ವ್ಯಾಸಂಗ ಮಾಡುತ್ತಿದ್ದರೆ ಮುಂದಿನ 10 ವರ್ಷಗಳಲ್ಲಿ 14 ಕೋಟಿಯಷ್ಟಾಗಲಿದ್ದಾರೆ. ಉದ್ಯೋಗ, ಕಲಿಕೆ, ವಿದ್ಯಾರ್ಹತೆಯಲ್ಲೂ ಸಾಕಷ್ಟು ಬದಲಾವಣೆಗಳು ಆಗುತ್ತಿವೆ. ಖಾಸಗಿ ವಿವಿಗಳ ಸ್ಥಾಪನೆಗೆ ಅವಕಾಶ ಕಲ್ಪಿಸಿದರೂ ವಿವಿಗಳ ಆಡಳಿತ ಎಲ್ಲಾ ಹಂತದಲ್ಲೂ ಸರ್ಕಾರ ಮಧ್ಯ ಪ್ರವೇಶಕ್ಕೆ ಅವಕಾಶವಿದೆ. ಸರ್ಕಾರಕ್ಕೆ ಆಡಿಟ್ ವರದಿ ಸಲ್ಲಿಸಬೇಕು. ಯಾವುದೇ ತಪ್ಪು ಮಾಡಿದರೂ ದಂಡ ವಿಧಿಸಲು ಹಾಗೂ ಮೂಡಿಗೆರೆ ಬಿಜೆಪಿ ಶಾಸಕ ಕುಮಾರಸ್ವಾಮಿ, "ಖಾಸಗಿ ವಿವಿಗಳ ಸ್ಥಾಪನೆಗೆ

ಅವಕಾಶ ನೀಡಿದರೂ ಕೇಂದ್ರೀಕೃತ ಮೌಲ್ಯಮಾಪನ ಇರಬೇಕು. ಇಲ್ಲದಿದ್ದರೆ ಲಿಂಗ, ಅಂಕ ಹಾಗೂ ಜಾತಿ ತಾರತಮ್ಯವಾಗಲಿದೆ," ಎಂದು ಆತಂಕ ವ್ಯಕ್ತಪಡಿಸಿದರು.

ಕಾಂಗ್ರೆಸ್‌ನ ಹೆಚ್.ಕೆ.ಪಾಟೀಲ್, "ಖಾಸಗಿ ವಿವಿಗಳಲ್ಲಿ ಕುಲಾಧಿಪತಿ ಹುದ್ದೆಯನ್ನು ಅವರು ಬಿಟ್ಟುಕೊಡುವ ತನಕ ಇಲ್ಲವೇ ಜೀವನ ಪರ್ಯಂತ ಎಂದು ನಿಗದಿಪಡಿಸಿರುವುದು ಸರಿಯಲ್ಲ." ಎಂದು ಅಸಮಾಧಾನ ವ್ಯಕ್ತಪಡಿಸಿದರು.

**ಪರಿಷತ್‌ನಲ್ಲಿ ಮೊಬೈಲ್‌ಗೆ ನಿರ್ಬಂಧ**

ಕಲಾಪದಲ್ಲಿ ಮೊಬೈಲ್‌ನಲ್ಲಿ ಅಶ್ಲೀಲ ಚಿತ್ರ ವೀಕ್ಷಣೆ ವಿಚಾರವನ್ನು ಸಭಾಪತಿಯವರು ನೀತಿ ನಿರೂಪಣಾ ಸಮಿತಿಯ ತನಿಖೆಗೆ ಒಪ್ಪಿಸುವ ಜೊತೆಗೆ ಮೊಬೈಲ್ ಬಳಕೆಗೂ ನಿರ್ಬಂಧ ವಿಧಿಸಿದ್ದಾರೆ.

ಪರಿಷತ್ತಿನ ಕಲಾಪ ಆರಂಭವಾಗುತ್ತಿದ್ದಂತೆಯೇ ವಿಷಯ ಪ್ರಸ್ತಾಪಿಸಿದ ಸಭಾಪತಿ ಕೆ.ಪ್ರತಾಪಚಂದ್ರ ಶೆಟ್ಟಿ "ಸದಸ್ಯರೊಬ್ಬರು ಕಲಾಪದ ವೇಳೆ ಮೊಬೈಲ್‌ನಲ್ಲಿ ಕೆಲವು ಆಕ್ಷೇಪಾರ್ಹ ದೃಶ್ಯಗಳನ್ನು ವೀಕ್ಷಿಸಿದ್ದಾರೆ ಎಂದು ವರದಿಯಾಗಿದೆ. ಕಾಂಗ್ರೆಸ್ ಸದಸ್ಯ ಬಿ.ಕೆ. ಹರಿಪ್ರಸಾದ್, ಬಿಜೆಪಿಯ ತೇಜಸ್ವಿನಿಗೌಡ ಮತ್ತು ಜೆಡಿಎಸ್‌ನ ಮರಿತಿಬ್ಬೇಗೌಡ ಅವರನ್ನೊಳಗೊಂಡ ಸಮಿತಿಯು ಪರಿಶೀಲನೆ ನಡೆಸಿ ವರದಿ ಸಲ್ಲಿಸಲಿದೆ," ಎಂದು ಪ್ರಕಟಿಸಿದರು.

"ಸದನದ ಗೌರವಕ್ಕೆ ಧಕ್ಕೆಯಾಗುವಂತೆ ಯಾರೂ ನಡೆದುಕೊಳ್ಳಬಾರದು. ಎಲ್ಲರೂ ಸದನದ ಗೌರವ ಕಾಪಾಡಬೇಕು" ಎಂದು ಸಭಾಪತಿ ಮನವಿ ಮಾಡಿದರು. ಸದಸ್ಯ ಪ್ರಕಾಶ್ ರಾಥೋಡ್ ಅವರು ಕಲಾಪದ ವೇಳೆ ಮೊಬೈಲ್‌ನಲ್ಲಿ ಚಿತ್ರ ನೋಡುತ್ತಿದ್ದುದ್ದನ್ನು ಸುದ್ದಿ ವಾಹಿನಿಗಳು ಪ್ರಸಾರ ಮಾಡಿದ್ದವು. ಆದರೆ, ರಾಥೋಡ್ ಆರೋಪವನ್ನು ನಿರಾಕರಿಸಿದ್ದರು.

**ನಿರ್ಬಂಧ ಇದ್ದರೂ ಬಳಕೆ**

"ಕಳೆದ ವರ್ಷ ಜೂನ್ ತಿಂಗಳಲ್ಲೇ ಸದಸ್ಯರು ಕಲಾಪದ ವೇಳೆ ಮೊಬೈಲ್ ಬಳಕೆ ಮಾಡಬಾರದೆಂದು ನಿರ್ಬಂಧ ವಿಧಿಸಲಾಗಿತ್ತು. ಆದರೂ ಕೆಲ ಶಾಸಕರು ಮೊಬೈಲ್ ಬಳಕೆ ಮಾಡುತ್ತಿರುವ ವಿಚಾರ ಗಮನಕ್ಕೆ ಬಂದಿದೆ. ಇನ್ನು ಮುಂದೆ ಯಾವೊಬ್ಬ ಸದಸ್ಯರು ಮೊಬೈಲ್ ಬಳಕೆ ಮಾಡಬಾರದು" ಎಂದು ಸಭಾಪತಿ ಕೆ.ಪ್ರತಾಪಚಂದ್ರಶೆಟ್ಟಿ ಆದೇಶಿಸಿದರು.

ಒಂದು ವೇಳೆ ಕಲಾಪದಲ್ಲಿ ಪಾಲ್ಗೊಳ್ಳಲು ಮೊಬೈಲ್‌ನಲ್ಲಿ ಸಂಗ್ರಹಿಸಿಕೊಂಡಿರುವ ಮಾಹಿತಿ ಬಳಸಿಕೊಳ್ಳಬೇಕಾದರೆ ಮೊದಲೇ ಪೀಠದಿಂದ ಅನುಮತಿ ಪಡೆಯಬೇಕು" ಎಂದು ಸೂಚಿಸಿದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:02.02.2021

## 23. ಸಭಾಪತಿ ರಾಜೀನಾಮೆ

ತಕ್ಷಣಕ್ಕೆ ರಾಜೀನಾಮೆ ನೀಡದಂತೆ ಪಕ್ಷದ ಒತ್ತಡ ಬಂದರೂ ಸಂಖ್ಯಾ ಬಲವಿಲ್ಲದ ಕಾರಣ ನೈತಿಕವಾಗಿ ಮುಂದುವರಿಯಲು ಇಚ್ಛಿಸದ ಸಭಾಪತಿ ಕೆ.ಪ್ರತಾಪಚಂದ್ರ ಶೆಟ್ಟಿ ತಮ್ಮ ಸ್ಥಾನಕ್ಕೆ ರಾಜೀನಾಮೆ ನೀಡಿದ್ದಾರೆ. ಇದರಿಂದ ಬಿಜೆಪಿ-ಜೆಡಿಎಸ್ ಮೈತ್ರಿಯಂತೆ ಜೆಡಿಎಸ್‌ನ ಹಿರಿಯ ನಾಯಕ ಬಸವರಾಜ ಹೊರಟ್ಟಿ ಹಾದಿ ಸುಗಮವಾಗಿದೆ.

ಸಭಾಪತಿ ಸ್ಥಾನದಿಂದ ಕೆ.ಪ್ರತಾಪಚಂದ್ರ ಶೆಟ್ಟಿ ಅವರನ್ನು ಪದಚ್ಯುತಗೊಳಿಸಲು ಬಿಜೆಪಿ-ಜೆಡಿಎಸ್ ಅವಿಶ್ವಾಸ ನಿರ್ಣಯ ಮಂಡಿಸಿದ್ದರು. ಆ ಬಗ್ಗೆ ಚರ್ಚೆ ನಡೆಯಬೇಕಿತ್ತು. ಆದರೆ ಅದಕ್ಕೂ ಮುನ್ನವೇ ಕೆ.ಪ್ರತಾಪಚಂದ್ರ ಶೆಟ್ಟಿ ತಮ್ಮ ಸ್ಥಾನಕ್ಕೆ ರಾಜೀನಾಮೆಯನ್ನು ಸಂಜೆ ಉಪ ಸಭಾಪತಿ ಕೆ.ಎಂ.ಪ್ರಾಣೇಶ್ ಅವರಿಗೆ ಸಲ್ಲಿಸಿದ್ದಾರೆ. ಡಿಸೆಂಬರ್ 15ರಂದು ಶೆಟ್ಟಿಯವರನ್ನು ಸಭಾಪತಿ ಸ್ಥಾನದಿಂದ ಕೆಳಗಿಳಿಸಲು ಬಿಜೆಪಿ ಪ್ರಯತ್ನ ನಡೆದು ಕಲಾಪದಲ್ಲಿ ಎಳೆದಾಟ, ತಳ್ಳಾಟ ನಡೆದಿತ್ತು.

**ಪ್ರತಾಪಚಂದ್ರ ಶೆಟ್ಟಿ ವಿದಾಯ ಭಾಷಣ**

"ನನ್ನ ಮನಸ್ಸು ನಿರಾಳವಾಗಿದೆ, ಜವಾಬ್ದಾರಿ ಮುಗಿದಿದೆ, ನಿಯಮದಂತೆ ಪೀಠತ್ಯಾಗ ಮಾಡುತ್ತಿದ್ದೇನೆ" ಎಂದು ಸಭಾಪತಿ ಪ್ರತಾಪ್ ಚಂದ್ರ ಶೆಟ್ಟಿ ತಿಳಿಸಿದರು. "ಸದನದ ಘನತೆಗೆ ಚ್ಯುತಿ ಬಾರದಂತೆ ಎಲ್ಲರೂ ನಡೆಯಬೇಕಿದೆ. ಕೆಲವೊಮ್ಮೆ ಸದನದ ಸದಸ್ಯರು ಬದಲಾದಂತೆ ನಿಲುವು ಬದಲಾಗುತ್ತವೆ. ಇದನ್ನು ಗೌರವಿಸಬೇಕು ನನ್ನ ಮೇಲಿನ ನಂಬಿಕೆ ಕಡಿಮೆಯಾಗಿದೆ ಎಂಬ ವಿಚಾರದ ಅರಿವಿದೆ. ಎಲ್ಲರ ಬಯಕೆ ಬೇರೆಯದೇ ಆಗಿರುವ ಹಿನ್ನೆಲೆ ಈ ಸ್ಥಾನದಲ್ಲಿ ಇನ್ನು ಹೆಚ್ಚು ಸಮಯ ಮುಂದುವರಿಯದಿರಲು ತೀರ್ಮಾನಿಸಿದ್ದೇನೆ" ಎಂದರು.

"ವಿಧಾನ ಪರಿಷತ್‌ಗೆ 113 ವರ್ಷಗಳ ಭವ್ಯ ಇತಿಹಾಸವಿದೆ. 37 ವರ್ಷ ಸಾರ್ವಜನಿಕ ಜೀವನದಲ್ಲಿರುವ ನಾನು ಜನಪ್ರತಿನಿಧಿಯಾಗಿ ನಡೆ, ನುಡಿಯಲ್ಲಿ ಬದಲಾಗದೇ ಸಾಗಿ ಬಂದಿದ್ದೇನೆ. ಜನ ಸಾಮಾನ್ಯರಲ್ಲಿ ನಂಬಿಕೆ ಬದಲಾಗುವ ವಾತಾವರಣ ಗಮನಿಸಿದ್ದೇನೆ" ಎಂದು ಹೇಳಿದರು.

"ಇಷ್ಟವಿಲ್ಲದಿದ್ದರೂ 2018ರ ಡಿಸೆಂಬರ್ 12ರಂದು ಬೆಳಗಾವಿಯಲ್ಲಿ ನನ್ನನ್ನು ಸಭಾಪತಿಯಾಗಿ ಆಯ್ಕೆ ಮಾಡಿದ್ದೀರಿ. ನಿಮ್ಮ ಭಾವನೆಗೆ ಧಕ್ಕೆ ಆಗದಂತೆ, ಸ್ಥಾನಕ್ಕೆ ಚ್ಯುತಿ ಬಾರದಂತೆ ನಡೆದುಕೊಂಡಿದ್ದೇನೆ. ಇಂತಹ ಸ್ಥಾನ ಕತ್ತಿಯ ಮೇಲಿನ ಅಲುಗಿನ ಮೇಲಿನ ನಡಿಗೆಯಾಗಿದೆ," ಎಂದು ತಿಳಿಸಿದರು.

"ಅಂಕಿ ಸಂಖ್ಯೆಗಳ ಆಧಾರದಲ್ಲಿ ನನ್ನ ಅವಧಿಯಲ್ಲಿ ಒಂದು ಅಹಿತಕರ ಘಟನೆ ಕೂಡ ನಡೆದಿದೆ. ಈ ಘಟನೆ ಸವಿಸ್ತಾರ, ನ್ಯಾಯಯುತ ತನಿಖೆ ನಡೆಸುವ ಕಾರ್ಯ ಮಾಡಿದ್ದೇನೆ. ಮಧ್ಯಂತರ ವರದಿಯು ಪರಿಷತ್ತಿನಲ್ಲಿ ಮಂಡನೆಯಾಗಿದೆ. ಪಕ್ಷ ಬೇಧ ತೋರದೆ ನ್ಯಾಯಯುತವಾಗಿ ನಡೆದುಕೊಂಡಿದ್ದೇನೆ" ಎಂಬ ವಿಶ್ವಾಸ ನನಗಿದೆ ಎಂದು ತಿಳಿಸಿದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:05.02.2021

## 24. ಪರಿಷತ್‌ನಲ್ಲಿ ಅಧಿಕಾರಿಗಳತ್ತ ಕಾಗದ ಎಸೆದ ಸದಸ್ಯ

ಜಲಸಂಪನ್ಮೂಲ ಇಲಾಖೆಯ ರೂ.85 ಲಕ್ಷ ವೆಚ್ಚದ ಕಾಮಗಾರಿಗೆ ತಡೆ ವಿಚಾರದಲ್ಲಿ ಸಚಿವರು ನೀಡಿದ ಉತ್ತರಕ್ಕೆ ಬೇಸತ್ತು ಜೆಡಿಎಸ್‌ನ ಮರಿತಿಬ್ಬೇಗೌಡ, ಕಾಗದ ಪತ್ರ ಎಸೆದಾಗ ಪರಿಷತ್‌ನಲ್ಲಿ ಕೋಲಾಹಲವೆದ್ದಾಗ ಸದನವನ್ನು ಮುಂದೂಡಿದ ಪ್ರಸಂಗ ನಡೆಯಿತು.

ಪ್ರಶ್ನೋತ್ತರ ವೇಳೆಯಲ್ಲಿ ಮರಿತಿಬ್ಬೇಗೌಡ, "ಮಂಡ್ಯ ಜಿಲ್ಲೆಯಲ್ಲಿ 2019–20ನೇ ಸಾಲಿನಲ್ಲಿ ಕಾವೇರಿ ನೀರಾವರಿ ನಿಗಮ ವ್ಯಾಪ್ತಿಯಲ್ಲಿ ಕೇವಲ ರೂ. 67.71 ಕೋಟಿ ಮೊತ್ತದ ಕೇವಲ ಮೂರು ಕಾಮಗಾರಿಗಳಿಗೆ ಟೆಂಡರ್ ಕರೆದರೂ ಮದ್ದೂರು ತಾಲ್ಲೂಕಿನಲ್ಲಿ ಕಾಮಗಾರಿ ಕೈಗೊಳ್ಳಲಾಗಿದೆ. ಇತರ ತಾಲ್ಲೂಕನ್ನು ಕಡೆಗಣಿಸಲಾಗಿದೆ," ಎಂದು ಆರೋಪಿಸಿದರು.

ಜಲಸಂಪನ್ಮೂಲ ಸಚಿವರ ಪರ ಉತ್ತರ ನೀಡಿದ ಗೃಹ ಸಚಿವ ಬಸವರಾಜ ಬೊಮ್ಮಾಯಿ, "ಉದ್ದೇಶಪೂರ್ವಕವಾಗಿ ಕಡೆಗಣಿಸಿಲ್ಲ. ಹಣಕಾಸಿನ ಲಭ್ಯತೆ ಆಧರಿಸಿ ನೀಡಲಾಗುತ್ತದೆ. ಕೆಲವೊಮ್ಮೆ ಮೂರ್‍ನಾಲ್ಕು ಸಚಿವರು ಬದಲಾದ ನಂತರವು ಕಾಮಗಾರಿಗಳನ್ನು ಕೈಗೊಂಡ ಉದಾಹರಣೆಗಳು ಇವೆ. ಜಲಸಂಪನ್ಮೂಲ ಸಚಿವರ ಜೊತೆ ಚರ್ಚಿಸಿ ಮಂಜೂರಾತಿ ಕೊಡಿಸಲಾಗುವುದು" ಎಂದು ಭರವಸೆ ನೀಡಿದರು.

ಕಮೀಷನ್ ಆರೋಪಕ್ಕೆ ಬಿಜೆಪಿ ಸದಸ್ಯ ಸುನಿಲ್ ವಲ್ಯಾಪುರೆ ತೀವ್ರ ಆಕ್ಷೇಪ ವ್ಯಕ್ತಪಡಿಸಿದರು. ಸಚಿವ ಮಾಧುಸ್ವಾಮಿ, ಬಿಜೆಪಿಯ ಡಾ.ವೈ.ಎ. ನಾರಾಯಣಸ್ವಾಮಿ, ಭಾರತಿಶೆಟ್ಟಿ, ತೇಜಸ್ವಿನಿ, ರವಿಕುಮಾರ್ ಅವರು ಮರಿತಿಬ್ಬೇಗೌಡ ವಿರುದ್ಧ ತಿರುಗಿ ಬಿದ್ದರು. ಜೆಡಿಎಸ್‌ನ ಅಪ್ಪಾಜಿಗೌಡ, ಶ್ರೀಕಂಠೇಗೌಡ, ರಮೇಶ್‌ಗೌಡ ಅವರು ಮರಿತಿಬ್ಬೇಗೌಡ ಬೆಂಬಲಕ್ಕೆ ನಿಂತರು.

**ಹೆದರಿಸುವ ಕಾಲ ಹೋಯ್ತು:** ಸಚಿವ ಬೊಮ್ಮಾಯಿ, "ಹೆದರಿಸಿ, ಬೆದರಿಸಿ ಮಂಜೂರಾತಿ ಪಡೆಯುತ್ತೀರಾ. ಇದೆಲ್ಲಾ ನಡೆಯಲ್ಲ, ಆ ಕಾಲ ಹೋಯ್ತು' ಎಂದು ಗುಡುಗಿದರು.

**ಕ್ಷಮೆ ಯಾಚನೆ:** ಮತ್ತೆ ಸದನ ಕಲಾಪ ಆರಂಭವಾದಾಗ ಮಾತನಾಡಿದ ಸದಸ್ಯ ಮರಿತಿಬ್ಬೇಗೌಡ, "ನನಗೆ ಯಾವುದೇ ಸಚಿವರು ಅಥವಾ ಸದಸ್ಯರ ಬಗ್ಗೆ ದ್ವೇಷ ಇಲ್ಲ. ಇದರಿಂದ ಯಾರಿಗಾದರೂ ನೋವಾಗಿದ್ದರೆ ವಿಷಾದ ವ್ಯಕ್ತಪಡಿಸುತ್ತೇನೆ" ಎಂದು ಕ್ಷಮೆಯಾಚಿಸಿದರು. ಇದರೊಂದಿಗೆ ವಿವಾದಕ್ಕೆ ತೆರೆ ಬಿದ್ದಿತ್ತು. ಬಿಜೆಪಿ ಸದಸ್ಯ ರವಿಕುಮಾರ್, "ಕಮೀಷನ್ ಕುರಿತಂತೆ ಮಾಡಿದ ಆರೋಪದ ಹೇಳಿಕೆಯನ್ನು ಕಡತದಿಂದ ತೆಗೆಯಬೇಕು," ಎಂದು ಸಭಾಪತಿಗಳನ್ನು ಆಗ್ರಹಿಸಿದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:05.02.2021

## 25. ಸಂಕಷ್ಟ–ಸವಾಲು ಮೆಟ್ಟಿ ಶೇ.85 ಪ್ರಗತಿ

ಕೊರೋನಾದಿಂದ ಆರ್ಥಿಕ ಸಂಕಷ್ಟ ಎದುರಾದರೂ ರಾಜ್ಯದ ಅಭಿವೃದ್ಧಿಗೆ ಹಿನ್ನಡೆಯಾಗದಂತೆ ನೋಡಿಕೊಳ್ಳಲಾಗಿದೆ. ಮಾರ್ಚ್ ಅಂತ್ಯದ ವೇಳೆಗೆ ಪ್ರಸಕ್ತ ಹಣಕಾಸು ವರ್ಷಕ್ಕೆ ಸಂಬಂಧಿಸಿದ ಶೇ.85ರಷ್ಟು ಪ್ರಗತಿಯಾಗಲಿದೆ ಎಂದು ಮುಖ್ಯ ಮಂತ್ರಿಯವರು ವಿಧಾನಸಭೆಗೆ ತಿಳಿಸಿದ್ದಾರೆ.

ರಾಜ್ಯಪಾಲರ ಭಾಷಣದ ವಂದನಾ ನಿರ್ಣಯದ ಮೇಲಿನ ಚರ್ಚೆಗೆ ಉತ್ತರಿಸಿ, "ಆರ್ಥಿಕ ಸ್ಥಿತಿ ಚೇತರಿಕೆಯಲ್ಲಿದೆ. ತೆರಿಗೆ ಸಂಗ್ರಹ ಸುಧಾರಿಸುತ್ತದೆ. ಮುಂದಿನ ದಿನಗಳಲ್ಲಿ ಅಭಿವೃದ್ಧಿಗೆ ಸಮಸ್ಯೆಯಾಗುವುದಿಲ್ಲ." ಎಂದು ನಾನಾ ಇಲಾಖೆಗಳಲ್ಲಿ ಈವರೆಗಿನ ವೆಚ್ಚದ ಅಂಕಿ ಅಂಶವನ್ನು ಸದನದ ಮುಂದಿಟ್ಟರು. ಮುಖ್ಯಮಂತ್ರಿಯಾಗಿ ಅಧಿಕಾರ ವಹಿಸಿಕೊಂಡಾಗ ಪ್ರವಾಹ ಬಂದದ್ದನ್ನು ನೆನಪಿಸಿಕೊಂಡರು. ಪ್ರವಾಹ ಪರಿಹಾರ ಹಾಗೂ ಕೋವಿಡ್ ನಿರ್ವಹಣೆ, ಬಡವರಿಗೆ ಪ್ಯಾಕೇಜ್ ನೀಡಿದ್ದರ ಬಗ್ಗೆಯೂ ಸದನಕ್ಕೆ ವಿವರ ಒದಗಿಸಿದರು.

**ಶಾಸಕರಿಗೆ ಸಿಹಿ**

ಈ ನಡುವೆ ಶಾಸಕರಿಗೂ ಸಿಹಿ ಸುದ್ದಿ ನೀಡಿದ ಸಿಎಂ ಬಿಎಸ್‌ವೈ, "ಕ್ಷೇತ್ರಾಭಿವೃದ್ಧಿಗೆ ಸಂಬಂಧಿಸಿದ ಅನುದಾನ ಬಿಡುಗಡೆ ಮಾಡಲಾಗುವುದು. ಕೋವಿಡ್‌ನಿಂದ ಎದುರಾದ ಆರ್ಥಿಕ ಸಂಕಷ್ಟದಿಂದ ತಡೆಯಲಾಗಿದ್ದ ಕಾಮಗಾರಿಯನ್ನು ಕೈಗೆತ್ತಿಕೊಳ್ಳಲಾಗುವುದು," ಎಂದು ಭರವಸೆ ನೀಡಿದರು.

**ವರ್ಷದೊಳಗೆ ಬೆಂಗಳೂರಿನ ಚಿತ್ರಣ ಬದಲು**

"ಬೆಂಗಳೂರಿನ ಅಭಿವೃದ್ಧಿಗೂ ವಿಶೇಷ ಒತ್ತು ಕೊಡಲಾಗಿದೆ. 1 ವರ್ಷದೊಳಗೆ ಬೆಂಗಳೂರಿನ ಚಿತ್ರಣವೇ ಬದಲಾಗಲಿದೆ. ಈ ಉದ್ದೇಶಕ್ಕೆ 'ಬೆಂಗಳೂರು ಮಿಷನ್–2022' ಜಾರಿಗೊಳಿಸಲಾಗಿದೆ. ಸ್ಮಾರ್ಟ್ ಸಿಟಿಯಡಿ ಅನೇಕ ಕಾಮಗಾರಿ ನಡೆಯುತ್ತಿದೆ. 2022ರ ವೇಳೆಗೆ 72 ಕಿ.ಮೀ ಮೆಟ್ರೊ ರೈಲು ಸೇವೆ ಪ್ರಾರಂಭವಾಗಲಿದೆ," ಎಂದು ಮುಖ್ಯಮಂತ್ರಿಯವರು ತಿಳಿಸಿದರು.

**ಬಿಡಿಎ ಕಾಯಿದೆಗೆ ತಿದ್ದುಪಡಿ**

"ಬಿಡಿಎ ಭ್ರಷ್ಟಾಚಾರಕ್ಕೆ ಕಡಿವಾಣ ಹಾಕಲಾಗಿದೆ. ಈ ಸಂಬಂಧ ಎಸ್‌ಐಟಿ ತನಿಖೆಗೂ ಆದೇಶಿಸಲಾಗಿದೆ. ಹಗರಣದಲ್ಲಿ ಭಾಗಿಯಾದ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲಾಗುತ್ತಿದೆ. ಬಿಡಿಎ ಮೂಲೆ ನಿವೇಶನ ಹರಾಜು ಹಾಕಿ ಆದಾಯ ಸಂಗ್ರಹಿಸಲಾಗಿದೆ. ಬಿಡಿಎ ಕಾಯಿದೆ ಪ್ರಕಾರ ಅಲ್ಲಿನ ಅಧಿಕಾರಿಗಳ ವರ್ಗಾವಣೆಗೆ ಅವಕಾಶವಿಲ್ಲ. ಬಿಡಿಎ ಕಾಯಿದೆಗೆ ತಿದ್ದುಪಡಿ ತರಲಾಗುವುದು," ಎಂದು ಮುಖ್ಯಮಂತ್ರಿ ಭರವಸೆ ನೀಡಿದರು.

**ಕಾಂಗ್ರೆಸ್ ಸಭಾತ್ಯಾಗ**

ಮುಖ್ಯಮಂತ್ರಿಯವರ ಉತ್ತರ ತೃಪ್ತಿ ತಂದಿಲ್ಲ. ಇದು ವಚನಭ್ರಷ್ಟ ಸರ್ಕಾರವೆಂದು ಪ್ರತಿಪಕ್ಷದ ನಾಯಕ ಸಿದ್ದರಾಮಯ್ಯ ವಾಗ್ದಾಳಿ ನಡೆಸಿದರು. ಜೊತೆಗೆ ರಾಜ್ಯಪಾಲರ ಭಾಷಣದ ವಂದನಾ ನಿರ್ಣಯದ ಅಂಗೀಕಾರವಾಗುವಾಗ ಕಾಂಗ್ರೆಸ್ ಶಾಸಕರು ಸಿದ್ದರಾಮಯ್ಯ ನೇತೃತ್ವದಲ್ಲಿ ಸಭಾತ್ಯಾಗ ಮಾಡಿದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:06.02.2021

## 26. ಮೇಲ್ಮನೆಯಲ್ಲೂ ಗೋ ಕಾಯಿದೆ ಅಂಗೀಕಾರ

ಪ್ರತಿಪಕ್ಷ ಕಾಂಗ್ರೆಸ್ ಮತ್ತು ಜೆಡಿಎಸ್ ವಿರೋಧದ ನಡುವೆಯೂ ಕರ್ನಾಟಕ ಜಾನುವಾರು ಹತ್ಯೆ ಪ್ರತಿಬಂಧಕ ಮತ್ತು ಸಂರಕ್ಷಣಾ ವಿಧೇಯಕಕ್ಕೆ ಪರಿಷತ್‌ನಲ್ಲಿ ಅನುಮೋದನೆ ಪಡೆಯುವಲ್ಲಿ ಸರ್ಕಾರ ಯಶಸ್ವಿಯಾಯಿತು.

ಎರಡು ಅಧಿವೇಶನದಿಂದ ಆಡಳಿತಾರೂಢ ಬಿಜೆಪಿ ಸರ್ಕಾರ ಗೋಹತ್ಯೆ ನಿಷೇಧ ವಿಧೇಯಕಕ್ಕೆ ಪರಿಷತ್ತಿನ ಅಂಗೀಕಾರ ಪಡೆಯಲು ಪ್ರಯತ್ನಿಸಿತ್ತಾದರೂ ಒಂದಲ್ಲಾ ಒಂದು ಕಾರಣದಿಂದಾಗಿ ಅದು ಸಾಧ್ಯವಾಗಿರಲಿಲ್ಲ. ಸರ್ಕಾರ ಸುಗ್ರೀವಾಜ್ಞೆ ಜಾರಿಗೊಳಿಸಿತ್ತು. ಇದೀಗ ಪರಿಷತ್ ಅನುಮೋದನೆಯಿಂದ ಕಾಯಿದೆಯ ಸ್ವರೂಪ ಪಡೆದುಕೊಳ್ಳಲಿದೆ.

ನಿಗದಿಯಂತೆ ಉಪ ಸಭಾಪತಿ ಕೆ.ಎಂ.ಪ್ರಾಣೇಶ್, ಸಂಜೆ ವಿಧೇಯಕವನ್ನು ಚರ್ಚೆಗೆ ಕೈಗೆತ್ತಿಕೊಂಡರು. ಆಗ ಕಾಂಗ್ರೆಸ್ ಹಾಗೂ ಜೆಡಿಎಸ್ ಸದಸ್ಯರು "ಇಷ್ಟು ತರಾತುರಿಯಲ್ಲಿ ವಿಧೇಯಕ ಅಂಗೀಕರಿಸುವುದು ಸರಿಯಲ್ಲ. ವಿಧೇಯಕವನ್ನು ಸ್ಥಾಯಿ ಸಮಿತಿಗೆ ಒಪ್ಪಿಸಿ" ಎಂದು ಪಟ್ಟುಹಿಡಿದವು.

ಜೆಡಿಎಸ್ ಸದಸ್ಯ ಕೆ.ಟಿ.ಶ್ರೀಕಂಠೇಗೌಡ, "ಬೆಳಿಗ್ಗೆಯಿಂದ ಕುಳಿತ್ತಿದ್ದೇವೆ ಸಾಕಾಗಿದೆ. ಚರ್ಚೆ ಮುಂದುವರಿಸಬೇಕು" ಎಂಬ ಒತ್ತಾಯಕ್ಕೆ ಕಾಂಗ್ರೆಸ್ ಸದಸ್ಯರು ಇಂದೇ ವಿಧೇಯಕಕ್ಕೆ ಅಂಗೀಕಾರಕ್ಕೆ ಪಟ್ಟು ಹಿಡಿದರು. ಆಗ ಮಾತಿನ ಚಕಮಕಿ ನಡೆಯಿತು. ಆಗ ಉಪ ಸಭಾಪತಿ ಕೆ.ಎಂ.ಪ್ರಾಣೇಶ್ ಧ್ವನಿಮತದ ಮೂಲಕ ವಿಧೇಯಕವನ್ನು ಅಂಗೀಕರಿಸಲು ಮುಂದಾದರು. ಜೆಡಿಎಸ್ ಸದಸ್ಯ ರಮೇಶ್ ಗೌಡ, ಕಾಂಗ್ರೆಸ್ ನಜೀರ್ ಅಹಮದ್, ಆರ್.ಬಿ.ತಿಮ್ಮಾಪುರ, ನಾರಾಯಣಸ್ವಾಮಿ ಮತ್ತಿತರರು ಸಭಾಪತಿ ಪೀಠದ ಮುಂಭಾಗಕ್ಕೆ ತೆರಳಿ ವಿಧೇಯಕದ ಪ್ರತಿಗಳನ್ನು ಹರಿದು ತೂರಿದರು. 'ಸರ್ಕಾರಕ್ಕೆ ಧಿಕ್ಕಾರ, ಶೇಮ್, ಶೇಮ್ ಎಂದು ಪ್ರತಿಪಕ್ಷಗಳ ಸದಸ್ಯರು ಘೋಷಣೆಗಳನ್ನು ಕೂಗುತ್ತಿದ್ದರು. ಉಪ ಸಭಾಪತಿಗಳು ವಿಧೇಯಕ ಅಂಗೀಕಾರವಾಗಿದೆ ಎಂದು ಘೋಷಿಸಿದರು.

ಇದಕ್ಕೂ ಮುನ್ನ ಗದ್ದಲದ ನಡುವೆ ಪಶು ಸಂಗೋಪನಾ ಸಚಿವ ಪ್ರಭು ಚವ್ಹಾಣ್ ವಿಧೇಯಕವನ್ನು ಮಂಡಿಸಿದರು.

**ಬಿಸಿ ಬಿಸಿ ಚರ್ಚೆ**

ಕಾಂಗ್ರೆಸ್ ಸದಸ್ಯ ಬಿ.ಕೆ ಹರಿಪ್ರಸಾದ್ 'ಪಕೋಡಾ ಎಕಾನಾಮಿಕ್ಸ್ ಆಯ್ತು, ಗೋಶಾಲೆ ಮೂಲಕ ಭಜರಂಗದಳ, ವಿಶ್ವಹಿಂದೂ ಪರಿಷತ್‌ನವರ ಜೀವನೋಪಾಯಕ್ಕೆ ಈ ಹೊಸ ಉದ್ಯೋಗಕ್ಕೆ ಬಿಲ್ ತರಲಾಗುತ್ತಿದೆ. ಪ್ರಪಂಚದ ಶೇ.13 ರಷ್ಟು ಚರ್ಮ ರಫ್ತು ಮೂರು ಮಿಲಿಯನ್ ಉದ್ಯೋಗ ಸೃಷ್ಟಿಸಿದೆ. ಇಂದಿಗೂ ದೊಡ್ಡ ಮಟ್ಟದಲ್ಲಿ ಗೋ ಮಾಂಸ ರಫ್ತು ಆಗುತ್ತಿದೆ. ಕೇಂದ್ರದ ಬಲಿಷ್ಠ ಸರ್ಕಾರ ಇದನ್ನು ನಿಷೇಧಿಸುವ ಧೈರ್ಯ ಯಾಕೆ ತೋರಲಿಲ್ಲ. ಕೇರಳ, ಗೋವಾದಲ್ಲಿ ಬಿಜೆಪಿ ನಾಯಕರೇ ಇದನ್ನು ವಿರೋಧಿಸಿದ್ದಾರೆ. ಬಿಜೆಪಿಯದ್ದು ದ್ವಂದ್ವ ನಿಲುವು" ಎಂದರು.

ಹರಿಪ್ರಸಾದ್ ಮಾತಿನ ಮಧ್ಯೆ ಖಾಸಗೀಕರಣ, ವಿಶ್ವ ಹಿಂದೂ ಪರಿಷತ್, ಸಂಘ ಪರಿವಾರ ಇತ್ಯಾದಿ ವಿಚಾರಗಳು ಪ್ರಸ್ತಾಪ ಮಾಡಿದಾಗ ಆಡಳಿತ ಹಾಗೂ ಪ್ರತಿಪಕ್ಷ ನಡುವೆ ಸಾಕಷ್ಟು ವಾಗ್ವಾದ ನಡೆಯಿತು.

**ಶೇ.70ರಷ್ಟು ಗೋಮಾಂಸ ಅವಲಂಬನೆ**

ಸದಸ್ಯ ನಜೀರ್ ಅಹಮದ್ "ಶೇ.70 ರಷ್ಟು ಹಿಂದುಳಿದ, ಅಲ್ಪಸಂಖ್ಯಾತ ಸಮುದಾಯದವರು ಗೋಮಾಂಸ ಅವಲಂಬಿಸಿದ್ದಾರೆ. ಇದೊಂದು ಪೌಷ್ಠಿಕ ಆಹಾರ. ಜನರಲ್ಲಿ ರೋಗ ನಿರೋಧಕ ಶಕ್ತಿ ಇರುತ್ತದೆ. ಈ ಕಾಯಿದೆ ಜಾರಿಗೆ ಬರುವುದು ಸರಿಯಲ್ಲ. ಗೋವನ್ನು ರಕ್ಷಿಸಿ ಕರೆದೊಯ್ಯುವವರೇ ಸಾಕಲು ಸಾಧ್ಯವಾಗದೇ ಕಟುಕರಿಗೆ ಮಾರುತ್ತಾರೆ. ಪ್ರತ್ಯೇಕ ಸಮಿತಿ ರಚಿಸಿ ವಿಧೇಯಕ ಚರ್ಚಿಸಿ ನಿರ್ಧಾರ ಕೈಗೊಳ್ಳಬೇಕು ಎಂದು ಸಲಹೆ ಮಾಡಿದರು.

**ಸದನ ಸಮಿತಿಗೆ ಒಪ್ಪಿಸಿ**

ಹಿರಿಯ ಸದಸ್ಯ ಸಿ.ಎಂ.ಇಬ್ರಾಹಿಂ "ಅಲ್ಪಸಂಖ್ಯಾತರು ಮಾತ್ರ ಗೋಮಾಂಸ ತಿನ್ನುತ್ತಾರೆ ಎಂಬ ಭಾವನೆ ನಿಮ್ಮದು. ಆದರೆ ಅದು ತಪ್ಪು. ಎಲ್ಲರೂ ತಿನ್ನುತ್ತಾರೆ. ಕಾಂಗ್ರೆಸ್ ಪಕ್ಷ ಉಚಿತ ಅಕ್ಕಿ ನೀಡಿದರೂ ಜನ ವಿಫಲಗೊಳಿಸಿದರು. ಅಂತೆಯೇ ನೀವು ಮತ ಬ್ಯಾಂಕ್‌ಗಾಗಿ ಈ ಕಾಯಿದೆ ತರುತ್ತಿದ್ದೀರಿ, ಅದೇ ನಿಮಗೇ ಮುಳುವಾಗಬಹುದು. ಇದಕ್ಕೆ ಜಾತಿ, ಧರ್ಮದ ಬಣ್ಣ ಹಚ್ಚಬೇಡಿ. ಮಾನವೀಯತೆ ನೆಲೆಯಲ್ಲಿ ನೋಡೋಣ. ಸ್ಥಾಯಿ ಸಮಿತಿಗೆ ವಿಧೇಯಕವನ್ನು ಒಪ್ಪಿಸಿ ಸಮಗ್ರ ಚರ್ಚೆ ನಂತರ ನಾವು ಅದನ್ನು ಬೆಂಬಲಿಸುತ್ತೇವೆ. ಎಂದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:09.02.2021

## 27. ಹೊರಟ್ಟಿ ಅವಿರೋಧ ಆಯ್ಕೆ

ಮೇಲ್ಮನೆಗೆ ಸತತ ಏಳು ಬಾರಿ ಆಯ್ಕೆಯಾಗಿ, ಹಿರಿಯ ಸದಸ್ಯರೆಂಬ ಹಿರಿಮೆಗೆ ಪಾತ್ರರಾದ ಜೆಡಿಎಸ್‌ನ ಬಸವರಾಜ ಹೊರಟ್ಟಿ ಅವರು ಬಿಜೆಪಿ ಬೆಂಬಲದೊಂದಿಗೆ 49ನೇ ಸಭಾಪತಿಯಾಗಿ ಅವಿರೋಧವಾಗಿ ಆಯ್ಕೆಯಾದರು.

ಕಾಂಗ್ರೆಸ್‌ನಿಂದ ಮಾಜಿ ಸಚಿವ ನಸೀರ್ ಅಹಮದ್ ನಾಮಪತ್ರ ಸಲ್ಲಿಸಿದರು. ಸದನದಲ್ಲಿ ಗೋಹತ್ಯೆ ನಿಷೇಧ ವಿಧೇಯಕ ಅನುಮೋದನೆಗೂ ಮುನ್ನ ಮತ ಹಾಕಲಿಲ್ಲ ಎಂದು ಆಕ್ಷೇಪಿಸಿ ಸದನದ ಬಾವಿಗಿಳಿದು ಧರಣಿ ನಡೆಸಿದ್ದರಿಂದ ಬಸವರಾಜ ಹೊರಟ್ಟಿ ಅವರು ಅವಿರೋಧವಾಗಿ ಸಭಾಪತಿಯಾಗಿ ಆಯ್ಕೆಯಾದರು.

ಸದನ ಆರಂಭವಾಗುತ್ತಿದ್ದಂತೆ ಉಪ ಸಭಾಪತಿ ಎಂ.ಕೆ.ಪ್ರಾಣೇಶ್ ಸಭಾಪತಿ ಚುನಾವಣೆ ಪ್ರಕ್ರಿಯೆಗೆ ಮುಂದಾದರು. ಇದಕ್ಕೆ ಆಕ್ಷೇಪಿಸಿದ ಕಾಂಗ್ರೆಸ್ ಸದಸ್ಯರಾದ ಬಿ.ಕೆ.ಹರಿಪ್ರಸಾದ್, ನಸೀರ್ ಅಹಮದ್, ಪ್ರತಿಪಕ್ಷ ಮುಖ್ಯ ಸಚೇತಕ ನಾರಾಯಣಸ್ವಾಮಿ ಇತರರು ಗೋಹತ್ಯೆ ನಿಷೇಧ ಸಂಬಂಧ ವಿಧೇಯಕವನ್ನು ಮತಕ್ಕೆ ಹಾಕಬೇಕೆಂಬ ಮನವಿಗೆ ಸ್ಪಂದಿಸಲಿಲ್ಲ ಎಂದು ದೂರಿದರು.

ಆದರೆ, ನೀವು ಮತಕ್ಕೆ ಹಾಕಬೇಕು ಎಂದು ಕೇಳಲೇ ಇಲ್ಲ ಎಂದು ಬಿಜೆಪಿ ಸದಸ್ಯರು ತಿರುಗೇಟು ನೀಡಿದರು. ಈ ಗದ್ದಲದ ನಡುವೆಯೇ ಉಪ ಸಭಾಪತಿ ಪ್ರಾಣೇಶ್ ಅವರು, ಸಭಾಪತಿ ಚುನಾವಣೆ ಪ್ರಕ್ರಿಯೆಗೆ ಅವಕಾಶ ಕೊಡಿ, ಬಳಿಕ ದಾಖಲೆ ಪರಿಶೀಲಿಸುತ್ತೇವೆ ಎಂದು ಮನವಿ ಮಾಡಿದರು.

ಆದರೆ, ಕಾಂಗ್ರೆಸ್ ಸದಸ್ಯರು ಕೇಳಲಿಲ್ಲ. ನಂತರ ಉಪ ಸಭಾಪತಿಯವರು ಸಭಾಪತಿ ಆಯ್ಕೆ ಪ್ರಕ್ರಿಯೆ ಆರಂಭಿಸುತ್ತಿದ್ದಂತೆ ಕಾಂಗ್ರೆಸ್ ಸದಸ್ಯರು ಸದನದ ಬಾವಿಗಿಳಿದು ಧರಣಿ ಆರಂಭಿಸಿದರು. ಇತ್ತ, ಉಪ ಸಭಾಪತಿ ಸೂಚನೆಯಂತೆ ಮೊದಲಿಗೆ ಜೆಡಿಎಸ್‌ನ ಕೆ.ವಿ ನಾರಾಯಣಸ್ವಾಮಿ ಸೂಚಿಸಲಿಲ್ಲ. ಬದಲಿಗೆ ಘಟನೆ ಬಗ್ಗೆಯೇ ಆಕ್ಷೇಪ ಮುಂದುವರಿಸಿದರು. ಇದಕ್ಕೆ ಕೋಪಗೊಂಡ ಉಪ ಸಭಾಪತಿ ಎಂ.ಕೆ.ಪ್ರಾಣೇಶ್, ನಾರಾಯಣಸ್ವಾಮಿ ಮಾತನಾಡಿದ್ದನ್ನು ಕಡತಕ್ಕೆ ತೆಗೆದುಕೊಳ್ಳದಂತೆ ಸೂಚಿಸಿದರು.

ಬಳಿಕ ಅವರ ಸೂಚನೆಯಂತೆ ಜೆಡಿಎಸ್‌ನ ಅಪ್ಪಾಜಿಗೌಡ ಅವರು ಬಸವರಾಜ ಹೊರಟ್ಟಿ ಅವರ ಹೆಸರನ್ನು ಸೂಚಿಸಿದರೆ ತಿಪ್ಪೇಸ್ವಾಮಿಯವರು ಅನುಮೋದಿಸಿದರು. ಉಪ ಸಭಾಪತಿ ಸೂಚಿಸಿದರು ಬಿ.ಕೆ.ಹರಿಪ್ರಸಾದ್ ಅವರು ಕಾಂಗ್ರೆಸ್ ಅಭ್ಯರ್ಥಿಯ ಹೆಸರು ಸೂಚಿಸಲಿಲ್ಲ. ನಂತರ ಉಪ ಸಭಾಪತಿ ಎಂ.ಕೆ. ಪ್ರಾಣೇಶ್, ಎರಡು ಪ್ರಸ್ತಾವಗಳನ್ನಷ್ಟೇ ಮಾನ್ಯ ಮಾಡಲಾಗಿದ್ದು, ಸಭಾಪತಿಯಾಗಿ ಬಸವರಾಜ ಹೊರಟ್ಟಿ ಅವರು ಅವಿರೋಧವಾಗಿ ಆಯ್ಕೆಯಾಗಿದ್ದಾರೆ ಎಂದು ಘೋಷಿಸಿದರು.

ಆಧಾರ: ಉದಯವಾಣಿ, ದಿನಾಂಕ:10.02.2021

## ಶ್ರೀ ಬಸವರಾಜ ಹೊರಟ್ಟಿರವರು ಕರ್ನಾಟಕ ರಾಜ್ಯ ವಿಧಾನಪರಿಷತ್ತಿನ ನೂತನ ಸಭಾಪತಿಗಯಾಗಿ ಆಯ್ಕೆಯಾದ ಸಂದರ್ಭ





## 28. ಗದ್ದಲದ ನಡುವೆ ಅಧಿವೇಶನಕ್ಕೆ ತೆರೆ

ಪ್ರತಿಪಕ್ಷ ಕಾಂಗ್ರೆಸ್ ಸದಸ್ಯರ ಗದ್ದಲ–ಗಲಾಟೆ ನಡುವೆ ಮೇಲ್ಮನೆ ಕಲಾಪಕ್ಕೆ ಮಂಗಳವಾರ ತೆರೆ ಬಿದ್ದಿತು. ಸಂಧಾನ–ಮಾತುಕತೆಯ ಬಳಿಕವೂ ಕಾಂಗ್ರೆಸ್ ಸದಸ್ಯರು ಸದನದ ಬಾವಿಗಿಳಿದು ಪ್ರತಿಭಟನೆ ಮುಂದುವರಿಸಿದ್ದರಿಂದ, ಸಭಾಪತಿ ಬಸವರಾಜ ಹೊರಟ್ಟಿಯವರು ಸದನವನ್ನು ಅನಿರ್ದಿಷ್ಟಾವದಿಗೆ ಮುಂದೂಡಿದರು.

ನಿಗದಿಯಂತೆ ಬುಧವಾರ (ಫೆ.10)ದ ತನಕ ಸದನ ನಡೆಯಬೇಕಿತ್ತು. ಆದರೆ ಇನ್ನೂ ಒಂದು ದಿನ ಬಾಕಿ ಇರುವಂತೆಯೇ ಅಧಿವೇಶನ ಕೊನೆಗೊಂಡಿತು. ಪ್ರತಿಪಕ್ಷ ಕಾಂಗ್ರೆಸ್ ಸದಸ್ಯರ ಗಲಾಟೆ, ಪ್ರತಿಭಟನೆ, ನಡುವೆಯೇ ರಾಜ್ಯಪಾಲರ ಭಾಷಣದ ಮೇಲಿನ ವಂದನಾ ನಿರ್ಣಯದ ಮೇಲೆ ಚರ್ಚೆಗೆ ಮುಖ್ಯಮಂತ್ರಿಯವರ ಪರವಾಗಿ ಗೃಹ ಸಚಿವ ಬಸವರಾಜ ಬೊಮ್ಮಾಯಿ ಸದನದಲ್ಲಿ ಉತ್ತರ ನೀಡಿ, ಸರ್ಕಾರವನ್ನು ಬಲವಾಗಿ ಸಮರ್ಥಿಸಿಕೊಂಡರು.

ಸಂಜೆ 4.15ಕ್ಕೆ ಭೋಜನಾನಂತರದ ಕಲಾಪ ಆರಂಭವಾಗುತ್ತಿದ್ದಂತೆ, ಸದನದ ಬಾವಿಗಿಳಿದು ಧರಣಿ ಮುಂದುವರಿಸಿದ ಕಾಂಗ್ರೆಸ್ ಸದಸ್ಯರು ಗೋಹತ್ಯೆ ನಿಷೇಧ ವಿಧೇಯಕವನ್ನು ಮತಕ್ಕೆ ಹಾಕಲು ನಾವು ಆಗ್ರಹಿಸಿದ್ದರ ಬಗ್ಗೆ ರೂಲಿಂಗ್ ಕೊಡಬೇಕು ಎಂದು ಪಟ್ಟು ಹಿಡಿದರು. ಜೆಡಿಎಸ್ ಹಿರಿಯ ಸದಸ್ಯ ಮರಿತಿಬ್ಬೇಗೌಡ 10 ನಿಮಿಷ ಸದನ ಮುಂದೂಡಿ ಆಡಳಿತ ಮತ್ತು ಪ್ರತಿಪಕ್ಷದವರನ್ನು ತಮ್ಮ ಕೊಠಡಿಗೆ ಕರೆದು ಮಾತನಾಡಿಸಿ ವಿವಾದ ಬಗೆಹರಿಸಬೇಕೆಂದು ಮನವಿ ಮಾಡಿದರು. ಅದರಂತೆ ಕಲಾಪ ಮುಂದೂಡಲಾಯಿತು.

ಮತ್ತೇ 4.45ಕ್ಕೆ ಸದನ ಆರಂಭಗೊಂಡಿತು. ಕಾಂಗ್ರೆಸ್ ಸದಸ್ಯರು ಧರಣಿ ಮುಂದುವರಿಸಿದರು. ಆಗ, ಸೋಮವಾರದ ಕಲಾಪದ ಆಡಿಯೋ, ವಿಡಿಯೋ ಹಾಗೂ ದಾಖಲೆಗಳನ್ನು ಎರಡೆರಡು ಬಾರಿ ಪರಿಶೀಲಿಸಿದ್ದೇನೆ. ತಮ್ಮ ಆಸನದಲ್ಲಿ ಇರುವಾಗ ಯಾರೂ ವಿಧೇಯಕವನ್ನು ಮತಕ್ಕೆ ಹಾಕುವಂತೆ ಕೇಳಿಲ್ಲ. ಸದನದ ಬಾವಿಯಲ್ಲಿ ಧರಣಿಯಲ್ಲಿದ್ದಾಗ ಮತ ವಿಭಜನೆ ಕೇಳಿದ್ದೀರಿ. ಹಾಗಾಗಿ, ವಿಧೇಯಕದ ಅಂಗೀಕಾರ ಕ್ರಮಬದ್ದವಾಗಿದೆ. ನಿಯಮಗಳನ್ನು ಬಿಟ್ಟು ಹೋಗಲು ನನ್ನಿಂದ ಸಾಧ್ಯವಿಲ್ಲ ಎಂದು ರೂಲಿಂಗ್ ಕೊಟ್ಟರು.

ಇದನ್ನು ಒಪ್ಪದ ಕಾಂಗ್ರೆಸ್‌ನ ಎಂ.ನಾರಾಯಣ ಸ್ವಾಮಿ, ನನ್ನ ಆಸನದಲ್ಲೇ ಇರುವಾಗ ಮತ ವಿಭಜನೆ ಕೇಳಿದ್ದೇನೆ. ಅದೇ ಬಿ.ಕೆ.ಹರಿಪ್ರಸಾದ್, ಸಿ.ಎಂ.ಇಬ್ರಾಹಿಂ, ನಸೀರ್‌ಅಹ್ಮದ್ ಸಹ ತಮ್ಮ ಸ್ಥಳದಿಂದಲೇ ಮತ ವಿಭಜನೆ ಕೇಳಿದ್ದಾರೆ. ನಾನು ನಡೆದುಕೊಂಡು ಬಂದಿದ್ದಷ್ಟೇ. ವಿಡಿಯೋದಲ್ಲಿದೆ ಎಂದರೆ ಯಾರ ಮೇಲೆ ಅನುಮಾನ ವ್ಯಕ್ತಪಡಬೇಕು. ಆದ್ದರಿಂದ ನಿಮ್ಮ ರೂಲಿಂಗ್ ಸಮಂಜಸವಾಗಿಲ್ಲ. ಅದನ್ನು ಮರುಪರಿಶೀಲಿಸಬೇಕು ಎಂದರು. ಇದಕ್ಕೆ ಕಾಂಗ್ರೆಸ್ ಸದಸ್ಯರು ಧ್ವನಿಗೂಡಿಸಿದರು. ಸಭಾಪತಿಯವರ ರೂಲಿಂಗ್ ಮೇಲೆ ಚರ್ಚೆಗೆ ಅವಕಾಶವಿಲ್ಲ ಎಂದು ಬಿಜೆಪಿ ಸದಸ್ಯರು ತಿರುಗೇಟು ನೀಡಿದರು. ಈ ಹಂತದಲ್ಲಿ ಉಭಯ ಸದಸ್ಯರ ನಡುವೆ ಜಟಾಪಟಿ ನಡೆದು, ಕಾಂಗ್ರೆಸ್ ಸದಸ್ಯರು ಸರ್ಕಾರದ ವಿರುದ್ಧ ಧಿಕ್ಕಾರ ಕೂಗಿದರು. ಬಸವರಾಜ ಬೊಮ್ಮಾಯಿ ಉತ್ತರ ಮಂಡಿಸಿದ ಬಳಿಕ ಸದನವನ್ನು ಅನಿರ್ದಿಷ್ಟಾವಧಿಗೆ ಮುಂದೂಡಲಾಯಿತು.

ಆಧಾರ:–ಉದಯವಾಣಿ ದಿನಾಂಕ:10.02.2021

## 29. ಮೌಲ್ಯಯುತ ಚರ್ಚೆಗೆ ಮೊದಲ ಆದ್ಯತೆ: ಬಸವರಾಜ ಹೊರಟ್ಟಿ

ರಾಜ್ಯದ ಎಲ್ಲ ವಲಯ, ಕ್ಷೇತ್ರವನ್ನು ಪ್ರತಿನಿಧಿಸುವ ಮೇಲ್ಮನೆಯಲ್ಲಿ ಜನಪರ ವಿಚಾರಗಳ ಬಗ್ಗೆ ಮೌಲ್ಯಯುತ ಚರ್ಚೆಗೆ ಆದ್ಯತೆ ನೀಡುತ್ತೇನೆ. ಸಚಿವರು, ಅಧಿಕಾರಿಗಳು ಸದನದಲ್ಲಿರುವಂತೆ ನೋಡಿಕೊಳ್ಳುವ ಜೊತೆಗೆ ಒಂದು ದಿನ ಮೊದಲೇ ಸದಸ್ಯರಿಗೆ ವಿಧೇಯಕ ನೀಡಿ ವ್ಯಾಪಕ ಚರ್ಚೆಗೆ ಅವಕಾಶ ಕಲ್ಪಿಸಲು ಪ್ರಾಮಾಣಿಕ ಪ್ರಯತ್ನ ಮಾಡುತ್ತೇನೆ.

ಇದು ನೂತನ ಸಭಾಪತಿ ಬಸವರಾಜ ಹೊರಟ್ಟಿ ಅವರ ಭರವಸೆಯ ನುಡಿ. ಪರಿಷತ್‌ನ 49ನೇ ಸಭಾಪತಿಯಾಗಿ ಅವಿರೋಧವಾಗಿ ಆಯ್ಕೆಯಾಗಿರುವ ಅವರು ಪರಿಷತ್‌ನಲ್ಲಿ ಹೊಸ ಮೇಲ್ಪಂಕ್ತಿ ಆರಂಭಿಸುವ ಬಗ್ಗೆ' ಉದಯವಾಣಿ'ಗೆ ಹಂಚಿಕೊಂಡಿದ್ದಾರೆ.

**ಪರಿಷತ್‌ನಲ್ಲಿ ಚರ್ಚೆಗಿಂತ ವಾಗ್ವಾದ, ಆರೋಪ-ಪ್ರತ್ಯಾರೋಪಗಳೇ ಹೆಚ್ಚಾಗುತ್ತಿದೆ ಎಂಬ ಆರೋಪಗಳಿದೆಯೆಲ್ಲಾ.**

ಆಡಳಿತ ಪಕ್ಷ ಎಂದರೆ ಸಮರ್ಥಿಸಿಕೊಳ್ಳುವುದು, ಪ್ರತಿಪಕ್ಷಗಳು ಎಂದರೆ ವಿರೋಧ ಮಾಡುವುದು ಎಂಬಂತೆ ನಮ್ಮ ವ್ಯವಸ್ಥೆಯಿದೆ. ಎರಡೂ ಕಡೆಯವರು ತಮ್ಮದೇ ಸರಿ ಎಂದು ಪಟ್ಟು ಹಿಡಿದಾಗ ಸಂವಾದಕ್ಕಿಂತ ಸಂಘರ್ಷಕ್ಕೆ ಎಡೆ ಮಾಡಿಕೊಡುತ್ತದೆ. ಆಡಳಿತ ಪ್ರತಿಪಕ್ಷದವರನ್ನು ಕರೆದು ಎರಡು ಕಡೆಯವರ ಅಭಿಪ್ರಾಯ ಪಡೆದು ಅದರಂತೆ ಸೂಕ್ತ ರೀತಿಯಲ್ಲಿ ಸದನ ನಡೆಸಿಕೊಂಡು ಹೋಗಲು ಪ್ರಯುತ್ನಿಸುತ್ತೇನೆ. ಪರಿಷತ್‌ನಲ್ಲಿ ಮೌಲ್ಯಯುತ ಚರ್ಚೆ ಪ್ರಮಾಣ ತಗ್ಗುತ್ತಿದ್ದು, ಅಹಿತಕರ ಬೆಳವಣಿಗೆಗಳಿಗೆ ಸಾಕ್ಷಿಯಗುತ್ತಿದೆ ಎಂಬ ಮಾತುಗಳ ಬಗ್ಗೆ ಏನು ಹೇಳುವಿರಿ.

ಜನಪರ ವಿಚಾರಗಳ ಕುರಿತು ಹೆಚ್ಚಿನ ಚರ್ಚೆಗೆ ಅವಕಾಶ ನೀಡಲಾಗುವುದು. ಮಧ್ಯಾಹ್ನ, ಸಂಜೆ ಮಂಡನೆಯಾಗುವ ವಿಧೇಯಕವನ್ನು ಬೆಳಗ್ಗೆ ನೀಡುವ ಪರಿಪಾಠ ಬೆಳೆದಿದೆ. ಅದಕ್ಕೆ ಕಡಿವಾಣ ಹಾಕಲಾಗುವುದು. ಒಂದು ದಿನ ಮೊದಲೇ ವಿಧೇಯಕ ನೀಡಿ ಸದಸ್ಯರು ತಯಾರಾಗಿ ಚರ್ಚೆಯಲ್ಲಿ ತೊಡಗುವ ವ್ಯವಸ್ಥೆ ತರಲಾಗುವುದು. ಸದನದಲ್ಲಿ ಧಿಕ್ಕಾರ ಕೂಗುವುದನ್ನು ಕ್ರಮೇಣ ಬಂದ್ ಮಾಡಲು ಚಿಂತಿಸಲಾಗಿದೆ. ಸದನದ ಘನತೆ ಎತ್ತಿ ಹಿಡಿಯುವ ನಿಟ್ಟಿನಲ್ಲಿ ನಿಯಮಾನುಸಾರ ಅಗತ್ಯವಿರುವ ಎಲ್ಲ ಕ್ರಮ ವಹಿಸಲಾಗುವುದು.

**ಕಲಾಪ ವೇಳೆ ಸಚಿವರು, ಅಧಿಕಾರಿಗಳ ಗೈರುಹಾಜರಿ ನಿಯಂತ್ರಣಕ್ಕೆ ಕ್ರಮ ವಹಿಸುವಿರಾ.**

ಖಂಡಿತ ಈ ನಿಟ್ಟಿನಲ್ಲಿ ಕ್ರಮ ವಹಿಸುತ್ತೇನೆ. ಈ ಹಿಂದೆ ಹಂಗಾಮಿ ಸಭಾಪತಿಯಾಗಿದ್ದಾಗ ಕಲಾಪ ಆರಂಭವಾದಾಗಲೇ ಸದನದಲ್ಲಿರಬೇಕಾದ ಸಚಿವರು, ಅಧಿಕಾರಿಗಳ ಹೆಸರು ವಾಚಿಸುತ್ತಿದ್ದೆ. ಹಾಗೆಯೇ ಸಭಾನಾಯಕರ ಮೂಲಕ ಸಂಬಂಧಪಟ್ಟವರನ್ನು ಕರೆಸಲು ಕ್ರಮ ವಹಿಸಲಾಗುತ್ತಿತ್ತು.. ನಂತರ ಆ ವ್ಯವಸ್ಥೆ ಮರೆಯಾಗಿದೆ.

**ಕಲಾಪದ ಕಾರ್ಯಸೂಚಿ ಪಾಲನೆ, ಚರ್ಚೆ ವ್ಯವಸ್ಥೆಯಲ್ಲಿ ಹೊಸ ಬದಲಾವಣೆ ತರುವಿರಾ.**

ಸದ್ಯ ಪ್ರಶ್ನೋತ್ತರ ಕಲಾಪ ಎಂದರೆ ಮೂರು ಗಂಟೆ ನಡೆಯುತ್ತಿದೆ. ಮುಂದೆ ಇದಕ್ಕೆಲ್ಲಾ ಅವಕಾಶವಿಲ್ಲ. ಕಲಾಪ ಆರಂಭವಾದ ಒಂದು ಗಂಟೆಯೊಳಗೆ ಪ್ರಶ್ನೋತ್ತರ ಕಲಾಪ ಮುಗಿಸಲಾಗುವುದು. ಇಲ್ಲದಿದ್ದರೆ ಸರ್ಕಾರಕ್ಕೆ ಹೊರೆಯಾಗಲಿದೆ. ಚರ್ಚೆಯಾಗದೆ ವಿಧೇಯಕಕ್ಕೆ ಅನುಮೋದನೆ ನೀಡುವುದರಲ್ಲಿ ಅರ್ಥವಿಲ್ಲ. ಆಯಾ ದಿನದ ಕಾರ್ಯಸೂಚಿ ಆ ದಿನ ಸಂಜೆಯೇ ಪೂರ್ಣಗೊಳಿಸಲಾಗುವುದು. ಇಲ್ಲಿಯವರೆಗೆ ಕೆಲ ವಿಚಾರದಲ್ಲಿ ಪಕ್ಷಪಾತ ನಡೆಯುತ್ತಿತ್ತು. ನಾನು ಎಲ್ಲರನ್ನೂ ಸಮಾನವಾಗಿ ಕಂಡು ವ್ಯವಸ್ಥಿತವಾಗಿ ಕಲಾಪ ನಡೆಸಲು ಆದ್ಯತೆ ನೀಡಲಾಗುವುದು.

ಆಧಾರ: ವಿಜಯ ಕರ್ನಾಟಕ, ದಿನಾಂಕ:10.02.2021

## 30. ಸಂಸದೀಯ ಮೌಲ್ಯಗಳ ಕುಸಿತ

ಸಂಸದೀಯ ಮೌಲ್ಯಗಳು ಕುಸಿಯುತ್ತಿರುವ ಹಿನ್ನೆಲೆಯಲ್ಲಿ ಫೆಬ್ರವರಿ 24ರಂದು ಬೆಂಗಳೂರಿನ ವಿಧಾನಸೌಧ ಬ್ಯಾಂಕ್ವೆಂಟ್ ಹಾಲ್‌ನಲ್ಲಿ ಆತ್ಮಾವಲೋಕನ ಸಭೆ ಕರೆದಿದ್ದು ಇದರಲ್ಲಿ ಸದನದ ಫಲಪ್ರದ ಚರ್ಚೆ, ಮೌಲ್ಯಗಳ ಪುನರುತ್ಥಾನದ ಚರ್ಚೆ ನಡೆಸಲಾಗುವುದು ಎಂದು ವಿಧಾನ ಸಭಾಧ್ಯಕ್ಷರು.

ಇಲ್ಲಿನ ಪ್ರವಾಸಿಮಂದಿರದಲ್ಲಿ ಸುದ್ದಿಗೋಷ್ಠಿಯಲ್ಲಿ ಮಾತನಾಡಿದ ಅವರು, ಸಭೆಗೆ ಹಾಲಿ ಮತ್ತು ಹಿಂದಿನ ಸದಸ್ಯರು, ಅಧ್ಯಕ್ಷರು, ಪತ್ರಕರ್ತರು ಹಾಗೂ ಇತರರನ್ನು ಆಹ್ವಾನಿಸಲಾಗುತ್ತಿದೆ. ರಾಜ್ಯಪಾಲರು, ಬೇರೆ ಪಕ್ಷಗಳೊಂದಿಗೆ, ಲೋಕಸಭೆ, ರಾಜ್ಯಸಭೆ ಅಧ್ಯಕ್ಷರೊಂದಿಗೆ, ಕಾನೂನು ತಜ್ಞರು, ಅನುಭವಿಗಳು,

ಮಾಧ್ಯಮ ಪ್ರಮುಖರೊಂದಿಗೆ ಸಮಾಲೋಚಿಸಿದ್ದೇನೆ. ಸಂಬಂಧಪಟ್ಟವರಿಗೆ ಆಹ್ವಾನ ಕಳುಹಿಸಲಾಗುತ್ತಿದೆ. ವಿಧಾನ ಸಭೆ, ವಿಧಾನ ಪರಿಷತ್‌ನಲ್ಲಿಯೂ ಆಸಕ್ತರು, ಹಿರಿಯರು, ಬೇರೆ ಬೇರೆ ರಾಜಕೀಯ ಪಕ್ಷಗಳ ಪ್ರಮುಖರು ಪಾಲ್ಗೊಳ್ಳಲು ಕೋರಲಾಗಿದೆ. ಆಸಕ್ತರು ಪಾಲ್ಗೊಳ್ಳಲು ಆಗದಿದ್ದರೆ ಲಿಖಿತವಾಗಿ ನಮಗೆ ವಿಷಯ ತಲುಪಿಸಲು ಅವಕಾಶ ನೀಡಿದ್ದೇನೆ ಎಂದು ವಿವರಿಸಿದರು.

ನಾನು ಸಭಾಧ್ಯಕ್ಷನಾಗಿ ಒಂದೂವರೆ ವರ್ಷದಲ್ಲಿ ದೇಶದ ಎಲ್ಲ ಸಭಾಧ್ಯಕ್ಷರ ಜೊತೆಗಿನ ಸಭೆಯಲ್ಲಿ ಪಾಲ್ಗೊಂಡು ಈ ವಿಷಯದಲ್ಲಿ ಚರ್ಚಿಸಿದ್ದೇನೆ. ನಮ್ಮ ದೇಶದ ಪ್ರಜಾಪ್ರಭುತ್ವ ವ್ಯವಸ್ಥೆ ಪ್ರಪಂಚದಲ್ಲಿಯೇ ಶ್ರೇಷ್ಠವಾದದ್ದು, ಡಾ.ಅಂಬೇಡ್ಕರ್ ಮತ್ತು ಇತರ ಮುತ್ಸದಿಗಳು ಸೇರಿ ಜಗತ್ತಿನಲ್ಲಿಯೇ ಅಮೂಲ್ಯವಾದ ಸಂವಿಧಾನ ಕೊಟ್ಟಿದ್ದಾರೆ. ಆದರೆ ಇತ್ತೀಚಿನ ವರ್ಷಗಳಲ್ಲಿ ಈ ವಿಧಾನಸಭೆಗಳಲ್ಲಿ ಮೌಲ್ಯಗಳ ಕುಸಿತ ಆಗುತ್ತಿರುವುದನ್ನು ನಾವೆಲ್ಲ ಗಮನಿಸುತ್ತಿದ್ದೇವೆ. ವಿಷಯದ ಗಂಭೀರತೆಯಲ್ಲಿ ಅಧ್ಯಯನ, ಸಿದ್ಧತೆಯ ಕೊರತೆ ಗಮನಿಸಲಾಗುತ್ತಿದೆ. ವಿಷಯಗಳಲ್ಲಿ ಗಾಂಭೀರ್ಯತೆ ಇಲ್ಲ. ಸದನದಲ್ಲಿ ಫಲಪ್ರದ ಚರ್ಚೆಗೆ ಸೂಕ್ತ ಸಿದ್ಧತೆ ಆಗಬೇಕು ಎಂದರು.

ಅನುಭವ ಮಂಟಪದ ಗಾಂಭೀರ್ಯತೆಯಂತೆ ವಿಷಯ ಚರ್ಚೆ ಆಗಬೇಕು. ಸಂವಿಧಾನ ಮತ್ತು ಪಕ್ಷಾಂತರ ನಿಷೇಧ ಕಾಯ್ದೆ ಬಲಪಡಿಸುವ ವಿಷಯದ ಚರ್ಚೆಯಲ್ಲಿ ಸಾಕಷ್ಟು ಫಲಪ್ರದವಾದ ಚರ್ಚೆ, ವಿಷಯಗಳ ಮಂಡನೆ ಆಗಿದೆ. ಕರ್ನಾಟಕ ವಿಧಾನಸಭೆಯಲ್ಲಿ ಗಾಂಭೀರ್ಯತೆಗೆ ಆದ್ಯತೆ ಆಗಲಿದೆ ಎಂದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:10.02.2021

## 31. ಬಿಎಸ್‌ವೈ, ಹೆಚ್‌ಡಿಕೆಗೆ ಹೊರಟ್ಟಿ ಕೃತಜ್ಞತೆ

ವಿಧಾನಪರಿಷತ್‌ನ ನೂತನ ಸಭಾಪತಿಯಾಗಿ ಅಧಿಕಾರ ಸ್ವೀಕರಿಸಿದ ಹಿನ್ನೆಲೆ ಬಸವರಾಜ ಹೊರಟ್ಟಿ ಅವರು ಮಾಜಿ ಮುಖ್ಯಮಂತ್ರಿ ಎಚ್.ಡಿ.ಕುಮಾರಸ್ವಾಮಿ ಅವರನ್ನು ಭೇಟಿ ಮಾಡಿ ಕೃತಜ್ಞತೆ ಸಲ್ಲಿಸಿದರು. ಜೆಪಿ ನಗರದಲ್ಲಿರುವ ಹೆಚ್.ಡಿ.ಕುಮಾರಸ್ವಾಮಿ ನಿವಾಸಕ್ಕೆ ಭೇಟಿ ನೀಡಿದ ಬಸವರಾಜ ಹೊರಟ್ಟಿ ಅವರು, ಹೂಗುಚ್ಛ ನೀಡಿ ಸಭಾಪತಿಯಾಗಲು ಬೆಂಬಲಿಸಿದ್ದಕ್ಕೆ ಕೃತಜ್ಞತೆ ಸಲ್ಲಿಸಿದರು. ಬಸವರಾಜ ಹೊರಟ್ಟಿ ಅವರನ್ನು ರಾತ್ರಿ ಊಟಕ್ಕೆ ಆಹ್ವಾನಿಸಿ ಮುಖ್ಯಮಂತ್ರಿಯವರು ತಮ್ಮ ನಿವಾಸದಲ್ಲಿ ಶುಭಾಶಯ ತಿಳಿಸಿದರು. ಅದೇ ರೀತಿ ಹೊರಟ್ಟಿ ಅವರು ಸಹ ತಮಗೆ ಬೆಂಬಲ ನೀಡಿದ್ದಕ್ಕೆ ಮುಖ್ಯಮಂತ್ರಿಗೆ ಕೃತಜ್ಞತೆ ಸಲ್ಲಿಸಿದರು.

ಆಧಾರ: ವಿಶ್ವವಾಣಿ, ದಿನಾಂಕ:10.02.2021

## 32. ಪ್ರತಿಭಟನೆಯೇ ಪರಿಷತ್‌ಗೆ ಪ್ರವೇಶ

ನಾನು ಕಾಲೇಜು ಟೈಮಿನಲ್ಲಿ ಹೋರಾಟ ಮಾಡುತ್ತಿದ್ದೆ. ಮಹಾರಾಷ್ಟ್ರ ಮೈಸೂರು ರಾಜ್ಯದ ಗಲಾಟೆಯಲ್ಲಿ ಧರ್ಮಪ್ಪ ಅನ್ನುವ ಡಿಸಿಪಿ ನನಗೆ ಹೊಡೆದಿರುವ ಗಾಯ ಇನ್ನೂ ಇದೆ. ನಾನು ಲ್ಯಾಮಿಂಗ್ಟನ್ ಹೈಸ್ಕೂಲ್ ಶಿಕ್ಷಕನಾಗಿ ನೌಕರಿ ಸೇರಿದ್ದೆ ಅಲ್ಲಿ ಶಿಕ್ಷಕರಿಗೆ ಅನ್ಯಾಯವಾಗುತ್ತಿತ್ತು. ಶಿರೂರು ಎನ್ನುವ ಇಂಗ್ಲೀಷ್ ಟೀಚರ್ ಇದ್ರು, ಅವರು ಅರ್ಧವಾರ್ಷಿಕ ಪರೀಕ್ಷೆಯಲ್ಲಿ ಒಬ್ಬ ವಿದ್ಯಾರ್ಥಿಗೆ 36 ಅಂಕ ಬದಲಿ 26 ಎಂದು ಹಾಕಿದ್ದರು. ಅದರಿಂದ ಅವರನ್ನು ಸಸ್ಪೆಂಡ್ ಮಾಡಿದ್ದರು. ಅದನ್ನು ಪ್ರಶ್ನಿಸಿ ಶಿಕ್ಷಣ ಇಲಾಖೆ ಕಾರ್ಯದರ್ಶಿ ಬಳಿ ಹೋಗಿ ಆಗಿರುವ ಅನ್ಯಾಯ ಪ್ರಶ್ನಿಸಿದವು. ಅವರು ಡಿಸಿ ಜೊತೆ ಮಾತನಾಡಿ, ಅಮಾನತ್ತು ಆದೇಶ ರದ್ದು ಮಾಡಿದರು. ಅದು ನಮಗೆಲ್ಲರಿಗೂ ಸ್ಫೂರ್ತಿಯಾಯಿತು. ನಂತರ ಶಿಕ್ಷಕರ ಸಂಘ ಮಾಡಿಕೊಂಡು ಹೋರಾಟ ನಡೆಸಿದೆವು. ನಮ್ಮ ಮನವಿಗೆ ಯಾರೂ ಸ್ಪಂದಿಸುತ್ತಿರಲಿಲ್ಲ. ಹೀಗಾಗಿ ಎಲ್ಲರೂ ಪರಿಷತ್ತು ಚುನಾವಣೆಗೆ ನಿಲ್ಲಲು ತೀರ್ಮಾನ ಮಾಡಿದೆವು.

**ಅವ್ವ ಜೋರಾಗಿ ಅತ್ತಳು:** ನಾನು ಚುನಾವಣೆಗೆ ನಿಲ್ಲುತ್ತೇನೆ ಎನ್ನುವ ಸುದ್ದಿ ನಮ್ಮೂರಿಗೆ ಹೋಯಿತು. ಅದು ನಮ್ಮ ಅವ್ವನಿಗೆ ಹೋಗಿ ಅವಳಿಗೆ ಯಾರೋ, 'ನಿನ್ನ ಮಗಾ ಇಲೆಕ್ಷನ್ ನಿಲ್ಲಾಕತ್ತಾನಂತ, ಹೊಲಾ ಮನಿ ಮಾರ್ಕೊಂಡು ಹೊಕ್ಕಾನು' ಅಂತ ಹೇಳಿದ್ದರು. ಅವಳು ಜೋರಾಗಿ

ಅತ್ತು ಅಲ್ಲಿಂದ ತಕ್ಷಣ ಬರುವಂತೆ ಊರವರೆಲ್ಲರೂ ಕರೆದರು. ಊರಿಗೆ ಹೋದರೆ, ಸತ್ತವರ ಮನೆಗೆ ಹೋದಂತೆ ಎಲ್ಲರೂ ನನ್ನ ಮನೆಗೆ ಜೊತೆ ಬಂದರು. ಊರಿನ ಹೆಣ್ಣುಮಕ್ಕಳೆಲ್ಲರೂ ಬಂದು ಕೂತಿದ್ದರು. ನಾನು ಚುನಾವಣೆಗೆ ನಿಲ್ಲುವುದಿಲ್ಲ ಎಂದು ನಮ್ಮ ತಾಯಿಗೆ ಸಮಾಧಾನ ಮಾಡಿ ಬಂದೆ. ಇಲ್ಲಿ ಬಂದ ತಕ್ಷಣ ಸಂಘದವರು ನಿಲ್ಲಲೇಬೇಕು ಎಂದು ಒತ್ತಾಯ ಮಾಡಿದರು. ಅವರ ಬಯಕೆಯಂತೆ ಚುನಾವಣೆಗೆ ನಿಂತೆ.

**ಸೋಲಿಸಿ ಪುಣ್ಯ ಕಟ್ಟಿಕೊಳ್ಳಿ:** 2008ರಲ್ಲಿ ಯಡಿಯೂರಪ್ಪ ನನ್ನನ್ನು ಬಿಜೆಪಿಗೆ ಬರುವಂತೆ ಕೇಳಿದರು. ಆಗ ನಾನು ಒಂದು ವಾರ ಸಮಯ ಕೊಡಿ ಎಂದು ಕೇಳಿದೆ. ಅವರು ಮೆಂಬರ್‌ಶಿಪ್ ಪತ್ರವನ್ನೂ ತಂದಿದ್ದರು. ನಾನು ಟೈಮ್ ಕೇಳಿದ್ದಕ್ಕೆ ಸಿಟ್ಟು ಬಂದು ಮುಂದಿನ ಚುನಾವಣೆಯಲ್ಲಿ ನಿನ್ನ ಸೋಲಿಸಿಯೇ ವಾಪಸ್ ಹೋಗುತ್ತೇನೆ ಎಂದರು. ನಾನು ಆಯ್ತು ಎಂದೆ. ಚುನಾವಣೆ ಪ್ರಚಾರದ ಸಂದರ್ಭದಲ್ಲಿ ಕೋರೆಯವರ ಮನೆ ಕಾರ್ಯಕ್ರಮದಲ್ಲಿ ಬಂದಾಗ ನನ್ನ ಪತ್ನಿಗೆ ನಿನ್ನ ಗಂಡನನ್ನು ಈ ಬಾರಿ ಸೋಲಿಸುತ್ತೇನೆ ಎಂದು ಹೇಳಿದರು. ಅವಳು ಅಷ್ಟು ಮಾಡಿ ಪುಣ್ಯ ಕಟ್ಟಿಕೊಳ್ಳಿ ಎಂದು ಕೈ ಮುಗಿದಳು. ಅದೇ ಚುನಾವಣಾ ಸಂದರ್ಭದಲ್ಲಿ ಯಡಿಯೂರಪ್ಪ ಅವರು ಎದುರಿಗೆ ಸಿಕ್ಕಿ ಚುನಾವಣೆ ಖರ್ಚಿಗೆ ಏನಾದರೂ ಹಣ ಬೇಕಿದ್ದರೆ ಹೇಳು ಎಂದು ಕೇಳಿದ್ದರು.

ಮಂತ್ರಿ ಮಾಡಿದ ಗೌಡರು: ದೇವೇಗೌಡರು ಜೀವನದಲ್ಲಿ ಸಾಕಷ್ಟು ಹೋರಾಟ ಮಾಡಿಕೊಂಡು ಬಂದಿದ್ದಾರೆ. ಒಂದು ಸಾರಿ ನನ್ನ ಮನೆಗೆ ಬಂದಾಗ ಹೊರಟ್ಟಿ ಮುಂದಿನ ಸಾರಿ ಮಂತ್ರಿ ಅಂತ ಹೇಳಿ ಹೋದರು. 29 ಸ್ಥಾನ ಇರುವ ಪಕ್ಷ ಯಾವಾಗ ಅಧಿಕಾರಕ್ಕೆ ಬರಬೇಕು ಎಂದು ನಾವು ಅದನ್ನು ಗಂಭೀರವಾಗಿ ತೆಗೆದುಕೊಂಡಿರಲಿಲ್ಲ. ಮುಂದಿನ ಚುನಾವಣೆಯಲ್ಲಿ ಜೆಡಿಎಸ್‌ಗೆ 58 ಸ್ಥಾನ ಬಂದವು. ಎಂ.ಪಿ.ಪ್ರಕಾಶ್, ಸಿಂಧ್ಯಾ, ಪರಿಷತ್ ಸದಸ್ಯರಾದ ನನಗೆ ಮಂತ್ರಿ ಮಾಡಲು ವಿರೋಧ ಮಾಡಿದರು. ಆದರೂ ದೇವೇಗೌಡರು ಮಾತು ಕೊಟ್ಟಿದ್ದೇನೆ ಅಂತ ನನ್ನ ಮಂತ್ರಿ ಮಾಡಿದರು. ನಾನು ಗೌಡರ ಮೇಲೆ ನಂಬಿಕೆ ಇಟ್ಟುಕೊಂಡಿದ್ದೇವೆ. ಅವರೂ ನನ್ನನ್ನು ಗೌರವಯುತವಾಗಿ ನೋಡಿಕೊಂಡಿದ್ದಾರೆ.

ಆಧಾರ: ಉದಯವಾಣಿ, ದಿನಾಂಕ:11.02.2021

## 33. ಪರಿಷತ್ ಘನತೆ ಹಿಡಿಯಲು ಪ್ರಯತ್ನ

ವಿಧಾನ ಪರಿಷತ್ ಘನತೆಯನ್ನು ಎತ್ತಿ ಹಿಡಿಯಲು, ಅದರ ಪರಂಪರೆ ಮುಂದುವರಿಸಲು, ಕಾರ್ಯಕಲಾಪಗಳನ್ನು ಸುಗಮವಾಗಿ ನಡೆಸಲು ಪ್ರಯತ್ನಿಸುತ್ತೇನೆ. ಸರ್ಕಾರಕ್ಕೂ ಮುಜುಗರ ಉಂಟು ಮಾಡದೇ ವಿರೋಧ ಪಕ್ಷಕ್ಕೂ ಅವಕಾಶ ನೀಡಿ ಎಲ್ಲರನ್ನು ವಿಶ್ವಾಸದಿಂದ ತೆಗೆದುಕೊಂಡು ಹೋಗುವ ಕೆಲಸ ಮಾಡುತ್ತೇನೆ ಎಂದು ನೂತನ ಸಭಾಪತಿ ಬಸವರಾಜ್ ಹೊರಟ್ಟಿ ಹೇಳಿದ್ದಾರೆ.

ಉದಯವಾಣಿ ಕಚೇರಿಗೆ ಆಗಮಿಸಿ 'ಸಂವಾದ' ಕಾರ್ಯಕ್ರಮದಲ್ಲಿ ಮಾತನಾಡಿದ ಅವರು, ಪರಿಷತ್ತಿನ ಘನತೆ ಎತ್ತಿ ಹಿಡಿಯುವ ಕೆಲಸವಾಗಬೇಕಿದೆ. ಇದೊಂದು ಗಂಜಿ ಕೇಂದ್ರ, ವೃದ್ಧಾಶ್ರಮ ಎಂಬ ಮಾತುಗಳು ಕೇಳಿ ಬರುತ್ತಿವೆ. ಆದರೆ, ಈ ಸದನ ಬಗ್ಗೆ ಸಾಮಾನ್ಯರಿಗೂ ಗೌರವ ಮೂಡುವಂತೆ ಮಾಡುವ ಪ್ರಯತ್ನ ಮಾಡಲಾಗುವುದು. ಕಚೇರಿಯಲ್ಲಿ ಕೆಳ ಹಂತದಿಂದ ಮೇಲ್‌ಸ್ತರದವರೆಗೂ ಇರುವ ಅಧಿಕಾರಿಗಳಲ್ಲಿ ಎಲ್ಲರಿಗೂ ಗೌರವ ದೊರೆಯುವಂತೆ ಮಾಡುತ್ತೇನೆ. ಬಹಳ ವರ್ಷಗಳಿಂದ ಇಲ್ಲಿಯೇ ಠಿಕಾಣಿ ಹೂಡಿರುವವರನ್ನು ವರ್ಗಾವಣೆ ಮಾಡುವ ಕಾರ್ಯಕ್ಕೆ ಚಾಲನೆ ನೀಡುತ್ತೇವೆ ಎಂದು ಹೇಳಿದರು.

ಪ್ರತಿದಿನ ಕಾರ್ಯಸೂಚಿಯನ್ನು ಅಂದೇ ಪೂರ್ಣಗೊಳಿಸುವ ಪ್ರಯತ್ನ ಮಾಡಲಾಗುವುದು ಎಂದು ತಮ್ಮ ಆಶಯವನ್ನು ಹಂಚಿಕೊಂಡರು. ಈ ಸದನದಲ್ಲಿ ಅನೇಕ ಮಹಾನ್ ನಾಯಕರು ಆಗಿ ಹೋಗಿದ್ದಾರೆ. ವಿವಿಧ ಕ್ಷೇತ್ರಗಳಲ್ಲಿ ಸಾಧನೆ ಮಾಡಿರುವ ಗಣ್ಯರು ಕೆಲಸ ಮಾಡಿದ್ದಾರೆ. ಆದರೆ, ಈಗ ಈ ಸದನಕ್ಕೆ ವಿಧಾನಸಭೆ ಚುನಾವಣೆಯಲ್ಲಿ ಸೋತವರು ಬರುವಂತಹ ಪರಿಸ್ಥಿತಿ ಉಂಟಾಗಿದೆ. ಕಲೆ, ಸಂಗೀತ, ಸಾಹಿತ್ಯ, ಪತ್ರಿಕೋದ್ಯಮ ಕ್ಷೇತ್ರದವರು ಬರುತ್ತಿದ್ದರು. ಎಲ್ಲ ಪಕ್ಷಗಳು ಈ ಬಗ್ಗೆ ಆತ್ಮಾವಲೋಕನ ಮಾಡಿಕೊಳ್ಳಬೇಕಿದೆ. ಆಯಾ ಕ್ಷೇತ್ರದಲ್ಲಿ ಸಾಧನೆ ಮಾಡಿದವರನ್ನು ಗುರುತಿಸುವ ಕೆಲಸವಾಗಬೇಕಿದೆ. ಸದ್ಯಕ್ಕೆ ಯಾವುದೇ ಬದಲಾವಣೆ ಆಗುವುದಿಲ್ಲ ಎಂಬ ಅಸಹಾಯಕತೆ ಇದ್ದರೂ. ಭರವಸೆ ಇದೆ ಎಂದರು. ರಾಜ್ಯಪಾಲರು ಕೂಡ ಈ ಬಗ್ಗೆ ಗಂಭೀರವಾಗಿ ಪರಿಗಣಿಸಬೇಕು. ಹಿಂದೆ ಸಕ್ರಿಯ ರಾಜಕಾರಣಿ

ಎಂದು ರಾಜ್ಯಪಾಲರೊಬ್ಬರು ನಾಮನಿರ್ದೇಶನವನ್ನು ತಿರಸ್ಕರಿಸಿದ್ದರು. ಈ ರೀತಿ ತೀರ್ಮಾನ ತೆಗೆದುಕೊಳ್ಳುವಂತಾಗಬೇಕು ಎಂದು ಹೊರಟ್ಟಿ ತಿಳಿಸಿದರು.

ಆಧಾರ: ಉದಯವಾಣಿ, ದಿನಾಂಕ:11.02.2021

## 34. ನಾನು ಹೆಡ್ ಮಾಸ್ತರ್ ಕೆಲ್ಸಾ ಮಾಡ್ತೇನೆ

'ಪರಿಷತ್ ಹೆಡ್ ಮಾಸ್ತರ್ ಆಗಿ ನಾನು ಕೆಲಸ ಮಾಡುತ್ತೇನೆ. ವಿಧಾನ ಪರಿಷತ್ ನೂತನ ಸಭಾಪತಿ ಬಸವರಾಜ ಹೊರಟ್ಟಿ ಅವರು ಸಭಾಪತಿ ಆದ ಬಳಿಕ ಪ್ರಥಮ ಬಾರಿಗೆ ಹುಬ್ಬಳ್ಳಿ ನಗರಕ್ಕೆ ಭೇಟಿ ನೀಡಿದ ವೇಳೆ ಹೇಳಿದ ಮಾತು.

ಅಭಿಮಾನಿಗಳ ಅದ್ಧೂರಿ ಸ್ವಾಗತದ ನಡುವೆ ಹೆಜ್ಜೆ ಹಾಕಿದ ಅವರು ಮಾಧ್ಯಮದವರೊಂದಿಗೆ ಮಾತನಾಡಿದರು. ಸದನ ಹೇಗೆ ನಡೆಸಬೇಕು ಎನ್ನುವ ಕುರಿತು ಪ್ರತಿ ವಾರ ಎಲ್ಲ ಪಕ್ಷಗಳ ನಾಯಕರುಗಳ ಜೊತೆಗೆ ಸಭೆ ನಡೆಸುತ್ತೇನೆ. ಅಲ್ಲದೇ ಎಲ್ಲ ಸದಸ್ಯರಿಗೂ ಪತ್ರ ಬರೆದು ಶಿಸ್ತಿನ ಪಾಠ ಹೇಳಿ ಕೊಡುತ್ತೇನೆ. ಸದನವನ್ನು ಶಿಸ್ತಿನಿಂದ ನಡೆಸುತ್ತೇನೆ ಎಂದರು.

ವಿಧಾನ ಪರಿಷತ್‌ನಲ್ಲಿ ಡಿಸೆಂಬರ್. 15ರಂದು ನಡೆದ ಕಹಿ ಘಟನೆ ಮರೆತು ಇನ್ನು ಮುಂದೆ ಆ ರೀತಿ ಆಗದಂತೆ ಶಿಸ್ತಿನಿಂದ ಅಧಿವೇಶನ ನಡೆಸಲಾಗುತ್ತದೆ ಎಂದು ಹೇಳಿದರು.

**ಸುವರ್ಣಸೌಧಕ್ಕೆ ಕಚೇರಿ ಶಿಫ್ಟ್:** ಬೆಳಗಾವಿಯಲ್ಲಿ ಅಧಿವೇಶನ ನಡೆಸುವಂತೆ ಹಾಗೂ ಸರ್ಕಾರ ನಿರ್ಧರಿಸಿರುವ ರಾಜ್ಯ ಮಟ್ಟದ ಕಚೇರಿಗಳನ್ನು ಬೆಳಗಾವಿಯ ಸುವರ್ಣ ಸೌಧಕ್ಕೆ ಶಿಫ್ಟ್ ಮಾಡಲು ಸರ್ಕಾರಕ್ಕೆ ಸೂಚಿಸಲಾಗುವುದು. ವಿಧಾನ ಪರಿಷತ್ ಚುನಾವಣೆಯಲ್ಲಿ ಸೋತವರ ಆಶ್ರಯತಾಣವಾಗಬಾರದು. ಇಂದಿನ ರಾಜಕೀಯದಲ್ಲಿ ಅದು ಆಗಿದೆ ಎಂದರು.

ಸಭಾಪತಿ ಸ್ಥಾನಕ್ಕೆ ಯಾರಿಗೂ ಸ್ವತಂತ್ರವಾಗಿ ಆಯ್ಕೆಯಾಗಲು ಅವಕಾಶವಿರಲಿಲ್ಲ. ಬಿಜೆಪಿ ನಮಗೆ ಒಳ್ಳೆಯ ಉದ್ದೇಶದಿಂದ ಬೆಂಬಲ ನೀಡಿದೆ ಎಂದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:13.02.2021

## 35. ಮಾದರಿ ವಿಧಾನ ಪರಿಷತ್ತನ್ನಾಗಿ ಮಾಡಲು ಶ್ರಮಿಸುವೆ: ಹೊರಟ್ಟಿ

ಕರ್ನಾಟಕ ವಿಧಾನ ಪರಿಷತ್ ಘನತೆ, ಗೌರವವನ್ನು ಎತ್ತಿ ಹಿಡಿದು ದೇಶದಲ್ಲೇ ಮಾದರಿ ವಿಧಾನ ಪರಿಷತ್ತನ್ನಾಗಿ ಮಾಡಲು ಹಗಲಿರುಳು ಶ್ರಮಿಸುತ್ತೇನೆ ಎಂದು ವಿಧಾನ ಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ ತಿಳಿಸಿದರು. ನಗರದ ಸಿದ್ದಗಂಗಾ ಮಠಕ್ಕೆ ಭೇಟಿ ನೀಡಿ ಲಿಂಗೈಕ್ಯ ಹಿರಿಯ ಶ್ರೀಗಳಾದ ಡಾ.ಶ್ರೀ ಶಿವಕುಮಾರ ಸ್ವಾಮೀಜಿಯವರ ಗದ್ದುಗೆ ದರ್ಶನ ಪಡೆದು, ಮಠಾಧ್ಯಕ್ಷರಾದ ಶ್ರೀ ಸಿದ್ದಲಿಂಗ ಸ್ವಾಮೀಜಿಯವರ ಆಶೀರ್ವಾದ ಪಡೆದ ನಂತರ ಸುದ್ದಿಗಾರರೊಂದಿಗೆ ಮಾತನಾಡಿದ ಅವರು, 113 ವರ್ಷಗಳ ಇತಿಹಾಸ ಹೊಂದಿರುವ ಕರ್ನಾಟಕ ವಿಧಾನ ಪರಿಷತ್ ಇಡೀ ದೇಶಕ್ಕೆ ಮಾದರಿಯಾಗಬೇಕಾಗಿದೆ. ಆ ನಿಟ್ಟಿನಲ್ಲಿ ತಾವು ಕಾರ್ಯನಿರ್ವಹಿಸುತ್ತೇನೆ ಎಂದು ಹೇಳಿದರು. ಮಾಜಿ ಶಾಸಕ ಕೋನರೆಡ್ಡಿ, ವಸಂತ ಹೊರಟ್ಟಿ, ಆರ್.ಶಿವಕುಮಾರ್, ಜಿಲ್ಲಾ ಜೆಡಿಎಸ್ ಅಧ್ಯಕ್ಷ ಆರ್.ಸಿ.ಆಂಜಿನಪ್ಪ ಉಪಸ್ಥಿತರಿದ್ದರು.

ಆಧಾರ: ವಿಶ್ವವಾಣಿ, ದಿನಾಂಕ:13.02.2021

## 36. ಮುಂದಿನ ಅಧಿವೇಶನ ಬೆಳಗಾವೀಲಿ ನಡೆಸಲು ನಿರ್ದೇಶನ: ಹೊರಟ್ಟಿ

ಹಿಂದೆಯೇ ಸರ್ಕಾರ ನಿರ್ಧರಿಸಿರುವ ರಾಜ್ಯಮಟ್ಟದ ಕಚೇರಿಗಳನ್ನು ಬೆಳಗಾವಿ ಸುವರ್ಣ ಸೌಧಕ್ಕೆ ಸ್ಥಳಾಂತರ ವಿಷಯ ಸದನದಲ್ಲಿ ಚರ್ಚೆಗೆ ಬಂದಲ್ಲಿ ಖಂಡಿತವಾಗಿ ನಿರ್ದೇಶನ ನೀಡುತ್ತೇನೆ ಎಂದು ವಿಧಾನ ಪರಿಷತ್ ಸಭಾಪತಿ ಬಸವರಾಜ್ ಹೊರಟ್ಟಿ ತಿಳಿಸಿದ್ದಾರೆ.

ಸುದ್ದಿಗಾರರ ಜೊತೆ ಮಾತನಾಡಿದ ಅವರು, ಮುಂದಿನ ಅಧಿವೇಶನವನ್ನು ಬೆಳಗಾವಿಯಲ್ಲಿ ನಡೆಸುವಂತೆ ನಿರ್ದೇಶನ ನೀಡಿದ್ದು, ಬಜೆಟ್ ಅಧಿವೇಶನ ಮುನ್ನ ಬೆಳಗಾವಿ ಸುವರ್ಣಸೌಧಕ್ಕೆ ಭೇಟಿ ನೀಡಿ ಪರಿಶೀಲಿಸಿ ವರದಿ ಸಲ್ಲಿಸುತ್ತೇನೆ ಎಂದು ತಿಳಿಸಿದರು.

ಹಿಂದಿನ ಕಹಿ ಘಟನೆಗಳು ಮರುಕಳಿಸದಂತೆ, ಕಲಾಪವನ್ನು ಸುಗಮವಾಗಿ ನಡೆಸುವುದು, ಪ್ರಶ್ನೋತ್ತರ ಅವಧಿ ಹಾಗೂ ಸದನದ ಅಜೆಂಡಾಗಳನ್ನು ಪೂರ್ಣಗೊಳಿಸುವುದು ದೊಡ್ಡ ಸವಾಲಿನಿಂದ ಕೂಡಿದೆ ಎಂದರು.

ಆಧಾರ: ವಿಶ್ವವಾಣಿ, ದಿನಾಂಕ:13.02.2021

## 37. ವಿಧಾನಸಭೆ ಕಾರ್ಯಾಗಾರ

ವಿಧಾನ ಸಭಾ ಹಾಗೂ ವಿಧಾನ ಪರಿಷತ್‌ನ ಅಧಿಕಾರಿಗಳಿಗೆ ಸಚಿವಾಲಯದಿಂದ ಆಯೋಜಿಸಿದ್ದ **'ಕಚೇರಿಯಲ್ಲಿ ಅಧಿಕಾರಿಗಳು ಹೆಚ್ಚು ಕ್ರಿಯಾಶೀಲರಾಗಿ ಬದ್ಧತೆಯಿಂದ ಕಾರ್ಯನಿರ್ವಹಿಸುವುದು ಹಾಗೂ ಸಚಿವಾಲಯದಲ್ಲಿ ತಂತ್ರಜ್ಞಾನದ ಬಳಕೆ'** ಕುರಿತಾದ ಕಾರ್ಯಾಗಾರವನ್ನು ವಿಧಾನಸಭೆ ಸಭಾಧ್ಯಕ್ಷ ವಿಶ್ವೇಶ್ವರ ಹೆಗಡೆ, ಕಾಗೇರಿ ಉದ್ಘಾಟಿಸಿದರು. ಈ ವೇಳೆ ವಿಧಾನಸಭೆ ಕಾರ್ಯದರ್ಶಿ ಎಂ.ಕೆ.ವಿಶಾಲಾಕ್ಷಿ, ವಿಧಾನ ಪರಿಷತ್ ಕಾರ್ಯದರ್ಶಿ ಕೆ.ಆರ್.ಮಹಾಲಕ್ಷ್ಮಿ ಉಪಸ್ಥಿತರಿದ್ದರು.

ಆಧಾರ: ವಿಶ್ವವಾಣಿ, ದಿನಾಂಕ:16.02.2021

**ದಿನಾಂಕ: 15.02.2021ರಂದು ಸನ್ಮಾನ್ಯ ಸಭಾಧ್ಯಕ್ಷರು, ವಿಧಾನಸಭೆಯ ಅಧಿಕಾರಿಗಳಿಗೆ ವಿಕಾಸಸೌಧದಲ್ಲಿ ಆಯೋಜಿಸಲಾಗಿದ್ದ ತರಬೇತಿ ಶಿಬಿರದ ಕಾರ್ಯಕ್ರಮವನ್ನು ಉದ್ಘಾಟಿಸಿದ ಸಂದರ್ಭ**





## 38. ಮೌಲ್ಯಾಧಾರಿತ ಕಲಾಪಕ್ಕಾಗಿ ಆತ್ಮಾವಲೋಕನ ಸಭೆ

ವಿಧಾನಮಂಡಲ ಕಲಾಪದಲ್ಲಿ ಸಂಸದೀಯ ಮೌಲ್ಯಗಳ ಕುಸಿತ ತಡೆಯುವ ಉದ್ದೇಶದಿಂದ ಕಾಮನ್‌ವೆಲ್ತ್ ಸಂಸದೀಯ ಸಂಘದ ಸಹಭಾಗಿತ್ವದಲ್ಲಿ ಇದೇ 24ರಂದು ಆತ್ಮಾವಲೋಕನ ಸಭೆ ಆಯೋಜಿಸಲಾಗಿದೆ ಎಂದು ವಿಧಾನ ಸಭೆಯ ಸಭಾಧ್ಯಕ್ಷರು ತಿಳಿಸಿದರು.

ಪತ್ರಿಕಾಗೋಷ್ಠಿಯಲ್ಲಿ ಈ ಮಾಹಿತಿ ನೀಡಿದ ಅವರು, ವಿಧಾನಮಂಡಲದ ಕಲಾಪದಲ್ಲಿ ಅರ್ಥಪೂರ್ಣ ಚರ್ಚೆ ನಡೆಯಬೇಕು ಎಂಬುದು ಸಭೆಯ ಮುಖ್ಯ ಉದ್ದೇಶ. ವಿಧಾನ ಸಭೆಯ ಮಾಜಿ ಅಧ್ಯಕ್ಷರುಗಳು, 'ವಿಧಾನ ಪರಿಷತ್‌ನ ಮಾಜಿ ಸಭಾಪತಿಗಳು, ಪತ್ರಕರ್ತರು, ಬರಹಗಾರರು, ಚಿಂತಕರು ಸೇರಿದಂತೆ ಹಲವು ಗಣ್ಯರಿಗೆ ಆಹ್ವಾನ ನೀಡಲಾಗುವುದು' ಎಂದರು.

ಇತ್ತೀಚಿನ ದಿನಗಳಲ್ಲಿ ವಿಧಾನಮಂಡಲ ಕಲಾಪದಲ್ಲಿ ಸಂಸದೀಯ ಮೌಲ್ಯಗಳ ಕುಸಿತ ಕಂಡುಬರುತ್ತಿದೆ. ಗಲಾಟೆ, ಗದ್ದಲ, ಧರಣಿ ಮತ್ತಿತರ ಕಾರಣಗಳಿಗಾಗಿ ಅಧಿವೇಶನ ಮೊಟಕುಗೊಳಿಸುತ್ತಿರುವುದು ಹೆಚ್ಚುತ್ತಿದೆ. ಮುಂದೆ ಅಂತಹ ಘಟನೆಗಳು ಮರುಕಳಿಸದಂತೆ ತಡೆಯುವ ದೃಷ್ಟಿಯಿಂದ ಆತ್ಮಾವಲೋಕನ ಸಭೆ ಆಯೋಜಿಸಲಾಗಿದೆ. ಈ ಸಭೆಯಲ್ಲಿ ವ್ಯಕ್ತವಾಗುವ ಅಭಿಪ್ರಾಯಗಳನ್ನು ಅಳವಡಿಸಿಕೊಂಡು ಮುಂದಿನ ದಿನಗಳಲ್ಲಿ ಕಲಾಪದಲ್ಲಿ ಸುಧಾರಣೆ ತರಲಾಗುವುದು ಎಂದು ತಿಳಿಸಿದರು.

'ವಿಧಾನ ಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ ಮತ್ತು ನಾನು ಚರ್ಚಿಸಿ ಈ ಸಭೆ ಆಯೋಜಿಸಿದ್ದೇವೆ ಮಾಜಿ ಸ್ಪೀಕರ್‌ಗಳಾದ ಕೆ.ಆರ್.ಪೇಟೆ ಕೃಷ್ಣ ಕಾಗೋಡು ತಿಮ್ಮಪ್ಪ, ಮಾಜಿ ಸಭಾಪತಿಗಳಾದ ಡಿ.ಎಚ್.ಶಂಕರಮೂರ್ತಿ, ಬಿ.ಎಲ್.ಶಂಕರ್, ವಿ.ಆರ್, ಸುದರ್ಶನ್, ಹೈಕೋರ್ಟ್ ನ್ಯಾಯಮೂರ್ತಿ ಫಣೀಂದ್ರ, ನಿವೃತ್ತ ನ್ಯಾಯಮೂರ್ತಿಗಳಾದ ಎ.ಜೆ. ಸದಾಶಿವ, ಎನ್. ಕುಮಾರ್, ಹಿರಿಯ ರಾಜಕಾರಣಗಳಾದ ಎಂ.ಸಿ. ನಾಣಯ್ಯ, ಪಿ.ಜಿ.ಆರ್. ಸಿಂಧ್ಯ, ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ, ವಿರೋಧ ಪಕ್ಷದ ನಾಯಕ ಸಿದ್ದರಾಮಯ್ಯ, ಜೆಡಿಎಸ್ ಶಾಸಕಾಂಗ ಪಕ್ಷದ ನಾಯಕ ಹೆಚ್.ಡಿ.ಕುಮಾರಸ್ವಾಮಿ ಸೇರಿದಂತೆ ಹಲವರು ಸಭೆಯಲ್ಲಿ ಪಾಲ್ಗೊಳ್ಳಲಿದ್ದಾರೆ' ಎಂದು ವಿಧಾನಸಭೆಯ ಸಭಾಧ್ಯಕ್ಷರು ತಿಳಿಸಿದರು.

ಆಧಾರ: ಪ್ರಜಾವಾಣಿ, ದಿನಾಂಕ:18.02.2021

ಸಂಸದೀಯ ಮೌಲ್ಯಗಳ ಕುಸಿತವನ್ನು ತಡೆಗಟ್ಟುವ ನಿಟ್ಟಿನಲ್ಲಿ ಒಂದು ಆತ್ಮಾವಲೋಕನ ಕಾರ್ಯಾಗಾರದಲ್ಲಿ ಮಾನ್ಯ ವಿಧಾನ ಪರಿಷತ್ತಿನ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿಯವರು ಸಭೆಯನ್ನುದ್ದೇಶಿಸಿ ಮಾತನಾಡುತ್ತಿರುವ ಸಂದರ್ಭ




ಸಂಸದೀಯ ಮೌಲ್ಯಗಳ ಕುಸಿತವನ್ನು ತಡೆಗಟ್ಟುವ ನಿಟ್ಟಿನಲ್ಲಿ ಒಂದು ಆತ್ಮಾವಲೋಕನ, ಕಾರ್ಯಾಗಾರದಲ್ಲಿ ವಿಧಾನ ಪರಿಷತ್ತಿನ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿ ಅವರೊಂದಿಗೆ ಮುಖ್ಯ ಮಂತ್ರಿಗಳಾದ ಶ್ರೀ ಬಿ.ಎಸ್ ಯಡಿಯೂರಪ್ಪ ರವರು, ವಿರೋಧ ಪಕ್ಷದ ನಾಯಕರಾದ ಶ್ರೀ ಸಿದ್ದರಾಮಯ್ಯ ನವರು ಹಾಗೂ ವಿಧಾನ ಪರಿಷತ್ತಿನ ವಿರೋಧ ಪಕ್ಷದ ನಾಯಕರಾದ ಶ್ರೀ ಎಸ್.ಆರ್. ಪಾಟೀಲ್ ರವರು ವೇದಿಕೆ ಹಂಚಿ ಕೊಂಡಿರುವುದು.



**ದಿನಾಂಕ: 24.02.2021ರಂದು ವಿಧಾನಸೌಧದ ಬ್ಯಾಂಕ್ವೆಟ್‌ಹಾಲ್‌ನಲಿ ಆಯೋಜಿಸಲಾಗಿದ್ದ "ಸಂಸದೀಯ ಮೌಲ್ಯಗಳ ಕುಸಿತವನ್ನು ತಡೆಗಟ್ಟುವ ನಿಟ್ಟಿನಲ್ಲಿ ಒಂದು ಆತ್ಮಾವಲೋಕನ" ಕಾರ್ಯಕ್ರಮದಲ್ಲಿ ಸನ್ಮಾನ್ಯ ಸಭಾಧ್ಯಕ್ಷರು ಸಭೆಯನ್ನುದ್ದೇಶಿಸಿ ಪ್ರಾಸ್ತಾವಿಕ ಭಾಷಣ ಮಾಡುತ್ತಿರುವ ಸಂದರ್ಭ:**








## 39. ಖಾಸಗಿ ಶಾಲೆಗಳಿಗೆ ನೆರವು ನೀಡಿ

ಖಾಸಗಿ ಶಾಲೆಗಳ ಶುಲ್ಕ ನಿಗದಿ ಸಂಬಂಧ ಈಗಾಗಲೇ ಸರ್ಕಾರ ಮಾಡಿರುವ ಆದೇಶವನ್ನು ಪರಿಷ್ಕರಿಸುವ ಜೊತೆಗೆ ಆರ್ಥಿಕ ಸಂಕಷ್ಟದಲ್ಲಿರುವ ಖಾಸಗಿ ಶಿಕ್ಷಣ ಸಂಸ್ಥೆಗಳಿಗೂ ಸೂಕ್ತ ಅನುದಾನ ಒದಗಿಸಬೇಕೆಂದು ವಿಧಾನ ಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ ರಾಜ್ಯ ಸರ್ಕಾರಕ್ಕೆ ಮನವಿ ಮಾಡಿದ್ದಾರೆ.

ಈ ಸಂಬಂಧ ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ ಅವರಿಗೆ ಪತ್ರ ಬರೆದಿರುವ ಅವರು, ಖಾಸಗಿ ಶಾಲಾ ಶಿಕ್ಷಣ ಸಂಸ್ಥೆಗಳೊಂದಿಗೆ ಸಭೆ ನಡೆಸಿ ಕೈಗೊಂಡ ನಿರ್ಣಯದಂತೆ ಶುಲ್ಕ ನಿಗದಿಪಡಿಸಿ ಹೊರಡಿಸಿರುವ ಆದೇಶವನ್ನು ಪುನರ್ ಪರಿಶೀಲಿಸಿ ಪರಿಷ್ಕರಿಸಿ ಖಾಸಗಿ ಶಾಲಾ ಶಿಕ್ಷಕರು, ಇತರೆ ಸಿಬ್ಬಂದಿ ಹಾಗೂ ಆಡಳಿತ ಮಂಡಳಿಗಳು ಅನುಭವಿಸುತ್ತಿರುವ ಆರ್ಥಿಕ ಸಂಕಷ್ಟವನ್ನು ಪರಿಗಣಿಸಿ ನೇರವಾಗಿ ಪ್ರತ್ಯೇಕ ಅನುದಾನ ಬಿಡುಗಡೆ ಮಾಡುವುದು ಅತ್ಯಂತ ಅವಶ್ಯಕವಾಗಿದೆ ಎಂದು ಹೇಳಿದ್ದಾರೆ.

ಆರ್ಥಿಕ ಸಂಕಷ್ಟಕ್ಕೆ ಪರಿಹಾರವಾಗಿ ಅನುದಾನ ನೀಡಬೇಕೆಂದು ಸೇರಿದಂತೆ ವಿವಿಧ ಬೇಡಿಕೆಗಳನ್ನು ಮುಂದಿಟ್ಟುಕೊಂಡು ಫೆಬ್ರವರಿ 23ರಂದು ಖಾಸಗಿ ಶಾಲಾ ಆಡಳಿತ ಮಂಡಳಿಗಳ ಸಂಘಟನೆಗಳು ಮತ್ತು ಶಿಕ್ಷಕರು ರಾಜ್ಯಾದ್ಯಂತ ಪ್ರತಿಭಟನೆ ನಡೆಸಲು ನಿರ್ಧಾರ ಮಾಡಿದ್ದಾರೆ. ಪರಿಸ್ಥಿತಿ ಕೈಮೀರುವ ಮುನ್ನಾ ರಾಜ್ಯದ ಉಪ ಮುಖ್ಯಮಂತ್ರಿಗಳು ಹಾಗೂ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು ಖಾಸಗಿ ಆಡಳಿತ ಮಂಡಳಿಗಳ ಪ್ರತಿನಿಧಿಗಳೊಂದಿಗೆ ತುರ್ತಾಗಿ ಸಭೆ ನಡೆಸಿ ಅವರ ಸಮಸ್ಯೆ, ಬೇಡಿಕೆಗಳ ಪರಿಹಾರಕ್ಕೆ ಮಾರ್ಗೋಪಾಯಗಳನ್ನು ಕಂಡುಕೊಳ್ಳುವಂತೆ ಅವರು ಪತ್ರದಲ್ಲಿ ಕೋರಿದ್ದಾರೆ.

ಆಧಾರ: ಕನ್ನಡಪ್ರಭ, ದಿನಾಂಕ:20.02.2021

## 40. ವಿಧಾನ ಪರಿಷತ್ತಿನ ಸಭಾಪತಿ

ಬೆಂಗಳೂರಿನ ಸಂಯುಕ್ತ ಕರ್ನಾಟಕ ಕೇಂದ್ರ ಕಚೇರಿಯಲ್ಲಿ ಹಮ್ಮಿಕೊಂಡಿದ್ದ 'ಮಾಧ್ಯಮ ಸಂವಾದ' ಕಾರ್ಯಕ್ರಮದಲ್ಲಿ ತಿಂಗಳ ಅತಿಥಿಯಾಗಿದ್ದ ಸಭಾಪತಿ ಬಸವರಾಜ ಹೊರಟ್ಟಿ ಅವರನ್ನು ಲೋಕ ಶಿಕ್ಷಣ ಟ್ರಸ್ಟ್ ಅಧ್ಯಕ್ಷರಾದ ಯು.ಜಿ.ವೆಂಕಟೇಶ್ ಸನ್ಮಾನಿಸಿದರು. ಟ್ರಸ್ಟ್

ಕಾರ್ಯದರ್ಶಿ ಹೆಚ್.ಎಸ್.ನಾರಾಯಣಮೂರ್ತಿ, ಸಮೂಹ ಸಂಪಾದಕರಾದ ಹುಣಸವಾಡಿ ರಾಜನ್, ಕಾರ್ಯನಿರ್ವಾಹಕ ಅಧಿಕಾರಿ ಕರ್ನಲ್ ಮಹೇಶ್ವರ್ ಹೊಸಮನಿ ಹಾಗೂ ವಸಂತ ಹೊರಟ್ಟಿ ಉಪಸ್ಥಿತರಿದ್ದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:21.02.2021

## 41. 20 ದಿನ ಬಜೆಟ್ ಅಧಿವೇಶನ

ರಾಜ್ಯ ವಿಧಾನಮಂಡಲದ ಬಜೆಟ್ ಅಧಿವೇಶನ ಮಾರ್ಚ್ 31ರವರೆಗೂ ನಡೆಯಲಿದೆ. ಮಾರ್ಚ್ 4ರಂದು ಆರಂಭವಾಗಲಿರುವ ಅಧಿವೇಶನ 31ರವರೆಗೂ ನಡೆಯಲಿದ್ದು, 8ರಂದು ಬಜೆಟ್ ಮಂಡನೆಯಾಗಲಿದೆ. ಅಧಿವೇಶನ ಕುರಿತ ಕಾರ್ಯಕಲಾಪಗಳ ಪಟ್ಟಿ ಬಿಡುಗಡೆಯಾಗಿದ್ದು ಒಟ್ಟು 20 ದಿನ ಕಲಾಪ ನಡೆಯಲಿದೆ.

ಆಧಾರ: ಉದಯವಾಣಿ, ದಿನಾಂಕ:23.02.2021

## 42. ಮೇಲ್ಮನೆಯಲ್ಲಿ ಮೊಬೈಲ್ ನಿಷೇಧ: ಹೊರಟ್ಟಿ

ವಿಧಾನಪರಿಷತ್ತಿನ ಒಳಗೆ ಮೊಬೈಲ್ ಫೋನುಗಳನ್ನು ತರುವುದಕ್ಕೆ ನಿಷೇಧ ವಿಧಿಸುವುದು ಸೇರಿ ಕೆಲವು ಕಟ್ಟುನಿಟ್ಟಿನ ನಿಯಮಾವಳಿಗಳನ್ನು ಜಾರಿಗೆ ತರಲಾಗುವುದು ಎಂದು ಸಭಾಪತಿ ಬಸವರಾಜ ಹೊರಟ್ಟಿ ತಿಳಿಸಿದರು.

'ಸುದ್ದಿವಾಹಿನಿಗಳ ಕ್ಯಾಮೆರಾಗಳ ಪ್ರವೇಶಕ್ಕೆ ನಿರ್ಬಂಧ ಇರುವುದಿಲ್ಲ. ಆದರೆ, ಅವರು ವಿವೇಕ ಮತ್ತು ವಿವೇಚನೆಯಿಂದ ಕಾರ್ಯನಿರ್ವಹಿಸಬೇಕು' ಎಂದು ಅವರು ಸುದ್ದಿಗೋಷ್ಠಿಯಲ್ಲಿ ಮನವಿ ಮಾಡಿದರು. ಕೆಲವು ಸಣ್ಣ ಪುಟ್ಟ ಘಟನೆಗಳನ್ನೇ ದೊಡ್ಡದಾಗಿ ಇಡೀ ದಿನ ಟಿ.ವಿ. ಗಳಲ್ಲಿ ತೋರಿಸಲಾಗುತ್ತದೆ. ಸದನದಲ್ಲಿ ಸಾಕಷ್ಟು ಜ್ವಲಂತ ಸಮಸ್ಯೆಗಳ ಬಗ್ಗೆ ಗಂಭೀರ ಚರ್ಚೆ ನಡೆಸಿದರೂ ಅದರ ಬಗ್ಗೆ ಯಾವುದೇ ಮಾಹಿತಿ ನೀಡುವುದಿಲ್ಲ. ಸಣ್ಣಪುಟ್ಟ ತಪ್ಪುಗಳು ಆಗುತ್ತವೆ. ಆ ಬಗ್ಗೆ ಎಚ್ಚರಿಕೆ ನೀಡುವುದು ಮಾಧ್ಯಮಗಳ ಕರ್ತವ್ಯ ಎಂಬುದರಲ್ಲಿ ಎರಡು ಮಾತಿಲ್ಲ. ಆದರೆ, ಇಡೀ ಸದನವೇ ಸರಿಯಾಗಿ ನಡೆಯುತ್ತಿಲ್ಲ ಎಂಬಂತೆ ಬಿಂಬಿಸುವುದು ಸರಿಯಲ್ಲ' ಎಂದು ಹೊರಟ್ಟಿ ಹೇಳಿದರು.

ಹೀಗೆಂದ ಮಾತ್ರಕ್ಕೆ ಮಾಧ್ಯಮವನ್ನು ದೂರ ಇಡುವುದೂ ಇಲ್ಲ. ನಿಷೇಧ ವಿಧಿಸುವುದಿಲ್ಲ. ಹೆಚ್ಚು ಸ್ವಯಂ ನಿಯಂತ್ರಣ ಮತ್ತು ವಿವೇಕದಿಂದ ಕಾರ್ಯನಿರ್ವಹಿಸಬೇಕು ಎಂಬುದಷ್ಟೇ ನಮ್ಮ ಕಾಳಜಿ. ಕೆಲವು ಸದಸ್ಯರಿಗೆ ಮಧ್ಯಾಹ್ನ ಊಟ ಮಾಡಿ ಬಂದ ನಂತರ ವಯೋ ಸಹಜವಾಗಿ, ನಿದ್ದೆ ಅಥವಾ ತೂಕಡಿಕೆ ಬರುತ್ತದೆ. ಅದನ್ನು ಲಘುವಾಗಿ ತೋರಿಸಲಾಗುತ್ತದೆ ಎಂದು ಬೇಸರಿಸಿದರು.

ವಿಧಾನಪರಿಷತ್ ಅಧಿವೇಶನವು ಮಾರ್ಚ್ 4 ರಿಂದಲೇ ನಡೆಯುತ್ತದೆ. ಆದರೆ 'ಒಂದು ದೇಶ ಒಂದು ಚುನಾವಣೆ' ವಿಚಾರವಾಗಿ ಚರ್ಚೆ ನಡೆಸುವ ಸಂಬಂಧ ಸರ್ಕಾರದಿಂದ ಯಾವುದೇ ಮಾಹಿತಿ ಬಂದಿಲ್ಲ. ನಾವು ಪ್ರಶ್ನೋತ್ತರ ಮತ್ತು ಇತರ ಕಲಾಪಗಳನ್ನು ನಡೆಸಲು ತೀರ್ಮಾನಿಸಿದ್ದೇವೆ ಎಂದು ಹೊರಟ್ಟಿ ಹೇಳಿದರು.

ಆಧಾರ: ಪ್ರಜಾವಾಣಿ, ದಿನಾಂಕ:24.02.2021

## 43. ಒಂದು ದೇಶ–ಒಂದು ಚುನಾವಣೆ ಪರಿಷತ್‌ನಲ್ಲಿ ಚರ್ಚೆ ಇಲ್ಲ

ವಿಧಾನ ಪರಿಷತ್‌ನಲ್ಲಿ ಮಾರ್ಚ್ 4 ರಿಂದ ಆರಂಭವಾಗುವ ಅಧಿವೇಶನದಲ್ಲಿ ಒಂದು ದೇಶ–ಒಂದು ಚುನಾವಣೆ ವಿಷಯದ ಕುರಿತಂತೆ ಚರ್ಚಿಸುವ ಯಾವುದೇ ಪ್ರಸ್ತಾಪ ಸರ್ಕಾರದಿಂದ ಬಂದಿಲ್ಲ. ಎಂದಿನಂತೆ ಪ್ರಶ್ನೋತ್ತರ ಹಾಗೂ ಮತ್ತಿತರ ಕಲಾಪಗಳು ಅಧಿವೇಶನದಲ್ಲಿ ನಡೆಯಲಿವೆ ಎಂದು ಕರ್ನಾಟಕ ವಿಧಾನ ಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ ತಿಳಿಸಿದ್ದಾರೆ.

ವಿಧಾನ ಸೌಧದಲ್ಲಿ ಸುದ್ದಿಗೋಷ್ಠಿಯಲ್ಲಿ ಮಾತನಾಡಿದ ಅವರು, ಪರಿಷತ್‌ನಲ್ಲಿ ಇನ್ನು ಮುಂದೆ ಯಾವುದೇ ಸದಸ್ಯರು ಮೊಬೈಲ್ ಫೋನ್‌ಗಳನ್ನು ತರಲು ಅವಕಾಶ ನೀಡುವುದಿಲ್ಲ. ಸದನದ ಸದಸ್ಯರು, ಅಧಿಕಾರಿಗಳು, ಸಿಬ್ಬಂದಿಗಳು ಮೊಬೈಲ್ ತರುವುದನ್ನು ನಿಷೇಧಿಸಲಾಗಿದೆ. ಮಾಧ್ಯಮಗಳು ಸ್ವಯಂ ನಿಯಂತ್ರಣ ಹೇರಿಕೊಂಡು ಕೆಲಸ ಮಾಡುವ ಅಗತ್ಯವಿದೆ. ರಾಜ್ಯದ ಜನತೆಯ ಹಿತದೃಷ್ಟಿಯಿಂದ ಪರಿಷತ್‌ನಲ್ಲಿ ಮಾಧ್ಯಮಗಳ ಪ್ರವೇಶವನ್ನು ನಿರ್ಬಂಧಿಸುವುದಿಲ್ಲ. ಮಾಧ್ಯಮಗಳು ಕೂಡ ಜವಾಬ್ದಾರಿಯಿಂದ ವರ್ತಿಸಬೇಕೆಂಬುದಷ್ಟೇ ನನ್ನ ಕಳಕಳಿ ಎಂದು ಹೇಳಿದರು.

ವಿಧಾನ ಪರಿಷತ್ ಕುಸಿಯುತ್ತಿರುವ ಘನತೆಯನ್ನು ಮರು ಸ್ಥಾಪಿಸುವ ದೃಷ್ಟಿಯಿಂದ ಈಗಾಗಲೇ ಎಲ್ಲ ಸದಸ್ಯರಿಗೆ ವೈಯಕ್ತಿಕವಾಗಿ ಪತ್ರ ಬರೆದು ಕೆಲವು ಅಭಿಪ್ರಾಯಗಳನ್ನು ಹಂಚಿಕೊಂಡಿದ್ದೇನೆ. ಅದಕ್ಕೆ ಪ್ರತಿಯಾಗಿ ಅವರಿಂದಲೂ ಸಲಹೆ ಕೋರಿದ್ದೇನೆ. ಒಟ್ಟಾರೆ ಪರಿಷತ್ ಕಲಾಪಕ್ಕೆ ನೈಜ ಅರ್ಥ ಬರುವಂತೆ ನಡೆದುಕೊಳ್ಳಬೇಕೆಂಬುದಷ್ಟೇ ನನ್ನ ಉದ್ದೇಶ ಎಂದು ಹೇಳಿದರು.

ಯಾವುದೇ ಜಾತಿ ಜನಾಂಗಕ್ಕೆ ಮೀಸಲಾತಿ ನೀಡುವುದಾದರೆ ಆರ್ಥಿಕ ಸ್ಥಿತಿ ಗತಿಯೇ ಮಾನದಂಡವಾಗಬೇಕು ಅಂದಾಗ ಮಾತ್ರ ಮೀಸಲಾತಿಯ ಉದ್ದೇಶ ಈಡೇರುತ್ತದೆ ಎಂದು ಅಭಿಪ್ರಾಯಪಟ್ಟಿದ್ದಾರೆ.

ರಾಜ್ಯದಲ್ಲಿ ಹಲವಾರು ಮಠಾಧೀಶರು, ರಾಜಕಾರಣಿಗಳು, ವಿವಿಧ ಸಮಾಜಗಳ ಮುಖಂಡರು ಮೀಸಲಾತಿಗಾಗಿ ಹೋರಾಟ ನಡೆಸಿದ್ದಾರೆ. ಮಠಾಧೀಶರ ಹೋರಾಟ ಕುರಿತಂತೆ ಮಾತನಾಡುವುದಿಲ್ಲ. ಸರ್ಕಾರ ಆಯಾ ಸಮುದಾಯದ ಆರ್ಥಿಕಮಟ್ಟದ ಆಧಾರದ ಮೇಲೆ ಮೀಸಲಾತಿ ನೀಡಬೇಕು ಎಂದು ಸಲಹೆ ಮಾಡಿದರು.

ರಾಜ್ಯದಲ್ಲಿ ಸರಿಸುಮಾರು 1.36 ಕೋಟಿ ಜನರು ಬಡತನ ರೇಖೆಗಿಂತ ಕೆಳಗಿರುವುದಾಗಿ ಬಿಪಿಎಲ್ ರೇಶನ್ ಕಾರ್ಡ್ ಪಡೆದಿದ್ದಾರೆ. ಆದರೆ ಇವರಲ್ಲಿ ನಿಜವಾದ ಬಡವರು ಎಷ್ಟೆಂಬುದು ಯಾರಿಗೂ ಗೊತ್ತಿಲ್ಲ. ಸತ್ಯಾಸತ್ಯತೆಯ ಪರಾಮರ್ಶೆ ನಡೆಸಿ ನೈಜ ಬಡವರಿಗೆ ಸೌಲಭ್ಯಗಳು ಸಿಗುವಂತಾಗಬೇಕು ಎಂದರು.

ಜೆಡಿಎಸ್‌ನ ಪ್ರಾಥಮಿಕ ಸದಸ್ಯತ್ವಕ್ಕೆ ರಾಜೀನಾಮೆ ನೀಡಿರುವುದಾಗಿ ಪ್ರಕಟಿಸಿದ ಸಭಾಪತಿ ಹೊರಟ್ಟಿ, ಸಂವಿಧಾನಿಕ ಹುದ್ದೆಯಲ್ಲಿ ಇರುವುದರಿಂದ ಒಂದು ಪಕ್ಷದ ಸದಸ್ಯತ್ವ ಹೊಂದುವುದು ನೈತಿಕವಾಗಿ ಸರಿಯಲ್ಲ. ಹಿಂದೆ ಡಿ.ಎಚ್.ಶಂಕರಮೂರ್ತಿ ಅವರು ಬಿಜೆಪಿಗೆ ರಾಜೀನಾಮೆ ನೀಡಿರಲಿಲ್ಲ. ಆದರೆ ಸ್ಪೀಕರ್ ಆಗಿದ್ದಾಗ ಕೆ.ಆರ್.ರಮೇಶ್ ಕುಮಾರ್ ಕಾಂಗ್ರೆಸ್ ಪಕ್ಷದ ಸದಸ್ಯತ್ವಕ್ಕೆ ರಾಜೀನಾಮೆ ನೀಡಿದರು. ಹೀಗಾಗಿ ನಾನೂ ಕೂಡ ಸಭಾಪತಿ ಹುದ್ದೆಯಲ್ಲಿ ಇರುವ ತನಕ ಪಕ್ಷದ ಸದಸ್ಯತ್ವಕ್ಕೆ ರಾಜೀನಾಮೆ ನೀಡಲು ನಿರ್ಧರಿಸಿದ್ದೇನೆ ಎಂದು ವಿವರಿಸಿದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:24.02.2021

## 44. ಸದನ ನಿಯಂತ್ರಣಕ್ಕೆ ಅಭಿಪ್ರಾಯ ತಿಳಿಸಲು ಮೇಲ್ಮನೆ ಸದಸ್ಯರಿಗೆ ಪತ್ರ

ಸದನದ ನಿಯಮಗಳು ಮತ್ತು ಸತ್ಸಂಪ್ರದಾಯಗಳಿಗೆ ಚ್ಯುತಿ ಬಾರದಂತೆ ಮುನ್ನಡೆಸಿಕೊಂಡು ಹೋಗಲು ಸದನ ನಿಯಂತ್ರಣ, ಸದಸ್ಯರ ಪಾತ್ರ, ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ ಅಭಿಪ್ರಾಯಗಳನ್ನು ಮುಕ್ತವಾಗಿ ತಿಳಿಸಬೇಕು ಎಂದು ವಿಧಾನ ಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ ಅವರು ಸದಸ್ಯರಿಗೆ ಪತ್ರ ಬರೆಯಲು ಮುಂದಾಗಿದ್ದಾರೆ ಎನ್ನಲಾಗಿದೆ.

ಸದನದ ಘನತೆ ಮತ್ತು ಗೌರವವನ್ನು ಹೆಚ್ಚಿಸಿಕೊಂಡು ಹೋಗುವ ನಿಟ್ಟಿನಲ್ಲಿ ಈ ಬಾರಿ ಕೆಲವು ಆಮೂಲಾಗ್ರ, ಬದಲಾವಣೆ ಮಾಡುವ ಕುರಿತು ಸದಸ್ಯರು ತಮ್ಮ ಅಭಿಪ್ರಾಯಗಳನ್ನು ಮುಕ್ತ ಮನಸ್ಸಿನಿಂದ ಹಂಚಿಕೊಳ್ಳಬೇಕು. ಇತ್ತೀಚಿನ ದಿನಗಳಲ್ಲಿ ಪ್ರಶ್ನೋತ್ತರ ಅವಧಿ ಒಂದು ಗಂಟೆಯೊಳಗೆ ಮುಕ್ತಾಯಗೊಳ್ಳದೆ 2–3 ಗಂಟೆಗಳ ಕಾಲ ನಡೆಯುತ್ತಿರುವ ಕಾರಣ ಬೇರೆ ಕಲಾಪಗಳನ್ನು ಕೈಗೆತ್ತಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಸದಸ್ಯರು ತಮ್ಮ ಸಲಹೆ, ಅಭಿಪ್ರಾಯಗಳನ್ನು ತಿಳಿಸಬೇಕು ಎಂದು ಉಲ್ಲೇಖ ಮಾಡಲು ಉದ್ದೇಶಿಸಿದ್ದಾರೆ.

ಶಾಸನಸಭೆಯ ಕಾರ್ಯಕಲಾಪಗಳಲ್ಲಿ ಸದಸ್ಯರು ಹೆಚ್ಚು ಹೆಚ್ಚು ಚರ್ಚೆಯಲ್ಲಿ ಪಾಲ್ಗೊಳ್ಳಬೇಕು ಎಂಬುದು ನನ್ನ ಅನಿಸಿಕೆ. ಇತ್ತೀಚೆಗೆ ವಿಧೇಯಕಗಳ ಪರ್ಯಾಲೋಚನೆ ಮತ್ತು ಅಂಗೀಕಾರಕ್ಕಾಗಿ ಚರ್ಚೆ ನಡೆಯುವ ವೇಳೆ ಸಾಕಷ್ಟು ಗೊಂದಲ ಉಂಟಾಗುವ ಪ್ರಸಂಗಗಳಿವೆ. ಜನಹಿತಕ್ಕಾಗಿ ರೂಪಿಸಲ್ಪಡುವ ಕಾನೂನುಗಳ ಆಳವಾದ ಅಧ್ಯಯನ ಮತ್ತು ಅದರ ಸಾಧಕ–ಬಾಧಕಗಳ ಬಗ್ಗೆ ಸದಸ್ಯರು ಪಕ್ಷಾತೀತವಾಗಿ ಬೆಳಕು ಚೆಲ್ಲುವಂತಹ ಚರ್ಚೆಗಳಾಗಬೇಕು. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಪ್ರತಿಭಟನೆ ಎಲ್ಲ ಸದಸ್ಯರ ಹಕ್ಕು. ಆದರೆ, ಅದನ್ನೇ ಅಸ್ತ್ರ ಮಾಡಿಕೊಂಡು ಕಲಾಪಗಳಿಗೆ ಅಡ್ಡಿಪಡಿಸುವುದು, ಧಿಕ್ಕಾರಗಳನ್ನು ಕೂಗುವುದು ಸದನದ ಗೌರವಕ್ಕೆ ತಕ್ಕದ್ದಲ್ಲ. ಸದನದ ಗೌರವ ಕಾಪಾಡಿಕೊಳ್ಳುವ ನಿಟ್ಟಿನಲ್ಲಿ ಸದಸ್ಯರು ಕೈಜೋಡಿಸಬೇಕು ಎಂದು ಮನವಿ ಮಾಡಲಿದ್ದಾರೆ ಎಂದು ಮೂಲಗಳು ತಿಳಿಸಿವೆ.

ಆಧಾರ: ಕನ್ನಡಪ್ರಭ, ದಿನಾಂಕ:24.02.2021

## 45. ಮೌಲ್ಯ ಮರೆತರೆ ಅರಾಜಕತೆ: ಕಾಗೇರಿ

'ಮೌಲ್ಯಗಳನ್ನು ಮರೆತರೆ ಮುಂದೊಂದು ದಿನ ಅರಾಜಕತೆ ಎದುರಾಗಬಹುದು. ಅಂಥ ಪರಿಸ್ಥಿತಿ ಬರುವುದನ್ನು ತಡೆಯಬೇಕು ಎಂದು ವಿಧಾನ ಸಭಾಧ್ಯಕ್ಷರು ಹೇಳಿದರು. ಕಾಮನ್‌ವೆಲ್ತ್ ಸಂಸದೀಯ ಸಂಘದ ಕರ್ನಾಟಕ ಶಾಖೆಯ ವತಿಯಿಂದ 'ಸಂಸದೀಯ ಮೌಲ್ಯಗಳ ಕುಸಿತ ತಡೆಗಟ್ಟಲು ಒಂದು ಆತ್ಮಾವಲೋಕನ' ಕುರಿತು ಇಲ್ಲಿ ನಡೆದ ಸಭೆಯಲ್ಲಿ ಮಾತನಾಡಿದರು.

'ಮೌಲ್ಯಗಳನ್ನು ಉಳಿಸಿಕೊಳ್ಳುವ ಬಗ್ಗೆ ವಿಶ್ವಮಟ್ಟದಲ್ಲಿ ಚರ್ಚೆಗಳು ನಡೆಯುತ್ತಿವೆ. ಸಂಸದೀಯ ವ್ಯವಸ್ಥೆ ಹೇಗಿರಬೇಕು ಎಂಬ ಬಗ್ಗೆ ಅತ್ಯಾವಲೋಕನ ಮಾಡಿಕೊಳ್ಳಲು ಈ ಸಭೆ ಆಯೋಜಿಸಲಾಗಿದೆ' ಎಂದರು.

'ಜನಪ್ರತಿನಿಧಿಗಳು ಜನರ ಧ್ವನಿಯಾಗಬೇಕು. ವ್ಯವಸ್ಥೆಯ ಸುಳಿ ಆಗಬಾರದು. ಸಂವಿಧಾನದ ಚೌಕಟ್ಟಿನಲ್ಲಿ ಆಡಳಿತ ನಡೆಸುವ ವಿಚಾರದಲ್ಲಿ ರಾಜ್ಯ ಮೇಲ್ಪಂಕ್ತಿ ಆಗಬೇಕು' ಎಂದು ಅವರು ಹೇಳಿದರು.

ಚಿಂತಕ ಗುರುರಾಜ ಕರಜಗಿ ಮಾತನಾಡಿ, 'ಇವತ್ತಿನ ಮೌಲ್ಯಗಳ ಬಗ್ಗೆ ನಮಗೆ ಬೇಸರವಿದೆ. ಜನಪ್ರತಿನಿಧಿಗಳು ಜನರಿಗೆ ಮಾದರಿಯಾಗಬೇಕು. ಆದರೆ, ಇವತ್ತಿನ ಸನ್ನಿವೇಶ ಹಾಗಿಲ್ಲ. ಜನರನ್ನು ಯಾವಾಗಲೂ ಹಿಡಿದಿಡಲು ಸಾಧ್ಯವಿಲ್ಲ. ಅವರ ಆಕ್ರೋಶದ ಕಟ್ಟೆ ಯಾವಾಗ ಬೇಕಾದರೂ ಒಡೆಯಬಹುದು. ಇದನ್ನು ಜನಪ್ರತಿನಿಧಿಗಳು ಅರ್ಥ ಮಾಡಿಕೊಳ್ಳಬೇಕು' ಎಂದರು.

ವಿಧಾನ ಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ, ವಿಧಾನ ಪರಿಷತ್ ವಿರೋಧ ಪಕ್ಷದ ನಾಯಕ ಎಸ್.ಆರ್.ಪಾಟೀಲ್, ಸಚಿವರಾದ ಜಗದೀಶ ಶೆಟ್ಟರ್, ಅರವಿಂದ ಲಿಂಬಾವಳಿ, ಮಾಜಿ ಸಭಾಪತಿ ಡಿ.ಎಚ್.ಶಂಕರಮೂರ್ತಿ, ಹೆಚ್.ಕೆ.ಭೈರೆಗೌಡ, ದಿನೇಶ್ ಗುಂಡೂರಾವ್, ಕೆ.ಆರ್.ರಮೇಶ್ ಕುಮಾರ್, ಬೋಪಯ್ಯ, ಹೆಚ್. ವಿಶ್ವನಾಥ್, ಸಂಸದ ಶಿವಕುಮಾರ್ ಉದಾಸಿ ಹಾಗೂ ಸಂಸದರು, ಶಾಸಕರು, ವಿವಿಧ ಕ್ಷೇತ್ರಗಳ ಪ್ರಮುಖರು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

ಆಧಾರ: ಪ್ರಜಾವಾಣಿ, ದಿನಾಂಕ:25.02.2021

## 46. ಅಭ್ಯರ್ಥಿಗಳ ಖರ್ಚನ್ನು ಸರ್ಕಾರವೇ ಭರಿಸಲಿ

ಅಭ್ಯರ್ಥಿಗಳ ಚುನಾವಣೆ ಪ್ರಚಾರದ ವೆಚ್ಚವನ್ನು ಸರ್ಕಾರವೇ ವಹಿಸಿಕೊಳ್ಳಬೇಕು. ರಾಜಕೀಯ ಪಕ್ಷಗಳಲ್ಲಿ ಆಂತರಿಕ ಪ್ರಜಾಪ್ರಭುತ್ವ ಪುನರ್ ಸ್ಥಾಪನೆ ಆಗಬೇಕು. ವಿಧಾನಸಭೆಗೆ ವಿವಿಧ ಕ್ಷೇತ್ರಗಳ ಶೇ.10ರಷ್ಟು ಗಣ್ಯರನ್ನು ನಾಮಕರಣ ಮಾಡಬೇಕು. ಬದ್ಧತೆ ಇರುವ ಪ್ರಾಮಾಣಿಕರಿಗೆ ಟಿಕೆಟ್ ನೀಡಬೇಕು. ಪಕ್ಷಾಂತರ ನಿಷೇಧ ಕಾಯ್ದೆಯನ್ನು ಬಲಿಷ್ಠ ಮಾಡಬೇಕು. ಬದಲಾದ ಪರಿಸ್ಥಿತಿಯಲ್ಲಿ ಸದನದ ನಿಯಮಾವಳಿಗಳಲ್ಲಿ ಬದಲಾವಣೆ ತರಬೇಕು. ವರ್ಷಕ್ಕೆ 60 ದಿನ ಅಧಿವೇಶನ ನಡೆಯಲೇಬೇಕು.

ರಾಜ್ಯ ವಿಧಾನಮಂಡಲ ಹಾಗೂ ಕಾಮನ್ ವೆಲ್ತ್ ಸಂಸದೀಯ ಸಂಘದ ಕರ್ನಾಟಕ ಶಾಖೆ ವಿಧಾನ ಸೌಧದ ಬ್ಯಾಂಕ್ವೆಟ್ ಸಭಾಂಗಣದಲ್ಲಿ ಏರ್ಪಡಿಸಿದ್ದ ಸಂಸದೀಯ ಮೌಲ್ಯಗಳ ಕುಸಿತ ತಡೆ ಕುರಿತ

ಆತ್ಮಾವಲೋಕನ ಸಭೆಯಲ್ಲಿ ಮಾತನಾಡಿದ ನ್ಯಾಯಮೂರ್ತಿಗಳು, ಸಾಹಿತಿಗಳು, ಪತ್ರಕರ್ತರು, ಸಭಾಪತಿಗಳು ವ್ಯಕ್ತಪಡಿಸಿದ ಒಟ್ಟಾರೆ ಅಭಿಪ್ರಾಯವಿದು.

ಸುಮಾರು ಆರು ಗಂಟೆಗಳ ಕಾಲ ನಡೆದ ಸಭೆಯಲ್ಲಿ ಮಾತನಾಡಿದ ಗಣ್ಯರು, ಸಂಸದೀಯ ಮೌಲ್ಯಗಳು ದಿನದಿಂದ ದಿನಕ್ಕೆ ಕುಸಿತಕೊಳ್ಳುತ್ತಿರುವುದಕ್ಕೆ ತೀವ್ರ ಕಳವಳ, ಆತಂಕ ವ್ಯಕ್ತಪಡಿಸಿ, ಇದೇ ಪರಿಸ್ಥಿತಿ ಮುಂದುವರೆದರೆ ಜನರಿಗೆ ಸಂಸದೀಯ ವ್ಯವಸ್ಥೆಯ ಮೇಲಿನ ನಂಬಿಕೆ ಕುಸಿದು ಅರಾಜಕತೆಗೆ ದಾರಿ ಮಾಡಿಕೊಡುತ್ತದೆ. ಹಾಗಾಗಿ ರಾಜಕೀಯ ಪಕ್ಷಗಳು, ವೈಯಕ್ತಿಕ ನೆಲೆಯಲ್ಲಿ ರಾಜಕಾರಣಿಗಳು ಆತ್ಮಾವಲೋಕನ ಮಾಡಿಕೊಳ್ಳಬೇಕು. ಇದಕ್ಕೆ ಪೂರಕವಾಗಿ ಸದನದ ನಿಯಮಾವಳಿಗಳಲ್ಲಿ ಬದಲಾವಣೆ ತರಬೇಕು ಎಂದು ಸಲಹೆ ನೀಡಿದರು.

ಪ್ರಾಸ್ತಾವಿಕವಾಗಿ ಮಾತನಾಡಿದ ವಿಧಾನ ಸಭಾಧ್ಯಕ್ಷರು ಅಧಿವೇಶನ ನಡೆಯುವ ಅವಧಿ ಸರ್ಕಾರದ ವಿವೇಚನೆ ಬದಲಿಗೆ ಸಭಾಧ್ಯಕ್ಷರ ವ್ಯಾಪ್ತಿಯಲ್ಲಿ ಇರುವಂತಾಗಬೇಕು. ಕಲಾಪಕ್ಕೆ ಅಡ್ಡಿ ಉಂಟು ಮಾಡುವ ಕೃತ್ಯ ದಂಡನಾರ್ಹ ಅಪರಾಧ ಎಂದು ಪರಿಗಣಿಸಬೇಕು. ಪಕ್ಷಾಂತರ ನಿಷೇಧ ಕಾಯ್ದೆ ಮರು ಪರಿಶೀಲಿಸಬೇಕು ಎಂದರು. ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ ಮಾತನಾಡಿ, ಸ್ವಾತಂತ್ರ್ಯ ಪೂರ್ವದಲ್ಲಿ ಮುತ್ಸದ್ದಿಗಳು ದೇಶಕ್ಕಾಗಿ ನಾನು ಎಂಬ ಮನೋಭಾವನೆ ಹೊಂದಿದ್ದರು. ಆದರೆ ಸ್ವಾತಂತ್ರ್ಯ ನಂತರದಲ್ಲಿ ದೇಶ ಇರುವುದೇ ನನಗಾಗಿ ಎಂದು ಯೋಚಿಸಲು ಆರಂಭಿಸಿದ ಪರಿಣಾಮ ಇಂತಹ ದುಸ್ಥಿತಿಗೆ ಬಂದಿದ್ದೇವೆ ಎಂದು ವಿಷಾದಿಸಿದರು.

ನಿವೃತ್ತ ನ್ಯಾಯಮೂರ್ತಿ ಎನ್.ಕುಮಾರ್, ಮೇಲ್ಮನೆ ಸಭಾಪತಿ ಬಸವರಾಜ ಹೊರಟ್ಟಿ ಮಾತನಾಡಿದರು. ಡಿಸಿಎಂ ಗೋವಿಂದ ಕಾರಜೋಳ, ಮೇಲ್ಮನೆ ಮಾಜಿ ಸಭಾಪತಿಗಳಾದ ಡಿ.ಎಚ್. ಶಂಕರಮೂರ್ತಿ, ಬಿ.ಎಲ್. ಶಂಕರ್, ವಿ.ಆರ್. ಸುದರ್ಶನ್, ಮೇಲ್ಮನೆ ಪ್ರತಿಪಕ್ಷದ ನಾಯಕ ಎಸ್.ಆರ್. ಪಾಟೀಲ್, ಶಿಕ್ಷಣ ತಜ್ಞ ಡಾ.ಗುರುರಾಜ ಕರ್ಜಗಿ, ವಿದ್ವಾಂಸ ಶತಾವಧಾನಿ ಗಣೇಶ್, ಸಾಹಿತಿ ನರಹಳ್ಳಿ ಬಾಲಸುಬ್ರಹ್ಮಣ್ಯ ಮುಂತಾದವರು ಸಂಸದೀಯ ವ್ಯವಸ್ಥೆಯಲ್ಲಿ ಮೌಲ್ಯಗಳ ಕುಸಿತ ತಡೆಗಟ್ಟುವ ಸಂಬಂಧ ವಿವಿಧ ಸಲಹೆಗಳನ್ನು ನೀಡಿದರು.

ಆಧಾರ: ಕನ್ನಡಪ್ರಭ, ದಿನಾಂಕ:25.02.2021

## 47. ಕಾರಿಡಾರ್‌ನಲ್ಲಿ ಮೊಬೈಲ್‌ನಲ್ಲಿ ಹರಟೆ ಹೊಡೆದರೆ ಶಿಸ್ತುಕ್ರಮ

ಕಚೇರಿ ಸಮಯದಲ್ಲಿ ಶಿಸ್ತು ಪಾಲಿಸದೆ, ಕಾರಿಡಾರ್‌ನಲ್ಲಿ ನಿಂತು ಮೊಬೈಲ್‌ನಲ್ಲಿ ಗಂಟೆಗಟ್ಟಲೆ ಹರಟೆ ಹೊಡೆಯುವ ವಿಧಾನ ಪರಿಷತ್ತಿನ ಸಿಬ್ಬಂದಿಗೆ ಚಾಟಿ ಬೀಸಲು ಸಭಾಪತಿ ಬಸವರಾಜ ಹೊರಟ್ಟಿ ನಿರ್ಧರಿಸಿದ್ದಾರೆ. ಸಚಿವಾಲಯದಲ್ಲಿ ಅಳವಡಿಸಿರುವ ಹಲವು ಸಿಸಿಟಿವಿ ಕ್ಯಾಮೆರಾಗಳು ಸರಿಯಾಗಿ ಕಾರ್ಯನಿರ್ವಹಿಸುತ್ತಿಲ್ಲ. ಅವುಗಳನ್ನು ಉದ್ದೇಶ ಪೂರ್ವಕವಾಗಿ ಕೆಲವರು ಹಾಳು ಮಾಡುತ್ತಿರುವ ದೂರುಗಳನ್ನು ಗಂಭೀರವಾಗಿ ಪರಿಗಣಿಸಿರುವ ಹೊರಟ್ಟಿ, ಅಂಥವರ ವಿರುದ್ಧವು ಕಠಿಣ ಕ್ರಮ ತೆಗೆದುಕೊಳ್ಳುವ ಎಚ್ಚರಿಕೆ ನೀಡಿದ್ದಾರೆ.

ಈ ಕುರಿತು ಪರಿಷತ್ ಕಾರ್ಯದರ್ಶಿ ಕೆ.ಆರ್.ಮಹಾಲಕ್ಷ್ಮಿ ಅವರಿಗೆ ಟಿಪ್ಪಣಿ ಮೂಲಕ ಕಟ್ಟುನಿಟ್ಟಿನ ನಿರ್ದೇಶನ ನೀಡಿರುವ ಹೊರಟ್ಟಿ, 'ನೀವು ಕಾರ್ಯದರ್ಶಿಯಂಥ ಉನ್ನತ ಹುದ್ದೆಯಲ್ಲಿರುವುದರಿಂದ ಯಾವುದೇ ಮುಲಾಜಿಲ್ಲದೆ ತಪ್ಪು ಮಾಡಿದವರ ಮೇಲೆ ಕ್ರಮ ತೆಗೆದುಕೊಳ್ಳಬೇಕು. ಆ ಮೂಲಕ ಆಡಳಿತವನ್ನು ಚುರುಕುಗೊಳಿಸಬೇಕು. ಟಿಪ್ಪಣಿಯಲ್ಲಿ ಸೂಚಿಸಿರುವ ಎಲ್ಲ ಅಂಶಗಳನ್ನು ಜಾರಿಗೊಳಿಸಲು ತಕ್ಷಣ ಕ್ರಮಗಳನ್ನು ತೆಗೆದುಕೊಂಡು ಕಾರ್ಯರೂಪಕ್ಕೆ ತರಬೇಕು' ಎಂದು ಹೇಳಿದ್ದಾರೆ.

'ವಿಧಾನ ಪರಿಷತ್ ಸಚಿವಾಲಯದಲ್ಲಿ ಸಿಬ್ಬಂದಿಗೆ ಬಯೋಮೆಟ್ರಿಕ್ ಪದ್ಧತಿ ಕಡ್ಡಾಯವಾಗಿ ಜಾರಿಗೊಳಿಸಬೇಕು. ಅದರ ವರದಿಯನ್ನು ಪ್ರತಿ ತಿಂಗಳು ನನ್ನ ಆಪ್ತ ಶಾಖೆಗೆ ತಲುಪಿಸಬೇಕು. ಈ ನಿಯಮ ಉಲ್ಲಂಘಿಸಿದವರ ವಿರುದ್ಧ ತೆಗೆದುಕೊಂಡ ಶಿಸ್ತು ಕ್ರಮದ ಬಗ್ಗೆಯೂ ಮಾಹಿತಿ ನೀಡಬೇಕು' ಎಂದು ಕಾರ್ಯದರ್ಶಿಗೆ ಹೊರಟ್ಟಿ ಸೂಚನೆ ನೀಡಿದ್ದಾರೆ.

'ಪರಿಷತ್ತಿನಲ್ಲಿ ಕಾರ್ಯನಿರ್ವಹಿಸುವ 'ಡಿ' ಗ್ರೂಪ್ (ಚಾಲಕ ಸಹಿತ) ಸಿಬ್ಬಂದಿ ಕಡ್ಡಾಯವಾಗಿ ಸಮವಸ್ತ್ರ ಧರಿಸುವಂತೆ ಸುತ್ತೋಲೆ ಹೊರಡಿಸಬೇಕು. ಪರಿಷತ್ತಿನ ಪ್ರತಿ ಶಾಖೆಯ ಸಿಬ್ಬಂದಿಯ ಚಲನ ವಲನವನ್ನು ಪುಸ್ತಕದಲ್ಲಿ ಕಡ್ಡಾಯವಾಗಿ ನಿರ್ವಹಿಸಬೇಕು. ಪರಿಷತ್ತಿನ ಕೆಲಸ ಬಿಟ್ಟು ಹೊರಗಡೆ ಹೋದ ಸಿಬ್ಬಂದಿ ಮಾಡಿದ ಪ್ರಮಾದಗಳಿಗೆ ವಿಧಾನ ಪರಿಷತ್ ಆಗಲಿ, ಸರ್ಕಾರವಾಗಲಿ ಹೊಣೆಯಲ್ಲ' ಎಂದೂ ಹೇಳಿರುವ ಹೊರಟ್ಟಿ 'ಸದನದಲ್ಲಿ ಮಸೂದೆಗಳನ್ನು ಮಂಡಿಸುವ ಸಂದರ್ಭದಲ್ಲಿ ಸದಸ್ಯರ ಬೇಡಿಕೆಯಂತೆ ಅವುಗಳನ್ನು 2–3 ದಿನಗಳ ಮೊದಲೇ ನೀಡಲು ಕ್ರಮ ತೆಗೆದುಕೊಳ್ಳಬೇಕು' ಎಂದೂ ಕಾರ್ಯದರ್ಶಿಗೆ ಸೂಚಿಸಿದ್ದಾರೆ.

ಆಧಾರ: ಪ್ರಜಾವಾಣಿ, ದಿನಾಂಕ:25.02.2021

## 48. ಅಕ್ರಮ ತನಿಖೆಗೆ ಸದನ ಸಮಿತಿ

ರಾಜ್ಯದಲ್ಲಿ ಸ್ಥಾಪಿಸಲಾಗಿರುವ ಶುದ್ಧ ಕುಡಿಯುವ ನೀರಿನ ಘಟಕಗಳ ಅಳವಡಿಕೆ ಮತ್ತು ನಿರ್ವಹಣೆಯಲ್ಲಿ ಭಾರಿ ಅವ್ಯವಹಾರ ಹಾಗೂ ಭ್ರಷ್ಟಾಚಾರ ನಡೆದಿದೆ ಎಂಬ ಆರೋಪಗಳು ಪದೇ ಪದೇ ವಿಧಾನಮಂಡಲದಲ್ಲಿ ಕೇಳಿ ಬರುತ್ತಿದ್ದವು. ಈ ಹಿನ್ನೆಲೆಯಲ್ಲಿ ರಾಜ್ಯದಲ್ಲಿನ ಶುದ್ಧ ನೀರಿನ ಘಟಕಗಳ ಅಳವಡಿಕೆ ಮತ್ತು ನಿರ್ವಹಣೆ ಕುರಿತಂತೆ ತನಿಖೆ ನಡೆಸಲು ಶಾಸಕ ಆರಗ ಜ್ಞಾನೇಂದ್ರ ಅಧ್ಯಕ್ಷತೆಯಲ್ಲಿ ಜಂಟಿ ಸದನ ಸಮಿತಿ ರಚಿಸಲಾಗಿದೆ. ಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ ಸಹಮತದೊಂದಿಗೆ ವಿಧಾನ ಸಭಾಧ್ಯಕ್ಷ ವಿಶ್ವೇಶ್ವರ ಹೆಗಡೆ, ಕಾಗೇರಿ ಜಂಟಿ ಸದನ ಸಮಿತಿ ರಚಿಸಿ ಆದೇಶ ಹೊರಡಿಸಿದ್ದಾರೆ. ಅಧ್ಯಕ್ಷ ಸೇರಿದಂತೆ ವಿಧಾನ ಸಭೆಯ 15 ಸದಸ್ಯರು ಹಾಗೂ 5 ಮಂದಿ ವಿಧಾನ ಪರಿಷತ್ ಸದಸ್ಯರು ಜಂಟಿ ಸದನ ಸಮಿತಿ ಸದಸ್ಯರಾಗಿದ್ದು ಜೂನ್ 30ರೊಳಗಾಗಿ ವರದಿ ಸಲ್ಲಿಸಲು ನಿರ್ದೇಶನ ನೀಡಲಾಗಿದೆ. ಆರಗ ಜ್ಞಾನೇಂದ್ರ ಅಧ್ಯಕ್ಷತೆಯ ಸಮಿತಿಯಲ್ಲಿ ವಿಧಾನ ಸಭೆ ಸದಸ್ಯರಾದ ಎಂ.ಪಿ.ಅಪ್ಪಚ್ಚು ರಂಜನ್, ಎ.ಎಸ್.ಪಾಟೀಲ್ ನಡಹಳ್ಳಿ, ವೀರಣ್ಣ ಚರಂತಿಮಠ, ಶಿವನಗೌಡ ನಾಯಕ್, ಬಿ.ಸಿ. ನಾಗೇಶ್, ಪಿ.ರಾಜೀವ್, ಆಚಾರ್ ಹಾಲಪ್ಪ, ರಾಜೇಶ್ ನಾಯ್ಕ, ಕೆ.ಜೆ.ಜಾರ್ಜ್, ಕೃಷ್ಣ ಭೈರೇಗೌಡ, ಯು.ಟಿ.ಖಾದರ್, ಈಶ್ವರ ಖಂಡ್ರೆ, ಎ.ಟಿ.ರಾಮಸ್ವಾಮಿ, ವೆಂಕಟರಾವ್ ನಾಡಗೌಡ ಮತ್ತು ಪರಿಷತ್ ಸದಸ್ಯರಾದ ಎಸ್.ರವಿ, ವಿಜಯ್ ಸಿಂಗ್, ಎಚ್.ಎಂ.ರಮೇಶ್‌ಗೌಡ, ಆ.ದೇವೇಗೌಡ ಮತ್ತು ಎಸ್.ವಿ.ಸಂಕನೂರ್ ಸದಸ್ಯರಾಗಿದ್ದಾರೆ.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:27.02.2021

## 49. ಸಾರ್ವಜನಿಕರಿಗೂ ಈ ಸಲ ಕಲಾಪಕ್ಕೆ ಪ್ರವೇಶ

ಕೋವಿಡ್‌ನಿಂದಾಗಿ ಕಳೆದ ಒಂದು ವರ್ಷದಿಂದ ಸಾರ್ವಜನಿಕರಿಗೆ ನಿರ್ಬಂಧಿಸಲಾಗಿದ್ದ ವಿಧಾನ ಸಭೆ ಅಧಿವೇಶನದ ಕಲಾಪ ವೀಕ್ಷಣೆ ಈ ಬಾರಿ ಮುಕ್ತವಾಗಲಿದೆ. ವಿದ್ಯಾರ್ಥಿಗಳಿಗೆ ನಿಷೇಧ ಮುಂದುವರೆದಿದೆ ಎಂದು ಸಭಾಧ್ಯಕ್ಷರು ಹೇಳಿದ್ದಾರೆ. ವಿಧಾನ ಸೌಧದಲ್ಲಿ ಸುದ್ದಿಗೋಷ್ಠಿಯಲ್ಲಿ ಮಾತನಾಡಿದ ಅವರು ವಿದ್ಯಾರ್ಥಿಗಳನ್ನು ಹೊರತುಪಡಿಸಿ, ಸಾರ್ವಜನಿಕರಿಗೆ ಈ ಬಾರಿ ವಿಧಾನ ಸಭೆ ಅಧಿವೇಶನದ ಕಾರ್ಯಕಲಾಪ ವೀಕ್ಷಣೆಗೆ ಅವಕಾಶ ಕಲ್ಪಿಸಲಾಗುವುದು ಎಂದರು.

ಆಧಾರ: ಕನ್ನಡಪ್ರಭ, ದಿನಾಂಕ:03.03.2021.

## 50. ನಾಳೆಯಿಂದ ಅಧಿವೇಶನ, ಮಾರ್ಚ್ 8ಕ್ಕೆ ಬಜೆಟ್

ಕೊರೋನಾ ಹಾವಳಿಯಿಂದ ತತ್ತರಿಸಿದ್ದ ರಾಜ್ಯದಲ್ಲಿ ಆರ್ಥಿಕ ಚಟುವಟಿಕೆ ಮಾಮೂಲಿ ಸ್ಥಿತಿಗೆ ಬರುತ್ತಿರುವ ನಡುವೆ ವಿಧಾನಮಂಡಲದ ಬಜೆಟ್ ಅಧಿವೇಶನ ಮಾರ್ಚ್ 4 ರಿಂದ 31ರವರೆಗೆ ನಡೆಯಲಿದ್ದು ಮಾರ್ಚ್ 8 ರಂದು ರಾಜ್ಯ ಬಜೆಟ್ ಮಂಡನೆಯಾಗಲಿದೆ.

ಅಧಿವೇಶನದಲ್ಲಿ ಪ್ರಮುಖವಾಗಿ ಬಜೆಟ್ ಮೇಲಿನ ಚರ್ಚೆ ಸೇರಿದಂತೆ ವಿವಿಧ ಕಲಾಪಗಳು ನಡೆಯಲಿವೆ. ಜೊತೆಗೆ ವಿವಿಧ ಸಮುದಾಯಗಳು ಮೀಸಲಾತಿ ಕೋರಿ ಇತ್ತೀಚೆಗೆ ನಡೆಸುತ್ತಿರುವ ಹೋರಾಟ, ಕಾವೇರಿ ನದಿಯ ಹೆಚ್ಚುವರಿ ನೀರು ಬಳಸಲು ಮುಂದಾಗಿರುವ ತಮಿಳುನಾಡಿನ ಕ್ರಮ,

ಸಚಿವರ ವಿರುದ್ಧ ಬಿಜೆಪಿ ಶಾಸಕರೇ ಮಾಡುತ್ತಿರುವ ಟೀಕೆಗಳು ಮಾತಿನ ಚಕಮಕಿಗೆ ಕಾರಣವಾಗುವ ಸಾಧ್ಯತೆ ಇದೆ. ವಿಶೇಷವಾಗಿ ಮೊದಲ ಎರಡು ದಿನಗಳ ಕಾಲ ಒಂದು ದೇಶ, ಒಂದು ಚುನಾವಣೆ ಕುರಿತು ನಡೆಯುವ ಚರ್ಚೆ ವೇಳೆ ಸಹಜವಾಗಿ ಸದಸ್ಯರ ಪಕ್ಷಾಂತರ, ಚುನಾವಣೆ ವೆಚ್ಚ ಮತದಾರರಿಗೆ ಒಡ್ಡುವ ಅಮಿಷ ಇತ್ಯಾದಿಗಳ ಬಗ್ಗೆ ಪ್ರಸ್ತಾಪವಾಗುವ ಸಂಭವವಿದೆ.

**19 ದಿನಗಳ ಕಾಲ ಕಲಾಪ**: ವಿಧಾನ ಸಭಾಧ್ಯಕ್ಷ ವಿಶ್ವೇಶ್ವರ ಹೆಗಡೆ ಕಾಗೇರಿ ಮತ್ತು ವಿಧಾನ ಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ ಅವರು ಪ್ರತ್ಯೇಕವಾಗಿ ಪತ್ರಿಕಾಗೋಷ್ಠಿ ನಡೆಸಿ ಬಜೆಟ್ ಅಧಿವೇಶನದ ಕುರಿತು ಮಾಹಿತಿ ನೀಡಿದರು.

ಮಾರ್ಚ್ 4ರಂದು ಬೆಳಿಗ್ಗೆ 11 ಗಂಟೆಗೆ ಉಭಯ ಸದನಗಳು ಪ್ರಾರಂಭವಾಗಲಿವೆ. ಅಧಿವೇಶನದ ಮೊದಲ ಎರಡು ದಿನ ಒಂದು ದೇಶ, ಒಂದು ಚುನಾವಣೆ ಕುರಿತು ವಿಸ್ತೃತ ಚರ್ಚೆ ನಡೆಯಲಿದೆ. ರಜೆ ದಿನಗಳನ್ನು ಹೊರತುಪಡಿಸಿ 19 ದಿನಗಳ ಕಾಲ ಕಾರ್ಯಕಲಾಪ ಜರುಗಲಿದೆ ಎಂದು ಮಾಹಿತಿ ನೀಡಿದರು.

ಸಭಾಧ್ಯಕ್ಷರು ಮಾತನಾಡಿ ಹಲವು ಸಂದರ್ಭದಲ್ಲಿ ಅನೇಕ ಗಣ್ಯರು ಒಂದು ದೇಶ, ಒಂದು ಚುನಾವಣೆ ಕುರಿತು ಪ್ರಸ್ತಾಪಿಸಿದ್ದಾರೆ. ಪ್ರಧಾನಿ ನರೇಂದ್ರ ಮೋದಿ ಅವರೂ ಸಹ ಈ ವಿಷಯವನ್ನು ಜನತೆಯ ಮುಂದೆ ಚರ್ಚಿಸಲು ಹೇಳಿದ್ದಾರೆ. ಗುಜರಾತ್‌ನ ಕೇವಾಡಿಯಾದಲ್ಲಿ ನಡೆದ ಸಭಾಧ್ಯಕ್ಷ ಸಮ್ಮೇಳನದಲ್ಲಿಯೂ ಪ್ರಧಾನಿಗಳು ಪ್ರಸ್ತಾಪ ಮಾಡಿದ್ದರು. ಸದನದಲ್ಲಿ ಚರ್ಚೆ ನಡೆಸಲಾಗುತ್ತಿದೆ. ಲೋಕಸಭೆ ಮತ್ತು ವಿಧಾನ ಸಭೆ ಚುನಾವಣೆಗೆ ಸೀಮಿತವಾಗಿ ಚರ್ಚಿಸಲಾಗುತ್ತಿದೆ. ಇತರೆ ಚುನಾವಣೆಗಳು ಇದರ ವ್ಯಾಪ್ತಿಗೆ ಬರುವುದಿಲ್ಲ ಎಂದು ಹೇಳಿದರು.

ಒಂದು ದೇಶ, ಒಂದು ಚುನಾವಣೆ ಕುರಿತು ಸದನದಲ್ಲಿ ಚರ್ಚೆ ಮಾತ್ರ ನಡೆಸಲಾಗುತ್ತದೆ. ಯಾವುದೇ ನಿರ್ಣಯ ಕೈಗೊಳ್ಳುವುದಿಲ್ಲ. ಲೋಕಸಭೆಗೆ ಚರ್ಚೆಯ ವಿವರಗಳನ್ನು ರವಾನಿಸಲಾಗುತ್ತದೆ. ಅಲ್ಲಿ ನಿರ್ಣಯ ಕೈಗೊಳ್ಳಲಾಗುತ್ತದೆ. ಇನ್ನುಳಿದಂತೆ ಪ್ರಶ್ನೋತ್ತರ ಅವಧಿ, ಶೂನ್ಯ ವೇಳೆ ಗಮನ ಸೆಳೆಯುವುದು ಮತ್ತು ಬಜೆಟ್ ಮೇಲಿನ ಚರ್ಚೆ ನಡೆಯಲಿದೆ ಎಂದರು.

**ಶಾಸಕರಿಗೆ ತರಬೇತಿ ಕಾರ್ಯಾಗಾರ**: ಆಯವ್ಯಯ ಮಂಡನೆ ಹಿನ್ನೆಲೆಯಲ್ಲಿ ಆಯವ್ಯಯ ಮತ್ತು ರಾಜ್ಯ ಹಣಕಾಸು ವಿಷಯ ಕುರಿತು ಉಭಯ ಸದನಗಳ ಸದಸ್ಯರಿಗೆ ಮಾರ್ಚ್ 3 ರಂದು ತರಬೇತಿ ಕಾರ್ಯಾಗಾರ ಏರ್ಪಡಿಸಲಾಗಿದೆ. ನವದೆಹಲಿಯ ಪಿಆರ್‌ಎಸ್ ಶಾಸನ ಸಂಶೋಧನಾ ಸಂಸ್ಥೆ ಬೆಳಿಗ್ಗೆ 10.30ರಿಂದ ವಿಕಾಸ ಸೌಧದ ಸಮ್ಮೇಳನ ಸಭಾಂಗಣದಲ್ಲಿ ಕಾರ್ಯಾಗಾರ ಏರ್ಪಡಿಸಿದ್ದು, ಎರಡು ಗೋಷ್ಠಿಗಳಲ್ಲಿ ತಜ್ಞರು ಭಾಷಣ ಮಾಡಲಿದ್ದಾರೆ.

**3 ವಿಧೇಯಕ ಮಂಡನೆ:** ವಿಧಾನಸಭೆಯಲ್ಲಿ ಮೂರು ವಿಧೇಯಕಗಳು ಮಂಡನೆಯಾಗಲಿದ್ದು, ಕರ್ನಾಟಕ ಪುರಸಭೆ ತಿದ್ದುಪಡಿ ವಿಧೇಯಕ, ಸೊಸೈಟಿ ನೋಂದಣಿ ತಿದ್ದುಪಡಿ ವಿಧೇಯಕ ಮಂಡನೆ ಕುರಿತು ಸರ್ಕಾರವು ಮಾಹಿತಿ ನೀಡಿದೆ. ಅದಷ್ಟು ಬೇಗ ಸರ್ಕಾರ ಸಹ ಮಂಡಿಸುವ ವಿಧೇಯಕ ಕುರಿತು ಮಾಹಿತಿ ನೀಡಬೇಕು. ಇದು ಚರ್ಚೆಗೆ ಅನುಕೂಲವಾಗಲಿದೆ ಎಂದರು.

ಆಧಾರ: ಕನ್ನಡಪ್ರಭ, ದಿನಾಂಕ:03.03.2021.

## 51. ಸುಗಮ ಕಲಾಪಕ್ಕೆ ಹಲವು ಸೂತ್ರ

ಪ್ರತಿ ದಿನ ಅಜೆಂಡಾದಲ್ಲಿರುವ ವಿಷಯಗಳನ್ನು ಅಂದೇ ಚರ್ಚೆ ಮಾಡಿ ಮುಗಿಸಬೇಕು ಎನ್ನುವ ಗಟ್ಟಿ ನಿಲುವು ತಾಳಿರುವ ವಿಧಾನ ಪರಿಷತ್ ಸಭಾಪತಿ ಬಸವರಾಜ್ ಹೊರಟ್ಟಿ ಈ ನಿಟ್ಟಿನಲ್ಲಿ ಸದನದಲ್ಲಿ ಸದಸ್ಯರ ನಡವಳಿಕೆ, ವರ್ತನೆ ಹೇಗಿರಬೇಕು ಹಾಗೂ ಇನ್ನಿತರ ವಿಚಾರಗಳ ಬಗ್ಗೆ ನೀತಿ ನಿಯಮಾವಳಿ ರೂಪಿಸಿದ್ದಾರೆ. ಶೂನ್ಯ ವೇಳೆಯಲ್ಲಿ ಪ್ರಸ್ತಾಪಿಸುವ ವಿಷಯಕ್ಕೆ ಕನಿಷ್ಠ ಎರಡು ದಿನಗಳಲ್ಲಿ ಸರ್ಕಾರ ಉತ್ತರ ಕೊಡಬೇಕು ಎಂಬ ನಿಟ್ಟಿನಲ್ಲಿ ಆಡಳಿತ ಹಾಗೂ ವಿರೋಧ ಪಕ್ಷಗಳ ಮುಖಂಡರ ಜೊತೆ ಚರ್ಚಿಸಲಾಗಿದೆ. ಎಲ್ಲರನ್ನು ವಿಶ್ವಾಸಕ್ಕೆ ತೆಗೆದುಕೊಂಡು ಸದನ ನಡೆಸುವ ನಿರ್ಧಾರ ಮಾಡಲಾಗಿದೆ ಎಂದು ಹೊರಟ್ಟಿ

ಸುದ್ದಿಗೋಷ್ಠಿಯಲ್ಲಿ ತಿಳಿಸಿದರು. ಪ್ರಶ್ನೋತ್ತರ ಅವಧಿಯನ್ನು 75 ನಿಮಿಷ ಒಳಗೆ ಮುಗಿಸಲೇಬೇಕು. ಈ ಅವಧಿಯಲ್ಲಿ ಸಿಎಂ ಸೇರಿ ಆಯಾ ಇಲಾಖೆಯ ಸಚಿವರೇ ಬಂದು ಉತ್ತರ ಕೊಡಬೇಕು. ತರಾತುರಿಯಲ್ಲಿ ಕರಡು ಮಂಡಿಸಲು ಅವಕಾಶ ಇಲ್ಲ. ಎರಡು ದಿನಗಳ ಮುಂಚೆ ವಿಧೇಯಕದ ಕರಡು ಪ್ರತಿ ಕೊಡಬೇಕು ಎಂದರು.

ಆಧಾರ: ವಿಜಯವಾಣಿ, ದಿನಾಂಕ:04.03.2021.

## 52. ಮುಜುಗರದ ಮಧ್ಯೆ ಇಂದಿನಿಂದ ಅಧಿವೇಶನ

ಸರ್ಕಾರಕ್ಕೆ ಬೇಡವಾಗಿದ್ದ ತಲೆನೋವಿನ ವಿಷಯಗಳ ನಡುವೆ ಕರ್ನಾಟಕ ವಿಧಾನ ಮಂಡಲದ ಬಜೆಟ್ ಅಧಿವೇಶನ ಮಾರ್ಚ್ 4 ರಂದು ಆರಂಭವಾಗಲಿದೆ. ಸದನ ಇತ್ತೀಚಿನ ಇತಿಹಾಸದಲ್ಲಿ ಬಾರಿ ಕಾವು ಕಾಣಲಿರುವ ಮುಂಗಡಪತ್ರ ಅಧಿವೇಶನ ಇದಾಗಲಿದೆ. ಸಂಖ್ಯಾಬಲದ ದೃಷ್ಟಿಯಿಂದ ಆಡಳಿತ ಪಕ್ಷ ಪ್ರಬಲವಾಗಿದೆ. ಆದರೇನು ಮಾಡುವುದು ಸ್ವಪಕ್ಷೀಯರಿಂದಲೇ ಇದಕ್ಕೆ ಮುಜುಗರ ಎದುರಾಗಿದೆ. ಪರಿಣಾಮ ವಿರೋಧ ಪಕ್ಷದ ಪ್ರಹಾರಕ್ಕೆ ಸಿದ್ಧಗೊಳ್ಳುವ ಅನಿವಾರ್ಯತೆಗೆ ಸಿಲುಕಿದೆ.

ಆಪರೇಷನ್ ಕಮಲದಲ್ಲಿ ಮಹತ್ವದ ಭೂಮಿಕೆ ನಿರ್ವಹಿಸಿದ್ದ ರಮೇಶ ಜಾರಕಿಹೊಳಿಯವರೆ ವಿರೋಧಪಕ್ಷದ ವಾಗ್ದಾಳಿಗೆ ಬೇಕಾದ ಎಲ್ಲವನ್ನೂ ಒದಗಿಸಿಬಿಟ್ಟಿದ್ದಾರೆ. ಹೀಗಾಗಿ ಸರ್ಕಾರ ತನ್ನ ಸ್ವರಕ್ಷಣೆಗೆ ಮಾಡಿಕೊಂಡಿರುವ ಕಸರತ್ತುಗಳೆಲ್ಲ ಕೇವಲ ತಾಂತ್ರಿಕ ಮೌಲಿಕವಾಗಿ ವಿರೋಧಪಕ್ಷದ ತೂಕ ಹೆಚ್ಚಿದೆ. ಇದನ್ನು ಪ್ರತಿಪಕ್ಷ ಹೇಗೆ ಬಳಸಿಕೊಳ್ಳಲಿದೆ ಎಂಬುದು ಜನಸಾಮಾನ್ಯರೆಲ್ಲರ ಕುತೂಹಲ. ಆದ್ದರಿಂದಲೇ ಅಧಿವೇಶನ ಆಸಕ್ತಿ ಕೆರಳಿಸಿದೆ.

ಸಿ.ಡಿ. ಪ್ರಕರಣ ಹೊರತುಪಡಿಸಿ, ಪಂಚಮಸಾಲಿ ಮೀಸಲಾತಿ ಹೋರಾಟ ಪ್ರತಿಪಕ್ಷಕ್ಕೆ ಇನ್ನೊಂದು ರಾಜಕೀಯ ದಾಳ. ಈ ಹೋರಾಟ ನಿರ್ವಹಣೆಯಲ್ಲಿ ಎಡವಿದ್ದೀರಿ ಎಂಬುದಾಗಿ ರಾಜ್ಯ ಸರ್ಕಾರವನ್ನು ತರಾಟೆಗೆ ತೆಗೆದುಕೊಳ್ಳಲು ಕಾಂಗ್ರೆಸ್ ಸಜ್ಜಾಗಿದೆ. ಸರ್ಕಾರವನ್ನು ಇಕ್ಕಟ್ಟಿಗೆ ಸಿಲುಕಿಸುವ ಇವೆರಡು ವಿಷಯಗಳನ್ನು ಪ್ರತಿಪಕ್ಷ ಕಾಂಗ್ರೆಸ್ ಬಿಟ್ಟುಕೊಡದು. ಆಡಳಿತದೊಂದಿಗೆ ಒಳ ಸ್ನೇಹ ಇದ್ದರೂ ಈ ಸಂದರ್ಭದಲ್ಲಿ ಸದನದಲ್ಲಿ ಅದನ್ನು ಬಹಿರಂಗವಾಗಿ ತೋರ್ಪಡಿಸಿಕೊಳ್ಳಲಾಗದ ಪರಿಸ್ಥಿತಿ ಜೆಡಿಎಸ್‌ಗೆ. ಜೊತೆಗೆ ಮೈಸೂರು ಮೇಯರ್ ಸ್ಥಾನ ಕಾಂಗ್ರೆಸ್‌ನಿಂದಾಗಿ ದೊರಕಿದೆ. ಆದ್ದರಿಂದ ಜೆಡಿಎಸ್ ವಿಷಯಕ್ಕೆ ಬದ್ಧವಾಗಿ ಸರ್ಕಾರದ ವಿರುದ್ಧ ತಿರುಗಿ ಬೀಳುವ ಸಾಧ್ಯತೆಗಳನ್ನು ತಳ್ಳಿ ಹಾಕುವಂತಿಲ್ಲ. ಸದನದಲ್ಲಿ ಸರ್ಕಾರಕ್ಕೆ ಬಿಸಿಮುಟ್ಟಿಸಲಿರುವ ಸಾಮಾಜಿಕ ವಿದ್ಯಮಾನಗಳು ಇವು. ಉಳಿದಂತೆ ಆರ್ಥಿಕತೆಯಂತೂ ಸರ್ಕಾರವನ್ನು ನಿರುತ್ತರವನ್ನಾಗಿಸಲಿದೆ. ಏರುತ್ತಲೇ ಇರುವ ತೈಲ ಬೆಲೆಯ ಮೇಲೆ ಹೊಸದಾಗಿ ರಾಜ್ಯ ಸೆಸ್ ವಿಧಿಸುವ ಸಂಭವ ಇದ್ದು, ವಿರೋಧ ಪಕ್ಷಗಳಿಂದ ತೀವ್ರ ಟೀಕೆಗೆ ಒಳಗಾಗುವುದು ಖಚಿತ. ತೈಲ ಬೆಲೆ ಏರಿಕೆ ಮತ್ತದರ ಪರಿಣಾಮವಾಗಿ ಪ್ರತಿ ಅಗತ್ಯ ವಸ್ತುಗಳ ಬೆಲೆ ಏರಿಕೆಯ ಬಿಸಿಯನ್ನು ಜನ ಅನುಭವಿಸುತ್ತಿರುವುದರಿಂದ ವಿರೋಧಪಕ್ಷ ಕೈಕಟ್ಟಿಕೊಂಡು ಕೂರುವುದಿಲ್ಲ. ವಿಧಾನ ಸಭೆಯಲ್ಲಿ ಸಿದ್ಧರಾಮಯ್ಯ ಮತ್ತು ವಿಧಾನ ಪರಿಷತ್ತಿನಲ್ಲಿ ಎಸ್. ಆರ್.ಪಾಟೀಲ್‌ರ ನೇತೃತ್ವದಲ್ಲಿ ನಡೆಯಲಿರುವ ಪ್ರಹಾರಕ್ಕೆ ಸರ್ಕಾರ ಯಾವ ರೀತಿ ಸ್ಪಂದಿಸಲಿದೆ ಎಂಬುದು ಈಗಿನ ಪ್ರಶ್ನೆ.

ವಿರೋಧ ಪಕ್ಷದ ವಾಗ್ಬಾಣಗಳಿಗೆ ಪ್ರತಿಯಾದ ರಕ್ಷಣಾ ವ್ಯವಸ್ಥೆಗಾಗಿ ಆಡಳಿತ ಪಕ್ಷ ತಡಕಾಡುತ್ತಿದೆ. ಇದರ ಜೊತೆಗೆ ಸ್ವಪಕ್ಷೀಯ ಬಸವನಗೌಡ ಪಾಟೀಲ ಯತ್ನಾಳರು ಮೀಸಲಾತಿಗಾಗಿ ನಾನು ಬಾವಿಗೆ ಇಳಿದು ಹೋರಾಟ ಮಾಡಿಯೇ ತೀರುವೆ ಎಂದಿರುವುದು ಸರ್ಕಾರವನ್ನು ಇನ್ನಷ್ಟು ಇಕ್ಕಟ್ಟಿಗೆ ಸಿಲುಕಿಸಿದೆ. ಮೊದಲೇ ಕೋವಿಡ್ ಸಂಕಷ್ಟದ ಸವಾಲಿನ ಬಜೆಟ್ ಇದಾಗಿತ್ತು.

ಇದರೊಂದಿಗೆ ಇಂತಹ ವಿದ್ಯಮಾನಗಳು ಸೇರಿಕೊಂಡು ಸವಾಲನ್ನು ದ್ವಿಗುಣಗೊಳಿಸಿವೆ. ಮುಖ್ಯಮಂತ್ರಿಯವರು ಮಾರ್ಚ್ 8 ರಂದು ಬಜೆಟ್ ಮಂಡನೆ ಮಾಡಲಿದ್ದಾರೆ. ಮಾರ್ಚ್ 4 ಮತ್ತು 5 ಒಂದು ದೇಶ, ಒಂದು ಚುನಾವಣೆ ಚರ್ಚೆಗೆ ಮೀಸಲಾಗಿವೆ. ಪೂರ್ಣಾವಧಿ ಸಭಾಪತಿಯಾಗಿ ಬಸವರಾಜ ಹೊರಟ್ಟಿಯವರಿಗೆ ಇದು ಮೊದಲ ಅಧಿವೇಶನ ಎಂಬುದು ಇನ್ನೊಂದು ವಿಶೇಷ.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:04.03.2021.

## 53. ಅಭಿವೃದ್ಧಿ ಯೋಜನೆಗಳಿಗೆ ಹಣಕಾಸಿನ ಕೊರತೆ

ಅಭಿವೃದ್ಧಿ ಕಾರ್ಯಕ್ಕೆ ಕಡಿಮೆ ಪ್ರಮಾಣದ ಹಣ ಉಳಿಯುವುದರಿಂದ ನಿರೀಕ್ಷೆಗೆ ತಕ್ಕಂತೆ ಅಭಿವೃದ್ದಿ ಕಾರ್ಯಗಳಾಗುವುದಿಲ್ಲ ಎಂದು ವಿಧಾನ ಸಭೆಯ ಸಭಾಧ್ಯಕ್ಷರು ಅಭಿಪ್ರಾಯ ಪಟ್ಟಿದ್ದಾರೆ.

ಕರ್ನಾಟಕ ವಿಧಾನಮಂಡಲ ಮತ್ತು ನವದೆಹಲಿಯ ಪಿಆರ್‌ಎಸ್ ಶಾಸನ ಸಂಶೋಧನಾ ಸಂಸ್ಥೆ ಸಹಯೋಗದಲ್ಲಿ ವಿಕಾಸಸೌಧದಲ್ಲಿ ಆಯೋಜಿಸಿದ್ದ ಆಯವ್ಯಯ ಮತ್ತು ರಾಜ್ಯ ಹಣಕಾಸು ತರಬೇತಿ ಕಾರ್ಯಾಗಾರದಲ್ಲಿ ಮಾತನಾಡಿದ ಅವರು, ಎಲ್ಲೆಲ್ಲಿ ದುಂದುವೆಚ್ಚವಾಗುತ್ತದೆಯೋ ಅಲ್ಲಿ ಅದನ್ನು ಯಾವ ರೀತಿ ಕಡಿಮೆ ಮಾಡಬೇಕು ಎಂಬ ಅಂಶಗಳನ್ನು ಇಂತಹ ಕಾರ್ಯಾಗಾರಗಳ ಮೂಲಕ ಪರಿಣಿತರಿಂದ ತಿಳಿಯಬಹುದು. ಇದೇ ರೀತಿ ಮುಂದುವರಿದರೆ ಮುಂದಿನ ದಿನಗಳಲ್ಲಿ ಅಭಿವೃದ್ಧಿ ಕಾರ್ಯಗಳಿಗೆ ಹಣದ ಕೊರತೆಯಾಗಿ ಹಿನ್ನಡೆ ಉಂಟಾಗಲಿದೆ ಎಂದರು.

ರಾಜ್ಯ ಸರ್ಕಾರದ ಆದಾಯದ ಶೇ.60 ರಿಂದ 70 ರಷ್ಟು ಹಣ ಸಾಲದ ಮೇಲಿನ ಬಡ್ಡಿ, ಸರ್ಕಾರಿ ನೌಕರರ ವೇತನ ಹಾಗೂ ಪಿಂಚಣಿಗೆ ಖರ್ಚಾಗುತ್ತಿದೆ. ಜನರ ಆಪೇಕ್ಷೆಗೆ ತಕ್ಕಂತೆ ಅಭಿವೃದ್ಧಿ ಕಾರ್ಯ ಆಗುತ್ತಿಲ್ಲ. ಕಾಯ್ದೆ ರಚಿಸುವುದು, ಬಜೆಟ್‌ಗೆ ಅನುಮೋದನೆ ನೀಡುವುದು ಶಾಸಕರ ಪರಮಾಧಿಕಾರವಾಗಿದ್ದು, ಆಡಳಿತ ನಡೆಸುವ ಜವಾಬ್ದಾರಿಯೂ ಜನಪ್ರತಿನಿಧಿಗಳದ್ದೇ ಆಗಿದೆ. ಈ ಕಾರ್ಯದಲ್ಲಿ ಎಷ್ಟರಮಟ್ಟಿಗೆ ತೊಡಗಿಸಿಕೊಂಡು ತನ್ನ ಶಕ್ತಿಯನ್ನು ಇನ್ನಷ್ಟು ವಿಶಾಲಗೊಳಿಸಿಕೊಳ್ಳಬಹುದು ಎಂಬುದನ್ನು ಇಂತಹ ಕಾರ್ಯಾಗಾರದಿಂದ ತಿಳಿದುಕೊಳ್ಳಬಹುದಾಗಿದೆ ಎಂದರು.

**ರಾಜ್ಯಗಳಿಗೆ ಮಾದರಿ:** ಹನ್ನೆರಡನೇ ಶತಮಾನದಲ್ಲಿ ಅನುಭವ ಮಂಟಪದ ಮೂಲಕ ಪ್ರಜಾಪ್ರಭುತ್ವದ ವ್ಯವಸ್ಥೆಯನ್ನು ಶರಣರು ನೀಡಿದರು. ಮೈಸೂರು ಅರಸರ ಕಾಲದಲ್ಲೇ ಪ್ರಜಾಪ್ರಭುತ್ವ ಪ್ರತಿನಿಧಿ ಜಾರಿಗೆ ಬಂದಿತ್ತು. 1907ರಲ್ಲಿ ವಿಧಾನ ಪರಿಷತ್ ಪ್ರಾರಂಭವಾಗಿದೆ. ಈ ರೀತಿಯ ಹಿನ್ನೆಲೆಯಿರುವ ನಮ್ಮ ರಾಜ್ಯ ಇತರೆ ರಾಜ್ಯಗಳಿಗಿಂತ ಮಾದರಿಯಾಗಬೇಕು. ನಮ್ಮ ಜವಾಬ್ದಾರಿ ನಿರ್ವಹಣೆ ಮಾಡಲು ಪರಿಣಿತರ ಮಾರ್ಗದರ್ಶನ, ಸಲಹೆ ಅಗತ್ಯ ಎಂದರು.

ಶಾಸನ ರಚನೆ ಮಾಡಲು ನಮ್ಮ ಚಿಂತನೆ ವಿಶಾಲವಾಗಬೇಕು. ಅದಕ್ಕಾಗಿ ತಜ್ಞರ ಅನುಭವ ಆಧರಿಸಿ ಕಾಯ್ದೆ ರಚಿಸಬೇಕಾಗುತ್ತದೆ. ವಿಧಾನ ಮಂಡಲದಲ್ಲಿ ಸಂಶೋಧನೆ, ಗ್ರಂಥಾಲಯವಿದ್ದರೂ ದೇಶ ಹಾಗೂ ರಾಜ್ಯದ ವ್ಯವಸ್ಥೆ ಬಗ್ಗೆ ವಿಶ್ಲೇಷಣೆ ಮಾಡುವಷ್ಟು ಸಿಬ್ಬಂದಿ ಇಲ್ಲ. ಇಂದಿನ ಕಾರ್ಯಾಗಾರಕ್ಕೆ ಶಾಸಕರು ಕಡಿಮೆ ಸಂಖ್ಯೆಯಲ್ಲಿ ಬಂದಿದ್ದಾರೆ ಎಂಬ ಭಾವನೆ ಬೇಡ. ಹಲವು ಬೋಗಿಗಳು ಇರುವ ರೈಲಿಗೆ ಇಂಜಿನ್ ಇರುವುದು ಒಂದೇ, ಮುಂದಿನ ದಿನಗಳಲ್ಲಿ ಹೆಚ್ಚು ಶಾಸಕರು ಬರುವಂತೆ ಈ ಕಾರ್ಯಾಗಾರ ನಡೆಯಲಿ. ಪಿಆರ್‌ಎಸ್ ಶಾಸನ ಸಂಶೋಧನಾ ಸಂಸ್ಥೆ ಕಳೆದ 16 ವರ್ಷಗಳಿಂದ ದೇಶದಲ್ಲಿ ಆಡಳಿತಗಾರರಿಗೆ ನೀತಿ ರೂಪಿಸಲು ಅಗತ್ಯ ಮಾಹಿತಿ ಸಂಗ್ರಹಿಸಿ ವಿಶ್ಲೇಷಣೆ ಮಾಡುತ್ತಿದೆ. ಯಾವುದೇ ಲಾಭದ ಉದ್ದೇಶವಿಲ್ಲದೆ ಈ ಸಂಸ್ಥೆ ಶಿಕ್ಷಣ ನೀಡುವ ಕೆಲಸ ಮಾಡುತ್ತಿದೆ ಎಂದು ಮೆಚ್ಚುಗೆ ವ್ಯಕ್ತಪಡಿಸಿದರು.

**ಮಾದರಿಯಾಗುವ ರೀತಿಯಲ್ಲಿ ಕಲಾಪ ನಡೆಯಲಿದೆ:** ವಿಧಾನ ಸಭೆ ಮತ್ತು ವಿಧಾನ ಪರಿಷತ್ ಸದನಗಳು ಸುಸೂತ್ರವಾಗಿ ನಡೆಯಬೇಕು. ಕಾರ್ಯಕಲಾಪ ಪಟ್ಟಿಯಂತೆ ನಡೆಯಬೇಕು ಆ ನಿಟ್ಟಿನಲ್ಲಿ ಶಾಸಕರಿಗೆ ಅನುಕೂಲವಾಗುವಂತೆ ಕಾರ್ಯಾಗಾರ ಏರ್ಪಡಿಸಲಾಗಿದೆ. ಬಜೆಟ್ ಮೇಲಿನ ಚರ್ಚೆಯಲ್ಲಿ ಪಾಲ್ಗೊಂಡು ಶಾಸಕರು ಸರ್ಕಾರಕ್ಕೆ ಸಲಹೆ ನೀಡುವ ಮೂಲಕ ಬೆಳಕು ಚೆಲ್ಲಬೇಕು. ಸಭಾಧ್ಯಕ್ಷರೊಂದಿಗೆ ಚರ್ಚಿಸಿ ಕೆಲವೊಂದು ತಂಡವನ್ನು ರಚನೆ ಮಾಡುತ್ತೇವೆ. ಆ ತಂಡದ ನಾಯಕರಿಗೆ ತರಬೇತಿ ನೀಡಲಾಗುವುದು. ಬಜೆಟ್ ಮತ್ತು ರಾಜ್ಯಪಾಲರ ಭಾಷಣ ಸೇರಿದಂತೆ ಯಾವ ರೀತಿ ಕಲಾಪ ನಡೆಯಬೇಕು ಎಂಬ ಬಗ್ಗೆ ತರಬೇತಿ ನೀಡಲಾಗುವುದು. ಮಾದರಿಯಾಗುವ ರೀತಿಯಲ್ಲಿ ಕಲಾಪಗಳು ನಡೆಯಬೇಕೆಂಬುದು ನಮ್ಮ ಉದ್ದೇಶ ಎಂದು ವಿಧಾನ ಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ ತಿಳಿಸಿದರು.

ಆಧಾರ: ವಿಶ್ವವಾಣಿ, ದಿನಾಂಕ:04.03.2021.

## 54. ಜನ ಭ್ರಮನಿರಸನಗೊಂಡರೆ ಅರಾಜಕತೆ: ಸ್ಪೀಕರ್ ಕಾಗೇರಿ

ಜನಪ್ರತಿನಿಧಿಗಳು ಉತ್ತಮ ಆಡಳಿತ ನೀಡುವ ಮೂಲಕ ದೇಶವನ್ನು ಬಲಿಷ್ಠಗೊಳಿಸದಿದ್ದರೆ ಮತ್ತು ಪ್ರಜಾಪ್ರಭುತ್ವದ ಬಗ್ಗೆ ಜನರು ಭ್ರಮನಿರಸನಗೊಂಡರೆ ಅದು ಅರಾಜಕತೆಗೆ ದಾರಿಯಾಗುತ್ತದೆ ಎಂದು ಸಭಾಧ್ಯಕ್ಷರು ಹೇಳಿದರು. ಆಯವ್ಯಯ ಮತ್ತು ರಾಜ್ಯ ಹಣಕಾಸು ಕುರಿತು ಶಾಸಕರಿಗೆ ಏರ್ಪಡಿಸಿದ್ದ ತರಬೇತಿ ಕಾರ್ಯಾಗಾರದಲ್ಲಿ ಮಾತನಾಡಿದ ಅವರು ಉತ್ತಮ ಆಡಳಿತ ನೀಡುವುದು. ಆಯವ್ಯಯಕ್ಕೆ ಅನುಮೋದನೆ ನೀಡುವುದು ಕೇವಲ ಜನಪ್ರತಿನಿಧಿಗಳ ಕೆಲಸ. ಬೇರೆ ಯಾರಿಗೂ ಇಂತಹ ಮಹತ್ವದ ಹೊಣೆಗಾರಿಕೆ ಇರುವುದಿಲ್ಲ. ಇಂತಹ ಹೊಣೆಗಾರಿಕೆಯಿಂದ ದೂರ ಸರಿಯದೇ ಜನರ ನಿರೀಕ್ಷೆಗೆ ತಕ್ಕಂತೆ ನಾವು ಕೆಲಸ ಮಾಡಬೇಕಾಗುತ್ತದೆ ಎಂದರು.

ಆಧಾರ: ಕನ್ನಡಪ್ರಭ, ದಿನಾಂಕ:04.03.2021.

## 55. ಸಲಹಾ ಸಮಿತಿ ಪುನಾರಚನೆ

ವಿಧಾನ ಪರಿಷತ್ ಕಾರ್ಯಾಕಲಾಪ ಸಲಹಾ ಸಮಿತಿ ಹಾಗೂ ಸಭಾಪತಿಗಳ ಪ್ಯಾನಲ್ ಅನ್ನು ಸಭಾಪತಿ ಬಸವರಾಜ ಹೊರಟ್ಟಿ ಪುನರ್ ರಚಿಸಿದ್ದಾರೆ. ಸಭಾಪತಿ ನೇತೃತ್ವದ ಕಲಾಪ ಸಲಹಾ ಸಮಿತಿಗೆ ಉಪ ಸಭಾಪತಿ ಪ್ರಾಣೇಶ್, ಸಭಾನಾಯಕ ಕೋಟ ಶ್ರೀನಿವಾಸ ಪೂಜಾರಿ, ಪ್ರತಿಪಕ್ಷ ನಾಯಕ ಎಸ್. ಆರ್. ಪಾಟೀಲ್, ಸರ್ಕಾರದ ಮುಖ್ಯ ಸಚೇತಕ ಮಹಾಂತೇಶ್ ಕವಟಗಿಮಠ, ಕಾಂಗ್ರೆಸ್ ಸಚೇತಕ ನಾರಾಯಣಸ್ವಾಮಿ, ಹಿರಿಯ ಸದಸ್ಯರಾದ ಪ್ರತಾಪ್‌ಚಂದ್ರಶೆಟ್ಟಿ, ಬಿ.ಕೆ. ಹರಿಪ್ರಸಾದ್, ಶಶಿಲ್ ನಮೋಶಿ, ಮರಿತಿಬ್ಬೇಗೌಡ ಅವರನ್ನು ಸದಸ್ಯರನ್ನಾಗಿ ನೇಮಿಸಲಾಗಿದೆ. ಮುಖ್ಯಮಂತ್ರಿ ಹಾಗೂ ಗೃಹಸಚಿವ ಬಸವರಾಜ ಬೊಮ್ಮಾಯಿ ವಿಶೇಷ ಆಹ್ವಾನಿತರಾಗಿರಲಿದ್ದಾರೆ. ಅದೇ ರೀತಿ ಸದನದಲ್ಲಿ ಸಭಾಪತಿ ಹಾಗೂ ಉಪ ಸಭಾಪತಿ ಇಲ್ಲದ ವೇಳೆ ಕೆ.ಸಿ. ಕೊಂಡಯ್ಯ, ಹೆಚ್.ವಿಶ್ವನಾಥ್, ಮರಿತಿಬ್ಬೇಗೌಡ ಹಾಗೂ ಪುಟ್ಟಣ್ಣ ಅವರು ಕಲಾಪ ನಡೆಸಿಕೊಡಲಿದ್ದಾರೆ ಎಂದು ಸಭಾಪತಿಗಳು ಸದನದಲ್ಲಿ ಪ್ರಕಟಿಸಿದ್ದಾರೆ.

ಆಧಾರ: ವಿಶ್ವವಾಣಿ, ದಿನಾಂಕ:05.03.2021.

## 56. ಸಂಗಮೇಶ್ವರ ಅಮಾನತ್ತು – ಕೋಲಾಹಲ

ಒಂದು ರಾಷ್ಟ್ರ–ಒಂದು ಚುನಾವಣೆಯ ಚರ್ಚೆ ವಿರೋಧಿಸಿ ಕಾಂಗ್ರೆಸ್ ಸದಸ್ಯರು ಧರಣಿ ನಡೆಸುತ್ತಿದ್ದ ವೇಳೆ ಅಂಗಿ ಬಿಚ್ಚಿ ಪ್ರತಿಭಟನೆ ತೋರಿದ ಭದ್ರಾವತಿ ಕ್ಷೇತ್ರದ ಕಾಂಗ್ರೆಸ್ ಶಾಸಕ ಬಿ.ಕೆ. ಸಂಗಮೇಶ್ವರ ಅವರನ್ನು ಸದನದಿಂದ ಒಂದು ವಾರ ಅಮಾನತ್ತು ಮಾಡಿರುವುದು ಕೋಲಾಹಲಕ್ಕೆ ಕಾರಣವಾಯಿತು.

ಅಮಾನತ್ತು ಅದೇಶವನ್ನು ಹಿಂದಕ್ಕೆ ಪಡೆಯಬೇಕು. ಇಲ್ಲದಿದ್ದರೆ ನಮ್ಮೆಲ್ಲರನ್ನೂ ಅಮಾನತ್ತು ಮಾಡಿ ಹೊರಗೆ ಕಳುಹಿಸಿ ಎಂದು ವಿರೋಧ ಪಕ್ಷದ ನಾಯಕ ಸಿದ್ದರಾಮಯ್ಯ ಅಕ್ರೋಶ ವ್ಯಕ್ತಪಡಿಸಿದರು.

ಕಾಂಗ್ರೆಸ್ ಸದಸ್ಯರು ಸಭಾಧ್ಯಕ್ಷರ ಪೀಠದ ಎದುರು ಧರಣಿ ನಡೆಸುತ್ತಿದ್ದಾಗ ಸಂಗಮೇಶ್ವರ ಅಂಗಿ ಬಿಚ್ಚಿ ಹೆಗಲ ಮೇಲೆ ಹಾಕಿಕೊಂಡರು. ಈ ವೇಳೆ ಕಾಗೇರಿ 'ಇದು ರಸ್ತೆ ಎಂದು ಕೊಂಡಿದ್ದೀರಾ, ಇದು ಸದನ, ಸದನಕ್ಕೆ ಅಗೌರವ ತೋರುತ್ತಿದ್ದೀರಿ. ಇಂತಹ ವರ್ತನೆಯನ್ನು ಸಹಿಸಲು ಸಾಧ್ಯವಿಲ್ಲ ಎಂದು ಎಚ್ಚರಿಕೆ ನೀಡಿದರು. ಸಂಗಮೇಶ್ವರ ಸಮಜಾಯಿಷಿ ನೀಡಲು ಮುಂದಾದರು. ನಿಮಗೆ ಮಾನ ಮರ್ಯಾದೆ ಇಲ್ಲವೇನ್ರಿ ಎಂದು ಗದರಿದ ಮುಖ್ಯಮಂತ್ರಿಯವರು ತರಾಟೆಗೆ ತೆಗೆದುಕೊಂಡರು. ಈ ವೇಳೆ ಪಕ್ಕದಲ್ಲಿದ್ದ ಕಾಂಗ್ರೆಸ್ ಸದಸ್ಯ ಡಿ.ಕೆ. ಶಿವಕುಮಾರ್ ಅವರು ಸಂಗಮೇಶ್ವರ್‌ಗೆ ಶರ್ಟ್ ತೊಡಿಸಿದರು. ಬಳಿಕ ಸಭಾಧ್ಯಕ್ಷರು ಕಲಾಪವನ್ನು 15 ನಿಮಿಷ ಮುಂದೂಡಿದರು.

ನಂತರ ಕಲಾಪ ಆರಂಭವಾಗುತ್ತಿದ್ದಂತೆ ಕಾಗೇರಿ ಅವರು ಸದನದಲ್ಲಿ ಬೇಜವಾಬ್ದಾರಿ ಹಾಗೂ ಅಶಿಸ್ತನ್ನು ಸಹಿಸಲು ಸಾಧ್ಯವಿಲ್ಲ ಎಂದು ಹೇಳಿದರು.

ಸಂಗಮೇಶ್ವರ ಅವರನ್ನು ಸದನದಿಂದ ಇದೇ 12ರವರೆಗೆ ಅಮಾನತ್ತು ಮಾಡುವ ಪ್ರಸ್ತಾವವನ್ನು ಸಂಸದೀಯ ವ್ಯವಹಾರಗಳ ಸಚಿವ ಬಸವರಾಜ ಬೊಮ್ಮಾಯಿ ಮಂಡಿಸಿದರು. ಬಳಿಕ ನಿರ್ಧಾರ ಪ್ರಕಟಿಸಿದ ಸಭಾಧ್ಯಕ್ಷರು ಅವರು ಸಂಗಮೇಶ್ವರ ಕೂಡಲೇ ಸದನದಿಂದ ಹೊರಕ್ಕೆ ಹೋಗಬೇಕು ಎಂದು ಸೂಚಿಸಿದರು.

**ಅಮಾನತ್ತು ಹಿಂದಕ್ಕೆ ಪಡೆಯಲು ಪಟ್ಟು:** ಭೋಜನ ವಿರಾಮದ ಬಳಿಕ ಕಲಾಪ ಮತ್ತೆ ಆರಂಭಗೊಂಡ ಬಳಿಕ ಸಿದ್ದರಾಮಯ್ಯ ಮಾತನಾಡಿ ಸಂಗಮೇಶ್ವರ ಅವರ ಅಮಾನತ್ತು ಆದೇಶವನ್ನು ಹಿಂದಕ್ಕೆ ಪಡೆಯಬೇಕು ಎಂದು ಅಗ್ರಹಿಸಿದರು.

ಸಂಗಮೇಶ್ವರ ಅವರ ಕುಟುಂಬದ ಸದಸ್ಯರ ಮೇಲೆ ದೌರ್ಜನ್ಯದ ಪ್ರಕರಣ ದಾಖಲಿಸಲಾಗಿದೆ. ಅವರಿಗೆ ವಿಷಯ ಪ್ರಸ್ತಾಪಿಸಲು ಅವಕಾಶ ನೀಡಬೇಕಿತ್ತು. ಅವಕಾಶ ಸಿಗದ ಕಾರಣ ಪ್ರತಿಭಟನೆ ಮಾಡಿದ್ದಾರೆ. ಅದ್ದರಿಂದ ಅವರ ಅಮಾನತ್ತು ಆದೇಶ ಹಿಂದಕ್ಕೆ ಪಡೆಯಬೇಕು. ಇಲ್ಲವಾದರೆ ನಮ್ಮೆಲ್ಲರನ್ನೂ ಅಮಾನತ್ತು ಮಾಡಿ ಎಂದು ಸಿದ್ದರಾಮಯ್ಯ ಅಗ್ರಹಿಸಿದರು.

ಸಭಾಧ್ಯಕ್ಷರ ಅದೇಶ ಪ್ರಜಾಪ್ರಭುತ್ವದ ಕಗ್ಗೊಲೆ. ಇಲ್ಲಿ ಹಿಟ್ಲರ್ ಆಡಳಿತ ನಡೆಯಲ್ಲ. ನೀವು ಎಲ್ಲರನ್ನು ಅರೆಸ್ಟ್ ಮಾಡಿಸಿ ಹೊರಗೆ ಕಳುಹಿಸಿ ಎಂದು ಸಿದ್ದರಾಮಯ್ಯ ಅಕ್ರೋಶ ವ್ಯಕ್ತಪಡಿಸಿದರು.

ಆಧಾರ: ಪ್ರಜಾವಾಣಿ, ದಿನಾಂಕ:05.03.2021.

## 57. ತುಳಸಿ ಮುನಿರಾಜುಗೌಡ ನಾಮಪತ್ರ ಸಲ್ಲಿಕೆ

ಎಸ್. ಎಲ್. ಧರ್ಮೇಗೌಡರಿಂದ ಖಾಲಿಯಾಗಿರುವ ಪರಿಷತ್ ಸ್ಥಾನಕ್ಕೆ ವಿಧಾನ ಸಭೆಯಿಂದ ವಿಧಾನ ಪರಿಷತ್ತಿಗೆ ನಡೆಯುವ ಚುನಾವಣೆಗೆ ಬಿಜೆಪಿ ಅಭ್ಯರ್ಥಿಯಾಗಿ ತುಳಸಿ ಮುನಿರಾಜುಗೌಡ ನಾಮಪತ್ರ ಸಲ್ಲಿಸಿದ್ದಾರೆ.

ಮುಖ್ಯಮಂತ್ರಿ ಯಡಿಯೂರಪ್ಪ ಹಾಗೂ ರಾಜ್ಯ ಬಿಜೆಪಿ ಅಧ್ಯಕ್ಷ ನಳಿನ್ ಕುಮಾರ್ ಕಟೀಲ್ ನೇತೃತ್ವದಲ್ಲಿ ವಿಧಾನ ಸಭೆ ಕಾರ್ಯದರ್ಶಿ ಎಂ.ಕೆ. ವಿಶಾಲಾಕ್ಷಿ ಅವರಿಗೆ ನಾಮಪತ್ರ ಸಲ್ಲಿಸಿದರು. ನಂತರ ನಳಿನ್ ಕುಮಾರ್ ಕಟೀಲ್ ಮಾತನಾಡಿ, ತುಳಸಿ ಮುನಿರಾಜುಗೌಡ ಪಕ್ಷದ ತಳಮಟ್ಟದ ಕಾರ್ಯಕರ್ತ ಯುವ ಮೋರ್ಚಾ ಅಧ್ಯಕ್ಷರಾಗಿ ಕೆಲಸ ಮಾಡಿದವರು. ಲೋಕಸಭಾ, ವಿಧಾನಸಭಾ ಚುನಾವಣೆಗೆ ಸ್ಪರ್ಧೆ ಮಾಡಿದರು. ಹಾಲಿ ರಾಜ್ಯ ಕಾರ್ಯದರ್ಶಿಗಳಾಗಿದ್ದಾರೆ. ಅವರನ್ನು ಪಕ್ಷ ಈಗ ಗುರುತಿಸಿದೆ. ಪಕ್ಷದ ಸರ್ವಸಮ್ಮತದ ಅಭ್ಯರ್ಥಿ ಆಗಿ ನಾಮಪತ್ರ ಸಲ್ಲಿಸಿದ್ದಾರೆ ಎಂದು ಹೇಳಿದರು.

ಆಧಾರ: ಉದಯವಾಣಿ, ದಿನಾಂಕ:05.03.2021.

## 58. ಸಿಎಂ ಸೇರಿದಂತೆ ಯಾರಿಗೆ ಪ್ರಶ್ನೆ ಇರುತ್ತೋ ಅವರೇ ಉತ್ತರಿಸಬೇಕು

ವಿಧಾನ ಪರಿಷತ್ ಕಲಾಪದಿಂದ ಮುಖ್ಯಮಂತ್ರಿಗಳು ದೂರ ಉಳಿಯಬಾರದು. ಸಿಎಂಗೆ ಕೇಳಿದ ಪ್ರಶ್ನೆಗೆ ಅವರೇ ಉತ್ತರ ನೀಡಬೇಕು. ಯಾವ ಸಚಿವರಿಗೆ ಪ್ರಶ್ನೆ ಕೇಳಲಾಗಿರುತ್ತದೆಯೋ ಆ ಸಚಿವರೇ ಉತ್ತರ ನೀಡುವಂತೆ ನೋಡಿಕೊಳ್ಳಬೇಕು ಎಂದು ಸಭಾನಾಯಕ ಕೋಟ ಶ್ರೀನಿವಾಸ ಪೂಜಾರಿಗೆ ಸಭಾಪತಿ ಬಸವರಾಜ ಹೊರಟ್ಟಿ ನಿರ್ದೇಶನ ನೀಡಿದ್ದಾರೆ.

ವಿಧಾನ ಪರಿಷತ್‌ನ ಪ್ರಶ್ನೋತ್ತರ ಕಲಾಪದಲ್ಲಿ ಸಾಕಷ್ಟು ಪ್ರಶ್ನೆಗಳಿಗೆ ನಿಯಮ 330 ಆಡಿ ಕೆಲವು ಹಾಗೂ ಗಮನ ಸೆಳೆಯುವ ಮೂರು ಸೂಚನೆಗಳಿಗೆ ಮುಖ್ಯಮಂತ್ರಿಯವರು ಉತ್ತರಿಸಬೇಕಿದ್ದರೂ ಸದನಕ್ಕೆ ಆಗಮಿಸಿರಲಿಲ್ಲ. ಸಿಎಂ. ಬದಲು ಸಭಾನಾಯಕ ಕೋಟ ಶ್ರೀನಿವಾಸ ಪೂಜಾರಿ ಉತ್ತರ ನೀಡಿದರು.

ಕಾಂಗ್ರೆಸ್ ಸದಸ್ಯ ಪ್ರತಾಪಚಂದ್ರ ಶೆಟ್ಟಿ ಇಂಧನ ಇಲಾಖೆ ಅಧೀನದ ವಿದ್ಯುತ್ ವಿತರಣಾ ಕಂಪನಿಗಳ ಖಾಸಗೀಕರಣಕ್ಕೆ ಕಾರಣವೇನು, ಉದ್ದೇಶ ಏನು, ಏನು ತೊಂದರೆ ಆಗಿದೆ ಎಂದು ಕೇಳಿದ ಪ್ರಶ್ನೆಗೆ ಮುಖ್ಯಮಂತ್ರಿ ಪರ ಸಭಾನಾಯಕ ಕೋಟ ಶ್ರೀನಿವಾಸ ಪೂಜಾರಿ ಉತ್ತರಿಸಲು ಮುಂದಾದಾಗ ಪ್ರಶ್ನೆ ಕೇಳಿದ ಸದಸ್ಯ ಅಸಮಾಧಾನ ವ್ಯಕ್ತಪಡಿಸಿದರು.

ಎಲ್ಲ ಪ್ರಶ್ನೆಗೆ ಮುಖ್ಯಮಂತ್ರಿ ಪರವಾಗಿ ಕೋಟ ಶ್ರೀನಿವಾಸ ಪೂಜಾರಿ ಉತ್ತರ ನೀಡುತ್ತಿದ್ದಕ್ಕೆ ಪ್ರತಿಪಕ್ಷ ಸದಸ್ಯರಿಂದ ಆಕ್ಷೇಪ ವ್ಯಕ್ತವಾಯಿತು. ಮುಖ್ಯಮಂತ್ರಿ ಒಮ್ಮೆಯೂ ಪರಿಷತ್‌ಗೆ ಬಂದಿಲ್ಲ ಈ ಸದನಕ್ಕೆ ಬೆಲೆ ಇಲ್ಲವಾ ಎಂದು ಪ್ರಶ್ನಿಸಿದರು. ಎಲ್ಲ ಕೇಳಿಸಿಕೊಂಡು ಮುಖ್ಯಮಂತ್ರಿಗಳ ಗಮನಕ್ಕೆ ತರುತ್ತೇವೆ ಎನ್ನುವ ಉತ್ತರಕ್ಕಾಗಿ ನಾವು ಪ್ರಶ್ನೆ ಕೇಳುವುದಿಲ್ಲ ಎಂದು ಪ್ರತಾಪಚಂದ್ರ ಶೆಟ್ಟಿ ಅಸಮಾಧಾನ ಹೊರಹಾಕಿದರು.

**ಸದನದಲ್ಲಿ ಇರಬೇಕಾದ ಸಚಿವರು:** ಸಭಾ ನಾಯಕ ಕೋಟ ಶ್ರೀನಿವಾಸ ಪೂಜಾರಿ ಡಿಸಿಎಂ ಲಕ್ಷ್ಮಣ ಸವದಿ, ಸಚಿವರಾದ ಆರ್. ಆಶೋಕ, ಉಮೇಶ್ ಕತ್ತಿ, ಮುರುಗೇಶ್ ನಿರಾಣಿ, ಆರ್.ಶಂಕರ್, ಶ್ರೀಮಂತ ಪಾಟೀಲ್, ಆನಂದ್ ಸಿಂಗ್ ಅವರು ವಿಧಾನ ಪರಿಷತ್ ಕಲಾಪದಲ್ಲಿ ಕಡ್ಡಾಯವಾಗಿ ಇರಬೇಕು. ಇವರೆಲ್ಲಾ ಇರುವಂತೆ ನೋಡಿಕೊಳ್ಳಿ ಎಂದು ಸಭಾನಾಯಕರಿಗೆ ಸಭಾಪತಿ ಬಸವರಾಜ ಹೊರಟ್ಟಿ ಸೂಚನೆ ನೀಡಿದರು.

ಆಧಾರ: ವಿಶ್ವವಾಣಿ, ದಿನಾಂಕ:05.03.2021.

## 59. ಅಂಕೆ ಇಲ್ಲದ ಅಧಿವೇಶನಕ್ಕೆ ಕ್ರಿಯಾಲೋಪ ಅಡ್ಡಗಾಲು

ಒಂದು ರಾಷ್ಟ್ರ – ಒಂದು ಚುನಾವಣೆ ವಿಷಯದ ಕುರಿತ ಚರ್ಚೆಯೊಂದಿಗೆ ಆರಂಭವಾಗಿದ್ದ ಬೇಕಿದ್ದ ಬಜೆಟ್ ಅಧಿವೇಶನವು ಆರಂಭದಲ್ಲೇ ವಿರೋಧ ಪಕ್ಷ ಕಾಂಗ್ರೆಸ್ ಎತ್ತಿರುವ ಕ್ರಿಯಾಲೋಪದ ಪರಿಣಾಮವಾಗಿ ಇಡೀ ಚರ್ಚೆ ಗದ್ದಲವಾಗಿ ಪರಿವರ್ತನೆಗೊಂಡಿದ್ದು ಕಲಾಪ ಧರಣಿ, ಧಿಕ್ಕಾರದ ಘೋಷಣೆ ಹಾಗೂ ಗದ್ದಲದಲ್ಲೇ ಕೊನೆಗೊಂಡಿತು.

ಭದ್ರಾವತಿ ಶಾಸಕ ಬಿ.ಕೆ. ಸಂಗಮೇಶ್ ತಮ್ಮ ಕ್ಷೇತ್ರದಲ್ಲಿ ನಡೆದ ಘಟನೆಯಲ್ಲಿ ತಮ್ಮನ್ನೂ ಸೇರಿ ತಮ್ಮ ಕುಟುಂಬದ ಸದಸ್ಯರ ಮೇಲೆ ಗಂಭೀರ ಪ್ರಕರಣ ದಾಖಲಿಸಿರುವುದನ್ನು ವಿರೋಧಿಸಿ ಸದನದಲ್ಲಿ ಅಂಗಿ ಕಳಚಿ ಹೋರಾಟಕ್ಕೆ ಮುಂದಾದ ಘಟನೆ ಇಡೀ ಸದನದ ದಾರಿ ತಪ್ಪಿಸಿತಲ್ಲದೇ ಸಭಾಧ್ಯಕ್ಷರು ಸಂಗಮೇಶ್ ಅವರನ್ನು 1 ವಾರ ಕಾಲ ಅಮಾನತ್ತುಗೊಳಿಸಿದರು.

ಒಂದು ರಾಷ್ಟ್ರ–ಒಂದು ಚುನಾವಣೆ ವಿಷಯದ ಬಗ್ಗೆ ವಿಶೇಷ ಚರ್ಚೆಯನ್ನು ಸಭಾಧ್ಯಕ್ಷರು ಕೈಗೆತ್ತಿಕೊಳ್ಳುತ್ತಿದ್ದಂತೆಯೇ ಪ್ರತಿಪಕ್ಷ ಕಾಂಗ್ರೆಸ್ ಚರ್ಚೆಗೆ ತೀವ್ರ ವಿರೋಧ ವ್ಯಕ್ತಪಡಿಸಿತು. ಈ ವೇಳೆ ಕಾಂಗ್ರೆಸ್ ಸದಸ್ಯ ಹೆಚ್.ಕೆ.ಪಾಟೀಲ್ ವಿಶೇಷ ಚರ್ಚೆ ನಡೆಸುವ ಬಗೆಗೆ ವಿಧಾನ ಸಭೆ ಕಾರ್ಯದರ್ಶಿಗಳು ಸದನದ ಸದಸ್ಯರಿಗೆ ನೀಡಿದ ಲಘು ಟಿಪ್ಪಣಿಯಲ್ಲಿ ಚರ್ಚೆಯ ವಿಷಯವನ್ನು ಲೋಕಸಭೆ ಮತ್ತು ವಿಧಾನಸಭೆಗಳಿಗೆ ಏಕಕಾಲಕ್ಕೆ ನಡೆಸುವ ಬಗೆಗೆ ಸೀಮಿತಗೊಳಿಸಿರುವುದು ಸದನದ ಸದಸ್ಯರ ಮೇಲೆ ಸಭಾಧ್ಯಕ್ಷರು ಅಭಿಪ್ರಾಯ ಹೇರಿಕೆ ಮಾಡಿದಂತಾಗಿದೆ. ಈ ಬಗ್ಗೆ ಮೊದಲು ಚರ್ಚೆ ಆಗಬೇಕು ಎಂದು ಕ್ರಿಯಾಲೋಪ ಎತ್ತಿದರು.

ಇದನ್ನು ಒಪ್ಪದ ಸಭಾಧ್ಯಕ್ಷರು ವಿಶೇಷ ಚರ್ಚೆಯ ವಿಷಯವಾದ ಒಂದು ರಾಷ್ಟ್ರ–ಒಂದು ಚುನಾವಣೆ ಕುರಿತಂತೆ ಪೀಠಿಕೆಯನ್ನು ಸದನದಲ್ಲಿ ಮಂಡಿಸಿದರು. ಇದರಿಂದ ಆಕ್ರೋಶಗೊಂಡ ಪ್ರತಿಪಕ್ಷ ಕಾಂಗ್ರೆಸ್ ಸದಸ್ಯರು ಚರ್ಚೆಯನ್ನು ನಡೆಸದಂತೆ ಧರಣಿ ಆರಂಭಿಸಿದರು. ಹೀಗಾಗಿ ನಿರೀಕ್ಷೆಯಂತೆ ಒಂದು ದೇಶ – ಒಂದು ಚುನಾವಣೆಯ ವಿಷಯವಾಗಿ ಚರ್ಚೆ ನಡೆಯದೇ ಇಡೀ ದಿನ ಕಾಂಗ್ರೆಸ್ ಸದನದ ಬಾವಿಗೆ ಇಳಿದು ಪ್ರತಿಭಟನೆ ನಡೆಸಿತು. ಮತ್ತೊಂದು ಪ್ರತಿಪಕ್ಷ ಜೆಡಿಎಸ್ ಸದನದಲ್ಲಿ ಎರಡು ರಾಷ್ಟ್ರೀಯ ಪಕ್ಷಗಳು ಮಿಲಾಪಿ ಕುಸ್ತಿ ನಡೆಸುತ್ತಿವೆ. ಒಂದು ಪ್ರಾದೇಶಿಕ ಪಕ್ಷವಾಗಿ ಜೆಡಿಎಸ್ ಒಂದು ರಾಷ್ಟ್ರ, ಒಂದು ಚುನಾವಣೆ ಚರ್ಚೆಯನ್ನು ವಿರೋಧಿಸುತ್ತದೆ ಎಂದು ಸಭಾತ್ಯಾಗ ನಡೆಸಿತು.

ಈ ವಿಶೇಷ ಚರ್ಚೆಗೆ ಸಂಬಂಧಿಸಿದಂತೆ ಕಾಂಗ್ರೆಸ್ ಧರಣಿಯ ಪ್ರತಿಕ್ರಿಯೆ ತೋರುತ್ತದೆ ಎಂದು ಸರ್ಕಾರ ಊಹಿಸಿರಲಿಲ್ಲ. ಹಿಂದಿನ ಎರಡು ಅಧಿವೇಶನಗಳ ಸಂದರ್ಭದಲ್ಲಿ ನಡೆದ ಕಲಾಪ ಸಲಹಾ ಸಮಿತಿ ಸಭೆಗಳಲ್ಲಿ ಈ ವಿಷಯವಾಗಿ ಚರ್ಚಿಸಿದಾಗ ಕಾಂಗ್ರೆಸ್ ಆಕ್ಷೇಪಿಸಿರಲಿಲ್ಲ. ಬಜೆಟ್‌ಗೆ ಮುನ್ನ ದಿನ ವಿಶೇಷ ಚರ್ಚೆಯನ್ನು ನಿಗದಿ ಮಾಡಿದಾಗಲೂ ಪ್ರತಿಪಕ್ಷದಿಂದ ಆಕ್ಷೇಪ ಎದುರಾಗಿರಲಿಲ್ಲ. ಕಲಾಪ ಸಲಹಾ

ಸಮಿತಿಯಲ್ಲಿ ಕಾಂಗ್ರೆಸ್ ಕೂಡ ಸಮ್ಮತಿಸಿತ್ತು. ಆದರೆ ಅಧಿವೇಶನ ಆರಂಭದ ದಿನ ಬೆಳಗಿನ ರಾಜಕೀಯ ಬೆಳವಣಿಗೆಯಲ್ಲಿ ತನ್ನ ತಂತ್ರಗಾರಿಕೆಯನ್ನು ಕಾಂಗ್ರೆಸ್ ಬದಲಿಸಿತು. ಪರಿಣಾಮವಾಗಿ ಈ ವಿಷಯದ ಚರ್ಚೆಯನ್ನು ಯಾವ ನಿಯಮದ ಅಡಿ ಆರಂಭಿಸುವಿರಿ ಎಂಬ ಪ್ರಶ್ನೆಯ ಮೂಲಕ ಪ್ರತಿಭಟನೆ ಆರಂಭಿಸಿತು.

ಏಕಕಾಲಕ್ಕೆ ಲೋಕಸಭೆ ಮತ್ತು ವಿಧಾನಸಭೆಗಳಿಗೆ ಚುನಾವಣೆ ನಡೆಸಬೇಕು ಎಂಬುದು ಆರ್‌ಎಸ್‌ಎಸ್ ಮತ್ತು ಎನ್.ಡಿ.ಎ ಅಜೆಂಡಾ. ಇದನ್ನು ನಾವೇಕೆ ಬೆಂಬಲಿಸಬೇಕು ಎಂಬುದು ಕಾಂಗ್ರೆಸ್ ಸಭೆಯಲ್ಲಿ ಅಭಿಪ್ರಾಯ ವ್ಯಕ್ತವಾಗಿತ್ತು. ಸದನದ ಒಳಗೆ ತಾವು ಈ ಚರ್ಚೆಯಲ್ಲಿ ಪಾಲ್ಗೊಳ್ಳದೇ, ವಿಧಾನಸಭೆಯ ನಿರ್ಣಯಕ್ಕೆ ಬ್ರೇಕ್ ಹಾಕಲು ಕಾಂಗ್ರೆಸ್ ನಾಯಕತ್ವ ನಿರ್ಣಯಿಸಿತು ಎಂದು ಮೂಲಗಳು ತಿಳಿಸಿವೆ.

ಕಾಂಗ್ರೆಸ್ ಹೀಗೆ ಮಾಡಬಹುದು ಎನ್ನುವ ಸೂಚನೆಯನ್ನು ಮೊದಲೇ ಗ್ರಹಿಸಿದ್ದ ಮುಖ್ಯಮಂತ್ರಿಯವರು ಬಜೆಟ್ ಮಂಡನೆಗೆ ಮುನ್ನ ಈ ವಿಷಯ ಬೇಡ ಎಂಬ ಸಂದೇಶವನ್ನು ಸ್ಪೀಕರ್ ಕಛೇರಿಗೆ ರವಾನಿಸಿದ್ದರು ಎಂದು ಹೇಳಲಾಗಿದೆ. ಬಜೆಟ್ ಅಧಿವೇಶನವೆಂದರೆ ಅದು ಬಜೆಟ್ ಮಂಡನೆಯೊಂದಿಗೆ ಆರಂಭವಾಗುವುದು, ಇದುವರೆಗೆ ಸಾಮಾನ್ಯವಾಗಿ ನಡೆದುಕೊಂಡು ಬಂದಿದ್ದ ಸದನ ಸಂಪ್ರದಾಯ ಕರ್ನಾಟಕ ವಿಧಾನ ಸಭೆಯಲ್ಲಿ ಏಕಕಾಲಕ್ಕೆ ಚುನಾವಣೆಯ ಕುರಿತು ಚರ್ಚಿಸಲು ಅವಕಾಶವೇ ಇಲ್ಲ ಎಂಬುದು ವಿರೋಧ ಪಕ್ಷ ನಾಯಕ ಸಿದ್ದರಾಮಯ್ಯನವರ ವಾದವಾಗಿತ್ತು. ವಿಧಾನ ಪರಿಷತ್ತಿನ ಪ್ರತಿಪಕ್ಷದ ನಾಯಕ ಎಸ್. ಆರ್. ಪಾಟೀಲ್ ಕೂಡ ಇದೇ ವಾದವನ್ನು ಮಂಡಿಸಿದರು. ಈಗ ಚುನಾವಣೆಗೆ ಹೋಗಲಿರುವ ರಾಜ್ಯಗಳು ಹೊಸ ಕಾಯ್ದೆ ಬಂದ ನಂತರ ಇನ್ನೆರಡು ವರ್ಷದಲ್ಲಿ ಮತ್ತೆ ಚುನಾವಣೆಗೆ ಹೋಗಬೇಕೇ ಏನಿದರ ಅರ್ಥ ಎಂದು ಪ್ರಶ್ನಿಸಿದರು.

ವಿಧಾನ ಸಭೆಯಲ್ಲಿ ಕಾಂಗ್ರೆಸ್ ವಾದವನ್ನು ಒಪ್ಪದ ಸಭಾಧ್ಯಕ್ಷರು ವಿಷಯದ ಮೇಲೆ ಪ್ರಸ್ತಾವಿಕ ಭಾಷಣವನ್ನೇನೋ ಮಾಡಿದರು. ಆದರೆ ಕಾಂಗ್ರೆಸ್ ಆಗ ಬಾವಿಯಲ್ಲಿತ್ತು. ಸ್ಪೀಕರ್ ಭಾಷಣ ಮುಗಿದ ಮೇಲೂ ಕಾಂಗ್ರೆಸ್ ಪ್ರತಿಭಟನೆ ಮುಗಿಯಲಿಲ್ಲ. ವಿಶೇಷವೇಂದರೆ ಒಂದು ರಾಷ್ಟ್ರ, ಒಂದು ಚುನಾವಣೆ ಕುರಿತು ಕಾಂಗ್ರೆಸ್‌ನಿಂದ ಮಾತನಾಡುವವರದ್ದೇ 19 ಜನ ಸದಸ್ಯರ ಪಟ್ಟಿ ನೀಡಲಾಗಿತ್ತು. ಆದರೆ ಪಕ್ಷದ ಇಂದಿನ ಹಠಾತ್ ನಿಲುವು ಎಲ್ಲವನ್ನು ತಿರುವು ಮುರುವಾಗಿಸಿತು. ವಿಧಾನ ಸಭೆಯಲ್ಲಿ ಬೆಳಿಗ್ಗೆಯಿಂದಲೇ ಕಾಂಗ್ರೆಸ್ ಪ್ರತಿಭಟನೆ ಆರಂಭಗೊಂಡು ಕಲಾಪ ಅಥವಾ ಈ ವಿಶೇಷ ವಿಷಯದ ಮೇಲಿನ ಚರ್ಚೆಗಳು ನಡೆಯಲಿಲ್ಲ. ಭೋಜನ ವಿರಾಮದ ನಂತರವು ಕಾಂಗ್ರೆಸ್ ಒಂದು ರಾಷ್ಟ್ರ–ಒಂದು ಚುನಾವಣೆ ಹಾಗೂ ಶಾಸಕ ಸಂಗಮೇಶ್ ಅಮಾನತ್ತು ಮಾಡಿರುವ ವಿಚಾರಕ್ಕಾಗಿ ಧರಣಿ ನಡೆಸಿತು. ಸದನವನ್ನು ಮುಂದೂಡಬೇಕಾಯಿತು.

ಮೇಲ್ಮನೆಯಲ್ಲಿ ಕೂಡ ಭೋಜನ ವಿರಾಮದ ನಂತರ ಇದೇ ವಿಚಾರಕ್ಕಾಗಿ ಕಾಂಗ್ರೆಸ್ ಪ್ರತಿಭಟನೆಯಿಂದಾಗಿ ಚರ್ಚೆಯಾಗದಂತಾಯಿತು. ಪರಿಣಾಮವಾಗಿ ಮೇಲ್ಮನೆಯನ್ನೂ ಸಭಾಪತಿ ಬಸವರಾಜ ಹೊರಟ್ಟಿಯವರು ಮುಂದೂಡಿದರು. ಆರ್‌ಎಸ್‌ಎಸ್ ಅಜೆಂಡಾ ಆಗಿರುವ ಈ ವಿಷಯದ ಮೇಲೆ ಚರ್ಚೆ ನಡೆಸಲು ಅವಕಾಶ ಕೊಡಬಾರದು ಹಾಗೂ ಇಲ್ಲಿ ಚರ್ಚೆ ನಡೆದು ಕೈಗೊಳ್ಳುವ ಸದನ ನಿರ್ಣಯ ಕೇಂದ್ರಕ್ಕೆ ಹೋಗಬಾರದು ಎಂಬ ಕಾಂಗ್ರೆಸ್‌ನ ರಾಜಕೀಯ ತಂತ್ರಗಾರಿಕೆ ಮೊದಲ ದಿನ ಗೆದ್ದಿತು ಎನ್ನಬಹುದು.

**ಕ್ರಿಯಾಲೋಪದ ಹಿನ್ನೆಲೆ ಏನು:** ವಿಧಾನ ಸಭೆಯಲ್ಲಿ ನಡೆಯಬೇಕಿದ್ದ ಒಂದು ರಾಷ್ಟ್ರ, ಒಂದು ಚುನಾವಣೆ ಎಂಬ ವಿಷಯ ಚರ್ಚೆಗೆ ಸಂಬಂಧಿಸಿದಂತೆ ವಿಧಾನ ಸಭೆ ಕಾರ್ಯದರ್ಶಿಗಳು ವಿಧಾನ ಸಭೆಯ ಎಲ್ಲ ಸದಸ್ಯರಿಗೆ ಲಘು ಟಿಪ್ಪಣಿ ರವಾನಿಸಿದ್ದಾರೆ. ಈ ಟಿಪ್ಪಣಿಯಲ್ಲಿ ಒಂದು ರಾಷ್ಟ್ರ ಒಂದು ಚುನಾವಣೆ ವಿಚಾರವಾಗಿ ಮಾತನಾಡುವಾಗ ಲೋಕಸಭೆ ಮತ್ತು ವಿಧಾನ ಸಭೆಗೆ ಏಕಕಾಲಕ್ಕೆ ಚುನಾವಣೆ ನಡೆಸಬೇಕೆಂದು ತಿಳಿಸಲಾಗಿದೆ. ಆದರೆ ವಿಧಾನಸಭಾಧ್ಯಕ್ಷರಿಗೆ ಈ ರೀತಿ ಸದಸ್ಯರು ಇದೇ ರೀತಿ ಮಾತನಾಡಬೇಕೆಂದು ನಿರ್ದಿಷ್ಟ ವಿಷಯ ಹೇರುವ ಹಕ್ಕು ಇಲ್ಲ ಎಂಬುದು ಕ್ರಿಯಾಲೋಪ ಎತ್ತಿರುವ

ಕಾಂಗ್ರೆಸ್ ಸದಸ್ಯ ಹೆಚ್. ಕೆ. ಪಾಟೀಲ್ ವಾದ. ಅಷ್ಟೇ ಅಲ್ಲ. ಲೋಕಸಭೆ, ವಿಧಾನ ಸಭೆಗೆ ಮಾತ್ರ ಒಂದೇ ಚುನಾವಣೆ ಹೇರುವುದು ಏಕೆ. ಅದಕ್ಕೆ ಬದಲಾಗಿ ಇಡೀ ದೇಶದ ಪ್ರಜಾಪ್ರತಿನಿಧಿ ಸಾಂಸ್ಥಿಕ ಸಂಸ್ಥೆಗಳಿಗೆ ಏಕಕಾಲಕ್ಕೆ ಚುನಾವಣೆ ನಡೆಸುವುದಾದರೆ ಅದೊಂದು ಚರ್ಚಾ ವಿಷಯ ಎಂಬುದು ಪಾಟೀಲ್ ವಾದ. ಇದೇ ವಿಚಾರವನ್ನು ಕಾಂಗ್ರೆಸ್ ಶಾಸಕಾಂಗ ಪಕ್ಷ ಸಭೆಯಲ್ಲೂ ಹೆಚ್. ಕೆ. ಪಾಟೀಲ್ ಪ್ರಸ್ತಾಪಿಸಿದರು. ಅದೇ ಕಾರಣಕ್ಕಾಗಿ ಒಂದು ರಾಷ್ಟ್ರ, ಒಂದು ಚುನಾವಣೆ ಚರ್ಚೆಗೆ ಕಾಂಗ್ರೆಸ್ ವಿರೋಧ ವ್ಯಕ್ತಪಡಿಸುತ್ತಿದೆ. ಮತ್ತೊಂದೆಡೆ ಜೆ.ಡಿ.ಎಸ್.ನ ಹಿರಿಯ ಸದಸ್ಯ ಹೆಚ್.ಡಿ.ರೇವಣ್ಣ ಕೂಡ ವಿಶೇಷ ಚರ್ಚೆಗೆ ಸಂಬಂಧಿಸಿದ ಲಘು ಟಿಪ್ಪಣಿಯು ಸದನದ ಸದಸ್ಯರನ್ನು ಹಕ್ಕನ್ನು ಮೊಟಕುಗೊಳಿಸಿದೆ ಎಂದು ನೇರವಾಗಿ ವಿಧಾನಸಭೆ ಕಾರ್ಯದರ್ಶಿ ಅವರನ್ನು ತರಾಟೆಗೆ ತೆಗೆದುಕೊಂಡ ಪ್ರಸಂಗವು ನಡೆದಿದೆ.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:05.03.2021.

## 60. ಸಂಗಮೇಶ್ ಅಮಾನತ್ತಿಗೆ ಇಡೀ ದಿನದ ಕಲಾಪ ಬಲಿ

ವಿಧಾನ ಸಭೆ ಸಭಾಧ್ಯಕ್ಷರು ಅವರು ದೇಶದಲ್ಲೇ ಮೊದಲ ಬಾರಿಗೆ ಎರಡು ದಿನಗಳ ಕಾಲ 'ಒಂದು ದೇಶ, ಒಂದು ಚುನಾವಣೆ' ಕುರಿತ ಚರ್ಚೆಗೆ ಅವಕಾಶ ನೀಡಿದ್ದರು. ಮೊದಲ ದಿನ ವಿಪಕ್ಷಗಳು ಈ ಚರ್ಚೆ ವಿರೋಧಿಸಿದ್ದರಿಂದ ವಿಧಾನಸಭೆಯ ಇಡೀ ದಿನದ ಕಲಾಪ ಬಲಿಯಾಗಿತ್ತು. ಚರ್ಚೆ ವಿರೋಧಿಸಿ ನಡೆಯುವ ಧರಣಿ ವೇಳೆ ಬಿ.ಕೆ. ಸಂಗಮೇಶ್ ಅಂಗಿ ಕಳಚಿದ್ದು ವಿವಾದಕ್ಕೆ ಕಾರಣವಾಗಿತ್ತು. ಸಂಗಮೇಶ್ ಅವರನ್ನು ಒಂದು ವಾರ ಕಲಾಪದಿಂದ ಅಮಾನತ್ತು ಮಾಡಲಾಗಿತ್ತು.

ಸದನ ಆರಂಭವಾಗುತ್ತಿದ್ದಂತೆ ಕಾಂಗ್ರೆಸ್ ಸದಸ್ಯರು ಸದನದ ಬಾವಿಗಿಳಿದು ಪ್ರತಿಭಟನೆ ನಡೆಸಿದರು. ಈ ವೇಳೆ ವಿಪಕ್ಷ ನಾಯಕ ಸಿದ್ದರಾಮಯ್ಯ ಈ ಸದನದಲ್ಲಿ ಗೂಳಿಹಟ್ಟಿ ಚಂದ್ರಶೇಖರ್ ಬಟ್ಟೆ ಹರಿದು ಕೊಂಡಿದ್ದರು. ವಿಧಾನ ಪರಿಷತ್‌ನಲ್ಲಿ ಸಭಾಧ್ಯಕ್ಷರ ಪೀಠದಲ್ಲಿ ಅಷ್ಟು ದೊಡ್ಡ ಗಲಾಟೆ ಆಗಿತ್ತು. ಅಂತಹ ಯಾವುದೇ ಘಟನೆ ಇಲ್ಲಿ ನಡೆದಿಲ್ಲ ಇಡೀ ಕುಟುಂಬದ ಮೇಲೆ ಸುಳ್ಳು ಕೊಲೆ ಆರೋಪ ಹೊರಿಸಿರುವುದರಿಂದ ದುಃಖ ತೋಡಿಕೊಳ್ಳಲು ಶರ್ಟ್ ಬಿಚ್ಚಿದ್ದಾರೆ ಇಷ್ಟಕ್ಕೆ ಒಂದು ವಾರ ಅಮಾನತ್ತು ಮಾಡಿರುವುದು ಕಾನೂನುಬಾಹಿರ ಕೂಡಲೇ ಅಮಾನತ್ತು ಹಿಂಪಡೆಯಬೇಕು ಎಂದು ಒತ್ತಾಯಿಸಿದರು.

ಹೊರಗಡೆ ಬೆತ್ತಲೆ ಹಗರಣಗಳೇ ಜಾಸ್ತಿ ನಡೆಯುತ್ತಿವೆ ಇಲ್ಲೇನು ಸಂಗಮೇಶ್ ಅವರು ಬೆತ್ತಲೆ ಆಗಿದ್ದಾರಾ ಶರ್ಟ್ ಕಳಚಿದ್ದು ಅಶಿಸ್ತು ಎಂದು ಪರಿಗಣಿಸಿದರೆ ಒಂದು ದಿನ ಅಮಾನತ್ತು ಮಾಡಬಹುದಿತ್ತು. ಅದನ್ನು ಬಿಟ್ಟು ಒಂದು ವಾರ ಅಮಾನತ್ತು ಮಾಡಿರುವುದು ಸರ್ವಾಧಿಕಾರಿ ಧೋರಣೆ ಎಂದು ಆಕ್ರೋಶ ವ್ಯಕ್ತಪಡಿಸಿದರು.

ಗೃಹ ಸಚಿವ ಬಸವರಾಜ್ ಬೊಮ್ಮಾಯಿ, 'ಅನ್ಯಾಯ ಆಗಿದ್ದರೆ ಸದನದಲ್ಲಿ ಬಟ್ಟೆ ಬಿಚ್ಚಬೇಕಾ? ಸಂಗಮೇಶ್ ಅವರು ಮಾತನಾಡಲು ಅವಕಾಶ ನೀಡುವಂತೆ ಸ್ಪೀಕರ್ ಅವರಿಗೆ ನೋಟಿಸ್ ನೀಡಿದ್ದರು ಅವರು ಸಹ ಬೆಳಿಗ್ಗೆ 10.30 ಗಂಟೆಗೆ ಚರ್ಚಿಸಲು ಅವಕಾಶ ನೀಡಿದ್ದರು. ಪೀಠಕ್ಕೆ ಅಗೌರವ ತೋರುವುದನ್ನು ಕಾಂಗ್ರೆಸ್ ಸಹ ಸಮರ್ಥಿಸಬಾರದು ಎಂದರು. ಬಿಜೆಪಿ ಶಾಸಕ ಅರಗ ಜ್ಞಾನೇಂದ್ರ, 'ಬಟ್ಟೆ ಬಿಚ್ಚಿ ಕುಣಿಯಲು ಇದೇನು ಕ್ಯಾಬರೆ ಕ್ಲಬ್ಬಾ ಎಂದು ಪ್ರಶ್ನಿಸಿದರು.

ಸಭಾಧ್ಯಕ್ಷರು 'ನಿಮಗೆ ಚರ್ಚೆಯಲ್ಲಿ ಭಾಗವಹಿಸಲು ಇಷ್ಟವಿಲ್ಲದಿದ್ದರೆ ಬೇರೆಯ ಸದಸ್ಯರು ಮಾತನಾಡಲು ಅವಕಾಶ ನೀಡಿ. ಬೇರೆಯವರ ಹಕ್ಕು ಮೊಟಕುಗೊಳಿಸುವ ಅಧಿಕಾರ ನಿಮಗಿಲ್ಲ' ಎಂದು ಕಿಡಿ ಕಾರಿದರು.

**ಅಯ್ಯಯ್ಯೋ ಅನ್ಯಾಯ** : ಬಸವರಾಜ್ ಬೊಮ್ಮಾಯಿ ಅವರು 'ಒಂದು ದೇಶ, ಒಂದು ಚುನಾವಣೆ' ವಿಷಯದ ಬಗ್ಗೆ ಮಾತು ಆರಂಭಿಸಿದಾಗ ಸಿದ್ದರಾಮಯ್ಯ ಅವರು, ಬೊಮ್ಮಾಯಿ ಮಾತನಾಡುವುದು ಕೇಳಿಸಬಾರದು. ಜೋರಾಗಿ ಕೂಗಿ' ಎಂದು ತಮ್ಮ ಸದಸ್ಯರಿಗೆ ಕರೆ ನೀಡಿದರು. ಇದರಿಂದ ರೊಚ್ಚಿಗೆದ್ದ ಕಾಂಗ್ರೆಸ್ ಸದಸ್ಯರು 'ಅಯ್ಯಯ್ಯೋ ಅನ್ಯಾಯ', 'ಸ್ಪೀಕರ್ ಸರ್ಕಾರದ

ಕೈಗೊಂಬೆಯಾಗಿದ್ದಾರೆ' ಎಂಬಿತ್ಯಾದಿ ಘೋಷಣೆಗಳನ್ನು ಜೋರಾಗಿ ಕೂಗಿ ಸದನದಲ್ಲಿ ಕೋಲಾಹಲ ಸೃಷ್ಟಿಸಿದರು.

ಇದರಿಂದ 11.20ಕ್ಕೆ ಆರಂಭವಾದ ಕಲಾಪ 10 ನಿಮಿಷದಲ್ಲೇ ಅಂದರೆ 11.30 ಗಂಟೆಗೆ ಅರ್ಧ ಗಂಟೆಕಾಲ ಮುಂದೂಡಲ್ಪಟ್ಟಿತ್ತು. ಬಳಿಕ 12.15ಕ್ಕೆ ಸೇರಿದ ಕಲಾಪದಲ್ಲಿ ಮತ್ತದೇ ಗಲಾಟೆ ಮುಂದುವರೆದಿದ್ದರಿಂದ ಸ್ಪೀಕರ್ ಅವರು ಕಾಂಗ್ರೆಸ್ ಸದಸ್ಯರ ಮನವೊಲಿಸಲು ಯತ್ನಿಸಿದರು. ಪ್ರಯೋಜನವಾಗದ ಹಿನ್ನೆಲೆಯಲ್ಲಿ 12.30 ಗಂಟೆಗೆ ಸದನವನ್ನು 3.30ರವರೆಗೆ ಮುಂದೂಡಿ ಆದೇಶಿಸಿದರು. ಬಳಿಕ 3.40ಕ್ಕೆ ಸೇರಿದ ಹಿನ್ನೆಲೆಯಲ್ಲಿ ಕಲಾಪವನ್ನು ಮುಂದೂಡಬೇಕಾಯಿತು. ಹೀಗಾಗಿ ಇಡೀ ದಿನದ ಕಲಾಪ ಬಲಿಯಾಯಿತು.

ಆಧಾರ:ಕನ್ನಡಪ್ರಭ, ದಿನಾಂಕ:06.03.2021

## 61. ಸೋಮವಾರ 12.05 ಕ್ಕೆ ಬಜೆಟ್

ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪ ಅವರು ಸೋಮವಾರ ಮಧ್ಯಾಹ್ನ 12.05ಕ್ಕೆ ಬಜೆಟ್ ಮಂಡಿಸಲಿದ್ದಾರೆ. ಅಂದು ಮಧ್ಯಾಹ್ನ 12ಕ್ಕೆ ವಿಧಾನಸಭೆ ಸಮಾವೇಶಗೊಳ್ಳಲಿದೆ.

2019 ರಲ್ಲಿ ಯಡಿಯೂರಪ್ಪ ನೇತೃತ್ವದ ಸರ್ಕಾರ ಅಧಿಕಾರಕ್ಕೆ ಬಂದ ಬಳಿಕ ಎರಡನೇ ಬಾರಿ ಬಜೆಟ್ ಮಂಡಿಸುತ್ತಿದ್ದಾರೆ. ಸಾಮಾನ್ಯವಾಗಿ ಬೆಳಿಗ್ಗೆ 11 ಕ್ಕೆ ಮಂಡಿಸಲಾಗುತ್ತಿತ್ತು. ಈ ಬಾರಿ ಮುಹೂರ್ತ ನೋಡಿ, ಬಜೆಟ್ ಮಂಡಿಸಲಾಗುತ್ತಿದೆ ಎಂದು ಹೇಳಲಾಗುತ್ತಿದೆ.

ಆಧಾರ: ಕನ್ನಡಪ್ರಭ, ದಿನಾಂಕ:06.03.2021.

## 62. ಆಯುರ್ವೇದ ವೈದ್ಯ ಪದ್ಧತಿಗೆ ಮನ್ನಣೆ

ದೇಶೀಯ ಪರಂಪರೆಯ ಆಯುರ್ವೇದ ವೈದ್ಯ ಪದ್ದತಿಗೆ ಮನ್ನಣೆ ದೊರಕಿಸಲು ನೀತಿ ರೂಪಿಸುವಂತೆ ಕಾಂಗ್ರೆಸ್‌ನ ಯು.ಬಿ.ವೆಂಕಟೇಶ್ ಪರಿಷತ್ತಿನಲ್ಲಿ ಖಾಸಗಿ ವಿಧೇಯಕ ಮಂಡನೆ ಮಾಡಿದರು.

ಕಳೆದ 9–10 ತಿಂಗಳಿಂದ ಈ ಖಾಸಗಿ ವಿಧೇಯಕ ಮಂಡನೆಗೆ ಯತ್ನಿಸುತ್ತಿದ್ದೇನೆ. ಆದರೆ ಅದು ಸಾಧ್ಯವಾಗಿರಲಿಲ್ಲ. ಬದಲಾಗುತ್ತಿರುವ ಜಗತ್ತಿನಲ್ಲಿ ಇತ್ತೀಚಿಗೆ ಕೊರೋನಾ ಸೇರಿದಂತೆ ಹಲವು ಬಗೆಯ ಹೊಸ ಸಾಂಕ್ರಾಮಿಕ ರೋಗಗಳು ತಲೆ ಎತ್ತುತ್ತಿವೆ ಆದರೆ, ಆ ಕಾಯಿಲೆಗಳಿಗೆ ಆಲೋಪತಿಯಲ್ಲಿ ಯಾವುದೇ ಚಿಕಿತ್ಸೆ ಇಲ್ಲ. ಹಲವು ಶತಮಾನಗಳಿಂದ ಪಾರಂಪರಿಕವಾಗಿ ಬಂದಿರುವ ಆಯುರ್ವೇದ ಪದ್ದತಿಯಲ್ಲಿ ಎಲ್ಲ ಕಾಯಿಲೆಗಳಿಗೂ ಚಿಕಿತ್ಸೆ ಇದೆ. ಹಾಗಾಗಿ ಆ ಪದ್ಧತಿಗೆ ಮನ್ನಣೆ ನೀಡುವ ಕೆಲಸ ಜರೂರಾಗಿ ಆಗಬೇಕಿದೆ. ಈ ಬಗ್ಗೆ ಸರ್ಕಾರದ ಗಮನಸೆಳೆಯಲು ಖಾಸಗಿ ವಿಧೇಯಕ ಮಂಡಿಸುತ್ತಿದ್ದೆನೆ, ಎಂದರು.

ಆಗ ಸಭಾನಾಯಕರು, ಸದ್ಯ ಸಚಿವರು ಉಪಸ್ಥಿತರಿಲ್ಲ. ಹಾಗಾಗಿ ಈ ವಿಚಾರವನ್ನು ಮುಂದಿನ ವಾರ ಸಮಗ್ರ ಚರ್ಚೆಗೆ ಕೈಗೆತ್ತಿಕೊಳ್ಳಬಹುದು" ಎಂದು ಹೇಳಿದರು. ಸಭಾಪತಿ ಸ್ಥಾನದಲ್ಲಿ ಉಪ ಸಭಾಪತಿ ಎಂ.ಕೆ. ಪ್ರಾಣೇಶ್, 'ಈಗ ವಿಧೇಯಕ ಮಂಡನೆಯಾಗಿದೆ. ಸಚಿವರು ಇಲ್ಲದ ಕಾರಣ ಮುಂದಿನ ವಾರ ಚರ್ಚೆಗೆ ಕೈಗೆತ್ತಿಕೊಳ್ಳೋಣ". ಎಂದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:06.03.2021

## 63. ಸಾರಿಗೆ, ಗೃಹ ಇಲಾಖೆಯಿಂದ ಜಂಟಿ ಸಮೀಕ್ಷೆ

ಸರಕು ವಾಹನಗಳಲ್ಲಿ ಪ್ರಯಾಣಿಕರನ್ನು ಸಾಗಿಸುವುದು ಮತ್ತು ಕರೆದ ಕಡೆ ಆಟೋಗಳು ಬರದೇ ಇರುವ ಬಗ್ಗೆ ಸಾರಿಗೆ ಇಲಾಖೆ ಮತ್ತು ಗೃಹ ಇಲಾಖೆಯಿಂದ ಜಂಟಿ ಸಮೀಕ್ಷೆ ನಡೆಸಿ ಕ್ರಮ ಕೈಗೊಳ್ಳಲಾಗುವುದು ಎಂದು ಸಾರಿಗೆ ಸಚಿವ ಲಕ್ಷ್ಮಣ್ ಸವದಿ ತಿಳಿಸಿದ್ದಾರೆ. ಪ್ರಶ್ನೋತ್ತರ ವೇಳೆ ಕಾಂಗ್ರೆಸ್‌ನ

ಆರ್. ಪ್ರಸನ್ನ ಕುಮಾರ್ ಪ್ರಶ್ನೆಗೆ ಉತ್ತರಿಸಿ, ಈ ವಿಚಾರವಾಗಿ ಸಂಬಂಧಪಟ್ಟ ಅಧಿಕಾರಿಗಳಿಗೆ ಈಗಾಗಲೇ ಸೂಚನೆ ನೀಡಲಾಗಿದೆ. ಆದಾಗ್ಯೂ ಇದರ ಬಗ್ಗೆ ಸಾರಿಗೆ ಮತ್ತು ಗೃಹ ಇಲಾಖೆಯಿಂದ ಜಂಟಿ ಸಮೀಕ್ಷೆ ನಡೆಸಿ ಅಗತ್ಯ ಕ್ರಮಗಳನ್ನು ಕೈಗೊಳ್ಳಲಾಗುವುದು ಎಂದು ಭರವಸೆ ನೀಡಿದರು.

**4 ಸಾವಿರ ಕೋಟಿ ಆದಾಯ ಕೊರತೆ:** ಕೋವಿಡ್ ಹಿನ್ನೆಲೆಯಲ್ಲಿ ಪ್ರಸಕ್ತ ಆರ್ಥಿಕ ವರ್ಷದಲ್ಲಿ ಇಲಾಖೆಗೆ ರೂ.4 ಸಾವಿರ ಕೋಟಿ ಆದಾಯ ಕೊರತೆಯಾಗಿದ್ದು, ರೂ.2,980 ಕೋಟಿ ನಿವ್ವಳ ನಷ್ಟ ಉಂಟಾಗಿದೆ ಎಂದು ಸಾರಿಗೆ ಸಚಿವ ಲಕ್ಷ್ಮಣ ಸವದಿ ತಿಳಿಸಿದ್ದಾರೆ. ಜೆಡಿಎಸ್‌ನ ಶ್ರೀಕಂಠೇಗೌಡ ಪ್ರಶ್ನೆಗೆ ಉತ್ತರಿಸಿ, ಕೋವಿಡ್ ಹಿನ್ನೆಲೆಯಲ್ಲಿ ಇಲಾಖೆಗೆ ಆದಾಯ ಕೊರತೆ ಮತ್ತು ನಿವ್ವಳ ನಷ್ಟ ಒಟ್ಟೊಟ್ಟಿಗೆ ಎದುರಾಗಿದೆ. ಆರ್ಥಿಕ ಇತಿಮಿತಿಯಲ್ಲಿ ಮಹಿಳಾ ವಿಶ್ರಾಂತಿ ಕೊಠಡಿ, ಹೊಸ ಬಸ್ ಖರೀದಿ ಸೇರಿ ವಿವಿಧ ಸುಧಾರಣೆ ಮತ್ತು ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೆತ್ತಿಕೊಳ್ಳಬೇಕಾಗಿದೆ ಎಂದರು.

ಸ್ಮಾರ್ಟ್ ಸಿಟಿ ಯೋಜನೆಯಡಿ ರೂ.100 ಕೋಟಿ ವೆಚ್ಚದಲ್ಲಿ ದಾವಣಗೆರೆಯಲ್ಲಿ ಸ್ಯಾಟ್ ಲೈಟ್ ಮಾದರಿ ಬಸ್ ನಿಲ್ದಾಣ ನಿರ್ಮಾಣಕ್ಕೆ ಅಡಿಗಲ್ಲು ಹಾಕಲಾಗಿದೆ. ಇದೇ ಮಾದರಿಯ ಬಸ್ ನಿಲ್ದಾಣಗಳನ್ನು ರಾಜ್ಯದ ಬೇರೆ ಕಡೆ ನಿರ್ಮಿಸುವ ಬಗ್ಗೆ ಪರಿಶೀಲನೆ ನಡೆಸಲಾಗುವುದು ಎಂದರು.

ಆಧಾರ: ಉದಯವಾಣಿ, ದಿನಾಂಕ:06.03.2021.

## 64. ನೂತನ ಪಿಂಚಣಿ ಯೋಜನೆಯು ನೌಕರರ ಬದುಕಿಗೆ ಆಘಾತಕಾರಿ

ಸರ್ಕಾರಿ ನೌಕರ ನಿವೃತ್ತಿ ಬದುಕಿಗೆ ಭದ್ರತೆ ನೀಡದ ನೂತನ ಪಿಂಚಣಿ ಯೋಜನೆಯನ್ನು (ಎನ್‌ಪಿಎಸ್) ರದ್ದುಗೊಳಿಸಿ, ಹಳೆಯ ಪಿಂಚಣಿ ಯೋಜನೆಯನ್ನು ಜಾರಿಗೊಳಿಸಬೇಕೆಂದು ಆಡಳಿತ ಮತ್ತು ಪ್ರತಿಪಕ್ಷ ಸದಸ್ಯರು ಒಕ್ಕೊರಲಿನಿಂದ ಒತ್ತಾಯಿಸಿದ ಘಟನೆಗೆ ಪರಿಷತ್ ಕಲಾಪವು ಸಾಕ್ಷಿಯಾಯಿತು. ಗಮನ ಸೆಳೆಯುವ ಸೂಚನೆ ಮೇಲಿನ ಚರ್ಚೆ ವೇಳೆ ವಿಷಯ ಪ್ರಸ್ತಾಪಿಸಿದ ಜೆಡಿಎಸ್‌ನ ಕೆ.ಟಿ.ಶ್ರೀಕಂಠೇಗೌಡ, "2006ರ ಏಪ್ರೀಲ್ 1 ರ ನಂತರ ನೇಮಕವಾದ ಶಿಕ್ಷಕರು, ಎಲ್ಲ ಸರ್ಕಾರಿ ನೌಕರರಿಗೆ ಹೊಸ ಪಿಂಚಣಿ ಯೋಜನೆ ಜಾರಿಗೊಳಿಸಲಾಗಿದೆ. ಪಿಂಚಣಿಯ ವಂತಿಗೆಯು ಲಾಭದಾಯಕ ಉದ್ಯಮಗಳಲ್ಲಿ ಹೂಡಿಕೆ ಮಾಡಿ, ನಿವೃತ್ತಿಯಾದಾಗ ದೊಡ್ಡ ಮೊತ್ತವನ್ನು ನೀಡಲಾಗುವುದೆಂದು ಸರ್ಕಾರಗಳು ಹೇಳಿದ ಬಣ್ಣ ಬಣ್ಣದ ಮಾತುಗಳಿಗೆ ನೌಕರರು ಖುಷಿಯಾಗಿ ಎನ್‌ಪಿಎಸ್ ಅನ್ನು ಸ್ವಾಗತಿಸಿದರು. ಆದರೆ, ನಿವೃತ್ತಿಗೆ ಪಿಂಚಣಿ ಸಿಗದಂತಾಗಿದ್ದು, ಹಲವು ಸಂಕಷ್ಟಕ್ಕೆ ಸಿಲುಕಿದ್ದಾರೆ,' ಎಂದು ಅಸಮಾಧಾನ ವ್ಯಕ್ತಪಡಿಸಿದರು.

**ಶಾಸಕ, ಸಂಸದರಿಗೆ ಯಾಕೆ ಅನ್ವಯಿಸಲ್ಲ:** ಬಿಜೆಪಿ ಆಯನೂರು ಮಂಜುನಾಥ ಮಾತನಾಡಿ, "2006ರ ಬಳಿಕ ಆಯ್ಕೆಯಾದ ಶಾಸಕರು, ಸಂಸದರನ್ನೇಕೆ ಎನ್‌ಪಿಎಸ್‌ನಿಂದ ಹೊರಗಿಟ್ಟು, ಹಳೆ ಪಿಂಚಣಿ ಯೋಜನೆ ಮುಂದುವರಿಸಲಾಗಿದೆ. ಕೇವಲ ಒಂದೆರಡು ವರ್ಷ ಜನಪ್ರತಿನಿಧಿಯಾಗಿದ್ದರೂ ಶಾಶ್ವತ ಪಿಂಚಣಿ ದೊರಕುತ್ತದೆ. ಶಾಸಕರು ಮಾತ್ರ ಮನುಷ್ಯರೇ? ನೌಕರರು ಮನುಷ್ಯರಲ್ಲವೇ, ಎಂದು ಪ್ರಶ್ನಿಸಿದರು.

ಬಿಜೆಪಿಯ ವೈ.ಎ.ನಾರಾಯಣಸ್ವಾಮಿ, ನಿವೃತ್ತಿ ಅಂಚಿನಲ್ಲಿದ್ದಾಗ ರೂ.84 ಸಾವಿರ ಸಂಬಳ ಪಡೆಯುತ್ತಿದ್ದ ನೌಕರರೊಬ್ಬರು ಜೀವನ ನಿರ್ವಹಣೆಗಾಗಿ ರೂ.10 ಸಾವಿರ ಕೊಡುವ ಕೆಲಸ ಕೊಡಿಸಿ ಎಂದು ಮನೆ ಬಳಿ ಬಂದಿದ್ದರು. ಇಂಥ ಪರಿಸ್ಥಿತಿ ಯಾರಿಗೂ ಬರುವುದು ಬೇಡ. ಎನ್‌ಪಿಎಸ್ ಎಂದರೆ "ನೋ ಪೆನ್ಷನ್ ಸ್ಕೀಂ ಎಂಬಂತಾಗಿದೆ. ಅನುದಾನಿತ ಶಾಲೆಗಳ ಶಿಕ್ಷಕರ ಪರಿಸ್ಥಿತಿಯಂತು ತುಂಬಾ ಶೋಚನೀಯವಾಗಿದೆ.'ಎಂದು ಹೇಳಿದರು.

**ವರದಿ ಆಧರಿಸಿ ಸೂಕ್ತ ಕ್ರಮ:** ಸಿಎಂ ಪರವಾಗಿ ಉತ್ತರ ನೀಡಿದ ಸಭಾ ನಾಯಕ ಕೋಟ ಶ್ರೀನಿವಾಸ ಪೂಜಾರಿ, "ನೂತನ ಪಿಂಚಣಿ ಯೋಜನೆಗೆ ಸೂಕ್ತ ಬದಲಾವಣೆ, ಮಾರ್ಪಾಡು ಮಾಡಲು 2018ರ ಡಿಸೆಂಬರ್ 11ರಂದು ಅಧಿಕಾರಿಗಳನ್ನೊಳಗೊಂಡ ಸಮಿತಿ ರಚಿಸಲಾಗಿದೆ. ಸಮಿತಿ ನೀಡುವ ವರದಿ ಆಧರಿಸಿ ಸೂಕ್ತ ತೀರ್ಮಾನ ಕೈಗೊಳ್ಳಲಾಗುವುದು," ಎಂದು ಭರವಸೆ ನೀಡಿದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:06.03.2021.

## 65. ಮೇಲ್ಮನೆಯಲ್ಲಿ ಸಚಿವರ ಕಡ್ಡಾಯ ಹಾಜರಾತಿಗೆ ಹೊರಟ್ಟಿ ಸೂಚನೆ

ಪ್ರಶ್ನೋತ್ತರ ಕಲಾಪದ ವೇಳೆ ಉತ್ತರ ನೀಡಬೇಕಾದ ಸಚಿವರು ಗೈರಾಗಿದ್ದನ್ನು ಕಂಡು ಸಭಾಪತಿ ಬಸವರಾಜ ಹೊರಟ್ಟಿ ಅಸಮಾಧಾನ ವ್ಯಕ್ತಪಡಿಸಿದರು.

ಸದನದಲ್ಲಿ ಪ್ರಶ್ನೋತ್ತರ ಕಲಾಪದ ವೇಳೆ ಸಂಬಂಧಿಸಿದ ಸಚಿವರು ಹಾಜರಿರಬೇಕು ಎಂದು ಸೂಚನೆ ನೀಡಿದ್ದೇನೆ. ಹೀಗಿದ್ದರೂ ನೀವು ಏಕೆ ಸಂಬಂಧಿಸಿದ ಸಚಿವರನ್ನು ಕರೆಸಿಲ್ಲ. ಓರ್ವ ಸಚಿವರು ತಮಗೆ ಪತ್ರ ಬರೆದು ಪೂರ್ವ ನಿಯೋಜಿತ ಕಾರ್ಯಕ್ರಮ ಇರುವುದರಿಂದ ಸದನಕ್ಕೆ ಬರಲಾಗುವುದಿಲ್ಲ ಎಂದಿದ್ದಾರೆ. ಆದರೆ, ಮುಂದಿನ ಬಾರಿ ಹೀಗೆ ಮಾಡುವಂತಿಲ್ಲ. ಸದನದಲ್ಲಿ ಪ್ರಶ್ನೋತ್ತರ ಕಲಾಪ ಇರುವಾಗ ಸಂಬಂಧಿಸಿದ ಸಚಿವರೇ ಉತ್ತರ ನೀಡಬೇಕು. ಇದಕ್ಕೆ ಸಭಾನಾಯಕರು ಹಾಗೂ ಸಚೇತಕರು ಜವಾಬ್ದಾರಿ ತೆಗೆದುಕೊಳ್ಳಬೇಕು ಎಂದು ಸೂಚನೆ ನೀಡಿದರು.

ಸದನ ಆರಂಭವಾಗಿ ಪ್ರಶ್ನೋತ್ತರ ಕಲಾಪ ಶುರುವಾದಾಗ ಉತ್ತರ ನೀಡಬೇಕಾದ ಗ್ರಾಮೀಣಾಭಿವೃದ್ಧಿ ಸಚಿವರು ಹಾಜರಾಗಿರಲಿಲ್ಲ. ಈ ಬಗ್ಗೆ ಪ್ರತಿಪಕ್ಷದ ನಾಯಕ ಎಸ್.ಆರ್. ಪಾಟೀಲ್ ಆಕ್ಷೇಪ ತೆಗೆದು ಸಚಿವರೇ ಇಲ್ಲವಾದ ಮೇಲೆ ಉತ್ತರ ಕೊಡೋದು ಯಾರು ಎಂದು ಪ್ರಶ್ನೆ ಮಾಡಿದ್ದಲ್ಲದೆ, ಯಾಕಾಗಿ ಅಧಿವೇಶನ ಮಾಡಬೇಕು. ಅಧಿವೇಶನ ನಡೆಯುವಾಗ ಸಚಿವರು ಪೂರ್ವ ನಿಯೋಜಿತ ಕಾರ್ಯಕ್ರಮ ಹೇಗೆ ಹಾಕಿಕೊಳ್ಳುತ್ತಾರೆ. ಅಧಿವೇಶನ ಮಾಡಬೇಕು, ಅಧಿವೇಶನ ಇದ್ದಾಗ ಎಲ್ಲ ಕಾರ್ಯಕ್ರಮಗಳನ್ನು ರದ್ದು ಮಾಡಬೇಕು. ಅಗತ್ಯ ಹಾಗೂ ಜ್ವಲಂತ ಸಮಸ್ಯೆಗಳು ಎದುರಾದಾಗ ಹೋಗಬೇಕಾಗುತ್ತದೆ. ಮದುವೆಗಳಿಗೆಲ್ಲಾ ಪೂರ್ವ ನಿಯೋಜಿತ ಕಾರ್ಯಕ್ರಮ ಎಂದು ಹೇಳಬಾರದು. ಅನಗತ್ಯವಾಗಿ ಗೈರಾಗಿ ಸದನಕ್ಕ ಅಗೌರವ ತೋರುತ್ತಿದ್ದಾರೆ. ನಿನ್ನೆ ತಾನೆ ತಾವು ಮುಖ್ಯಮಂತ್ರಿಗಳಾಗಲೀ ಸಂಬಂಧಿಸಿದ ಸಚಿವರು ಸದನದಲ್ಲಿ ಹಾಜರಿರಬೇಕು ಎಂದು ನೀಡಿದ ಆದೇಶಕ್ಕೆ ಕಿಮ್ಮತ್ತಿಲ್ಲವೇ. ಯಾವ ಪುರುಷಾರ್ಥಕ್ಕೆ ಸದನ ನಡೆಯಬೇಕು ಎಂದು ಆಕ್ರೋಶ ವ್ಯಕ್ತಪಡಿಸಿದಾಗ, ಸಭಾಪತಿ ಬಸವರಾಜ ಹೊರಟ್ಟಿ ಮಧ್ಯಪ್ರವೇಶಿಸಿ ಸಚಿವರು ಹಾಜರಿರುವಂತೆ ಆಡಳಿತ ಪಕ್ಷಕ್ಕೆ ತಾಕೀತು ಮಾಡಿದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:06.03.2021.

## 66. ಕಾಂಗ್ರೆಸ್ ಪ್ರತಾಪ ನಡೆಯದ ಕಲಾಪ ಧರಣಿಯಿಂದಾಗಿ ಸಭೆ ಮುಂದೂಡಿಕೆ

ಒಂದು ದೇಶ, ಒಂದು ಚುನಾವಣೆ' ಚರ್ಚೆ ವಿರೋಧಿಸಿ ಕಾಂಗ್ರೆಸ್ ಸದಸ್ಯರು ವಿಧಾನ ಸಭೆಯಲ್ಲಿ ನಡೆಸಿದ ಧರಣಿಯಿಂದಾಗಿ ಯಾವುದೇ ಚರ್ಚೆಗಳಿಲ್ಲದೇ ಕಲಾಪ ಮುಂದೂಡಿಕೆಯಾಗಿದೆ.

ಆಡಳಿತ ಪಕ್ಷ ಮತ್ತು ಪ್ರತಿಪಕ್ಷದ ಸದಸ್ಯರ ಗದ್ದಲ, ಆರೋಪ–ಪ್ರತ್ಯಾರೋಪ ಮತ್ತು ಮುಂದುವರಿದ ಕಾಂಗ್ರೆಸ್ ಸದಸ್ಯರ ಧರಣಿ, ಧಿಕ್ಕಾರ ಘೋಷಣೆ ಕಾರಣ ಕಲಾಪವನ್ನು ಮೂರ್ನಾಲ್ಕು ಬಾರಿ ಮುಂದೂಡಲಾಯಿತು. ಇದೇ ವಿಚಾರಕ್ಕೆ ಕಲಾಪ ಬಲಿಯಾಗಿತ್ತು ಭದ್ರಾವತಿ ಶಾಸಕ ಬಿ.ಕೆ. ಸಂಗಮೇಶ್ ತಮ್ಮ ಅಂಗಿ ಬಿಚ್ಚಿ ಪ್ರತಿಭಟಿಸಿದ್ದು ಟೀಕೆಗೆ ಗುರಿಯಾಯಾಗಿತ್ತು. ಸಂಗಮೇಶ್ ಸದನ ಪ್ರವೇಶಕ್ಕೆ ಯತ್ನ ಮಾಡಿದರಾದರೂ ಮಾರ್ಷಲ್‌ಗಳು ಅವರನ್ನು ತಡೆದರು. ಇದು ಕಾಂಗ್ರೆಸ್ ಕೋಪ ಹೆಚ್ಚಿಸಿತು.

ಈ ಎರಡು ಕಾರಣಗಳನ್ನಿಟ್ಟುಕೊಂಡು ಚರ್ಚೆಗೆ ಬಾರದ ಕಾಂಗ್ರೆಸ್ ಸದಸ್ಯರು, ಸರ್ಕಾರ ನೀತಿಯ ವಿರುದ್ಧ ಕಿಡಿಕಾರಿದರು. ವಿಧಾನಸಭೆ ಕಲಾಪ ಆರಂಭವಾಗುತ್ತಿದ್ದಂತೆ ಬಾವಿಗಿಳಿದು ಪ್ರತಿಭಟನೆ ಮುಂದುವರಿಸಿದರು. ಆಗ ಆಡಳಿತ ಮತ್ತು ವಿರೋಧಿ ಸದಸ್ಯರ ನಡುವೆ ಮಾತಿನ ಚಕಮಕಿ ನಡೆದು ಕೋಲಾಹಲ ಸೃಷ್ಟಿಯಾಯಿತು. ಸಭಾಧ್ಯಕ್ಷರು ಕಲಾಪವನ್ನು ಕೆಲ ಕಾಲ ಮುಂದೂಡಿದರು. ವಿಧಾನ ಸಭೆ ಇಂದಿನ ಕಾರ್ಯಕಲಾಪಗಳ ಪಟ್ಟಿಯಲ್ಲಿ 'ಒಂದು ದೇಶ, ಒಂದು ಚುನಾವಣೆ' ಬಿಟ್ಟು ಬೇರಾವುದೇ ವಿಷಯದ ಉಲ್ಲೇಖವಿರಲಿಲ್ಲ.

**ಸ್ಪೀಕರ್ ನಡೆ ವಿರುದ್ಧ ಸಿದ್ದು ಅಕ್ರೋಶ:** ಸ್ಪೀಕರ್ ಆರ್‌ಎಸ್‌ಎಸ್ ಸಿದ್ಧಾಂತದಂತೆ ನಡೆದುಕೊಳ್ಳುತ್ತಿದ್ದಾರೆ. ಸರ್ಕಾರ ಕೂಡ ಅವರ ತಾಳಕ್ಕೆ ತಕ್ಕಂತೆ ನಡೆಯುತ್ತದೆ. ನಾವು 'ಒಂದು ದೇಶ,

ಒಂದು ಚುನಾವಣೆ' ಚರ್ಚೆಯಲ್ಲಿ ಭಾಗವಹಿಸದಿರಲು ತೀರ್ಮಾನಿಸಿದ್ದೇವೆ ಎಂದು ಪ್ರತಿಪಕ್ಷ ನಾಯಕ ಸಿದ್ದರಾಮಯ್ಯ ತಿಳಿಸಿದ್ದಾರೆ.

**ವಿಧಾನ ಪರಿಷತ್ ಹೈಲೆಟ್ಸ್:**

- ಡಿಪಿಆರ್ ಸಿದ್ದಗೊಂಡ ನಂತರ ಧಾರವಾಡ–ಬೆಳಗಾವಿ ನಡುವೆ ನೂತನ ರೈಲು ಮಾರ್ಗ ನಿರ್ಮಾಣ: ಕೋಟ
- ರಾಜ್ಯದಲ್ಲಿ ಕೋವಿಡ್ ಸೋಂಕಿನಿಂದಾಗಿ ಸಾರಿಗೆ ಸಂಸ್ಥೆಗೆ 4 ಸಾವಿರ ಕೋಟಿಗೂ ಹೆಚ್ಚು ನಷ್ಟ : ಸವದಿ
- ಬಸ್ ನಿಲ್ದಾಣಗಳಲ್ಲಿ ಮಹಿಳಾ ವಿಶ್ರಾಂತಿ ಗೃಹ ನಿರ್ಮಾಣ, ಸ್ಯಾಟಲೈಟ್ ಬಸ್ ನಿಲ್ದಾಣ ಸ್ಥಾಪನೆಗೆ ಆದ್ಯತೆ
- ಕೇಂದ್ರಕ್ಕೆ ಯಾವುದೇ ತಪ್ಪು ಮಾಹಿತಿಯನ್ನು ರಾಜ್ಯ ಸರ್ಕಾರ ನೀಡಿಲ್ಲ: ಡಿಸಿಎಂ ಗೋವಿಂದ ಕಾರಜೋಳ
- ರಾಜ್ಯದಲ್ಲಿರುವ ಸ್ತ್ರೀ ಶಕ್ತಿ ಸಹಾಯ ಸಂಘ ಬಲವರ್ಧನೆಗೆ ಬ್ಯಾಂಕ್‌ಗಳ ಮೂಲಕ ರೂ.10,100 ಕೋಟಿಗಳ ಸಾಲ ಕೊಡಿಸಲಾಗಿದೆ: ಸಚಿವೆ ಶಶಿಕಲಾ ಜೊಲ್ಲೆ.

ಆಧಾರ: ವಿಶ್ವವಾಣಿ, ದಿನಾಂಕ:06.03.2021.

## 67. ಏಕ ಚುನಾವಣೆ ಚರ್ಚೆಗೆ ಮತ್ತೆ ಪ್ರಯತ್ನ:ಕಾಗೇರಿ

ವಿಧಾನ ಸಭೆಯಲ್ಲಿ ಒಂದು ದೇಶ, ಒಂದು ಚುನಾವಣೆ ಕುರಿತು ಸುಗಮವಾಗಿ ಚರ್ಚೆ ನಡೆಯದಿರುವುದಕ್ಕೆ ಬೇಸರ ವ್ಯಕ್ತಪಡಿಸಿರುವ ಸಭಾಧ್ಯಕ್ಷರು ಪ್ರತಿಪಕ್ಷ ನಾಯಕರ ಜೊತೆ ಮತ್ತೊಮ್ಮೆ ಚರ್ಚಿಸಿ ಮನವೊಲಿಕೆ ಪ್ರಯತ್ನ ಮಾಡಲಾಗುವುದು ಎಂದು ಹೇಳಿದರು.

ವಿಧಾನ ಸೌಧದಲ್ಲಿ ತಮ್ಮ ಕಛೇರಿಯಲ್ಲಿ ಪತ್ರಕರ್ತರ ಜೊತೆ ಅನೌಪಚಾರಿಕ ಮಾತುಕತೆ ನಡೆಸಿದ ಅವರು ವಿಧಾನಸಭೆಯಲ್ಲಿ ಒಂದು ದೇಶ, ಒಂದು ಚುನಾವಣೆ ಬಗ್ಗೆ ಚರ್ಚಿಸಲು ಈ ಹಿಂದೆಯೇ ತೀರ್ಮಾನವಾಗಿತ್ತು. ಚರ್ಚೆಯಲ್ಲಿ ಭಾಗವಹಿಸಲು ಕಾಂಗ್ರೆಸ್‌ನಿಂದ 19 ಸದಸ್ಯರು, ಬಿಜೆಪಿಯಿಂದ 15 ಮತ್ತು ಜೆಡಿಎಸ್‌ನಿಂದ 13 ಸದಸ್ಯರು ಹೆಸರು ಕೊಟ್ಟಿದ್ದರು. ಆದರೆ, ಈಗ ಕಾಂಗ್ರೆಸ್‌ನವರು ವಿರೋಧ ವ್ಯಕ್ತಪಡಿಸುತ್ತಿದ್ದಾರೆ. ಬಜೆಟ್ ಅಧಿವೇಶನ ಈ ತಿಂಗಳು ಪೂರ್ತಿ ನಡೆಯುವುದರಿಂದ ಪ್ರತಿಪಕ್ಷ ನಾಯಕ ಸಿದ್ದರಾಮಯ್ಯ ಸೇರಿದಂತೆ ಕಾಂಗ್ರೆಸ್ ನಾಯಕರ ಮನವೊಲಿಕೆಗೆ ಮತ್ತೊಮ್ಮೆ ಪ್ರಯತ್ನಿಸಿ ಚರ್ಚೆಯಲ್ಲಿ ಭಾಗವಹಿಸುವಂತೆ ಮನವಿ ಮಾಡುತ್ತೇನೆ ಎಂದರು.

ಸದನದಲ್ಲಿ ಚರ್ಚೆ ನಡೆದರೆ ಅದರ ಮಹತ್ವವೇ ಬೇರೆ ಇರುತ್ತದೆ. ಸದನದಲ್ಲಿ ಚರ್ಚೆ ನಡೆಸಲು ಸಾಕಷ್ಟು ಪ್ರಯತ್ನಿಸುತ್ತಿದ್ದೇನೆ. ಒಂದು ವೇಳೆ ಸಾಧ್ಯವಾಗದಿದ್ದರೆ ಸಮ್ಮೇಳನ ಸಭಾಂಗಣದಲ್ಲಿ ಕಾರ್ಯಕ್ರಮ ಆಯೋಜಿಸಿ ಚರ್ಚಿಸುವ ಚಿಂತನೆ ನಡೆಸಲಾಗುವುದು. ಕಲಾಪ ಸಲಹಾ ಸಮಿತಿ ಸಭೆ ನಡೆಸಿ ಮಾತುಕತೆ ನಡೆಸಲಾಗುವುದು. ಕಲಾಪ ಸಲಹಾ ಸಮಿತಿ ಸಭೆ ನಡೆಸಿ ಒಂದು ಸರ್ಕಾರದ ಚೌಕಟ್ಟಿನೊಳಗೆ ಚರ್ಚೆ ನಡೆಸಲು ಪ್ರಯತ್ನಿಸಲಾಗುತ್ತಿದೆ. ಒಂದು ದೇಶ, ಒಂದು ಚುನಾವಣೆ ಕುರಿತ ಚರ್ಚೆ ಅಪೂರ್ಣವಾಗಿದೆ ಎಂದು ಬೇಸರ ವ್ಯಕ್ತಪಡಿಸಿದರು.

**ಸಂಗಮೇಶ್ ವಿರುದ್ಧ ಕ್ರಮಕ್ಕೆ ಸಮರ್ಥನೆ:** ಭದ್ರಾವತಿ ಶಾಸಕ ಸಂಗಮೇಶ್ ಅವರನ್ನು ಸದನದ ಒಪ್ಪಿಗೆ ಮೇರೆಗೆ ಅಮಾನತ್ತು ಮಾಡಲಾಗಿದೆ. ನಿಯಮ 348ರಡಿ ಕ್ರಮ ಜರುಗಿಸಲಾಗಿದೆ. ಸರ್ಕಾರವು ತೆರವುಗೊಳಿಸುವ ಪ್ರಸ್ತಾವನೆ ಮುಂದಿಟ್ಟರೆ ನನ್ನ ಅಭ್ಯಂತರ ಇಲ್ಲ. ಕಾಂಗ್ರೆಸ್‌ನ ಹಿರಿಯ ಸದಸ್ಯರು ಸದನದೊಳಗೆ ಕರೆತಂದಿದ್ದು ಸರಿಯಲ್ಲ. ಈ ಹಿಂದೆ ಬೆಳಗಾವಿ ಅಧಿವೇಶನದಲ್ಲಿ ಮೊಬೈಲ್ ನೋಡಿದ್ದಕ್ಕೆ

ಸಚಿವರಾಗಿರುವ ಪ್ರಭು ಚವ್ಹಾಣ್ ಅವರನ್ನು ಸಭಾಧ್ಯಕ್ಷರಾಗಿದ್ದ ಕಾಗೋಡು ತಿಮ್ಮಪ್ಪ ಅವರು ಒಂದು ದಿನದ ಮಟ್ಟಿಗೆ ಹೊರಗೆ ಕಳುಹಿಸಿದ್ದರು ಎಂದು ಇದೇ ವೇಳೆ ಸಭಾಧ್ಯಕ್ಷರು ಹೇಳಿದರು.

ಆಧಾರ: ಕನ್ನಡಪ್ರಭ ದಿನಾಂಕ:06.03.2021.

## 68. ಒಂದು ರಾಷ್ಟ್ರ, ಒಂದು ಚುನಾವಣೆ ಚರ್ಚೆಗೆ ಕಾಂಗ್ರೆಸ್ ವಿರೋಧ

'ಒಂದು ರಾಷ್ಟ್ರ–ಒಂದು ಚುನಾವಣೆ' ವಿಶೇಷ ಚರ್ಚೆ ವಿರೋಧಿಸಿ ವಿಧಾನಸಭೆಯಲ್ಲಿ ಕಾಂಗ್ರೆಸ್ ಸದಸ್ಯರು ಎರಡನೇ ದಿನವೂ ಧರಣಿ, ಗದ್ದಲ ಮುಂದುವರಿಸಿದ್ದರಿಂದಾಗಿ ಚರ್ಚೆ ನಡೆಯದೇ ಕಲಾಪ ಮುಂದೂಡಿಕೆಯಾಯಿತು.

ಈ ಚರ್ಚೆ ಕರ್ನಾಟಕದಿಂದಲೇ ಆರಂಭವಾಗಲಿ, ಪರ–ವಿರೋಧ ಇದ್ದವರು ತಮ್ಮ ಅಭಿಪ್ರಾಯ ಮುಕ್ತವಾಗಿ ಹೇಳಬಹುದು. ಇಡೀ ದೇಶಕ್ಕೆ ಒಂದು ಸಂದೇಶ ಹೋಗಬೇಕು. ಆದ್ದರಿಂದ ಚರ್ಚೆಯಲ್ಲಿ ಭಾಗವಹಿಸಿ' ಎಂದು ಸಭಾಧ್ಯಕ್ಷರು ಕೇಳಿಕೊಂಡರು, ಕಾಂಗ್ರೆಸ್ ಸದಸ್ಯರು ಧರಣಿ ಬಿಟ್ಟು ಕದಲಲಿಲ್ಲ. ಗದ್ದಲ, ಕೂಗಾಟ ತಾರಕಕ್ಕೇರಿದಾಗ ಎರಡು ಬಾರಿ ಕಲಾಪ ಮುಂದೂಡಿದರು.

ಚರ್ಚೆಯ ಬಗ್ಗೆ ಸಭಾಧ್ಯಕ್ಷರು ಪ್ರಸ್ತಾಪಿಸಿದರೆ, ವಿರೋಧ ಪಕ್ಷದ ನಾಯಕ ಸಿದ್ದರಾಮಯ್ಯ ಅವರು ಶಾಸಕ ಸಂಗಮೇಶ್ವರ ಅವರ ಅಮಾನತ್ತು ಆದೇಶವನ್ನು ಹಿಂದಕ್ಕೆ ಪಡೆಯಬೇಕೆಂದು ಪಟ್ಟು ಹಿಡಿದರು.

ಈ ಚರ್ಚೆ ಆರ್‌ಎಸ್‌ಎಸ್ ಅಜೆಂಡಾ ಆಗಿರುವುದರಿಂದ ಇದರಲ್ಲಿ ಭಾಗವಹಿಸುವುದಿಲ್ಲ. ಕಲಾಪ ನಡೆಯಲು ಬಿಡುವುದಿಲ್ಲ ಎಂದು ಸಿದ್ದರಾಮಯ್ಯ ಹೇಳಿದರು. ಇದಕ್ಕೆ ಧ್ವನಿಗೂಡಿಸಿದ ಕಾಂಗ್ರೆಸ್ ಸದಸ್ಯರು ಸರ್ಕಾರ ಮತ್ತು ಸ್ಪೀಕರ್ ಅವರು ಆರ್‌ಎಸ್‌ಎಸ್ ಕೈಗೊಂಬೆ ಎಂದು ಘೋಷಣೆ ಕೂಗಿದರು. ಇನ್ನೂ ಜೋರಾಗಿ ಕೂಗಿ ಎಂದು ಸಿದ್ದರಾಮಯ್ಯ ತಮ್ಮ ಸದಸ್ಯರನ್ನು ಹುರಿದುಂಬಿಸಿದರು. ಇದಕ್ಕೆ ಪ್ರತಿಯಾಗಿ ಬಿಜೆಪಿ ಸದಸ್ಯರು ಆರ್‌ಎಸ್‌ಎಸ್ ಜೈ ಎಂದು ಘೋಷಣೆ ಕೂಗಿದರು.

ಆಗ ಮಧ್ಯ ಪ್ರವೇಶಿಸಿದ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವ ಬಸವರಾಜ್ ಬೊಮ್ಮಾಯಿ, 'ಕಾಂಗ್ರೆಸ್‌ಗೆ ಇಂತಹ ಉಪಯುಕ್ತ ಚರ್ಚೆಯಲ್ಲಿ ಭಾಗವಹಿಸಲು ಆಸಕ್ತಿ ಇಲ್ಲ. ಅವರಿಗೆ ಪ್ರಜಾಪ್ರಭುತ್ವ ಬಲಪಡಿಸುವ ಉದ್ದೇಶವು ಇಲ್ಲ. ಇದು ಸರಿಯಾದ ನಡವಳಿಕೆ ಅಲ್ಲ' ಎಂದರು.

ನಿಮಗೆ ಚರ್ಚೆಯಲ್ಲಿ ಭಾಗವಹಿಸಲು ಇಚ್ಛೆ ಇಲ್ಲದಿದ್ದರೆ, ಇತರೆ ಸದಸ್ಯರು ಮಾತನಾಡಲು ಅಡ್ಡಿ ಮಾಡಿ ಅವರ ಹಕ್ಕು ಮೊಟಕು ಮಾಡುವುದು ಸರಿಯಲ್ಲ. ಇದು ಪ್ರಜಾತಂತ್ರದ ಲಕ್ಷಣವೂ ಅಲ್ಲ. ಸಂಗಮೇಶ್ವರ ಅವರ ಬೇಜವಾಬ್ದಾರಿ ವರ್ತನೆ ಖಂಡಿಸದೇ ಅಮಾನತ್ತು ಹಿಂದಕ್ಕೆ ಪಡೆಯಿರಿ ಎಂದು ವಿಷಯಾಂತರ ಮಾಡುವುದು ಸರಿಯಲ್ಲ. ಸದನಕ್ಕೆ ಘನತೆ, ಗೌರವವಿದೆ. ಪ್ರಜಾಪ್ರಭುತ್ವದ ದೇಗುಲದಲ್ಲಿ ಅದರ ಪಾವಿತ್ರ್ಯಕ್ಕೆ ಧಕ್ಕೆ ತರುವುದು ಸರಿಯಲ್ಲ' ಎಂದು ಸಭಾಧ್ಯಕ್ಷರು ಹೇಳಿದರು.

ಈ ಮಧ್ಯೆ ಸಭಾಧ್ಯಕ್ಷರು ಬಸವರಾಜ ಬೊಮ್ಮಾಯಿ ಮತ್ತು ಬಿಜೆಪಿಯ ಪಿ.ರಾಜೀವ್ ಅವರಿಗೆ ಮಾತನಾಡಲು ಅವಕಾಶ ನೀಡಿದರು, ಆದರೆ ಕಾಂಗ್ರೆಸ್ ಸದಸ್ಯರ ಗದ್ದಲದಲ್ಲಿ ತಮ್ಮ ವಾದವನ್ನು ಮಂಡಿಸಲು ಸಾಧ್ಯವಾಗಲಿಲ್ಲ. ಗದ್ದಲವೇ ತುಂಬಿದ್ದರಿಂದ ಕಲಾಪವನ್ನು ಮುಂದೂಡಲಾಯಿತು. ಜೆಡಿಎಸ್ ಸದಸ್ಯರು ಧರಣಿಯಲ್ಲಿ ಭಾಗವಹಿಸಲಿಲ್ಲ.

ಆಧಾರ: ಪ್ರಜಾವಾಣಿ, ದಿನಾಂಕ:06.03.2021.

## 69. ಮುನಿರಾಜು ಗೌಡ ಅವಿರೋಧ ಆಯ್ಕೆ

ವಿಧಾನ ಸಭೆಯಿಂದ ವಿಧಾನ ಪರಿಷತ್‌ನಲ್ಲಿ ಒಂದು ಸ್ಥಾನಕ್ಕೆ ನಡೆದ ಚುನಾವಣೆಯಲ್ಲಿ ಬಿಜೆಪಿ ಅಭ್ಯರ್ಥಿ ಮುನಿರಾಜುಗೌಡ ಪಿ.ಎಂ ಅವರು ಅವಿರೋಧವಾಗಿ ಆಯ್ಕೆಯಾಗಿದ್ದಾರೆ. ಬಿಜೆಪಿಗೆ ಬಹುಮತವಿದ್ದ ಕಾರಣ, ಕಾಂಗ್ರೆಸ್ ಮತ್ತು ಜೆಡಿಎಸ್ ಪಕ್ಷ ಅಭ್ಯರ್ಥಿಗಳನ್ನು ಕಣಕ್ಕಿಳಿಸಿರಲಿಲ್ಲ. ಮುನಿರಾಜುಗೌಡ ಒಬ್ಬರೇ ನಾಮಪತ್ರ ಸಲ್ಲಿಸಿದ್ದರಿಂದ ಅವಿರೋಧವಾಗಿ ಆಯ್ಕೆಯಾದರು.

ಆಧಾರ: ವಿಜಯವಾಣಿ, ದಿನಾಂಕ:09.03.2021.

## 70. ಎರಡು ಗಂಟೆ ಬಜೆಟ್ ವಾಚಿಸಿದ ಬಿಎಸ್‌ವೈ

ಹಸಿರು ಶಾಲು ಧರಿಸಿ ಸದನಕ್ಕೆ ಬಂದಿದ್ದ ಮುಖ್ಯಮಂತ್ರಿ ಬಿ.ಎಸ್ ಯಡಿಯೂರಪ್ಪ ಎರಡು ಗಂಟೆಗಳ ಕಾಲ ಬಜೆಟ್ ಪ್ರತಿಯನ್ನು ಓದಿದರು. ಅಧಿಕೃತ ವಿರೋಧ ಪಕ್ಷವಾದ ಕಾಂಗ್ರೆಸ್ ಗೈರಿನಲ್ಲಿ ನಡೆದ ಕಲಾಪದಲ್ಲಿ ಬಿಜೆಪಿ ಸದಸ್ಯರು ಆಗಾಗ ಮೇಜುಕುಟ್ಟಿ ಮುಖ್ಯಮಂತ್ರಿಯನ್ನು ಹುರಿದುಂಬಿಸಿದರು.

ಮಧ್ಯಾಹ್ನ 12.05 ಕ್ಕೆ ಬಜೆಟ್ ಓದಲು ಆರಂಭಿಸಿದ ಯಡಿಯೂರಪ್ಪ 2.05ಕ್ಕೆ 105 ಪುಟಗಳನ್ನು ಓದಿ ಮುಗಿಸಿದರು. ಮಧ್ಯದಲ್ಲಿ ಕೆಲವೊಮ್ಮೆ ಬಳಲಿದಂತೆ ಕಂಡರೂ, ತೆರಿಗೆ ಪ್ರಸ್ತಾವ ಮತ್ತು ರಾಜಸ್ವ ಸಂಗ್ರಹದ ವಿಷಯಕ್ಕೆ ಬರುತ್ತಿದ್ದಂತೆಯೇ ಏರು ಧ್ವನಿಯಲ್ಲಿ ಓದಲಾರಂಭಿಸಿದರು. ಗೋ ಶಾಲೆಗಳ ಆರಂಭ, ಅಯೋಧ್ಯೆಯಲ್ಲಿ ವಸತಿ ಗೃಹ ನಿರ್ಮಾಣ ಸೇರಿದಂತೆ ಕೆಲವು ಪ್ರಮುಖ ಯೋಜನೆಗಳನ್ನು ಪ್ರಕಟಿಸಿದಾಗ ಬಿಜೆಪಿ ಸದಸ್ಯರು ಮೇಜುಕುಟ್ಟಿ ಸ್ವಾಗತಿಸಿದರು. ಬಜೆಟ್ ಪ್ರತಿಯಲ್ಲಿದ್ದ ಇಂಗ್ಲೀಷ್‌ನ ಕೆಲವು ಪದಗಳ ಉಚ್ಚಾರ ಕಷ್ಟವಾದಾಗ ಪಕ್ಕದಲ್ಲಿ ಬಿಜೆಪಿ ಸದಸ್ಯರು ನೆರವಿಗೆ ಬಂದರು.

ಕಾಂಗ್ರೆಸ್ ಸಭಾತ್ಯಾಗ ಮಾಡಿದ್ದರಿಂದ ವಿರೋಧ ಪಕ್ಷದ ಸಾಲಿನ ಹೆಚ್ಚಿನ ಆಸನಗಳು ಖಾಲಿ ಇದ್ದವು. ಜೆಡಿಎಸ್ ಸದಸ್ಯರು ಬಜೆಟ್ ಮಂಡನೆ ವೇಳೆ ಸದನದಲ್ಲಿ ಹಾಜರಿದ್ದರು. ಆದರೆ, ಜೆಡಿಎಸ್ ಶಾಸಕಾಂಗ ಪಕ್ಷದ ನಾಯಕ ಹೆಚ್.ಡಿ ಕುಮಾರಸ್ವಾಮಿ ಕಲಾಪಕ್ಕೆ ಗೈರಾಗಿದ್ದರು.

ಆಧಾರ: ಪ್ರಜಾವಾಣಿ, ದಿನಾಂಕ:09.03.2021.

## 71. ಮೊದಲ ಬಾರಿಗೆ ಬಜೆಟ್ ಬಹಿಷ್ಕರಿಸಿದ ವಿಪಕ್ಷ ಕಾಂಗ್ರೆಸ್

ರಾಜ್ಯದ ರಾಜಕೀಯ ಇತಿಹಾಸದಲ್ಲಿ ಮೊಟ್ಟ ಮೊದಲ ಬಾರಿಗೆ ಸರ್ಕಾರದ ಬಜೆಟ್ ಮಂಡನೆ ವಿರೋಧಿಸಿ ಪ್ರಮುಖ ಪ್ರತಿಪಕ್ಷ ಸಭಾತ್ಯಾಗ ಮಾಡಿದ ಘಟನೆಗೆ ವಿಧಾನಸಭೆ ಸಾಕ್ಷಿಯಾಯಿತು.

ಬಜೆಟ್ ಮಂಡನೆ ವಿರೋಧಿಸಬೇಕೆಂದು ಮುಂಚಿತವಾಗಿಯೇ ತೀರ್ಮಾನಿಸಿದ್ದ ಕಾಂಗ್ರೆಸ್ ಸದಸ್ಯರು ಕೈಗೆ ಕಪ್ಪು ಬಟ್ಟೆ ಧರಿಸಿಯೇ ಸದನಕ್ಕೆ ಆಗಮಿಸಿದ್ದರು. ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪ ಬಜೆಟ್ ಭಾಷಣ ಮಾಡಲು ಮುಂದಾಗುತ್ತಿದ್ದಂತೆ ಪ್ರತಿಪಕ್ಷ ನಾಯಕ ಸಿದ್ದರಾಮಯ್ಯ ಅವರು, ಇಂದೊಂದು ಅನೈತಿಕ ಸರ್ಕಾರ ಬಜೆಟ್ ಮಂಡಿಸಲು ಯಾವುದೇ ನೈತಿಕ ಹಕ್ಕು ಅಧಿಕಾರ ಇಲ್ಲ ಎಂದು ಏರಿದ ದನಿಯಲ್ಲಿ ಹೇಳತೊಡಗಿದರು. ಇದಕ್ಕೆ ಪೂರಕವಾಗಿ ಕಾಂಗ್ರೆಸ್ ಸದಸ್ಯರು, ಇದೊಂದು ಸಿ.ಡಿ ಸರ್ಕಾರ ಕೆಲವರು ಕೋರ್ಟ್ ಬೇಲ್ ಮೇಲೆ ಹೊರಗಿದ್ದರೆ. ಇಂಥ ಸಚಿವರಿರುವ ಸರ್ಕಾರಕ್ಕೆ ಬಜೆಟ್ ಮಂಡಿಸಲು ಯಾವುದೇ ನೈತಿಕ ಹಕ್ಕಿಲ್ಲ ಎಂದು ಘೋಷಣೆ ಕೂಗತೊಡಗಿದರು. ಇದಕ್ಕೆ ಪ್ರತಿಯಾಗಿ ಬಿಜೆಪಿ ಸದಸ್ಯರು ಎದ್ದು ನಿಂತು ಜೈ ಶ್ರೀರಾಮ್ ಎಂದು ಘೋಷಣೆ ಕೂಗಿದರು, ಕಾಂಗ್ರೆಸ್‌ನ ಅನೇಕರು ಬೇಲ್ ಮೇಲಿದ್ದಾರೆ ಎಂದು ಹೇಳತೊಡಗಿದರು.

ಆಗ ಸಭಾಧ್ಯಕ್ಷರು ಸರ್ಕಾರದ ಬಜೆಟ್ ವಿರೋಧಿಸುವುದು ಒಳ್ಳೆಯದಲ್ಲ, ಕಲಾಪದಲ್ಲಿ ಭಾಗವಹಿಸಿ ಎಂದು ಮನವಿ ಮಾಡಿದರು. ಆದರೆ, ಸಭಾಧ್ಯಕ್ಷರ ಮನವಿಗೆ ಸ್ಪಂದಿಸದ ಕಾಂಗ್ರೆಸ್ ಸದಸ್ಯರು, ಸರ್ಕಾರದ ವಿರುದ್ಧ ಘೋಷಣೆ ಕೂಗುತ್ತಾ ಸಭಾತ್ಯಾಗ ಮಾಡಿದರು.

ಆಧಾರ: ಕನ್ನಡಪ್ರಭ, ದಿನಾಂಕ:09.03.2021.

## 72.ಅಶಿಸ್ತಿಗೆ ಸ್ಪೀಕರ್ ರೋಷಾವೇಷ

ಅಂಕೆ ಇಲ್ಲದ ಸದನವನ್ನು ನಿಯಂತ್ರಣಕ್ಕೆ ತೆಗೆದುಕೊಳ್ಳಲು ಆಗಾಗ್ಗೆ ಚಾಟಿ ಬೀಸುವ ಸಭಾಧ್ಯಕ್ಷ ಅಕ್ಷರಶಃ ಕುದಿಯುತ್ತಿದ್ದರು. ಇದಕ್ಕೆ ಕಾರಣ ಪ್ರತಿಪಕ್ಷ ಕಾಂಗ್ರೆಸ್ ಸದಸ್ಯರು ನಿರಂತರ ಮನವಿಗೆ ಸ್ಪಂದಿಸದೇ ಪ್ರತಿಭಟನೆ ನಡೆಸಿದ ಪ್ರಸಂಗ. ಕೊನೆಗೂ ನಿಯಮದಂತೆ ಕಲಾಪ ನಿರ್ವಹಿಸಿದ ಸ್ಪೀಕರ್ ರಾಜಕೀಯ ಅನುಭವ ಮತ್ತು ಸಂವಿಧಾನಿಕ ಅಧಿಕಾರ ಬಳಸಿ ಆಡಿದ ಕಿಡಿನುಡಿಗಳು ಶಾಸನಸಭೆಯನ್ನು ಚಕಿತಗೊಳಿಸಿದ್ದಂತೂ ದಿಟ.

ಈ ಸಭಾಧ್ಯಕ್ಷರ ಸ್ಥಾನ ಬಹಳಷ್ಟು ಮಂದಿ ಸ್ಪೀಕರ್‌ಗಳನ್ನು ಕಂಡಿದೆ. ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ತಮ್ಮದೇ ಆದ ಛಾಪು ಮೂಡಿಸಿದ್ದಾರೆ. ಯಾರ್ಯಾರ ಅವಧಿಯಲ್ಲಿ ಏನೇನು ಮಾಡಿದ್ದಾರೆ ಎಂಬುದು ಗೊತ್ತಿದೆ. ಎಲ್ಲವೂ ಸದನದ ಇತಿಹಾಸ ಪುಟ ಸೇರಿವೆ. ಯಾವ್ಯಾವ ಸಂದರ್ಭಗಳಲ್ಲಿ ಏನೇನು ನಿರ್ಣಯ ಮಾಡಬೇಕೆಂದು ನನಗೆ ಚೆನ್ನಾಗಿಯೇ ತಿಳಿದಿದೆ ಎಂದು ಏರುಧ್ವನಿಯಲ್ಲೇ ಉದ್ಘರಿಸಿದವರು ಸ್ಪೀಕರ್ ಕಾಗೇರಿ ಅವರು.

ಸಂಸದೀಯ ಮೌಲ್ಯಗಳನ್ನು ಹೆಚ್ಚಿಸಬೇಕಾದ ವಿಧಾನಸಭೆ ಪ್ರಜಾತಂತ್ರದ ದೇಗುಲ ಇದ್ದಂತೆ, ರಾಜ್ಯದ ಜನತೆಯ ಭಾವನೆಗಳನ್ನು ಗೌರವಿಸಬೇಕಿದೆ. ಹಾಗಾಗಿಯೇ ನಮ್ಮನಿಲ್ಲಿಗೆ ಆರಿಸಿ ಕಳುಹಿಸಿದ್ದಾರೆ. ಪ್ರತಿಪಕ್ಷದವರಿಗೂ ಹೊಣೆಗಾರಿಕೆ ಇದೆ. ಒಂದು ದೇಶ–ಒಂದು ಚುನಾವಣೆ ಚರ್ಚೆಗೂ ನೀವು ಸಿದ್ದರಿಲ್ಲ. ಹಕ್ಕುಚ್ಯುತಿ ವಿಷಯ ಚರ್ಚೆಗೂ ತಯಾರಿಲ್ಲ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಇದು ಒಳ್ಳೆಯ ಬೆಳವಣಿಗೆ ಅಲ್ಲವೇ ಅಲ್ಲ. ಹತ್ತಾರು ವರ್ಷಗಳ ಕಾಲ ಶಾಸನಸಭೆ ಸದಸ್ಯರಾಗಿರೋ ನೀವೇ ಹೀಗೆ ಮಾಡಿದ್ರೆ, ಇದೇನಾ ನಾವೂ ಹೊಸಬರಿಗೆ ಕೊಡುವ ಮಾದರಿ ಎಂದು ಮನದಾಳದ ಆಕ್ರೋಶವನ್ನು ಸ್ಪೀಕರ್ ಹೊರಹಾಕಿದರು.

ಯಾರು ಏನೇ ಅಡ್ಡಿ ಆತಂಕ ಉಂಟು ಮಾಡಿದರೂ ಈ ಸ್ಥಾನದಲ್ಲಿ ನಾನು ಇರೋವರೆಗೆ ಪೀಠದ ಗೌರವ ಕಾಪಾಡ್ತೇನೆ. ಒಂದಿನಿತು ಧಕ್ಕೆಯಾಗಲು ಅವಕಾಶ ಕೊಡುವುದಿಲ್ಲ. ನಾನೂ ಕೂಡ ದಶಕಗಳ ಕಾಲ ಶಾಸಕನಾಗಿ, ಮಂತ್ರಿಯಾಗಿಯೂ ಕೆಲಸ ಮಾಡಿದ್ದೇನೆ. ಆದರೆ ಸದನದಲ್ಲಿ ಇಂತಹ ನಡವಳಿಕೆ ಸರಿಯಲ್ಲ. ಪ್ರತಿಭಟನೆ ಹಕ್ಕು, ಆದರೆ ಅದು ದುರ್ಬಳಕೆ ಆಗಬಾರದು ಎನ್ನುವ ಕಿವಿಮಾತು ಕಾಗೇರಿಯವರದ್ದಾಗಿತ್ತು. ನಿಮ್ಮ ರಾಜಕಾರಣದಿಂದಲೇ ಸಭಾಧ್ಯಕ್ಷ ಪೀಠಕ್ಕೆ ಅಗೌರವವಾಗಿದೆ. ಬೇಜವಾಬ್ದಾರಿ ರಾಜಕಾರಣ ಸರಿಯಲ್ಲ. ರಾಜಕಾರಣ ಮಾಡುವ ಹಾಗಿದ್ರೆ ಸದನದಿಂದ ಹೊರಗೆ ಮಾಡಿ. ಯಾವುದೇ ಕಾರಣಕ್ಕೂ ನಿಯಮ ಮೀರಿದ ನಡವಳಿಕೆಗಳಿಗೆ ನನ್ನ ಅವಧಿಯಲ್ಲಿ ಅವಕಾಶ ಸಿಗುವುದಿಲ್ಲ. ಗಮನದಲ್ಲಿಟ್ಟುಕೊಳ್ಳಿ ಎಂದು ಕಾವೇರಿದ ಕೋಪದಿಂದಲೇ ಕಾಗೇರಿಯವರು ಅಬ್ಬರಿಸಿದ್ದು ಮಾತ್ರ ಸ್ಪೀಕರ್ ಅವರ ಸೌಮ್ಯ ಸ್ವಭಾವದ ಮತ್ತೊಂದು ಮುಖವನ್ನು ಅನಾವರಣ ಮಾಡಿತು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:10.03.2021.

## 73. ಪರಿಸರ ಅನುಮತಿಗಾಗಿ ಪ್ರತ್ಯೇಕ ಕೋಶ

ನೀರಾವರಿ ಅಥವಾ ಅಭಿವೃದ್ಧಿ ಯೋಜನೆಗಳಿಗೆ ಕೇಂದ್ರ ಯೋಜನೆಗಳಿಗೆ ಕೇಂದ್ರ ಪರಿಸರ ಸಚಿವಾಲಯದ ಅನುಮತಿ ಪಡೆಯಲು ಆಗುತ್ತಿರುವ ವಿಳಂಬ ತಪ್ಪಿಸುವ ಉದ್ದೇಶದಿಂದ ಅರಣ್ಯ ಇಲಾಖೆಯಲ್ಲಿ ಪ್ರತ್ಯೇಕ ಕೋಶ ತೆರೆಯಲಾಗುವುದು ಎಂದು ಅರಣ್ಯ ಸಚಿವ ಅರವಿಂದ ಲಿಂಬಾವಳಿ ಹೇಳಿದರು.

ವಿಧಾನಸಭೆಯಲ್ಲಿ ಕಾಂಗ್ರೆಸ್‌ನ ಮಹಾಂತೇಶ ಕೌಜಲಗಿ ಅವರು ಬೈಲಹೊಂಗಲ ಕ್ಷೇತ್ರದ ಚಚಡಿ ಏತ ನೀರಾವರಿ ಯೋಜನೆಯ ವಿಳಂಬದ ಪ್ರಶ್ನೆ ಕೇಳಿದ್ದರು. ಪರಿಸರ ಸಚಿವಾಲಯದ ಅನುಮತಿ ಸಿಗದೇ ಇರುವುದರಿಂದ ವಿಳಂಬವಾಗಿದೆ ಎಂದು ಸಚಿವ ಗೋವಿಂದ ಕಾರಜೋಳ ಸದನಕ್ಕೆ ತಿಳಿಸಿದರು.

ಈ ಸಂದರ್ಭದಲ್ಲಿ ಮಧ್ಯ ಪ್ರವೇಶಿಸಿದ ಸಭಾಧ್ಯಕ್ಷ ವಿಶ್ವೇಶ್ವರ ಹೆಗಡೆ ಕಾಗೇರಿ, 'ನೀರಾವರಿ, ರೈಲ್ವೆ, ರಸ್ತೆ ಹೀಗೆ ಅನೇಕ ಕಾಮಗಾರಿಗಳಿಗೆ ಕೇಂದ್ರ ಪರಿಸರ ಸಚಿವಾಲಯದ ನಿರಾಕ್ಷೇಪಣಾ ಪತ್ರ ಸಿಗದೇ ಇರುವುದರಿಂದ ಯೋಜನೆಗಳು ಕಾಲಮಿತಿಯಲ್ಲಿ ಅನುಷ್ಠಾನವಾಗುತ್ತಿಲ್ಲ. ಹಿರಿಯ ಐಎಫ್‌ಎಸ್ ಅಧಿಕಾರಿಯೊಬ್ಬರನ್ನು ನೇಮಕ ಮಾಡಿ, ಕೇಂದ್ರ ಸರ್ಕಾರದ ಮುಂದಿರುವ ಪ್ರಸ್ತಾವನೆಗಳಿಗೆ ಅನುಮತಿ ಪಡೆಯುವ ಜವಾಬ್ದಾರಿಯನ್ನು ವಹಿಸಿ, ಕಡತಗಳ ಬೆನ್ನು ಬಿದ್ದು ಕೆಲಸ ಮಾಡುವ ಅಧಿಕಾರಿಗಳನ್ನು ನೇಮಕ ಮಾಡಿ ಎಂದು ಸಲಹೆ ನೀಡಿದರು.

ಇದಕ್ಕೆ ಪ್ರತಿಕ್ರಿಯಿಸಿದ ಲಿಂಬಾವಳಿ, 'ಪ್ರತ್ಯೇಕ ಕೋಶ ಆರಂಭಿಸಿ ನೋಡಲ್ ಅಧಿಕಾರಿಯನ್ನು ನೇಮಕ ಮಾಡಲಾಗುವುದು. ಎಲ್ಲ ಇಲಾಖೆಯವರು ತಮ್ಮ ಪ್ರಸ್ತಾವನೆಗಳು, ಕಡತಗಳನ್ನು ಈ

ಅಧಿಕಾರಿಯ ಗಮನಕ್ಕೆ ತಂದರೆ ಕೇಂದ್ರದಿಂದ ಅನುಮತಿ ಕೊಡಿಸುವ ಕೆಲಸವನ್ನು ಮಾಡಿಸಲಾಗುವುದು' ಎಂದು ಹೇಳಿದರು.

ಆಧಾರ: ಪ್ರಜಾವಾಣಿ, ದಿನಾಂಕ:10.03.2021

## 74. ಸದನದಲ್ಲಿ ಆರು ಸಚಿವರ ವಿರುದ್ಧ ಕಾಂಗ್ರೆಸ್ ಬಹಿಷ್ಕಾರದ ತಂತ್ರಗಾರಿಕೆ

ಮಾನಹಾನಿಕಾರಕ ಸುದ್ದಿ ಬಹಿರಂಗಪಡಿಸಬಾರದು ಎಂದು ಕೋರ್ಟಿಗೆ ಹೋಗಿರುವ ರಾಜ್ಯ ಸರ್ಕಾರದ ಆರು ಸಚಿವರ ವಿರುದ್ಧ ಪ್ರತಿಪಕ್ಷ ಕಾಂಗ್ರೆಸ್ ಉತ್ತರ ಬಹಿಷ್ಕಾರದ ತಂತ್ರಗಾರಿಕೆ ಆರಂಭಿಸಿದೆ. ಜೊತೆಗೆ ಬೆಳಗ್ಗೆ ನಡೆದ ಸದನ ಕಲಾಪ ಸಮಿತಿ ಸಭೆಗೂ ಗೈರಾದ ಕಾಂಗ್ರೆಸ್ ಆಕ್ರೋಶ ವ್ಯಕ್ತಪಡಿಸಿತು.

ವಿಧಾನಸಭೆ ಮತ್ತು ವಿಧಾನಪರಿಷತ್‌ನಲ್ಲಿ ಕಾಂಗ್ರೆಸ್ ಸದಸ್ಯರು ಕ್ರೀಡಾ ಸಚಿವ ನಾರಾಯಣಗೌಡ ಮತ್ತು ನಗರಾಭಿವೃದ್ಧಿ ಸಚಿವ ಭೈರತಿ ಬಸವರಾಜ್ ಇಲಾಖೆಗೆ ಸಂಬಂಧಿಸಿದ ಪ್ರಶ್ನೆ ಕೇಳದೇ ಪ್ರತಿಭಟನೆ ತೋರಿದರು. ಇದು ಉಭಯ ಸದನಗಳಲ್ಲೂ ಕೋಲಾಹಲಕ್ಕೆ ಕಾರಣವಾಗಿ ಆಡಳಿತ ಮತ್ತು ಪ್ರತಿಪಕ್ಷ ಸದಸ್ಯರ ನಡುವೆ ಮಾತಿನ ಚಕಮಕಿಗೂ ಕಾರಣವಾಯಿತು.

ಪ್ರಶ್ನೆ ಕೇಳದೇ ಇರುವ ನಿರ್ಧಾರಕ್ಕೆ ಆಡಳಿತರೂಢ ಬಿಜೆಪಿ ಸದಸ್ಯರು ಹಾಗೂ ಸ್ಪೀಕರ್ ಮತ್ತು ಸಭಾಪತಿಯವರು ಆಕ್ಷೇಪ ವ್ಯಕ್ತಪಡಿಸಿ ನಿಮಗೆ ಇಷ್ಟ ಇಲ್ಲದಿದ್ದರೆ ಕೇಳಬೇಡಿ, ನೈತಿಕತೆ ವಿಚಾರ ಮಾತನಾಡಬೇಡಿ ಎಂದು ತಾಕೀತು ಮಾಡಿದರು.

ವಿಧಾನ ಸಭೆಯಲ್ಲಿ ಒಂದು ಹಂತದಲ್ಲಿ ಕ್ರೀಡಾ ಸಚಿವ ನಾರಾಯಣ ಗೌಡ, ನನ್ನ ನೈತಿಕತೆ ಪ್ರಶ್ನಿಸಲು ಇವರ್‍ಯಾರು ಎಂದು ಆಕ್ರೋಶ ಹೊರ ಹಾಕಿದರು. ಇದಕ್ಕೆ ಎಸ್.ಟಿ.ಸೋಮಶೇಖರ್, ಶಿವರಾಮ್ ಹೆಬ್ಬಾರ ಧ್ವನಿಗೂಡಿಸಿದರು. ಉಪ ಮುಖ್ಯಮಂತ್ರಿ ಗೋವಿಂದ ಕಾರಜೋಳ ಸಹ ನೆರವಿಗೆ ಧಾವಿಸಿದರು.

ಚಾಮರಾಜನಗರಕ್ಕೆ ಸಂಬಂಧಿಸಿದಂತೆ ಪುಟ್ಟರಂಗಶೆಟ್ಟಿ ಅವರು, ಕ್ರೀಡಾ ಸಚಿವ ನಾರಾಯಣ ಗೌಡ ಅವರಿಂದ ಉತ್ತರ ಪಡೆಯೋಲ್ಲ, ಅವರಿಗೆ ಸದನಕ್ಕೆ ಬರುವ ನೈತಿಕತೆ ಇಲ್ಲ ಎಂದು ಹೇಳಿ ಕುಳಿತರು. ಇದು ನಾರಾಯಣಗೌಡ ಅವರನ್ನು ಕೆರಳಿಸಿತು. ಸಚಿವ ಮಾಧುಸ್ವಾಮಿ, ನೈತಿಕತೆ ವಿಚಾರ ಬಂದಾಗ ಪುಟ್ಟರಂಗಶೆಟ್ಟಿ ಅವರು ಇಲ್ಲಿ ಇರಲು ಸಾಧ್ಯವೇ ಇಲ್ಲ ಎಂದು ತಿರುಗೇಟು ನೀಡಿದರು. ಸ್ಪೀಕರ್ ಕಾಗೇರಿ ಅವರು, ನಿಮಗೆ ಪ್ರಶ್ನೆ ಕೇಳಲು ಇಷ್ಟ ಇಲ್ಲದಿದ್ದರೆ ಬಿಡಿ ಎಂದು ತಾಕೀತು ಮಾಡಿದರು.

**ಹಕ್ಕು ಬಾಧ್ಯತಾ ಸಮಿತಿಗೆ ಸಂಗಮೇಶ್ ಪ್ರಕರಣ:** ಸದನದಲ್ಲಿ ಶರ್ಟ್ ಬಿಚ್ಚಿದ ವಿಚಾರಕ್ಕೆ ಸಂಬಂಧಿಸಿದಂತೆ ಭದ್ರಾವತಿ ಶಾಸಕ ಬಿ.ಕೆ.ಸಂಗಮೇಶ್ ವಿರುದ್ಧದ ಹಕ್ಕುಚ್ಯುತಿ ಪ್ರಸ್ತಾಪ ತೀವ್ರ ಕೋಲಾಹಲ ಸೃಷ್ಟಿಸಿ ಆಡಳಿತರೂಢ ಬಿಜೆಪಿ ಹಾಗೂ ಪ್ರತಿಪಕ್ಷ ಕಾಂಗ್ರೆಸ್ ನಡುವೆ ವಾಕ್ಸಮರಕ್ಕೆ ಕಾರಣವಾಯಿತು. ಸಂಗಮೇಶ್ ಅಸಭ್ಯ ವರ್ತನೆ ತೋರಿದ್ದು ಆದರಿಂದ ಇಡೀ ಸದನದ ಹಕ್ಕುಚ್ಯುತಿಯಾಗಿದೆ. ಅನಿರ್ದಿಷ್ಟಾವಧಿಗೆ ಅಮಾನತ್ತು ಮಾಡಬೇಕು. ಎಂದು ಬಿಜೆಪಿ ಸದಸ್ಯರು ಒತ್ತಾಯಿಸಿದರೆ, ಸಿಡಿ ಪ್ರಕರಣ ಅಸಭ್ಯವಲ್ಲವೇ, ಗೂಳಿಹಟ್ಟಿ ಶೇಖರ ಬಟ್ಟೆ ಹರಿದು ಕೊಂಡಿದ್ದು ಅಸಭ್ಯವಲ್ಲವೇ, ಆರು ಜನ ಸಚಿವರು ನ್ಯಾಯಾಲಯಕ್ಕೆ ಹೋಗಿರುವುದು ನೈತಿಕವೇ ಎಂದು ಪ್ರಶ್ನಿಸಿದ ಕಾಂಗ್ರೆಸ್ ಸದಸ್ಯರು, ಸಿಡಿ ಸಿಡಿ ಎಂದು ಘೋಷಣೆ ಹಾಕಿದ್ದರಿಂದ ಗದ್ದಲ–ಕೋಲಾಹಲದ ಪರಿಸ್ಥಿತಿ ನಿರ್ಮಾಣವಾಯಿತು.

ಆಧಾರ: ಉದಯವಾಣಿ, ದಿನಾಂಕ:10.03.2021.

## 75. ಕೆ.ಸಿ.ವ್ಯಾಲಿ ಯೋಜನೆಗೆ ಜಲಮಂಡಳಿ ಅಸಹಕಾರ

ರಾಜಧಾನಿಯ ಕೊಳಚೆ ನೀರನ್ನು ಸಂಸ್ಕರಿಸಿ ಕೋಲಾರ ಜಿಲ್ಲೆಯ ಕೆರೆಗಳಿಗೆ ಹರಿಸುವ ಕೋರಮಂಗಲ ಚಲ್ಲಘಟ್ಟ (ಕೆ.ಸಿ) ವ್ಯಾಲಿ ಯೋಜನೆಗೆ ಬೆಂಗಳೂರು ಜಲಮಂಡಳಿ ಸಹಕಾರ ನೀಡುತ್ತಿಲ್ಲ ಎಂದು ಬಿಜೆಪಿ ಸದಸ್ಯ ವೈ.ಎ.ನಾರಾಯಣ ಸ್ವಾಮಿ ವಿಧಾನ ಪರಿಷತ್ತಿನಲ್ಲಿ ಆರೋಪಿಸಿದರು.

ನಿಯಮ 330ರ ಅಡಿಯಲ್ಲಿ ವಿಷಯ ಪ್ರಸ್ತಾಪಿಸಿದ ನಾರಾಯಣ ಸ್ವಾಮಿ, 'ಸಣ್ಣ ನೀರಾವರಿ ಇಲಾಖೆ ಸರಿಯಾಗಿ ಕೆಲಸ ಮಾಡುತ್ತಿದೆ. ಜಲಮಂಡಳಿ ಭಂಡ ಬಿದ್ದಿದ್ದೆ' ಎಂದು ಅಸಮಾಧಾನ ವ್ಯಕ್ತಪಡಿಸಿದರು. ನಂತರ ಉತ್ತರ ನೀಡಿದ ಸಣ್ಣ ನೀರಾವರಿ ಸಚಿವ ಜೆ.ಸಿ.ಮಾಧುಸ್ವಾಮಿ ಕೂಡ ಜಲಮಂಡಳಿಯಿಂದ ಅಗತ್ಯ ಸಹಕಾರ ದೊರೆಯುತ್ತಿಲ್ಲ ಎಂದು ಅಸಮಾಧಾನ ವ್ಯಕ್ತಪಡಿಸಿದರು.

ಕೆ.ಸಿ. ವ್ಯಾಲಿ ಯೋಜನೆಗೆ ಈ ಬಜೆಟ್‌ನಲ್ಲೂ ರೂ.500 ಕೋಟಿ ಒದಗಿಸಿರುವುದು ಸ್ವಾಗತಾರ್ಹ. ಮೊದಲ ಹಂತದಲ್ಲಿ ನಿತ್ಯ 400 ದಶಲಕ್ಷ ಲೀಟರ್ ನೀರನ್ನು ಹರಿಸಿ, ಕೋಲಾರ ಜಿಲ್ಲೆಯ 126 ಕೆರೆಗಳನ್ನು ಭರ್ತಿ ಮಾಡಲು ಯೋಜನೆ ರೂಪಿಸಲಾಗಿತ್ತು. 83 ಕೆರೆಗಳಿಗೆ ಮಾತ್ರ ನೀರು ಹರಿದಿದೆ. ಇನ್ನೂ 43 ಕೆರೆಗಳಿಗೆ ನೀರು ಬರಬೇಕಿದೆ. ಜಲಮಂಡಳಿ ಸರಿಯಾಗಿ ಸಹಕಾರ ನೀಡದಿರುವುದೇ ಕಾರಣ ಎಂದು ದೂರಿದರು.

'ಬೆಂಗಳೂರಿನ ಜನರು ಬಳಸಿ ಬಿಟ್ಟಿರುವ ಕೊಳಚೆ ನೀರನ್ನು ಸಂಸ್ಕರಿಸಿ ನಮಗೆ ನೀಡಲಾಗುತ್ತಿದೆ. ಅದರಲ್ಲೂ ಈ ರೀತಿ ಮಾಡುವುದು ಸರಿಯೆ, 13 ತಿಂಗಳಿನಿಂದಲೂ 292 ದಶಲಕ್ಷ ಲೀಟರ್ ನೀರು ಮಾತ್ರ ಹರಿಯುತ್ತಿದೆ. ಎಲ್ಲ ಕೆರೆಗಳು ಭರ್ತಿ ಆಗುವುದು ಯಾವಾಗ' ಎಂದು ಪ್ರಶ್ನಿಸಿದರು.

ಉತ್ತರ ನೀಡಿದ ಸಚಿವ ಮಾಧುಸ್ವಾಮಿ, ಸದ್ಯ ಕೆ.ಸಿ.ವ್ಯಾಲಿ ಯೋಜನೆಯ ಕಾಲುವೆಯಲ್ಲಿ 300 ದಶಲಕ್ಷ ಲೀಟರ್ ನೀರು ಹರಿಯುತ್ತಿದೆ ಎಂದು ಹೇಳುತ್ತಿದೆ. ಮಾರ್ಗ ಮಧ್ಯದಲ್ಲಿ ರೈತರು ನೀರು ಬಳಕೆ ಮಾಡುತ್ತಿದ್ದಾರೆ ಇದರಿಂದಾಗಿ ಎಲ್ಲ ಕೆರೆಗಳನ್ನೂ ಭರ್ತಿ ಮಾಡಲು ಸಾಧ್ಯವಾಗಿಲ್ಲ' ಎಂದರು. ಯೋಜನೆಯಡಿ ಪೂರ್ಣ ಪ್ರಮಾಣದಲ್ಲಿ ಸಂಸ್ಕರಿಸಿದ ನೀರನ್ನು ಕೋಲಾರ ಜಿಲ್ಲೆಯ ಕೆರೆಗಳಿಗೆ ಹರಿಸುವ ಸಂಬಂಧ ಶೀಘ್ರದಲ್ಲಿ ಸಭೆ ನಡೆಸಲಾಗುವುದು. ಶಾಸಕರು, ಅಧಿಕಾರಿಗಳ ಜೊತೆ ಚರ್ಚಿಸಿ ಯೋಜನೆಗೆ ವೇಗ ನೀಡಲಾಗುವುದು ಎಂದು ಭರವಸೆ ನೀಡಿದರು.

ಆಧಾರ: ಪ್ರಜಾವಾಣಿ, ದಿನಾಂಕ:10.03.2021.

## 76. ಮಂತ್ರಿಗಳ ಹಾಜರಾತಿ ಕಡ್ಡಾಯ

ಕಲಾಪ ನಡೆಯುವ ಸಂದರ್ಭದಲ್ಲಿ ಮಂತ್ರಿಗಳು ಕಡ್ಡಾಯವಾಗಿ ಹಾಜರಾತಿ ಇರಬೇಕು ಎಂದು ಸಭಾಪತಿ ಬಸವರಾಜ ಹೊರಟ್ಟಿ ಸಭಾನಾಯಕರಿಗೆ ಸೂಚಿಸಿದರು. ಶೂನ್ಯ ವೇಳೆ ಚರ್ಚೆ ನಡೆದ ಸಂದರ್ಭದಲ್ಲಿ ಸಚಿವರು ಗೈರಾಗಿದ್ದ ಕಾರಣದಿಂದಾಗಿ ಸೂಚನೆ ನೀಡಿದ ಅವರು, ಕೇವಲ ಮಂತ್ರಿಗಳು ಅಷ್ಟೇ ಅಲ್ಲದೇ ಸಂಬಂಧಿಸಿದ ಇಲಾಖೆಗಳ ಹಿರಿಯ ಅಧಿಕಾರಿಗಳು ಕಡ್ಡಾಯವಾಗಿ ಹಾಜರಿರಬೇಕು ಎಂದು ಸೂಚನೆ ನೀಡಿದರು. ಈ ವಿಷಯವಾಗಿ ಪದೇ ಪದೇ ಹೇಳುವುದು ಸರಿಯಲ್ಲ, ಮುಂದಿನ ಕಲಾಪಗಳಲ್ಲಿ ಮಂತ್ರಿಗಳು ಕಡ್ಡಾಯವಾಗಿ ಇರುವಂತೆ ನೋಡಿಕೊಳ್ಳಬೇಕು ಎಂದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:10.03.2021

## 77. ಸಿಎಂ ವಿರುದ್ಧ ಹಕ್ಕುಚ್ಯುತಿ ಮಂಡನೆಗೆ ಮನವಿ

ಸಿ.ಡಿ. ಬಿಡುಗಡೆ ವಿಚಾರ ನನ್ನ ಗಮನಕ್ಕೆ ಬಂದಿಲ್ಲ ಎಂದು ಮುಖ್ಯಮಂತ್ರಿಯವರು ತಪ್ಪು ಮಾಹಿತಿ ನೀಡಿದ್ದಾರೆ. ಅವರ ವಿರುದ್ಧ ಹಕ್ಕುಚ್ಯುತಿ ಮಂಡಿಸುವುದಾಗಿ ಕಾಂಗ್ರೆಸ್ ಸದಸ್ಯ ಸಿ.ಎಂ. ಇಬ್ರಾಹಿಂ ಹೇಳಿದ್ದಾರೆ. ಕಲಾಪ ಆರಂಭವಾಗುತ್ತಿದ್ದಂತೆ ವಿಷಯ ಪ್ರಸ್ತಾಪಿಸಿದ ಸಿ.ಎಂ ಇಬ್ರಾಹಿಂ, ಸಚಿವರೊಬ್ಬರ ಅಶ್ಲೀಲ ಸಿಡಿ ಬಿಡುಗಡೆ ಕುರಿತು ನಾನು ಮುಖ್ಯಮಂತ್ರಿಯವರಿಗೆ ಪ್ರಶ್ನೆ ಬರೆದು ಕಳುಹಿಸಿದ್ದೆ ಆದರೆ, ಸಿ. ಡಿ. ಬಿಡುಗಡೆ ವಿಚಾರ ನನ್ನ ಗಮನಕ್ಕೆ ಬಂದಿಲ್ಲ ಎಂದು ಮುಖ್ಯಮಂತ್ರಿ ಲಿಖಿತ ಉತ್ತರ ಕೊಟ್ಟಿದ್ದಾರೆ. ಸಿ.ಡಿ. ವಿಚಾರ ಜಗಜ್ಜಾಹೀರಾಗಿದೆ. ಆರೋಪ ಕೇಳಿ ಬಂದ ಸಚಿವರು ರಾಜೀನಾಮೆ ಕೊಟ್ಟಿದ್ದರೆ. ಇಡೀ ರಾಜ್ಯ ಮತ್ತು ದೇಶ ಈ ವಿಷಯವನ್ನು ಗಮನಿಸಿದೆ. ಆದರೂ, ತಮಗೆ ಮಾಹಿತಿ ಇಲ್ಲ ಎಂದು ಸಿಎಂ ಸದನಕ್ಕೆ ತಪ್ಪು ಮಾಹಿತಿ ನೀಡಿದ್ದಾರೆ. ಇದು ಸದನದ ಮತ್ತು ಸದಸ್ಯನ ಹಕ್ಕುಚ್ಯುತಿಯಾಗಿದೆ. ಆದ್ದರಿಂದ ಹಕ್ಕುಚ್ಯುತಿ ಮಂಡಿಸಲು ಅವಕಾಶ ಕೊಡಬೇಕೆಂದು ಮನವಿ

ಮಾಡಿದರು. ಸೂಕ್ತ ನಿಯಮಗಳಡಿ ನೋಟಿಸ್ ಕೊಡಿ, ಪರಿಶೀಲಿಸಲಾಗುವುದು ಎಂದು ಸಭಾಪತಿ ಬಸವರಾಜ ಹೊರಟ್ಟಿ ಹೇಳಿದರು.

ಆಧಾರ: ಉದಯವಾಣಿ, ದಿನಾಂಕ:10.03.2021.

## 78. ಹಕ್ಕುಚ್ಯುತಿ ಸಮಿತಿಗೆ ತನಿಖೆ ಹೊಣೆ

ಭದ್ರಾವತಿ ಕಾಂಗ್ರೆಸ್ ಶಾಸಕ ಬಿ.ಕೆ.ಸಂಗಮೇಶ್ ಅವರು ಸದನದಲ್ಲಿ ತೋರಿದ ಅಶಿಸ್ತು ಹಾಗೂ ಸಭಾಧ್ಯಕ್ಷರ ಪೀಠಕ್ಕೆ ಗೌರವ ತೋರಿರುವ ಪ್ರಕರಣದ ತನಿಖೆಯ ಹೊಣೆಯನ್ನು ಹಕ್ಕುಚ್ಯುತಿ ಸಮಿತಿಗೆ ವಹಿಸಿ ಸಭಾಧ್ಯಕ್ಷರು ಆದೇಶ ಹೊರಡಿಸಿದ್ದಾರೆ.

ಪ್ರಕರಣವೊಂದಕ್ಕೆ ಸಂಬಂಧಿಸಿದಂತೆ ಶಾಸಕ ಬಿ.ಕೆ.ಸಂಗಮೇಶ ಕಲಾಪದಲ್ಲಿ ಅಂಗಿಬಿಚ್ಚಿದ ಪ್ರಕರಣದ ಕುರಿತು, ಕಾಂಗ್ರೆಸ್ ಹಾಗೂ ಬಿಜೆಪಿ ಸದಸ್ಯರ ತೀವ್ರ ಜಟಾಪಟಿ, ನಡೆದು ಕೋಲಾಹಲ ವಾತಾವರಣ ನಿರ್ಮಾಣವಾಯಿತು.

ಒಂದು ದೇಶ, ಒಂದು ಚುನಾವಣೆ ಚರ್ಚೆಯ ವೇಳೆ ಕಾಂಗ್ರೆಸ್ ಅನುಸರಿಸಿದ ನಡೆ ಹಾಗೂ ಶಾಸಕ ಸಂಗಮೇಶ್ ವರ್ತನೆಯಿಂದ ಸಭಾಧ್ಯಕ್ಷರ ಪೀಠದ ಅಗೌರವದ ಮೂಲಕ ಹಕ್ಕುಚ್ಯುತಿ ಆಗಿದೆ ಎಂದು ಹಕ್ಕುಚ್ಯುತಿ ಮಂಡನೆ ಮಾಡಲು ಬಿಜೆಪಿ ಶಾಸಕ ಅರಗ ಜ್ಞಾನೆಂದ್ರ ಅನುಮತಿ ಕೋರಿದರು. ಶಾಸಕರು ದುರ್ವರ್ತನೆ ತೋರಿದ್ದು, ಅವರನ್ನು ಪೂರ್ಣ ಅಧಿವೇಶನದಿಂದಲೇ ಅಮಾನತ್ತು ಮಾಡಬೇಕು ಎಂದು ಜ್ಞಾನೇಂದ್ರ ಆಗ್ರಹಿಸಿದರು.

ಇದಕ್ಕೆ ತೀವ್ರ ಆಕ್ಷೇಪ ವ್ಯಕ್ತಪಡಿಸಿದ ಪ್ರತಿಪಕ್ಷ ನಾಯಕ ಸಿದ್ದರಾಮಯ್ಯ, ತಮಗಾದ ಅನ್ಯಾಯವನ್ನು ಸದನದ ಗಮನಕ್ಕೆ ತರುವ ಉದ್ದೇಶದಿಂದ ಸಂಗಮೇಶ್ ಆ ರೀತಿ ವರ್ತಿಸಿದ್ದಾರೆ ಎಂದು ಸಮರ್ಥಿಸಿಕೊಂಡರು ಈ ಹಿಂದೆ ಗೂಳಿಹಟ್ಟಿ ಶೇಖರ್ ಕೂಡ ಸದನದಲ್ಲಿ ತಮ್ಮ ಅಂಗಿ ಬಿಚ್ಚಿದ್ದರು. ಆ ಸಂದರ್ಭದಲ್ಲಿ ಅವರನ್ನು ಅಮಾನತ್ತು ಮಾಡಲಿಲ್ಲ. ಈಗೇಕೆ ಅಮಾನತ್ತು ಕ್ರಮ ಎಂದು ಸಿದ್ದರಾಮಯ್ಯ ಪ್ರಶ್ನಿಸಿದರು.

ಶಾಸಕರು ಸದನದಲ್ಲಿ ನಿಮ್ಮ ಬಗ್ಗೆ ಮಾತನಾಡಿಲ್ಲ. ಅವರಿಲ್ಲ ಹಾಜರಾಗಿಲ್ಲ. ಹೀಗಿದ್ದರೂ ಹಕ್ಕುಚ್ಯುತಿಗೆ ಅವಕಾಶ ಹೇಗೆ ಕೊಡುತ್ತೀರಿ ಎಂದು ಸಿದ್ದರಾಮಯ್ಯ ಆಕ್ಷೇಪಿಸಿದರು. ಈ ಸಂದರ್ಭ ಮಧ್ಯಪ್ರವೇಶಿಸಿದ ಗೃಹ ಸಚಿವ ಬಸವರಾಜ ಬೊಮ್ಮಾಯಿ, ಪ್ರಕರಣವನ್ನು ಹಕ್ಕುಚ್ಯುತಿ ಸಮಿತಿಗೆ ಒಪ್ಪಿಸುವುದು ಸೂಕ್ತ ಎಂದರು. ಇದರಿಂದ ಕೆರಳಿದ ಕಾಂಗ್ರೆಸ್ ಸದಸ್ಯರು, ಸದನದ ಬಾವಿಗಿಳಿದು ಸರ್ಕಾರದ ವಿರುದ್ಧ ಘೋಷಣೆ ಕೂಗಿ ಪ್ರತಿಭಟನೆ ನಡೆಸಿದರು.

ತೀವ್ರ ಗದ್ದಲದ ನಡುವೆಯೇ ಸ್ಪೀಕರ್ ಕಾಗೇರಿ ಅವರು ಸಂಗಮೇಶ್ ಪ್ರಕರಣದ ತನಿಖೆಯನ್ನು ಸದನದ ಹಕ್ಕುಚ್ಯುತಿ ಸಮಿತಿಗೆ ಒಪ್ಪಿಸಲಾಗಿದೆ. ತನಿಖೆ ನಡೆದು ಸದನಕ್ಕೆ ವರದಿ ಮಂಡನೆಯಾಗಲಿದೆ ಎಂದು ಆದೇಶ ಹೊರಡಿಸಿದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:10.03.2021.

## 79. ಆರು ಸಚಿವರಿಗೆ ಕಾಂಗ್ರೆಸ್ ಬಹಿಷ್ಕಾರ: ಸದನದಲ್ಲಿ ಪ್ರಶ್ನೆ ಕೇಳದಿರಲು ನಿರ್ಧಾರ

ಮಾನಹಾನಿಕರ ಸುದ್ದಿ ಪ್ರಕಟಿಸದಂತೆ ಕೋರ್ಟ್‌ನಿಂದ ತಡೆಯಾಜ್ಞೆ ತಂದಿರುವ ಮಿತ್ರಮಂಡಳಿಯ 6 ಸಚಿವರಿಗೆ ವಿಧಾನಮಂಡಲದ ಉಭಯ ಸದನಗಳಲ್ಲಿ ಪ್ರತಿಪಕ್ಷ ಕಾಂಗ್ರೆಸ್ ಬಹಿಷ್ಕಾರ ಹಾಕಿದೆ. ಈ ಸಚಿವರಿಗೆ ಯಾವುದೇ ಪ್ರಶ್ನೆ ಕೇಳಬಾರದು ಎಂಬ ನಿರ್ಧಾರ ತೆಗೆದುಕೊಂಡಿರುವ ಕಾಂಗ್ರೆಸ್ ಪಕ್ಷ ಈ ಸಚಿವರ ರಾಜೀನಾಮೆಗೂ ಒತ್ತಾಯಿಸಿದೆ.

ಪ್ರಶ್ನೋತ್ತರ ಕಲಾಪದಲ್ಲಿ ಸಚಿವ ಕೆ.ಸಿ. ನಾರಾಯಣಗೌಡ ಅವರಿಗೆ ವಿಧಾನ ಸಭೆಯಲ್ಲಿ ಪ್ರಶ್ನೆ ಕೇಳಲು ಕಾಂಗ್ರೆಸ್ ಪುಟ್ಟರಂಗಶೆಟ್ಟಿ ನಿರಾಕರಿಸಿದರು. ಪರಿಷತ್‌ಲ್ಲಿ ಸಚಿವ ಭೈರತಿ ಬಸವರಾಜು ಅವರಿಗೆ ಪ್ರಶ್ನೆ ಕೇಳುವುದಿಲ್ಲವೆಂದು ಕಾಂಗ್ರೆಸ್‌ನ ಆರ್.ಪ್ರಸನ್ನ ಕುಮಾರ್ ವಿರೋಧಿಸಿದರು. ಜೊತೆಗೆ ಬಸವರಾಜ್

ಪಾಟೀಲ್ ಇಟಗಿ ಕೂಡ ಪರಿಷತ್‌ನಲ್ಲಿ ಪ್ರಶ್ನೆ ಕೇಳಲು ನಿರಾಕರಿಸಿದರು. ಇದರಿಂದ ಉಭಯ ಸದನಗಳಲ್ಲೂ ಮಿತ್ರಮಂಡಳಿಯ ಸಚಿವರಿಗೆ ಇರಸುಮುರಸು ಆಗುವಂತಾಯಿತು.

ಸಚಿವ ನಾರಾಯಣ ಗೌಡ ಅವರಿಗೆ ಚುಕ್ಕೆ ಗುರುತಿನ ಪ್ರಶ್ನೆ ಕೇಳುವ ಸರದಿ ಬಂದಾಗ "ನಾನು ಅವರಿಗೆ ಪ್ರಶ್ನೆ ಕೇಳುವುದಿಲ್ಲ. ಅವರಿಗೆ ನೈತಿಕತೆಯಿಲ್ಲ, ಎಂದ ಪುಟ್ಟರಂಗಶೆಟ್ಟಿ ಹೇಳಿದರು. ತಕ್ಷಣವೇ ನಾರಾಯಣ ಗೌಡ ಜೊತೆಗೆ ಸದನದಲ್ಲಿದ್ದ ಮಿತ್ರಮಂಡಳಿ ಕೋಟಾದ ಸಚಿವರು ಕಾಂಗ್ರೆಸ್ ವಿರುದ್ಧ ತಿರುಗಿ ಬಿದ್ದರು. ಇದರಿಂದ ಜೋರು ಜಟಾಪಟಿ ನಡೆಯಿತು. ಪರಿಷತ್‌ನಲ್ಲೂ ಸಚಿವ ಭೈರತಿ ಬಸವರಾಜು ಅವರಿಗೆ ಉತ್ತರಿಸುವ ನೈತಿಕತೆ ಇಲ್ಲವೆಂದು ಪ್ರಸನ್ನ ಕುಮಾರ್ ಆಕ್ರೋಶ ವ್ಯಕ್ತಪಡಿಸಿದರು.

"ಸಚಿವರು ಉತ್ತರ ನೀಡಲು ಸಿದ್ದರಾಗಿದ್ದಾರೆ. ಪ್ರಶ್ನೆ ಕೇಳುವುದು ನಿಮ್ಮ ಹಕ್ಕು. ಅದರಂತೆ ಪ್ರಶ್ನೆ ಕೇಳಬಹುದು ಎನ್ನುವುದು ನನ್ನ ಅಭಿಪ್ರಾಯ," ಎಂದು ವಿಧಾನ ಸಭೆಯಲ್ಲಿ ಪುಟ್ಟರಂಗಶೆಟ್ಟಿ ಅವರಿಗೆ ಸಭಾಧ್ಯಕ್ಷರು ಸೂಚಿಸಿದರು. ಪರಿಷತ್ತಿನಲ್ಲೂ "ಪ್ರಶ್ನೆ ಕೇಳುವುದು ನಿಮ್ಮ ಹಕ್ಕು. ಆದರೆ, ಏಕೆ ಪ್ರಶ್ನೆ ಕೇಳುತ್ತಿಲ್ಲ ಎಂದು ನಾನು ಒತ್ತಾಯ ಮಾಡಲಾಗುವುದಿಲ್ಲ. ಪ್ರಶ್ನೋತ್ತರ ಅವಧಿಯಲ್ಲಿ ಬೇರೆ ವಿಷಯಗಳ ಚರ್ಚೆಗೆ ಅವಕಾಶವಿಲ್ಲ." ಎಂದು ಸಭಾಪತಿ ಬಸವರಾಜ್ ಹೊರಟ್ಟಿ ಹೇಳಿದರು. ಸದಸ್ಯರ ಮಾತುಗಳನ್ನು ಕಡತದಿಂದ ತೆಗೆಯಬೇಕು. ಪ್ರಶ್ನೆಯಷ್ಟೆ ಕಡತಕ್ಕೆ ಹೋಗಬೇಕು ಎಂದು ಸಭಾಪತಿ ಸೂಚಿಸಿದರು. ಸದಸ್ಯರು ಅಸಂಸದೀಯ ಪದ ಬಳಸಿಲ್ಲ. ಕಡತದಿಂದ ತೆಗೆಯುವ ಅಗತ್ಯವಿಲ್ಲವೆಂದು ಕಾಂಗ್ರೆಸ್‌ನ ಸಿ.ಎಂ.ಇಬ್ರಾಹಿಂ, ಬಿ.ಕೆ.ಹರಿಪ್ರಸಾದ್, ಎಂ.ನಾರಾಯಣಸ್ವಾಮಿ ಇದಕ್ಕೆ ಆಕ್ಷೇಪಿಸಿದರು.

ಸಚಿವ ನಾರಾಯಣ ಗೌಡ ಅವರಿಗೆ ಪ್ರಶ್ನೆ ಕೇಳುವುದಿಲ್ಲವೆಂದು ವಿಧಾನಸಭೆಯಲ್ಲಿ ಗಲಾಟೆ ನಡೆಯವಾಗ ಪ್ರತಿಪಕ್ಷದ ನಾಯಕ ಸಿದ್ದರಾಮಯ್ಯ ಸದನದಲ್ಲಿ ಇರಲಿಲ್ಲ. ಬಳಿಕ ಬಂದ ಅವರು ಪ್ರತಿಪಕ್ಷದ ಮುಖ್ಯ ಸಚೇತಕ ಡಾ.ಅಜಯ್‌ಸಿಂಗ್‌ರವರಿಂದ ವಿವರ ಪಡೆದುಕೊಂಡರು. ಕಲಾಪದಲ್ಲಿ ಮಿತ್ರಮಂಡಳಿಯ ಬಹುತೇಕ ಸಚಿವರ ಇಲಾಖೆಗೆ ಸಂಬಂಧಿಸಿದ ಪ್ರಶ್ನೆಗಳಿವೆ. ಈ ಸಂದರ್ಭದಲ್ಲಿ ಹೋರಾಟ ಪ್ರಖರಗೊಳಿಸಬೇಕು ಎಂಬ ತೀರ್ಮಾನವನ್ನು ಕಾಂಗ್ರೆಸ್ ತೆಗೆದುಕೊಂಡಿದೆ.

ಆಧಾರ: ವಿಜಯ ಕರ್ನಾಟಕ, ದಿನಾಂಕ:10.03.2021.

## 80. ರೂ.12,038 ಕೋಟಿ ಪೂರಕ ಅಂದಾಜು ಮಂಡನೆ

ಸಿ.ಡಿ. ಗದ್ದಲದ ನಡುವೆಯೇ 2020-21ನೇ ಸಾಲಿನ ರೂ.12,028 ಕೋಟಿಗಳ ಪೂರಕ ಅಂದಾಜುಗಳಿಗೆ ಮಂಜೂರಾತಿ ಪಡೆಯಲು ಸದನದಲ್ಲಿ ಸರ್ಕಾರ ಪ್ರಸ್ತಾವನೆ ಮಂಡಿಸಿದೆ.

ಮುಖ್ಯಮಂತ್ರಿಯವರ ಅನುಪಸ್ಥಿತಿಯಲ್ಲಿ ಸರ್ಕಾರದ ಪರವಾಗಿ ಪ್ರಸ್ತಾವನೆ ಸಲ್ಲಿಸಿದ ಸಚಿವ ಬಸವರಾಜ ಬೊಮ್ಮಾಯಿ ಮಾರ್ಚ್-31ರೊಳಗಾಗಿ ಸಂದಾಯ ಮಾಡಬೇಕಿರುವ ವೆಚ್ಚಗಳಿಗಾಗಿ ಇಲಾಖಾವಾರು ಪೂರಕ ಅಂದಾಜು ಹಾಗೂ ಅಂತಿಮ ಕಂತಿನ ಬೇಡಿಕೆ ಪ್ರಸ್ತಾವಗಳನ್ನು ಸದನದ ಮುಂದೆ ಮಂಡಿಸಿದರು.

ಮಾರ್ಚ್ 31ರ ಅಂತ್ಯದೊಳಗಾಗಿ ಕೃಷಿ ಮತ್ತು ತೋಟಗಾರಿಕೆ ಸಂಬಂಧಿಸಿದ ವೆಚ್ಚಗಳ ಸಂದಾಯಕ್ಕಾಗಿ ರೂ.960 ಕೋಟಿ, ಕಂದಾಯ ಇಲಾಖೆ ವೆಚ್ಚಗಳ ಪಾವತಿಗಾಗಿ ರೂ.1,376.74 ಕೋಟಿ, ಇಂಧನ ಇಲಾಖೆಗೆ ರೂ.2,000 ಕೋಟಿ, ನಗರಾಭಿವೃದ್ಧಿ ಇಲಾಖೆಗೆ ಸಂಬಂಧಿಸಿದ ರೂ.636 ಕೋಟಿ, ಲೋಕೋಪಯೋಗಿ ಇಲಾಖೆಗೆ ರೂ.1,732 ಕೋಟಿ, ಜಲಸಂಪನ್ಮೂಲ ಇಲಾಖೆಗೆ ರೂ.1,460 ಕೋಟಿ, ಆರೋಗ್ಯ ಇಲಾಖೆಗೆ ರೂ.494 ಕೋಟಿ, ಕಾರ್ಮಿಕ ಮತ್ತು ಕೌಶಲ್ಯ ಅಭಿವೃದ್ಧಿ ಇಲಾಖೆಗೆ ರೂ.112 ಕೋಟಿ, ಪೂರಕ ಅಂದಾಜು ಪಡೆಯಲು ಬೇಡಿಕೆ ಸಲ್ಲಿಸಿದರು.

ಪಶುಸಂಗೋಪನೆ ಮೀನುಗಾರಿಕೆ ವೆಚ್ಚಗಳಿಗೆ ರೂ.87,45 ಕೋಟಿ, ಆರ್ಥಿಕ ಇಲಾಖೆಗೆ ಸಂಬಂಧಿಸಿದ ವೆಚ್ಚಗಳಿಗೆ ರೂ.184.42 ಕೋಟಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ರೂ.29.85 ಕೋಟಿ, ಒಳಾಡಳಿತ ಮತ್ತು ಸಾರಿಗೆ ಇಲಾಖೆ ವೆಚ್ಚಗಳಿಗಾಗಿ ರೂ.993.80 ಕೋಟಿ, ಗ್ರಾಮೀಣಾಭಿವೃದ್ಧಿ ಇಲಾಖೆಗೆ ರೂ.712.52 ಕೋಟಿ, ಅರಣ್ಯ ಇಲಾಖೆಗೆ ರೂ.43.36 ಕೋಟಿ, ಸಹಕಾರ

ಇಲಾಖೆಗೆ ರೂ.49.8 ಕೋಟಿ, ಸಮಾಜ ಕಲ್ಯಾಣ ಇಲಾಖೆಗೆ ರೂ.277.67 ಕೋಟಿ, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಗೆ 38.60 ಕೋಟಿ, ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವೆ ಇಲಾಖೆಗೆ ರೂ.40.50 ಕೋಟಿ, ಮಾಹಿತಿ ಮತ್ತು ತಂತ್ರಜ್ಞಾನಕ್ಕೆ ರೂ. 98 ಕೋಟಿ, ವಸತಿಗೆ ರೂ.89.24 ಕೋಟಿ, ಶಿಕ್ಷಣಕ್ಕೆ ರೂ.127.96 ಕೋಟಿ, ವಾಣಿಜ್ಯ ಮತ್ತು ಕೈಗಾರಿಕೆಗೆ ರೂ.470.61 ಕೋಟಿ ಸೇರಿ ಒಟ್ಟು ರೂ.12,038 ಕೋಟಿಗಳ ಪೂರಕ ಅಂದಾಜುಗಳಿಗೆ ಪ್ರಸ್ತಾವನೆ ಸಲ್ಲಿಸಿದರು.

ಆಧಾರ: ಕನ್ನಡಪ್ರಭ, ದಿನಾಂಕ:14.03.2021.

## 81. ವಿಧಾನ ಮಂಡಲ ಸದನದಲ್ಲಿ ಸಿಡಿದೆದ್ದ ಕಾಂಗ್ರೆಸ್

ರಾಜ್ಯ ರಾಜಕಾರಣದಲ್ಲಿ ಸಂಚಲನ ಉಂಟು ಮಾಡಿರುವ ಹಾಗೂ ನೈತಿಕತೆಯ ಪ್ರಶ್ನೆ ಹುಟ್ಟು ಹಾಕಿರುವ ಅಶ್ಲೀಲ ವಿಡಿಯೋ ಪ್ರಕರಣ ವಿಧಾನಸಭೆಯಲ್ಲಿ ಭಾರಿ ಸದ್ದು ಮಾಡಿತ್ತು.

ಈ ವಿಚಾರವಾಗಿ ಸರ್ಕಾರದ ವಿರುದ್ಧ ಮುಗಿಬಿದ್ದ ಪ್ರತಿಪಕ್ಷ ಕಾಂಗ್ರೆಸ್, ಮಾನಹಾನಿ ಸುದ್ದಿ ಪ್ರಸಾರಕ್ಕೆ ಕೋರ್ಟ್‌ನಿಂದ ತಡೆಯಾಜ್ಞೆ ತಂದಿರುವ 6 ಸಚಿವರ ರಾಜೀನಾಮೆ ಪಡೆಯುವಂತೆ ಪಟ್ಟು ಹಾಕಿತು. ಜೊತೆಗೆ ಈ ಚರ್ಚೆಗೆ ಸರ್ಕಾರ ನೀಡಿದ ಉತ್ತರ ತೃಪ್ತಿ ತಂದಿಲ್ಲವೆಂದು ಆಕ್ರೋಶ ವ್ಯಕ್ತಪಡಿಸಿದ ಕಾಂಗ್ರೆಸ್ ಸದಸ್ಯರು ಧರಣಿ ನಡೆಸಿದರು.

ಸಿ.ಡಿ. ಪ್ರಕರಣದ ಬಗ್ಗೆ ನಿಲುವಳಿ ಸೂಚನೆ ಮಂಡಿಸಲು ಪ್ರತಿಪಕ್ಷ ನಾಯಕ ಸಿದ್ದರಾಮಯ್ಯ ಅವಕಾಶ ಕೇಳಿದರು. ಸ್ಪೀಕರ್ ವಿಶ್ವೇಶ್ವರ ಹೆಗಡೆ ಕಾಗೇರಿ ನಿಲುವಳಿ ಬದಲು ನಿಯಮ 69ರ ಅಡಿ ಚರ್ಚಿಸಲು ಸಮಯ ನಿಗದಿ ಮಾಡಿದರು. ಅದರಂತೆ ಭೋಜನ ವಿರಾಮದ ಬಳಿಕ ಚರ್ಚೆ ಪ್ರಾರಂಭಿಸಿದರು. ಲಾ ಪಾಯಿಂಟ್ ಹಾಕುತ್ತಾ, ಪ್ರಕರಣ ಸಂಬಂಧ ಮಾತನಾಡುತ್ತ ಹೋದ ಸಿದ್ದರಾಮಯ್ಯ 6 ಸಚಿವರು ಕೋರ್ಟ್‌ನಿಂದ ತಡೆಯಾಜ್ಞೆ ತಂದಿರುವುದು ಸರಿಯಲ್ಲ. ಇದರಲ್ಲಿ ನೈತಿಕತೆ ಪ್ರಶ್ನೆಯಿದೆ. ಹಾಗಾಗಿ ಅವರು ರಾಜೀನಾಮೆ ನೀಡಲೇಬೇಕೆಂದು ಒತ್ತಾಯಿಸಿದರು.

ಸುಮಾರು 4 ತಾಸು ನಡೆದ ಈ ಚರ್ಚೆಯನ್ನು ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪ ಅವರು ಆಲಿಸಿದರು. ಸಿದ್ದರಾಮಯ್ಯ ಮಾತಿಗೆ ಆಗಾಗ ಬ್ರೇಕ್ ಹಾಕಲು ಯತ್ನಿಸಿದ ಗೃಹ, ಕಾನೂನು ಮತ್ತು ಸಂಸದೀಯ ಸಚಿವ ಬಸವರಾಜ ಬೊಮ್ಮಾಯಿ ಸಿ.ಡಿ. ಪ್ರಕರಣದ ಬಗ್ಗೆ ಎಸ್‌ಐಟಿ ತನಿಖೆ ನಡೆಯುತ್ತಿದೆ. 6 ಸಚಿವರು ಸಂವಿಧಾನಬದ್ಧವಾಗಿ ಇರುವ ಅವಕಾಶ ಬಳಸಿಕೊಂಡಿದ್ದಾರೆ ಎಂದು ಸಮರ್ಥಿಸಿಕೊಂಡರು. ಇದಲ್ಲದೆ ಸಚಿವರಾದ ಡಾ: ಕೆ.ಸುಧಾಕರ್, ಎಸ್.ಟಿ. ಸೋಮಶೇಖರ್, ಶಿವರಾಮ್ ಹೆಬ್ಬಾರ್, ಕೆ.ಸಿ. ನಾರಾಯಣ ಗೌಡ ತಾವು 6 ಜನ ಕೋರ್ಟ್‌ಗೆ ಹೋಗಿದ್ದನ್ನು ಸಮರ್ಥಿಸಿಕೊಂಡರು. ಸಿದ್ಧರಾಮಯ್ಯ ಕೆಣಕಿದಾಗ ಪ್ರತಿಕ್ರಿಯಿಸಿದ ಸಚಿವ ಕೆ ಗೋಪಾಲಯ್ಯ ಕೂಡ ನಾನು ಕೋರ್ಟ್‌ನಿಂದ ತಡೆಯಾಜ್ಞೆ ತಂದಿಲ್ಲ. ಆದರೆ, ನಾವೆಲ್ಲರೂ ಒಗ್ಗಟ್ಟಿನಿಂದ ಇದ್ದೇವೆ. ಮುಂಬಯಿಯಲ್ಲಿ ಎಲ್ಲರೂ ಜೊತೆಗಿದ್ದೆವು. ಅಂತಹ ಯಾವ ಘಟನೆಯೂ ನಡೆದಿಲ್ಲ ಎಂದರು.

**ಜಾರಕಿಹೊಳಿ ಪ್ರಸ್ತಾಪಕ್ಕೆ ವಿರೋಧ:** ಸಿದ್ದರಾಮಯ್ಯ ಅವರು ರಮೇಶ್ ಜಾರಕಿಹೊಳಿ ಹೆಸರು ಪ್ರಸ್ತಾಪಿಸಿದಾಗ ಆಕ್ಷೇಪಿಸಿದ ಮಾಜಿ ಸ್ಪೀಕರ್ ಕೆ.ಜಿ. ಬೊಪಯ್ಯ, ಸದನದಲ್ಲಿ ಅವರು ಇಲ್ಲದಿರುವಾಗ ಹೆಸರು ಹೇಳುವುದು ಸೂಕ್ತವಲ್ಲವೆಂದರು 6 ಸಚಿವರು ಕೋರ್ಟ್‌ನಿಂದ ಸ್ಟೇ ತಂದಿರುವ ಬಗ್ಗೆ ಸಿದ್ದರಾಮಯ್ಯ ಹೇಳಿದಾಗಲೂ ಈ ಸಂಬಂಧ ಕೋರ್ಟ್ ಮಧ್ಯಂತರ ಆದೇಶ ನೀಡಿದೆ. ವಿಚಾರಣೆ ಬಾಕಿಯಿರುವಾಗ 6 ಸಚಿವರು ಸ್ಟೇ ತಂದಿದ್ದರ ಬಗ್ಗೆ ಚರ್ಚೆ ಮಾಡುವುದು ಸರಿಯಲ್ಲ ಎಂದು ಕ್ರಿಯಲೋಪವೆತ್ತುವ ಮೂಲಕ ಬೋಪಯ್ಯ ಆಕ್ಷೇಪಿಸಿದರು. ಆದರೆ ಕಾವೇರಿ ನೀರಾವರಿ ವ್ಯಾಜ್ಯ, ಡಿ.ಕೆ. ರವಿ ಪ್ರಕರಣ ಕುರಿತು ಸದನದಲ್ಲಿ ಚರ್ಚೆಯಾಗಿದೆಯೆಂದು ಸಿದ್ದರಾಮಯ್ಯ ವಾದಿಸಿದರು.

ಇಂತಹ ಸೂಕ್ಷ್ಮ ವಿಚಾರದ ಚರ್ಚೆ ನಡೆಯುವಾಗ ವಾದ-ಪ್ರತಿವಾದದ ಬದಲು ಪ್ರಾರಂಭದಲ್ಲೇ ಗದ್ದಲ ನಡೆದ ನಿದರ್ಶನವಿದೆ. ಆದರೆ, ಸಂಸದೀಯ ವ್ಯವಹಾರಗಳ ಖಾತೆ ನೋಡಿಕೊಳ್ಳುವ ಸಚಿವ ಬಸವರಾಜ ಬೊಮ್ಮಾಯಿ ಅವರು ಯಾವುದೇ ಸಂದರ್ಭದಲ್ಲಿ ಈ ಚರ್ಚೆ ಅತಿರೇಕಕ್ಕೆ ಹೋಗದಂತೆ

ನೋಡಿಕೊಂಡರು. ಸದನದ ಘನತೆ, ಗೌರವ ಕಾಪಾಡುವ ನಿಟ್ಟಿನಲ್ಲಿ ಅವರು ಈ ಜವಾಬ್ದಾರಿಯನ್ನು ಸಮರ್ಪಕವಾಗಿ ನಿರ್ವಹಿಸಿ ಗಮನ ಸೆಳೆದರು. ಜೊತೆಗೆ ಸರ್ಕಾರದ ನಿಲುವನ್ನು ಪರಿಣಾಮಕಾರಿಯಾಗಿ ಸಮರ್ಥಿಸಿಕೊಂಡರು.

**ಸಿದ್ದರಾಮಯ್ಯ ತಿರುಗೇಟು:** ಕೋರ್ಟ್‌ನಿಂದ ಸ್ಟೇ ತಂದಿರುವ 6 ಸಚಿವರ ಹೆಸರನ್ನು ಸಿದ್ದರಾಮಯ್ಯ ಹೇಳಿದಾಗ ಸಚಿವ ಬಸವರಾಜ ಬೊಮ್ಮಾಯಿ ಆಕ್ಷೇಪಿಸಿದರು. ಜೊತೆಗೆ ಎಚ್. ಮೇಟಿ ಪ್ರಕರಣವನ್ನು ನೆನಪಿಸಿದರು. ಮೇಟಿ ಪ್ರಕರಣದ ಅಸ್ತ್ರ ಬಳಸಿ ಪ್ರತಿಪಕ್ಷದ ವಾಗ್ದಾಳಿಯನ್ನು ತುಂಡು ಮಾಡುವ ಸರ್ಕಾರದ ಪ್ರಯತ್ನ ಫಲ ನೀಡಲಿಲ್ಲ. ಮೇಟಿ ಪ್ರಕರಣದ ಬಳಿಕ ಆಗಿನ ಕಾಂಗ್ರೆಸ್ ಶಾಸಕರೊಬ್ಬರು ಕೋರ್ಟ್‌ನಿಂದ ಸ್ಟೇ ತಂದಿದ್ದನ್ನು ಬೊಮ್ಮಾಯಿ ನೆನಪಿಸಿದರು. ಆಗ ಸಿದ್ದರಾಮಯ್ಯ ನಿಮ್ಮ ರೋಣ ಶಾಸಕರು ತಂದಿದ್ದಾರೆ ಎಂದು ತಿರುಗೇಟು ಕೊಟ್ಟರು.

**ಕಾಂಗ್ರೆಸ್ ಧರಣಿ ಮುಂದುವರಿಕೆ:** ಕಲಾಪ ಮುಂದೂಡಿಕೆ ಬಳಿಕ ಸುದ್ದಿಗಾರರೊಂದಿಗೆ ಮಾತನಾಡಿದ ಸಿದ್ದರಾಮಯ್ಯ ಧರಣಿ ಮುಂದುವರಿಸುವುದಾಗಿ ತಿಳಿಸಿದ್ದಾರೆ. ಈ ಅಧಿವೇಶನದ ಮೇಲೆ ಪ್ರತಿಪಕ್ಷದ ಧರಣಿಯ ನೆರಳು ಆವರಿಸಿದಂತಾಗಿದೆ.

ಆಧಾರ: ವಿಜಯ ಕರ್ನಾಟಕ, ದಿನಾಂಕ:23.03.2021

## 82. ಎಸ್.ಐ.ಟಿ. ಬದಲು ಹೈಕೋರ್ಟ್ ಸಿಜೆ ಉಸ್ತುವಾರಿ ತನಿಖೆಗೆ ಪಟ್ಟು

ಮಾಜಿ ಸಚಿವ ರಮೇಶ್ ಜಾರಕಿಹೊಳಿ ವಿರುದ್ಧದ ರಾಸಲೀಲೆ ಸಿಡಿ ಹಗರಣದ ತನಿಖೆಯನ್ನು ಹೈಕೋರ್ಟ್‌ನ ಮುಖ್ಯ ನ್ಯಾಯಮೂರ್ತಿಗಳ ಮೇಲ್ವಿಚಾರಣೆಯಲ್ಲೇ ನಡೆಸಬೇಕೆಂದು ಪ್ರತಿಪಕ್ಷ ಕಾಂಗ್ರೆಸ್ ವಿಧಾನಸಭೆಯಲ್ಲಿ ಪಟ್ಟು ಹಿಡಿಯುವ ಮೂಲಕ ಆಡಳಿತಾರೂಢ ಬಿಜೆಪಿ ಸರ್ಕಾರವನ್ನು ತೀವ್ರ ಪೇಚಿಗೆ ಸಿಲುಕಿಸಿತು. ಅಷ್ಟೇ ಅಲ್ಲ, ಸಂತ್ರಸ್ತೆ ವಿಡಿಯೋ ಹೇಳಿಕೆ ಆಧರಿಸಿ ಮಾಜಿ ಸಚಿವರ ವಿರುದ್ಧ ಅತ್ಯಾಚಾರ ಪ್ರಕರಣ ದಾಖಲಿಸಬೇಕು ಹಾಗೂ ನ್ಯಾಯಾಲಯದಿಂದ ತಡೆಯಾಜ್ಞೆ ತಂದಿರುವ ಆರು ಮಂದಿ ಸಚಿವರು ರಾಜೀನಾಮೆ ನೀಡಬೇಕೆಂದು ಆಗ್ರಹಿಸಿ ದಿನದ ಅಂತ್ಯಕ್ಕೆ ಧರಣಿ ನಡೆಸಿತು.

ನಿಯಮ 69ರಡಿ ಭೋಜನ ವಿರಾಮದ ನಂತರ ಜರುಗಿದ ಸರಿಸುಮಾರು ನಾಲ್ಕು ಗಂಟೆಗಳ ಸುದೀರ್ಘ ಚರ್ಚೆಗೆ ಸರ್ಕಾರದ ಪರವಾಗಿ ಉತ್ತರ ನೀಡಿದ ಗೃಹ ಸಚಿವ ಬಸವರಾಜ ಬೊಮ್ಮಾಯಿ ಪ್ರಕರಣದ ನಿಷ್ಪಕ್ಷಪಾತ ತನಿಖೆಗೆ ಈಗಾಗಲೇ ಎಸ್ಐಟಿ ರಚಿಸಲಾಗಿದೆ. ತನಿಖೆಯಲ್ಲಿ ಸಾಕಷ್ಟು ಪ್ರಗತಿ ಸಾಧಿಸಲಾಗಿದ್ದು, ಶೀಘ್ರದಲ್ಲೇ ಸಂತ್ರಸ್ತೆಯನ್ನು ಪತ್ತೆ ಮಾಡಿ ಆಕೆಯ ಹೇಳಿಕೆಯನ್ನು ದಾಖಲಿಸುತ್ತೇವೆ. ಹೀಗಾಗಿ ಎಸ್ಐಟಿ ತನಿಖೆಯಿಂದ ಹಿಂದೆ ಸರಿಯುವ ಪ್ರಶ್ನೆಯೇ ಇಲ್ಲ. ಆರು ಮಂದಿ ಸಚಿವರು ತಮ್ಮ ಸಂವಿಧಾನಬದ್ಧ ಹಕ್ಕು ಚಲಾಯಿಸಿ ನ್ಯಾಯಾಲಯದಿಂದ ತಡೆಯಾಜ್ಞೆ ತಂದಿರುವುದು ರಾಜೀನಾಮೆ ನೀಡುವ ಪ್ರಶ್ನೆ ಉದ್ಭವಿಸುವುದಿಲ್ಲ ಎಂದು ತಳ್ಳಿ ಹಾಕಿದರು.

ಸಿಡಿ ಪ್ರಕರಣದಲ್ಲಿ ನೈತಿಕತೆ ಮತ್ತು ಅಪರಾಧಿಕ ಕೃತ್ಯ ಎರಡು ವಿಚಾರಗಳನ್ನು ಒಳಗೊಂಡಿದೆ. ಹೀಗಾಗಿ ನೈತಿಕತೆ ಬಗೆಗೆ ನಾನು ಚರ್ಚಿಸಲು ಹೋಗುವುದಿಲ್ಲ. ನೈತಿಕತೆ ವಿಚಾರವಾಗಿಯೇ ಈಗಾಗಲೇ ರಮೇಶ್ ಜಾರಕಿಹೊಳಿ ರಾಜಿನಾಮೆ ಕೊಟ್ಟಿದ್ದಾರೆ. ಹೀಗಾಗಿ ಅಪರಾಧಿಕ ಕೃತ್ಯ ನಡೆದಿರುವ ಬಗೆಗೆ ಮಾತ್ರ ಸ್ಪಷ್ಟನೆ ಕೊಡುತ್ತೇನೆ. ಮಾಜಿ ಸಚಿವರ ವಿರುದ್ಧ ದಿನೇಶ್ ಕಲ್ಲಹಳ್ಳಿ ಎಂಬುವವರು ದೂರು ನೀಡಿದ್ದರು. ಆದರೆ ಅವರು ಮೂರನೇ ವ್ಯಕ್ತಿ ಯಾವ ಮಹಿಳೆಗೆ ಅನ್ಯಾಯವಾಗಿದೆ ಎಂದು ಹೇಳಲಾಗುತ್ತಿದೆಯೋ ಅವರು ದೂರು ನೀಡಿಲ್ಲ ಅಥವಾ ಅವರ ಸಂಬಂಧಿಗಳು ಕೂಡ ದೂರು ನೀಡಿಲ್ಲ. ಲಲಿತಕುಮಾರಿ ಪ್ರಕರಣದಲ್ಲಿ 2013ರಲ್ಲಿ ಸುಪ್ರಿಂಕೋರ್ಟ್ ನೀಡಿರುವ ತೀರ್ಪಿನ ಅನ್ವಯ ಸಂತ್ರಸ್ತೆ ನೇರವಾಗಿ ದೂರು ನೀಡದೇ ಹೋದರೆ ಮೂರನೇ ವ್ಯಕ್ತಿ ದೂರು ನೀಡಿದಾಗ ಪೂರ್ವಭಾವಿ ತನಿಖೆ ನಡೆಸಲು 15 ದಿನಗಳ ಕಾಲಾವಕಾಶ ಇದೆ. ಅದಾದ ಬಳಿಕ ಖಚಿತಪಡಿಸಿಕೊಂಡು ಎಫ್ಐಆರ್ ದಾಖಲಿಸಬಹುದು. ಈ ಪ್ರಕರಣದಲ್ಲಿ ಖಚಿತತೆ ಇಲ್ಲದ ಕಾರಣಕ್ಕಾಗಿ ಎಫ್ಐಆರ್ ದಾಖಲಾಗಿಲ್ಲ. ದೂರುದಾರ ದೂರು ವಾಪಸ್ಸು ಪಡೆದಿದ್ದರೂ ಕೂಡ ಸಂತ್ರಸ್ತೆಯ ದೃಷ್ಟಿಕೋನದಿಂದಲೂ ತನಿಖೆ ನಡೆಸಲಾಗುತ್ತಿದೆ. ಮಾಜಿ ಸಚಿವ

ಜಾರಕಿಹೊಳಿ ನೀಡಿದ ದೂರು ಮತ್ತು ಸಂತ್ರಸ್ತೆಯ ಪಾಲಕರು ನೀಡಿದ ದೂರುಗಳ ಬಗೆಗೂ ತನಿಖೆ ನಡೆದಿದೆ ಎಂದು ಸಚಿವ ಬೊಮ್ಮಾಯಿ ವಿವರಿಸಿದರು.

ಪ್ರತಿಪಕ್ಷಗಳು ಆರೋಪಿಸುತ್ತಿರುವಂತೆ ಎಸ್‌ಐಟಿ ಕೇವಲ ಮಾಜಿ ಸಚಿವರ ದೂರನ್ನೂ ಮಾತ್ರ ತನಿಖೆ ಮಾಡುತ್ತಿಲ್ಲ. ಈಗಾಗಲೇ ದಿನೇಶ್ ಕಲ್ಲಹಳ್ಳಿ ನೀಡಿದ ದೂರಿನ ಆಧಾರದ ಮೇಲೂ ಮಾಜಿ ಸಚಿವರಿಗೆ ಎರಡು ಬಾರಿ ಸಮನ್ಸ್ ನೀಡಿ, ವಿಚಾರಣೆ ನಡೆಸಲಾಗಿದೆ. ಮತ್ತೊಂದೆಡೆ ಯುವತಿಯ ವಿಡಿಯೋ ಹೇಳಿಕೆ ಆಧಾರದ ಮೇಲೆ ಅಕೆ ಮತ್ತು ಅಕೆಯ ಕುಟುಂಬಕ್ಕೆ ಭದ್ರತೆ ನೀಡಲು ಸೂಚಿಸಲಾಗಿದೆ. ಸಂತ್ರಸ್ತೆ ಹೇಳಿಕೆ ನೀಡಿದರೆ ಅವರು ಇದ್ದಲ್ಲಿಗೆ ಹೋಗಿ ಮಹಿಳಾ ಪೇದೆಗಳ ಸಹಾಯದಿಂದ ಹೇಳಿಕೆ ದಾಖಲಿಸಿಕೊಳ್ಳುವುದಾಗಿ ಎಸ್‌ಐಟಿ ತಿಳಿಸಿದರೂ ಅಕೆ ಹೇಳಿಕೆ ನೀಡಲು ಮುಂದೆ ಬರುತ್ತಿಲ್ಲ. ದೆಹಲಿ, ಭೋಪಾಲ್, ಗೋವಾ, ಬೆಳಗಾವಿ ಮತ್ತಿತರೆಡೆ ಅಕೆ ಇರುವ ಮಾಹಿತಿ ಸಿಕ್ಕಿತ್ತು. ಆದರೆ ಅಕೆ ಎಸ್‌ಐಟಿ ಕೈಗೆ ಸಿಗುತ್ತಿಲ್ಲ. ಅಕೆ ಒಂದು ವೇಳೆ ಹೇಳಿಕೆ ನೀಡಿ ತನ್ನ ಮೇಲೆ ಲೈಂಗಿಕ ದೌರ್ಜನ್ಯ ನಡೆದಿದೆ ಎಂದು ಹೇಳಿಕೆ ನೀಡಿದರೆ ಐಪಿಸಿ ಸೆಕ್ಷನ್ 376ರ ಅನ್ವಯ ಮಾಜಿ ಸಚಿವರ ಮೇಲೆ ಪ್ರಕರಣ ದಾಖಲಿಸಲಾಗುವುದು ಎಂದು ಭರವಸೆ ನೀಡಿದರು.

ಸಿಡಿ ಹಗರಣದಲ್ಲಿ ಈಗಾಗಲೇ ಆರು ಸ್ಥಳಗಳಲ್ಲಿ ದಾಳಿ ನಡೆಸಿ 11 ಜನರ ಹೇಳಿಕೆ ದಾಖಲಿಸಿಕೊಳ್ಳಲಾಗಿದೆ. ಬ್ಯಾಂಕ್ ವ್ಯವಹಾರಗಳನ್ನು ಕೂಡ ಪತ್ತೆ ಮಾಡಲಾಗಿದೆ. ಐದು ತಂಡಗಳಲ್ಲಿ 22 ಅಧಿಕಾರಿಗಳು ತನಿಖೆ ನಡೆಸುತ್ತಿದ್ದಾರೆ. ಎಸ್‌ಐಟಿ ಮೇಲೆ ಪ್ರತಿಪಕ್ಷಗಳು ಸಂಶಯ ವ್ಯಕ್ತಪಡಿಸುವುದು ಬೇಡ. ಈ ಪ್ರಕರಣದಲ್ಲಿ ಶೇಕಡ ನೂರರಷ್ಟು ವಿಶ್ವಾಸವಿದೆ. ನಾವು ಆ ಯುವತಿಯನ್ನು ಪತ್ತೆ ಮಾಡುತ್ತೇವೆ ಮತ್ತು ಅಕೆಯ ಹೇಳಿಕೆ ಪಡೆಯುತ್ತೇವೆ ಯಾವುದೇ ಪ್ರಭಾವಿಗಳನ್ನು ರಕ್ಷಿಸುವ ಅಥವಾ ಯಾವುದೇ ಅಮಾಯಕರಿಗೆ ಅನ್ಯಾಯ ಮಾಡುವ ಪ್ರಶ್ನೆಯೇ ಇಲ್ಲ ಎಂದು ತಿಳಿಸಿದರು.

ಸರ್ಕಾರದ ಉತ್ತರಕ್ಕೆ ಅಸಮಾಧಾನ ವ್ಯಕ್ತಪಡಿಸಿದ ವಿರೋಧ ಪಕ್ಷದ ನಾಯಕ ಸಿದ್ದರಾಮಯ್ಯ ಅವರು ಮಾಜಿ ಸಚಿವರು ಬೇರೊಬ್ಬರ ಮೂಲಕ ನೀಡಿದ ದೂರಿನ ಮೇಲೆ ಎಫ್‌ಐಆರ್ ದಾಖಲಿಸಿದ್ದೀರಿ. ಆದರೆ ಯುವತಿಯ ವಿಡಿಯೋ ಮೂಲಕ ಹೇಳಿಕೆ ನೀಡಿದ್ದರೂ ಮಾಜಿ ಸಚಿವರ ವಿರುದ್ಧ ಅತ್ಯಾಚಾರ ಪ್ರಕರಣ ದಾಖಲಿಸಲಿಲ್ಲ. ಈ ಪ್ರಕರಣದಲ್ಲಿ ನಿರ್ಭಯಾ ಕಾಯ್ದೆಯ ಸ್ಪಷ್ಟ ಉಲ್ಲಂಘನೆಯಾಗಿದೆ. ಎಸ್‌ಐಟಿ ಬದಲಾಗಿ ಹೈಕೋರ್ಟ್ ಮುಖ್ಯ ನ್ಯಾಯಾಧೀಶರ ಮೇಲ್ವಿಚಾರಣೆಯಲ್ಲೇ ತನಿಖೆ ನಡೆಸಬೇಕು ಹಾಗೂ ತಮ್ಮ ವಿರುದ್ಧ ಸುದ್ದಿ ಬಿತ್ತರ ಮಾಡಬಾರದೆಂದು ತಡೆಯಾಜ್ಞೆ ತಂದಿರುವ ಆರು ಮಂದಿ ಸಚಿವರು ರಾಜೀನಾಮೆ ನೀಡಬೇಕೆಂದು ಪಟ್ಟು ಹಿಡಿದರು. ಆದರೆ ಸರ್ಕಾರ ಇದಕ್ಕೆ ಮಣಿಯಲಿಲ್ಲ.

ಆಗ ಸಿದ್ದರಾಮಯ್ಯ ನೇತೃತ್ವದಲ್ಲಿ ಪ್ರತಿಪಕ್ಷಗಳ ಸದಸ್ಯರು ಸದನದ ಬಾವಿಗೆ ಇಳಿದು ಪ್ರತಿಭಟನೆ ನಡೆಸಿದರು. ಸ್ಪೀಕರ್‌ರವರು ಸದನವನ್ನು ಬೆಳಿಗ್ಗೆ 11ಕ್ಕೆ ಮುಂದೂಡಿದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:23.03.2021.

## 83. ಅವ್ಯವಹಾರ ತನಿಖೆಗೆ ಜಂಟಿ ಸದನ ಸಮಿತಿ

ರಾಜ್ಯದಲ್ಲಿರುವ ನರ್ಸಿಂಗ್ ಹಾಗೂ ಅಲೈಡ್ ಹೆಲ್ತ್ ಸೈನ್ಸ್ ಕಾಲೇಜುಗಳ ಮಾನ್ಯತೆ ಸೇರಿ ಈವರೆಗಿನ ಎಲ್ಲ ಅವ್ಯವಹಾರಗಳ ಸಮಗ್ರ ತನಿಖೆಗೆ ಜಂಟಿ ಸದನ ಸಮಿತಿ ರಚಿಸಲಾಗುತ್ತದೆ ಎಂದು ಮುಖ್ಯಮಂತ್ರಿಯವರು ಘೋಷಿಸಿದರು. ವಿಧಾನ ಪರಿಷತ್ತು ಕಲಾಪ ಆರಂಭವಾಗುತ್ತಿದ್ದಂತೆ ಜೆಡಿಎಸ್ ಸದಸ್ಯರಾದ ಮರಿತಿಬ್ಬೇಗೌಡ, ಕೆ.ಟಿ. ಶ್ರೀಕಂಠೇಗೌಡ ಭೋಜೇಗೌಡ, ಅಪ್ಪಾಜಿಗೌಡ, ಕೆ.ಎ. ತಿಪ್ಪೇಸ್ವಾಮಿ, ಗೋವಿಂದ ರಾಜು ಮೊದಲಾದವರು ನರ್ಸಿಂಗ್ ಹಾಗೂ ಅಲೈಡ್ ಸೈನ್ಸ್ ಕಾಲೇಜುಗಳ ಮಾನ್ಯತೆ ಅವ್ಯವಹಾರದ ತನಿಖೆಗೆ ಸದನ ಸಮಿತಿ ರಚಿಸಬೇಕು ಎಂದು ಸದನದ ಬಾವಿಗಿಳಿದು ಪ್ರತಿಭಟನೆ ಆರಂಭಿಸಿದರು.

ಈ ವಿಚಾರವನ್ನು ಹೈಕೋರ್ಟ್‌ನ ನಿವೃತ್ತ ನ್ಯಾಯಾಮೂರ್ತಿಗಳ ನೇತೃತ್ವದಲ್ಲಿ ಸಮಿತಿ ರಚಿಸಿ, ತನಿಖೆ ನಡೆಸಲಾಗುತ್ತದೆ ಎಂದು ಮುಖ್ಯಮಂತ್ರಿಗಳು ಮನವೊಲಿಸುವ ಪ್ರಯತ್ನ ನಡೆಸಿದರು. ಜೆಡಿಎಸ್

ಸದಸ್ಯರು ಪ್ರತಿಭಟನೆ ಮುಂದುವರಿಸಿದ ಹಿನ್ನೆಲೆಯಲ್ಲಿ ಸಭಾಪತಿ ಬಸವರಾಜ ಹೊರಟ್ಟಿ ಸದನವನ್ನು 10 ನಿಮಿಷ ಮುಂದೂಡಿ, ಮೂರು ಪಕ್ಷದ ಪ್ರಮುಖರನ್ನು ತಮ್ಮ ಕಛೇರಿಗೆ ಕರೆದು, ಮಾತುಕತೆ ನಡೆಸಿದರು. ಅದರಂತೆ ಸರ್ಕಾರವು ಸದನ ಸಮಿತಿ ರಚನೆಗೆ ಒಪ್ಪಿಗೆ ಸೂಚಿಸಿತು.

ಪುನ: ಕಲಾಪ ಆರಂಭವಾಗುತ್ತಿದ್ದಂತೆ ಬಿಜೆಪಿ ಸದಸ್ಯ ಎನ್. ರವಿಕುಮಾರ್ ಮಾತನಾಡಿ ನರ್ಸಿಂಗ್ ಹಾಗೂ ಅಲೈಡ್ ಹೆಲ್ತ್ ಸೈನ್ಸ್ ಕಾಲೇಜುಗಳ ಅಕ್ರಮ ಹಾಗೂ ಅವ್ಯವಹಾರಕ್ಕೆ ಕಡಿವಾಣ ಹಾಕುವ ನಿಟ್ಟಿನಲ್ಲಿ ಸದನ ರಚಿಸಬೇಕೆಂದು ಮನವಿ ಮಾಡಿದರು.

ಆಗ ಮುಖ್ಯಮಂತ್ರಿಗಳು ವಿಷಯದ ಸಮಗ್ರ ತನಿಖೆಗೆ ಜಂಟಿ ಸದನ ಸಮಿತಿ ರಚಿಸುವುದಾಗಿ ಘೋಷಿಸಿದರು. ಈ ಸಂಬಂಧ ನಿಯಮಾನುಸಾರ ತೀರ್ಮಾನ ಪ್ರಕಟಿಸುವಂತೆ ಸಭಾಪತಿಯವರಿಗೆ ಮನವಿ ಮಾಡಿದರು. ಪ್ರತಿಪಕ್ಷದ ನಾಯಕ ಎಸ್. ಆರ್. ಪಾಟೀಲ್, ಕಾಂಗ್ರೆಸ್ ಸದಸ್ಯ ಸಿ.ಎಂ. ಇಬ್ರಾಹಿಂ ಮಾತನಾಡಿ ಈ ವಿಷಯ ಮೇಲ್ಮನೆಯಲ್ಲಿ ಪ್ರಸ್ತಾಪವಾಗಿರುವುದರಿಂದ ಮೇಲ್ಮನೆಯ ಸದಸ್ಯರೇ ಇದಕ್ಕೆ ಅಧ್ಯಕ್ಷರಾಗಿರಬೇಕು ಎಂದು ಆಗ್ರಹಿಸಿದರು. ಆಗ ಸಭಾಪತಿ ಮಾತನಾಡಿ ಸದನ ಸಮಿತಿ ರಚನೆಗೆ ಸಂಬಂಧಿಸಿದಂತೆ ನಿಯಮಗಳು ಏನು ಹೇಳುತ್ತವೋ ಅದರಂತೆ ರಚಿಸಲಾಗುತ್ತದೆ ಎಂದು ಚರ್ಚೆಗೆ ತೆರೆ ಎಳೆದರು.

**ಸಚಿವರ ವಿರುದ್ಧ ಆರೋಪ:** ನರ್ಸಿಂಗ್ ಹಾಗೂ ಅಲೈಡ್ ಸೈನ್ಸ್ ಕಾಲೇಜುಗಳ ಮಾನ್ಯತೆ ಪ್ರಕ್ರಿಯೆಯಲ್ಲಿ ದುಡ್ಡಿನ ದಂಧೆಯೇ ನಡೆದಿದೆ. ಸ್ವಂತ ಕಟ್ಟಡ ಸಹಿತವಾಗಿ ಯಾವುದೇ ಮೂಲಸೌಕರ್ಯ ಇಲ್ಲದ ಸಂಸ್ಥೆಗಳಿಗೂ ಪರವಾನಿಗಿ ನೀಡಲಾಗಿದೆ. ಸಮಿತಿಯಲ್ಲಿದ್ದ ಸೆನೆಟ್ ಮೆಂಬರ್‌ಗಳು ಚಿಕ್ಕಬಳ್ಳಾಪುರದವರೇ ಆಗಿದ್ದಾರೆ. ನಿವೃತ್ತ ನ್ಯಾಯಾಧೀಶರಿಂದ ತನಿಖೆ ಮಾಡಿದರೆ, ಸಚಿವರು ಅವರನ್ನೇ ಬುಕ್ ಮಾಡಿಕೊಳ್ಳುತ್ತಾರೆಂದು ಮರಿತಿಬ್ಬೇಗೌಡ ಆರೋಪಿಸುತ್ತಿದ್ದಂತೆ ಸಭಾಪತಿ ಮಧ್ಯ ಪ್ರವೇಶಿಸಿ ಹೀಗೆಲ್ಲ ಆರೋಪ ಮಾಡುವುದು ಸರಿಯಲ್ಲ ಎಂದರು. ಆಗ ಬಿಜೆಪಿ ಸದಸ್ಯರು ಎದ್ದುನಿಂತು ಮರಿತಿಬ್ಬೇಗೌಡ ವಿರುದ್ಧ ಆಕ್ರೋಶ ಹೊರಹಾಕಿದರು. ಸಚಿವ ಸುಧಾಕರ್ ಮಾತನಾಡಿ, ಈ ರೀತಿಯ ಹೇಳಿಕೆಯನ್ನು ಕಡತದಿಂದ ತೆಗೆದುಹಾಕುವಂತೆ ಆಗ್ರಹಿಸಿದರು.

**ಆನ್‌ಲೈನ್ ಶಿಕ್ಷಣ ಕಣ್ಣಿನ ಮೇಲೆ ಪ್ರಭಾವ:** ಆನ್ ಲೈನ್ ಶಿಕ್ಷಣದಿಂದ ಮಕ್ಕಳ ಕಣ್ಣಿನ ಮೇಲೆ ಪರಿಣಾಮ ಬೀರುತ್ತಿದ್ದು, ಈ ಬಗ್ಗೆ ಆರೋಗ್ಯ ಇಲಾಖೆ ಜೊತೆ ಚರ್ಚೆ ಮಾಡಿ ಪರಿಹಾರ ಕಂಡುಕೊಳ್ಳಲಾಗುವುದು ಎಂದು ಶಿಕ್ಷಣ ಸಚಿವ ಎಸ್. ಸುರೇಶ್ ಕುಮಾರ್ ಹೇಳಿದರು. ಕಾಂಗ್ರೆಸ್‌ನ ಯು.ಬಿ. ವೆಂಕಟೇಶ್ ಪ್ರಶ್ನೆಗೆ ಉತ್ತರಿಸಿ ಆಲ್‌ಲೈನ್ ಶಿಕ್ಷಣದಿಂದ ಮಕ್ಕಳ ಮೇಲೆ ಪರಿಣಾಮ ಬೀರುತ್ತಿರುವ ಬಗ್ಗೆ ಪೋಷಕರಿಂದ ದೂರು ಬರುತ್ತಿವೆ. ಖಾಸಗಿ ಶಾಲೆಗಳು ಎಲ್.ಕೆ.ಜಿ., ಯು.ಕೆ.ಜಿ. ಮಕ್ಕಳಿಗೂ ಆನ್‌ಲೈನ್ ಶಿಕ್ಷಣ ಆರಂಭಿಸಿವೆ. ಆನ್‌ಲೈನ್ ಶಿಕ್ಷಣ ನಿಯಮ ಬಾಹಿರವಾಗಿ ನಡೆಯುತ್ತಿರುವ ಬಗ್ಗೆ ದೂರು ಹಾಕಿದರೆ, ಖಾಸಗಿ ಶಾಲೆಗಳು ಹೈಕೋರ್ಟ್‌ಗೆ ಹೋಗಿ ಮಧ್ಯಂತರ ತಡೆ ತರುತ್ತಾರೆ. ಇದಕ್ಕೊಂದು ಪರಿಹಾರ ಕೊಂಡುಕೊಳ್ಳುವ ನಿಟ್ಟಿನಲ್ಲಿ ಆರೋಗ್ಯ ಇಲಾಖೆಯ ಅಧಿಕಾರಿಗಳ ಜೊತೆ ಚರ್ಚಿಸಲಾಗುತ್ತದೆ ಎಂದರು.

ಆಧಾರ: ಉದಯವಾಣಿ, ದಿನಾಂಕ:23.03.2021.

## 84. ಅನುಕಂಪದ ಆಧಾರದಲ್ಲಿ ಹುದ್ದೆ: ನಿಯಮ ಬದಲಿಸಿ

ಖಾಸಗಿ ಅನುದಾನಿತ ಪದವಿ ಕಾಲೇಜುಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವಾಗಲೇ ಮರಣ ಹೊಂದಿದವರ ಕುಟುಂಬದವರಿಗೆ ಅನುಕಂಪದ ಆಧಾರದಲ್ಲಿ ಉದ್ಯೋಗ ಕೊಡಲು ನಿಯಮ ಬದಲು ಸೇರಿದಂತೆ ಅಗತ್ಯ ಕ್ರಮ ತೆಗೆದುಕೊಳ್ಳಬೇಕು ಎಂದು ಉನ್ನತ ಶಿಕ್ಷಣ ಸಚಿವ ಡಾ ಸಿ.ಎನ್. ಅಶ್ವತ್ಥನಾರಾಯಣ ಅವರಿಗೆ ವಿಧಾನ ಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ ಸೂಚಿಸಿದರು.

ಬಿಜೆಪಿಯ ಅರುಣ ಶಹಾಪುರ ಅವರ ಪ್ರಶ್ನೆಗೆ ಉತ್ತರಿಸಿದ ಅಶ್ವತ್ಥನಾರಾಯಣ ಖಾಸಗಿ ಅನುದಾನಿತ ಶಿಕ್ಷಣ ಸಂಸ್ಥೆಗಳಲ್ಲಿ ಕರ್ತವ್ಯದಲ್ಲಿರುವಾಗ ಮರಣ ಹೊಂದಿದ ನೌಕರನ ಅವಲಂಬಿತರಿಗೆ ಅನುಕಂಪದ ಆಧಾರದಲ್ಲಿ ನೇಮಕಾತಿ ಇಲ್ಲ ಎಂದರು.

ಖಾಸಗಿ ಅನುದಾನಿತ ಶಿಕ್ಷಣ ಸಂಸ್ಥೆಗಳಲ್ಲಿ 2001ರ ಮಾರ್ಚ್ 1 ನಂತರ ತೆರವಾಗುವ ಬೋಧಕೇತರ ಹುದ್ದೆಗಳು ಶಾಶ್ವತವಾಗಿ ಅನುದಾನ ರಹಿತವೆಂದು ಪರಿಗಣಿಸಲಾಗುತ್ತಿದೆ. ಅನುಕಂಪ ಆಧಾರದಲ್ಲಿ ನೇಮಕಾತಿ ಮಾಡಿಕೊಳ್ಳಲು ನಿಯಮದಲ್ಲಿ ಅವಕಾಶ ಇಲ್ಲ ಎಂದು ಸ್ಪಷ್ಟಪಡಿಸಿದರು.

ಆಗ ಶಹಾಪುರ ಅವರ ಪರವಾಗಿ ಮಾತನಾಡಿದ ಹೊರಟ್ಟಿ ಇತರ ಎಲ್ಲ ಇಲಾಖೆಗಳಲ್ಲಿ ಅನುಕಂಪದ ಆಧಾರದಲ್ಲಿ ಹುದ್ದೆ ಭರ್ತಿ ಮಾಡಲು ಅವಕಾಶ ಇರುವಾಗ ಖಾಸಗಿ ಅನುದಾನಿತ ಶಿಕ್ಷಣ ಸಂಸ್ಥೆಗಳಲ್ಲಿ ಏಕಿಲ್ಲ. ಈ ಬಗ್ಗೆ ನಿಯಮ ಬದಲಿಸಲು ಕ್ರಮ ತೆಗೆದುಕೊಳ್ಳಿ ಎಂದು ಸಲಹೆ ನೀಡಿದರು,

ಆಧಾರ: ಪ್ರಜಾವಾಣಿ, ದಿನಾಂಕ:23.03.2021

## 85. ನರೇಗಾ ಹಣ ದುರ್ಬಳಕೆ ಅಧಿಕಾರಿಗಳ ವಿರುದ್ಧ ಕ್ರಮ

ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ (ನರೇಗಾ) ಯೋಜನೆ ಹಣವನ್ನು ದುರ್ಬಳಕೆ ಮಾಡಿಕೊಂಡು ತಪ್ಪೆಸಗಿದ ಅಧಿಕಾರಿಗಳಿಂದ ಹಣ ವಸೂಲಿ ಮಾಡಿದರಷ್ಟೇ ಸಾಲದು, ಅಂತಹ ಅಧಿಕಾರಿಗಳ ವಿರುದ್ಧ ತ್ವರಿತವಾಗಿ ಕಠಿಣ ಕ್ರಮಕೈಗೊಳ್ಳಬೇಕು ಎಂದು ಸರ್ಕಾರಕ್ಕೆ ಶಿಫಾರಸ್ಸು ಮಾಡಲಾಗಿದೆ.

ವಿಧಾನಮಂಡಲದ ಸ್ಥಳೀಯ ಸಂಸ್ಥೆಗಳ ಮತ್ತು ಪಂಚಾಯತ್ ರಾಜ್ ಸಂಸ್ಥೆಗಳ ಸಮಿತಿಯ 33ನೇ ವರದಿ ಮೇಲ್ಮನೆಯಲ್ಲಿ ಮಂಡನೆಯಾಯಿತು. ಈ ಸಮಿತಿ ಶಿಫಾರಸ್ಸುಗಳ ಪೈಕಿ ಅಧಿಕಾರಿಗಳ ವಿರುದ್ಧದ ಶಿಸ್ತುಕ್ರಮವೂ ಸೇರಿದೆ. ಸರ್ಕಾರದ ಹಣ ದುರುಪಯೋಗ ಮಾಡಿಕೊಂಡ ಅಧಿಕಾರಿಗಳಿಂದ ಹಣ ಮರು ವಸೂಲಿ ಮಾಡಿ ಸರ್ಕಾರಕ್ಕೆ ಜಮೆ ಮಾಡಿಕೊಳ್ಳಲಾಗಿದೆ. ಆದರೆ, ಅಂತಹ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮಕೈಗೊಂಡಿಲ್ಲವೆಂದು ಸಮಿತಿ ಆಕ್ಷೇಪಿಸಿದೆ. ಪ್ರಕರಣ ಬೆಳಕಿಗೆ ಬಂದ 6 ತಿಂಗಳಲ್ಲಿ ತಪ್ಪಿತಸ್ಥರ ವಿರುದ್ಧ ಕಠಿಣ ಕ್ರಮಗಳನ್ನು ಕೈಗೊಳ್ಳಬೇಕು ಎಂದು ಸಮಿತಿ ತಿಳಿಸಿದೆ.

ಯೋಜನೆಯ ಕಾರ್ಯನಿರ್ವಹಣಾ ವರದಿಯಲ್ಲಿನ ಆಕ್ಷೇಪಣೆಗಳ ವಿಚಾರಣೆ ನಡೆಸಲು ಲೋಕಾಯುಕ್ತರಿಗೆ ವಹಿಸಲಾಗಿದೆ. 5–6 ವರ್ಷಗಳು ಗತಿಸಿದರೂ ಇಂತಹ ವಿಚಾರಣೆ ಪೂರ್ಣಗೊಂಡಿಲ್ಲ. ಇದರಿಂದಾಗಿ ತಪ್ಪಿತಸ್ಥ ಅಧಿಕಾರಿಗಳು ಶಿಕ್ಷೆಯಿಂದ ತಪ್ಪಿಸಿಕೊಳ್ಳುವಂತಹ ಸನ್ನಿವೇಶ ನಿರ್ಮಾಣಗೊಂಡಿದೆ ಎಂದು ಅಸಮಾಧಾನ ವ್ಯಕ್ತಪಡಿಸಲಾಗಿದೆ.

ಅಲ್ಲದೆ, ಲೋಕಾಯುಕ್ತ ವಿಚಾರಣೆ ಮುಗಿಸಿ ವರದಿ ಸಲ್ಲಿಸಿದ ತಕ್ಷಣವೇ ತಪ್ಪಿತಸ್ಥ ಅಧಿಕಾರಿಗಳು (ಸೇವೆಯಲ್ಲಿ ಇರುವವರು/ನಿವೃತ್ತರು) ದುರ್ಬಳಕೆ ಮಾಡಿಕೊಂಡ ಹಣವನ್ನು ಬ್ಯಾಂಕ್ ಬಡ್ಡಿ ಸಹಿತ ವಸೂಲಿ ಮಾಡಬೇಕು ಜೊತೆಗೆ ಅಂತಹ ಅಧಿಕಾರಿಗಳು ಭವಿಷ್ಯದಲ್ಲಿ ತಪ್ಪೆಸಗದಂತಹ ರೀತಿಯಲ್ಲಿ ನಿಯಮಗಳಂತೆ ಶಿಕ್ಷೆ ವಿಧಿಸಲು ಕ್ರಮವಹಿಸಬೇಕು ಎನ್ನುವುದು ಸಮಿತಿಯ ಮತ್ತೊಂದು ಶಿಫಾರಸ್ಸಾಗಿದೆ.

**ಓಂಬುಡ್ಸ್‌ಮನ್ ಕಾರ್ಯವೈಖರಿಗೆ ಅಸಮಾಧಾನ:** ನರೇಗಾ ಯೋಜನೆ ವಿಷಯದಲ್ಲಿ ಜಿಲ್ಲಾ ಓಂಬುಡ್ಸ್‌ಮನ್‌ಗಳ ಕಾರ್ಯವೈಖರಿ ಬಗ್ಗೆಯೂ ಸಮಿತಿ ಅಸಮಾಧಾನ ವ್ಯಕ್ತಪಡಿಸಿ ಈ ತನಿಖಾಧಿಕಾರಿಗಳೂ ಸ್ವತಂತ್ರ ಹಾಗೂ ನಿಷ್ಪಕ್ಷಪಾತವಾಗಿ ಕರ್ತವ್ಯ ನಿರ್ವಹಿಸುವ ದಿಸೆಯಲ್ಲಿ ಅಗತ್ಯ ಮಾರ್ಗದರ್ಶನ ಮಾಡಬೇಕು ಎಂದು ಸಮಿತಿ ಅಭಿಪ್ರಾಯಪಟ್ಟಿದೆ.

ಯೋಜನೆ ಜಾರಿ ಹಂತದಲ್ಲಿ ಕುಂದು–ಕೊರತೆಗಳಿಗೆ ಪರಿಹಾರ, ದಂಡ ವಿಧಿಸುವುದು. ತಪ್ಪಿತಸ್ಥರ ವಿರುದ್ಧ ಸರ್ಕಾರಕ್ಕೆ ಪ್ರಥಮ ವರದಿ ಸಲ್ಲಿಸುವ ಅಧಿಕಾರವನ್ನು ಜಿಲ್ಲಾ ಓಂಬುಡ್ಸ್‌ಮನ್‌ಗಳು ಹೊಂದಿದ್ದು, ತನಿಖಾಧಿಕಾರಿ ಕರ್ತವ್ಯವನ್ನು ಜವಾಬ್ದಾರಿಯುತವಾಗಿ ನಿರ್ವಹಿಸುತ್ತಿಲ್ಲ ಎನ್ನುವುದನ್ನು ಸಮಿತಿ ವರದಿಯಲ್ಲಿ ಪ್ರಸ್ತಾಪಿಸಿದೆ. ಸಾರ್ವಜನಿಕ ಉತ್ತರದಾಯಿತ್ವ, ನಿಗಾವಣೆಯ ಸಾಧನವಾಗಿ ಸಾಮಾಜಿಕ ಲೆಕ್ಕ ಪರಿಶೋಧನೆಗಳಿಗೆ ಯೋಜನೆಯಡಿ ಪ್ರಮುಖ ಪಾತ್ರವಿದೆ. ಆದರೆ ಗ್ರಾಮ ಪಂಚಾಯತಿಗಳು ಸಾಮಾಜಿಕ ಲೆಕ್ಕ ಪರಿಶೋಧನೆಯನ್ನು ಯಾವುದೇ ಅಸಕ್ತಿ ಇಲ್ಲದೆ ನಡೆಸುತ್ತಿದೆ ಎಂದು ಸಮಿತಿ ವಿಶ್ಲೇಷಿಸಿದೆ. ಸಮೀಕ್ಷೆಯ ಪ್ರಕಾರ, ಸಾಮಾಜಿಕ ಲೆಕ್ಕ ಪರಿಶೋಧನೆ ಬಗ್ಗೆ ಫಲಾನುಭವಿಗಳ ನಡುವೆ ಅರಿವಿನಮಟ್ಟ

ಕಡಿಮೆ ಪ್ರಮಾಣದಲ್ಲಿದೆ. ಶೇ.15 ಮಂದಿಗೆ ಗೊತ್ತಿದ್ದರೆ, ಶೇ.78 ಜನರಿಗೆ ಅರಿವಿಲ್ಲ. ಇದು ಸಾಮಾಜಿಕ ಲೆಕ್ಕ ಪರಿಶೋಧನೆ ಹಿಡಿದಿರುವ ಜಾಡನ್ನು ಎತ್ತಿ ತೋರಿಸುತ್ತದೆ ಎಂದು ಸಮಿತಿ ಹೇಳಿದೆ.

ಆಧಾರ: ವಿಜಯವಾಣಿ, ದಿನಾಂಕ:24.03.2021.

## 86. ಸಿ.ಡಿ.ಗೆ ಕಲಾಪ ಬಲಿ

ಕಳೆದ ಎರಡು ದಿನಗಳಿಂದ ಸದನದಲ್ಲಿ ಭಾರಿ ಸದ್ದು ಮಾಡಿರುವ ರಮೇಶ್ ಜಾರಕಿಹೊಳಿ ರಾಸಲೀಲೆ ಸಿಡಿ ಪ್ರಕರಣದ ವಿಷಯ ಇಡೀ ದಿನ ಕಲಾಪವನ್ನು ನುಂಗಿ ಹಾಕಿತು.

ವಿಧಾನಸಭಾ ಕಾರ್ಯಕಲಾಪ ಆರಂಭವಾಗುತ್ತಿದ್ದಂತೆ ಕಾಂಗ್ರೆಸ್ ಶಾಸಕರು ರಮೇಶ್ ಜಾರಕಿಹೊಳಿ ಅವರ ಸಿಡಿ ಪ್ರಕರಣವನ್ನು ಹೈಕೋರ್ಟ್ ನ್ಯಾಯಾಮೂರ್ತಿಗಳ ನೇತೃತ್ವದಲ್ಲಿ ತನಿಖೆ ನಡೆಸಬೇಕು ಹಾಗೂ ಕೋರ್ಟ್‌ನಿಂದ ತಡೆಯಾಜ್ಞೆ ತಂದಿರುವ ಆರು ಸಚಿವರ ರಾಜೀನಾಮೆ ಪಡೆಯಬೇಕು ಎಂಬ ಅಗ್ರಹವನ್ನು ಮುಂದುವರೆಸಿದರು. ಸರ್ಕಾರ ತಮ್ಮ ಬೇಡಿಕೆ ಈಡೇರಿಸುವ ತನಕ ಸದನದ ಬಾವಿಯಿಂದ ತೆರಳುವುದಿಲ್ಲ ಎಂದು ಧರಣಿ ನಡೆಸಿದರು. ಈ ವೇಳೆ ವಿಧಾನ ಸಭಾಧ್ಯಕ್ಷರು ಕಲಾಪ 10 ನಿಮಿಷ ಮುಂದೂಡಿ ಪ್ರತಿಪಕ್ಷ ನಾಯಕರೊಂದಿಗೆ ಸಂಧಾನ ನಡೆಸಿದರು. ಆದರೂ ಯಾವುದೇ ಫಲ ದೊರೆಯಲಿಲ್ಲ. ಆದ್ದರಿಂದ ಇಡೀ ದಿನ ಕಾಂಗ್ರೆಸ್ ನಾಯಕರು ಸದನದ ಬಾವಿಯಲ್ಲಿಯೇ ಧರಣಿ ನಡೆಸಿದರು. ಪ್ರಶ್ನೋತ್ತರ ವಿಧೇಯಕ ಮಂಡನೆ ಬಳಿಕ ಈ ವಿಷಯವಾಗಿ ಚರ್ಚಿಸೋಣ. ಬಾವಿಗಿಳಿದು ಧರಣಿ ನಡೆಸುವ ಬದಲು ಶಾಸಕರು ತಮ್ಮ ಸ್ಥಾನಗಳಿಗೆ ತೆರಳಿ ತಮ್ಮ ವಿಷಯವನ್ನು ಮಂಡಿಸಿ ಎಂದು ಸ್ಪೀಕರ್ ಹಲವು ಬಾರಿ ಮನವಿ ಮಾಡಿದರು. ಇದಕ್ಕೆ ಜಗ್ಗಲಿಲ್ಲ. ಬದಲಿಗೆ ಅಶ್ಲೀಲ ಸರ್ಕಾರ, ಬ್ಲೂ ಬಾಯ್ಸ್ ಸೇರಿದಂತೆ ಹಲವು ಘೋಷಣೆಗಳನ್ನು ಸರ್ಕಾರದ ವಿರುದ್ಧ ಕೂಗಿದರು. ಕಾಂಗ್ರೆಸ್‌ನ ಎಲ್ಲ ಶಾಸಕರು ತಮ್ಮ ಕೈಯಲ್ಲಿ ಸಿ.ಡಿ. ಹಿಡಿದು ಪ್ರದರ್ಶಿಸಿದರು.

**ಸಂಧಾನ ವಿಫಲವಾದ ಬಳಿಕ ಪುನ:** ಕಲಾಪ ಆರಂಭಿಸಿದಾಗಲೂ ಕಾಂಗ್ರೆಸ್ ಶಾಸಕರು ಸರ್ಕಾರದ ಮನವಿಗೆ ಸ್ಪಂದಿಸದೇ ಇದ್ದಿದ್ದರಿಂದ ಮಧ್ಯಾಹ್ನ 3 ಗಂಟೆವರೆಗೆ ಕಲಾಪವನ್ನು ಮುಂದೂಡಲಾಯಿತು. ಭೋಜನ ವಿರಾಮದ ಬಳಿಕ ಸಭೆ ಸೇರಿದಾಗಲೂ ಇದೇ ವಿಷಯವಾಗಿ ಪ್ರತಿಭಟನೆ ನಡೆಸಿದ್ದರಿಂದ ಕಲಾಪ ಮುಂದೂಡಲಾಯಿತು.

**ಜೆಡಿಎಸ್ ಸಭಾತ್ಯಾಗ:** ಭೋಜನ ವಿರಾಮದ ನಂತರ ವಿಧಾನಸಭೆ ಕಲಾಪ ಆರಂಭಗೊಂಡಾಗ, ಸರ್ಕಾರದ ವಿರುದ್ಧ ಕಾಂಗ್ರೆಸ್ ಶಾಸಕರು ಆಕ್ರೋಶ ವ್ಯಕ್ತಪಡಿಸಿದ ಜೆಡಿಎಸ್‌ನ ಹೆಚ್.ಡಿ. ರೇವಣ್ಣ, ನಮಗೆ ಚರ್ಚೆಗೆ ಅವಕಾಶ ಕೊಡ್ತಿಲ್ಲ. ಎರಡು ರಾಷ್ಟ್ರೀಯ ಪಕ್ಷಗಳು ಸಿಡಿ ಇಟ್ಟುಕೊಂಡು ಕಿತ್ತಾಡುತ್ತಿವೆ. ನಮಗೆ ಚರ್ಚೆಗೆ ಅವಕಾಶ ಕೊಡಿ ಎಂದು ಒತ್ತಾಯಿಸಿದರು. ಕಾಂಗ್ರೆಸ್ ಶಾಸಕರು ಧರಣಿ ಹಿಂಪಡೆಯದೇ ಇದ್ದಿದ್ದರಿಂದ ಜೆಡಿಎಸ್ ಶಾಸಕರು ಸಭಾತ್ಯಾಗ ಮಾಡಿದರು.

**ಕೆಪಿಸಿಸಿ ಅಧ್ಯಕ್ಷರಿಗಷ್ಟೇ ಆಸಕ್ತಿ:** ಕಾಂಗ್ರೆಸ್‌ನಲ್ಲಿ ಸಿಡಿ ಪ್ರಕರಣವನ್ನು ಇಷ್ಟೊಂದು ಪರಿಣಾಮಕಾರಿ ತೆಗೆದುಕೊಳ್ಳಲು ಕೆಪಿಸಿಸಿ ಅಧ್ಯಕ್ಷ ಡಿಕೆ ಶಿವಕುಮಾರ್ ಹೊರತುಪಡಿಸಿ ಉಳಿದವರಿಗೆ ಆಸಕ್ತಿಯಿಲ್ಲ ಎನ್ನಲಾಗಿದೆ. ರಮೇಶ್ ಜಾರಕಿಹೊಳಿ ಪದೇಪದೇ ಮಹಾನಾಯಕ ಎಂದಿರುವುದು ಮತ್ತು ಹಿಂದಿನ ಜಿದ್ದಿಗೆ ಬಿದ್ದ ಡಿಕೆಶಿ ಈ ಬಗ್ಗೆ ಹೋರಾಟ ಮಾಡಲೇಬೇಕು ಎಂದು ಒತ್ತಾಯ ಮಾಡಿದ್ದಾರೆ. ಕೆಲ ಹಿರಿಯ ಸದಸ್ಯರು ಸಿಡಿ ಚರ್ಚೆಯಿಂದ ಇಡೀ ಸದನದ ಮರ್ಯಾದೆ ಹಾಳಾಗುತ್ತದೆ. ಜನರು ಎಲ್ಲ ರಾಜಕಾರಣಿಗಳನ್ನು ಒಂದೇ ಥರ ನೋಡಲು ಶುರು ಮಾಡುತ್ತಾರೆ ಎಂಬ ಸಲಹೆ ನೀಡಿದ್ದರು. ಆದರೆ, ಇದೆಲ್ಲವನ್ನೂ ಧಿಕ್ಕರಿಸಿದ ಡಿಕೆಶಿ, ಸಿಡಿ ವಿಚಾರದಲ್ಲಿ ಹೋರಾಟ ಮಾಡದಿದ್ದರೆ ಪಕ್ಷಕ್ಕೆ ಹಿನ್ನಡೆಯಾಗಲಿದೆ. ಚುನಾವಣೆ ಸಂದರ್ಭದಲ್ಲಿ ಅದರ ಲಾಭ ಪಡೆಯುವ ಅವಕಾಶವನ್ನು ನಾವು ಕಳೆದುಕೊಳ್ಳುತ್ತೇವೆ ಎಂದು ಕಾರಣ ನೀಡಿ ಎಲ್ಲ ಸದಸ್ಯರನ್ನು ಸಿಡಿ ವಿಚಾರದಲ್ಲಿ ಧರಣಿ ನಡೆಸುವಂತೆ ಪ್ರಚೋದಿಸಿದ್ದಾರೆ ಎಂಬ ಮಾತುಗಳು ಕಾಂಗ್ರೆಸ್ ವಲಯದಲ್ಲಿ ಕೇಳಿಬಂದಿವೆ.

**ಗದ್ದಲದ ನಡುವೆ ಬಿಲ್ ಪಾಸ್:** ಕಲಾಪ ಆರಂಭವಾಗುತ್ತಿದ್ದಂತೆ ಸಂತಾಪ ಸೂಚನೆ ನಿರ್ಣಯದ ಬಳಿಕ ಕಾಂಗ್ರೆಸ್ ನಾಯಕರು ಬಾವಿಗಿಳಿದು ಧರಣಿ ನಡೆಸಿದರು. ಈ ವೇಳೆ ಎರಡು ಬಾರಿ ಕಲಾಪವನ್ನು ಮುಂದೂಡಿದರು. ಧರಣಿ ನಿಲ್ಲದ ಹಿನ್ನೆಲೆಯಲ್ಲಿ ಕಾಂಗ್ರೆಸ್ ಸದಸ್ಯರು ಬಾವಿಯಲ್ಲಿದ್ದಾಗಲೇ ಸ್ಪೀಕರ್ ಅವರು ಪ್ರಶ್ನೋತ್ತರ, ವಿವಿಧ ವಿಧೇಯಕವನ್ನು ಮಂಡಿಸಿ ಅನುಮೋದಿಸಿದರು. ಈ ವೇಳೆ ಕಾಂಗ್ರೆಸ್ ನಾಯಕರು ಹೋ.ಹೋ. ಎಂದು ಕೂಗಿದರು.

**ಅವಧಿಗೂ ಮೊದಲೇ ಅಧಿವೇಶನ ಕ್ಲೋಸ್:**ಬೆಳಗಾವಿ ಲೋಕಸಭಾ ಹಾಗೂ ಮಸ್ಕಿ ಮತ್ತು ಬಸವ ಕಲ್ಯಾಣ ವಿಧಾನಸಭಾ ಕ್ಷೇತ್ರಗಳಿಗೆ ಉಪ ಚುನಾವಣೆ ಘೋಷಣೆಯಾದ ಬೆನ್ನಲ್ಲೇ ಕಾರ್ಯ ಕಲಾಪದ ಮೇಲೆ ಉಭಯ ಪಕ್ಷಗಳ ನಾಯಕರಿಗೂ ಆಸಕ್ತಿ ಕಡಿಮೆಯಾಗಿದ್ದು, ರಮೇಶ್ ಜಾರಕಿಹೊಳಿ ಅವರ ಸಿಡಿ ಪ್ರಕರಣದ ತನಿಖೆ ವಿಷಯವನ್ನು ಮುಂದಿಟ್ಟುಕೊಂಡು ಅವಧಿಗೂ ಮೊದಲೇ ಸದನವನ್ನು ಮುಕ್ತಾಯಗೊಳಿಸುವ ಸಾಧ್ಯತೆಯಿದೆ. ಮೂರು ಕ್ಷೇತ್ರಗಳನ್ನು ವಶಕ್ಕೆ ಪಡೆಯುವ ಲೆಕ್ಕಾಚಾರದಲ್ಲಿ ಆಡಳಿತಾರೂಢ ಬಿಜೆಪಿ ಹಾಗೂ ಪ್ರತಿಪಕ್ಷ ಕಾಂಗ್ರೆಸ್ ಇವೆ. ಆದ್ದರಿಂದ 31ರ ಬದಲಿಗೆ ಈ ವಾರದಲ್ಲಿಯೇ ಅಧಿವೇಶನವನ್ನು ಮುಗಿಸಿ ಪ್ರಚಾರದ ಕಡೆ ಗಮನಹರಿಸುವ ಲೆಕ್ಕಾಚಾರದಲ್ಲಿ ನಾಯಕರಿದ್ದಾರೆ ಎನ್ನಲಾಗಿದೆ.

ಆಧಾರ: ವಿಶ್ವವಾಣಿ, ದಿನಾಂಕ:24.03.2021.

## 87. ಗದ್ದಲದಲ್ಲೇ ಧನವಿನಿಯೋಗ ಮಸೂದೆ ಅಂಗೀಕಾರ

ಸಿಡಿ ಪ್ರಕರಣಕ್ಕೆ ಸಂಬಂಧಿಸಿದಂತೆ ಚರ್ಚೆಗೆ ಅವಕಾಶ ನೀಡಬೇಕು ಎಂದು ಆಗ್ರಹಿಸಿ ಕಾಂಗ್ರೆಸ್ ಸದಸ್ಯರು ಸದನದ ಬಾವಿಗಿಳಿದು ಪ್ರತಿಭಟನೆ ಆರಂಭಿಸುತ್ತಿದ್ದಂತೆ ಜೆಡಿಎಸ್ ಸದಸ್ಯರು ಸಭಾತ್ಯಾಗ ಮಾಡಿದರು. ಕಾಂಗ್ರೆಸ್ ಸದಸ್ಯರ ಗದ್ದಲದ ನಡುವೆಯೇ ಮುಖ್ಯಮಂತ್ರಿ ಅವರು 2021–22ನೇ ಸಾಲಿನ ಬಜೆಟ್ ಮಂಡಿಸಿ ಅನುಮೋದನೆ ಪಡೆದರು.

ಬೆಳಗ್ಗಿನ ಕಲಾಪದ ವೇಳೆ ಪ್ರಶ್ನೋತ್ತರ ಮುಗಿಯುತ್ತಿದ್ದಂತೆ ವಿರೋಧ ಪಕ್ಷ ನಾಯಕ ಎಸ್. ಆರ್. ಪಾಟೀಲ್ ಅವರು ಸಿಡಿ ಪ್ರಕರಣ ಪ್ರಸ್ತಾಪಿಸಲು ಮತ್ತು ಅವರ ಮೇಲೆ ಚರ್ಚೆಗೆ ಅವಕಾಶ ನೀಡಬೇಕು ಎಂದು ಕೋರಿದರು. ಸಭಾಪತಿ ಬಸವರಾಜ ಹೊರಟ್ಟಿ ಮಾತನಾಡಿ ಈ ವಿಷಯ ಕಲಾಪ ಪಟ್ಟಿಯಲ್ಲಿದ್ದು, ಕಾಲಾವಕಾಶ ಒದಗಿ ಬಂದಾಗ ನೀಡಲಾಗುತ್ತದೆ ಎಂದು ಹೇಳಿದರು. ಆಗ ಕಾಂಗ್ರೆಸ್ ಸದಸ್ಯರು ಸಿಡಿ ಪ್ರಕರಣದ ಚರ್ಚೆಗೆ ಅವಕಾಶ ನೀಡಲೇಬೇಕು ಎಂದು ಆಗ್ರಹಿಸಿ, ಸದನದ ಬಾವಿಗಿಳಿದು ಪ್ರತಿಭಟನೆ ಆರಂಭಿಸಿದರು. ಈ ವೇಳೆ ಜೆಡಿಎಸ್ ಸದಸ್ಯರು ಸಭಾತ್ಯಾಗ ಮಾಡುತ್ತಿದ್ದಂತೆ ಸಭಾಪತಿಯವರು ಸದನವನ್ನು 10 ನಿಮಿಷ ಮುಂದೂಡಿದರು.

**ಆರು ಮಸೂದೆ ಅಂಗೀಕಾರ:** ಕಲಾಪ ಪುನ: ಆರಂಭವಾಗುತ್ತಿದ್ದಂತೆ ಸದನದಲ್ಲಿದ್ದ ಮುಖ್ಯಮಂತ್ರಿಗಳು ಸಭಾಪತಿಯವರ ಸೂಚನೆ ಮೇರೆಗೆ 2021–22ನೇ ಸಾಲಿನ ವೆಚ್ಚಕ್ಕಾಗಿ ಅನುದಾನಗಳನ್ನು ಪಡೆಯಲು ಬೇಡಿಕೆಗಳ ಸೂಚನೆ, ಕರ್ನಾಟಕ ಧನವಿನಿಯೋಗ ವಿಧೇಯಕ–2021, ಕರ್ನಾಟಕ ಧನವಿನಿಯೋಗ (ಸಂಖ್ಯೆ02) ವಿಧೇಯಕ–2021, ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ (ತಿದ್ದುಪಡಿ) ವಿಧೇಯಕ–2021 ಮಂಡಿಸಿ ಗದ್ದಲದ ನಡುವೆಯೇ ಧ್ವನಿಮತದ ಮೂಲಕ ಅಂಗೀಕಾರ ಪಡೆದರು.

ಸಭಾನಾಯಕ ಕೋಟ ಶ್ರೀನಿವಾಸ ಪೂಜಾರಿಯವರು ಕರ್ನಾಟಕ ಸೊಸೈಟಿ ನೋಂದಣಿ (ತಿದ್ದುಪಡಿ) ವಿಧೇಯಕ–2021 ಮಂಡಿಸಿದರು. ಮೀನುಗಾರಿಕೆ ಸಚಿವ ಎಸ್. ಅಂಗಾರ ಅವರು ಕರ್ನಾಟಕ ಜಲಸಾರಿಗೆ ಮಂಡಳಿ (ತಿದ್ದುಪಡಿ) ವಿಧೇಯಕ–2021 ಮಂಡಿಸಿದರು. ಈ ಎರಡು ವಿಧೇಯಕವನ್ನು ಸದನ ಗದ್ದಲದ ನಡುವೆಯೇ ಅಂಗೀಕರಿಸಿದೆ. ಇದರ ಬೆನ್ನಲ್ಲೇ ಮುಖ್ಯಮಂತ್ರಿಯವರು ಬಜೆಟ್ ಮೇಲಿನ ತಮ್ಮ ಲಿಖಿತ ಉತ್ತರವನ್ನು ಸದನದಲ್ಲಿ ಮಂಡಿಸಿದರು. ತಕ್ಷಣವೇ ಸಭಾಪತಿಯವರು ಕಲಾಪವನ್ನು ಮಧ್ಯಾಹ್ನದವರೆಗೆ ಮುಂದೂಡಿದರು.

ಬೆಳಿಗ್ಗೆ ಸದನ ಆರಂಭವಾಗುತ್ತಿದ್ದಂತೆ ಕಾಂಗ್ರೆಸ್ ಸದಸ್ಯರು ಬಾವಿಗಿಳಿದು ಧರಣಿ ಮುಂದುವರಿಸಿದರು. ಗದ್ದಲ, ಧಿಕ್ಕಾರದ ನಡುವೆಯೇ ಯೂಡಿಯೂರಪ್ಪ ಬಜೆಟ್ ಮೇಲಿನ ಚರ್ಚೆಗೆ ಉತ್ತರ ನೀಡಲಾರಂಭಿಸಿದರು. ಬಜೆಟ್ ಮೇಲಿನ ಚರ್ಚೆಯಲ್ಲಿ ಪ್ರತಿಪಕ್ಷಗಳು, ಆಡಳಿತ ಪಕ್ಷದಿಂದ ಒಟ್ಟು 15 ಮಂದಿ ಪಾಲ್ಗೊಂಡಿದ್ದು ಎಲ್ಲರ ಅಭಿಪ್ರಾಯವನ್ನು ಸರ್ಕಾರ ಗಂಭೀರವಾಗಿ ಪರಿಗಣಿಸಿದೆ. ಪ್ರತಿಪಕ್ಷ ನಾಯಕರು ಸಂದರ್ಭದ ಸೂಕ್ಷ್ಮತೆ ಅರಿತು ಸಂವೇದನಾಶೀಲತೆಯಿಂದ ಮಾತನಾಡಿದ್ದರೆ ವಾಸ್ತವದ ಚಿತ್ರಣ ತಿಳಿಯಬಹುದಿತ್ತು. ಸಮೃದ್ಧಿ ಸಂದರ್ಭದಲ್ಲೇ ಸರ್ಕಾರಗಳು ಸಾಲ ಮಾಡಿರುವಾಗ ಸಾಂಕ್ರಾಮಿಕ ಸಂಕಷ್ಟ ಪ್ರವಾಹ ಇತರೆ ಪ್ರಕೃತಿ ವಿಕೋಪ ಪರಿಸ್ಥಿತಿಯಲ್ಲಿ ಸಾಲ ಮಾಡದೆ ಅಭಿವೃದ್ಧಿ ಕಾರ್ಯ ಕೈಗೊಳ್ಳುವುದು ಹೇಗೆ ಕೋವಿಡ್ ಸೃಷ್ಟಿಸಿದ ಸಂಕಷ್ಟ ನಿವಾರಣೆ ಹಾಗೂ ಅಭಿವೃದ್ಧಿ ಚಕ್ರವನ್ನು ಚಾಲನೆಯಲ್ಲಿಟ್ಟುಕೊಳ್ಳಲು ಸಾಲ ಮಾಡಲಾಗಿದೆ ಎಂದು ಸಿಎಂ ಸಮರ್ಥಿಸಿಕೊಂಡರು.

**ಪ್ರತಿಪಕ್ಷಗಳಿಗೆ ಟಾಂಗ್:** ಆಯವ್ಯಯ ಚರ್ಚೆಯಲ್ಲಿ ಪ್ರತಿಪಕ್ಷಗಳ ಸದಸ್ಯರು ಬದ್ಧತಾ ವೆಚ್ಚ ಕಡಿಮೆ ಮಾಡಬೇಕು ಎಂದು ಒತ್ತಾಯಿಸುವ ಜೊತೆಗೆ ಎಲ್ಲ ಖಾಲಿ ಹುದ್ದೆ ಭರ್ತಿಗೆ ಆಗ್ರಹಿಸಿದ್ದಾರೆ. ಇದು ಒಂದಕ್ಕೊಂದು ತಾಳೆಯಾಗದ ಅಂಶವಾಗಿದೆ ಎನ್ನುವ ಮೂಲಕ ಯಡಿಯೂರಪ್ಪ ಪ್ರತಿಪಕ್ಷಗಳಿಗೆ ಟಾಂಗ್ ನೀಡಿದರು.

**ಮೇಲ್ಮನೆ ಕಲಾಪ ಮುಂದೂಡಿಕೆ:** ಆರು ಜನ ಸಚಿವರು ಕೋರ್ಟ್‌ನಿಂದ ಇಂಜೆಕ್ಷನ್ ತೆಗೆದುಕೊಂಡಿದ್ದು ಯಾಕೆ ಆ ಸಿಡಿಯಲ್ಲಿ ಅಂತಹದ್ದೇನಿದೆ ಇದನ್ನು ಸರ್ಕಾರ ಸ್ಪಷ್ಟಪಡಿಸಬೇಕು ಎಂದು ಒತ್ತಾಯಿಸಿ ಪ್ರತಿಪಕ್ಷ ಸದಸ್ಯರು ಪ್ರತಿಭಟನೆ ನಡೆಸಿದ್ದರಿಂದ ಸದನವನ್ನು ಅನಿರ್ದಿಷ್ಟಾವಧಿ ಮುಂದೂಡಲಾಯಿತು.

ಕಲಾಪ ಆರಂಭವಾಗುತ್ತಿದ್ದಂತೆ ಪ್ರತಿಪಕ್ಷ ಸದಸ್ಯರೆಲ್ಲರೂ ಬಾವಿಗಿಳಿದು ಪ್ರತಿಭಟನೆಗೆ ಮುಂದಾದರು. ಈ ವೇಳೆ ಮಾತನಾಡಿದ ಸಿ.ಎಂ ಇಬ್ರಾಹಿಂ ಸರ್ಕಾರ ಆರು ಮಂದಿ ಅತಿರಥ ಮಹಾರಥರ ರಕ್ಷಣೆಗೆ ಮುಂದಾಗಿದೆ. ಈ ಆರು ಜನ ಮುಂಬೈಗೆ ಹೋಗಿ ಮಂಚ ಮುರಿದು ಈಗ ಸಿಡಿ ಬಿಡುಗಡೆಗೆ ಅವಕಾಶ ನೀಡದಂತೆ ನ್ಯಾಯಾಲಯದಿಂದ ತಡೆಯಾಜ್ಞೆ ತಂದಿದ್ದಾರೆ ತಪ್ಪು ಮಾಡದಿದ್ದ ಮೇಲೆ ಏಕೆ ಕೋರ್ಟ್‌ಗೆ ಹೋದರು, ಆ ಸಿಡಿಯಲ್ಲಿ ಅಂತಹ ಯಾವ ವಿಚಾರ ಇದೆ ಮುಖ್ಯಮಂತ್ರಿಗಳು ಈ ಬಗ್ಗೆ ಉತ್ತರಿಸಬೇಕು. ಸಿಡಿ ಬಗ್ಗೆ ಚರ್ಚಿಸಲು ಅವಕಾಶ ನೀಡಬೇಕು ಎಂದು ಆಗ್ರಹಿಸಿದರು. ಉಳಿದ ಸಚಿವರು ಇದಕ್ಕೆ ದನಿಗೂಡಿಸಿ ಪಟ್ಟುಹಿಡಿದರು.

ಸಿ.ಎಂ. ಇಬ್ರಾಹಿಂ ಹೇಳಿಕೆಗೆ ಆಕ್ಷೇಪ ವ್ಯಕ್ತಪಡಿಸಿದ ಬಿಜೆಪಿ ಸದಸ್ಯರಾದ ತೇಜಸ್ವಿನಿ ಮತ್ತು ಭಾರತಿ ಶೆಟ್ಟಿ ಸಭಾತ್ಯಾಗ ಮಾಡಿದರು. ಇದಕ್ಕೂ ಮುನ್ನ ಮಾತನಾಡಿದ ತೇಜಸ್ವಿನಿ ಗಂಭೀರ ವಿಚಾರದ ಬಗ್ಗೆ ಪ್ರತಿಪಕ್ಷದ ಸದಸ್ಯರು ಚರ್ಚೆಗೆ ಮುಂದಾಗಿರುವುದು ಸ್ವಾಗತಾರ್ಹ. ಆದರೆ ಈ ಸದನದಲ್ಲಿ ಮೂರು ಮಂದಿ ಮಹಿಳೆಯರು ಇದ್ದೇವೆ. ಒಂದು ವೇಳೆ ಚರ್ಚೆ ಮಾಡುವುದಾದರೆ, ಕಾಂಗ್ರೆಸ್ ಸದಸ್ಯರ ಪತ್ನಿ ಮಕ್ಕಳು ಸೇರಿ ಕುಟುಂಬದವರೆಲ್ಲರನ್ನು ಕರೆತಂದು ಗ್ಯಾಲರಿಯಲ್ಲಿ ಕುಳಿತುಕೊಳ್ಳಲಿ. ಆಗ ನಾವು ಈ ಬಗ್ಗೆ ಚರ್ಚೆ ಮಾಡುತ್ತೇವೆ. ಕಾಂಗ್ರೆಸ್ ಸದಸ್ಯರು ತಾಕತ್ತಿದ್ದರೆ, ತಮ್ಮ ಕುಟುಂಬಸ್ಥರನ್ನು ಸದನದಲ್ಲಿ ತಂದು ಕೂರಿಸಲಿ ಏಕೆಂದರೆ, ಅವರಿಗೂ ಇಲ್ಲಿ ಯಾರು ಶ್ರೀರಾಮಚಂದ್ರ ಇಲ್ಲ ಎಂಬುದು ಗೊತ್ತಾಗಲಿ ಎಂದು ಹೇಳಿದರು. ಭಾರತಿ ಶೆಟ್ಟಿ ಮಾತನಾಡಿ ನಾಲಿಗೆ ಇದೆ ಎಂದು ಬೇಕಾಬಿಟ್ಟಿ ಹರಿಬಿಡುವುದು ಸರಿ ಅಲ್ಲ. ಮಹಿಳಾ ಸದಸ್ಯರು ಸದನದಲ್ಲಿದ್ದಾರೆ. ಪ್ರತಿಪಕ್ಷದ ಸದಸ್ಯರ ಮಾತುಗಳಿಂದ ನನಗೆ ಮುಜುಗರ ಆಗುತ್ತಿದೆ. ನಾನು ಸಭಾತ್ಯಾಗ ಮಾಡುತ್ತೇನೆ ಎಂದು ಹೊರನಡೆದರು.

ಇದಕ್ಕೆ ತಿರುಗೇಟು ನೀಡಿದ ಸಿ.ಎಂ.ಇಬ್ರಾಹಿಂ ಮುಜುಗರಕ್ಕೀಡು ಮಾಡುವ ಸಚಿವರನ್ನು ಯಾಕೆ ನಿಮ್ಮ ಪಕ್ಷದಲ್ಲಿ ಇಟ್ಟುಕೊಂಡಿದ್ದೀರಿ, ಅದೇನೇ ಇರಲಿ, ಸಿಡಿಯಲ್ಲಿ ಏನಾದರೂ ರಾಷ್ಟ್ರವಿರೋಧಿ ಅಥವಾ ಮಾನವ ವಿರೋಧಿ ಅಂಶಗಳಿವೆಯೇ ಈ ಆರು ಜನ ಸಚಿವರು ಮುಂಬೈಗೆ ಹೋಗಿದ್ದ ಪ್ಯಾಕೇಜ್ ಮಾಹಿತಿ ಇದೆಯೇ ಈ ವಿಚಾರ ರಾಜ್ಯದ ಜನತೆಗೆ ಗೊತ್ತಾಗಬೇಕು ಎಂದು ಆಗ್ರಹಿಸಿದರು. ಆಗ ಬಿಜೆಪಿ ಸದಸ್ಯರು ಮೇಟಿ ಸಿಡಿ ಪ್ರಕರಣದ ಬಗ್ಗೆ ಪ್ರಸ್ತಾಪಿಸಿದರು. ಈ ವೇಳೆ ವಾಗ್ವಾದ ಉಂಟಾಗಿ ಗದ್ದಲ

ಸೃಷ್ಟಿಯಾಯಿತು. ಕೊನೆಗೆ ಸಭಾಪತಿ ಬಸವರಾಜ ಹೊರಟ್ಟಿ ಸದನವನ್ನು ಅನಿರ್ದಿಷ್ಟಾವಧಿಗೆ ಮುಂದೂಡಿದರು.

ಆಧಾರ: ಉದಯವಾಣಿ ದಿನಾಂಕ:25.03.2021.

## 88. ವಿಧಾನಸಭಾ ಕಲಾಪಕ್ಕೆ ಶಾಸಕರ ಗೈರು ಪ್ರಜಾಪ್ರಭುತ್ವಕ್ಕೆ ಮಾರಕ : ಸಭಾಧ್ಯಕ್ಷ

ಜನರ ಸಮಸ್ಯೆಗೆ ಸ್ಪಂದಿಸುವ ವಿಧಾನಸಭೆಯ ಕಲಾಪಕ್ಕೆ ಶಾಸಕರು ಗೈರು ಹಾಜರಾಗುವ ಪ್ರವೃತ್ತಿ ಹೆಚ್ಚಾಗುತ್ತಿರುವುದು ಪ್ರಜಾಪ್ರಭುತ್ವ ವ್ಯವಸ್ಥೆಗೆ ಮಾರಕ ಎಂದು ಸಭಾಧ್ಯಕ್ಷ ವಿಶ್ವೇಶ್ವರ ಹೆಗಡೆ, ಕಾಗೇರಿ ಕಳವಳ ವ್ಯಕ್ತಪಡಿಸಿದ್ದಾರೆ.

ವಿಧಾನಸೌಧದಲ್ಲಿ ಸುದ್ದಿಗೋಷ್ಠಿಯಲ್ಲಿ ಮಾತನಾಡಿದ ಅವರು ಜನರ ಸಮಸ್ಯೆಗಳಿಗೆ ಸ್ಪಂದಿಸುವುದು ಶಾಸಕರ ಜವಾಬ್ದಾರಿ. ಸದಸ್ಯರು ತುರ್ತು ಸಂದರ್ಭದಲ್ಲಿ ಗೈರಾಗುವುದು ಒಳ್ಳೆಯದಲ್ಲ. ದಿನನಿತ್ಯದ ಕಾರ್ಯಕ್ರಮ ಹೆಸರಲ್ಲಿ ಗೈರು ಹಾಜರಾಗುತ್ತಿರುವುದು ಹೆಚ್ಚಾಗುತ್ತಿದೆ. ಎಲ್ಲರಿಗೂ ಪ್ರತಿನಿತ್ಯ ಕಾರ್ಯಕ್ರಮಗಳು ಇರುತ್ತವೆ. ಅದನ್ನು ಮುಂದಿಟ್ಟುಕೊಂಡು ಸದನಕ್ಕೆ ಗೈರಾಗುವ ಪ್ರವೃತ್ತಿ ಒಳ್ಳೆಯದಲ್ಲ. ಇದು ಪ್ರಜಾತಂತ್ರ ವ್ಯವಸ್ಥೆಗೆ ಮಾರಕವಾಗಿದೆ ಎಂದು ಬೇಸರ ವ್ಯಕ್ತಪಡಿಸಿದರು.

ಸಭಾಧ್ಯಕ್ಷನಾದ ಬಳಿಕ ಸಂಸದೀಯ ವ್ಯವಸ್ಥೆಗಳಿಗೆ ಮೌಲ್ಯ ತುಂಬುವ ಪ್ರಯತ್ನ ಮಾಡಿದ್ದೇನೆ. ಸಚಿವರು, ಶಾಸಕರು ಪಾಲ್ಗೊಳ್ಳುವಿಕೆ ಗಮನಿಸಿದಾಗ ಅವರು ಇನ್ನು ಉತ್ತಮವಾಗಿ ಸ್ಪಂದಿಸಬಹುದಿತ್ತು. ಸಚಿವರು, ಶಾಸಕರು, ಅಧಿಕಾರಿಗಳಿಗೆ ಸ್ವಯಂ ಜಾಗೃತಿ ಮೂಡಬೇಕು, ಆಗ ಮಾತ್ರ ಕಲಾಪಕ್ಕೆ ಅರ್ಥ ಬರಲಿದೆ ಎಂದು ಸಭಾಧ್ಯಕ್ಷರ ಅಭಿಪ್ರಾಯಪಟ್ಟರು.

ಪ್ರತಿಪಕ್ಷಗಳ ನಡೆಯ ಬಗ್ಗೆಯೂ ತೀವ್ರ ಅಸಮಾಧಾನ ವ್ಯಕ್ತಪಡಿಸಿದ ಸಭಾಧ್ಯಕ್ಷರು ಪ್ರತಿಪಕ್ಷಗಳು ಕಲಾಪಕ್ಕೆ ಅಡ್ಡಿಪಡಿಸುವುದು ಸರಿಯಲ್ಲ. ಸದನವನ್ನು ರಾಜಕೀಯ ವೇದಿಕೆಯಾಗಿ ಮಾಡುವ ಮನಸ್ಥಿತಿಯಿಂದ ಹೊರಬರಬೇಕು. ಸದನದ ಹೊರಗಡೆ ರಾಜಕೀಯ ಚಟುವಟಿಕೆಯನ್ನು ತಮ್ಮ ಇಚ್ಛೆಗೆ ತಕ್ಕಂತೆ ನಡೆಸಿಕೊಳ್ಳಬಹುದು. ಆದರೆ ಸದನದೊಳಗೆ ಚರ್ಚೆ, ಸಂವಾದ, ತರ್ಕಕ್ಕೆ ಇರುವಂತಹ ಅವಕಾಶಗಳನ್ನು ಮೊಟಕುಗೊಳಿಸುವುದು ಯಾರಿಂದಲೂ ಆಗಬಾರದು. ಆ ರೀತಿಯಾಗದಂತೆ ನೋಡಿಕೊಳ್ಳುವ ಹೊಣೆಗಾರಿಕೆ ಪ್ರತಿಪಕ್ಷದ ಮೇಲಿರುತ್ತದೆ. ಬಜೆಟ್ ಅಧಿವೇಶನದಲ್ಲಿ ಪ್ರತಿಪಕ್ಷದ ಪಾತ್ರ ಅತ್ಯಂತ ನೋವು ತಂದಿದೆ. ಆಡಳಿತ ಪಕ್ಷದ ಸಭಾನಾಯಕರಿಗೆ ಇರುವಷ್ಟೇ ಜವಾಬ್ದಾರಿಯು ಪ್ರತಿಪಕ್ಷಕ್ಕೂ ಇರುತ್ತದೆ. ಸಂಸದೀಯ ವ್ಯವಸ್ಥೆಗೆ ಬರಬೇಕಾದರೆ ಪ್ರತಿಪಕ್ಷವು ಜವಾಬ್ದಾರಿಯುತವಾಗಿ ನಡೆದುಕೊಳ್ಳಬೇಕು ಎಂದರು.

**ಸುಧಾಕರ್ ಹೇಳಿಕೆ ಪರಿಶೀಲನೆ:** ಆರೋಗ್ಯ ಸಚಿವ ಡಾ: ಕೆ. ಸುಧಾಕರ್ ಅಕ್ಷೇಪಾರ್ಹ ಹೇಳಿಕೆ ಸರಿಯಲ್ಲ. ಈ ಸಂಬಂಧ ಕಾಂಗ್ರೆಸ್ ನಿಯೋಗ ಪತ್ರ ಬರೆದಿದ್ದು ಈ ನಿಟ್ಟಿನಲ್ಲಿ ಏನು ಮಾಡಬೇಕು ಎಂಬುದರ ಬಗ್ಗೆ ಪರಿಶೀಲನೆ ನಡೆಸುತ್ತೇನೆ ಎಂದು ಸಭಾಧ್ಯಕ್ಷರು ತಿಳಿಸಿದ್ದಾರೆ. ಸುಧಾಕರ್ ಸಹ ತಮ್ಮ ಹೇಳಿಕೆ ಬಗ್ಗೆ ಸ್ಪಷ್ಟೀಕರಣ ನೀಡಿದ್ದಾರೆ. ಅವರ ಸ್ಪಷ್ಟೀಕರಣವನ್ನು ಪರಿಗಣಿಸಲಾಗುವುದು. ನನಗೆ ಯಾವ ರೀತಿಯ ಕ್ರಮ ಕೈಗೊಳ್ಳುವ ಅವಕಾಶ ಇದೆ ಎಂಬುದರ ಬಗ್ಗೆ ಪರಿಶೀಲನೆ ನಡೆಸಲಾಗುವುದು. ಸಂಸದೀಯ ವ್ಯವಸ್ಥೆಯಡಿ ಒಂದು ಚೌಕಟ್ಟಿನಲ್ಲಿ ನಾನು ಏನು ಕ್ರಮ ತೆಗೆದುಕೊಳ್ಳಬೇಕೋ ಅದನ್ನು ತೆಗೆದುಕೊಳ್ಳುತ್ತೇನೆ ಎಂದರು.

ಆಧಾರ: ಕನ್ನಡಪ್ರಭ, ದಿನಾಂಕ:26.03.2021.

## 89. ಶಾಸಕರಿಗೂ ನಂಬರ್ ಪ್ಲೇಟ್ ರೂಲ್ಸ್ ಬಿಸಿ

ಖಾಸಗಿ ವಾಹನಗಳ ನಂಬರ್ ಪ್ಲೇಟ್ ನಿಯಮ ಉಲ್ಲಂಘನೆಯನ್ನು ಸರ್ಕಾರ ಗಂಭೀರವಾಗಿ ಪರಿಗಣಿಸಿದೆ. ವಾಹನಗಳ ನೋಂದಣಿ ಫಲಕದ ಮೇಲೆ ಅನಧಿಕೃತವಾಗಿ ಹೆಸರು ಚಿಹ್ನೆ/ಲಾಂಛನ ಹಾಗೂ ಇತರ ಸಂಘ ಸಂಸ್ಥೆಗಳ ಹೆಸರು ಹಾಕಿಕೊಳ್ಳುವುದು ಕಾನೂನು ಬಾಹಿರ. ಅಂತಹ ಫಲಕಗಳನ್ನು ತೆರವುಗೊಳಿಸುವಂತೆ ಸಾರಿಗೆ ಇಲಾಖೆ ಪ್ರಕಟಣೆ ಹೊರಡಿಸಿದೆ. ಸದಸ್ಯರು ಖಾಸಗಿ ವಾಹನಗಳ ನೋಂದಣಿ ಫಲಕಗಳ ಮೇಲೆ ಹೆಸರು ಲಾಂಛನ ಹಾಕಿದ್ದಲ್ಲಿ ಕೂಡಲೇ ತೆರವುಗೊಳಿಸಬೇಕು ಇನ್ನು ಮುಂದೆ ಅನಧಿಕೃತ ಚಿಹ್ನೆ, ಫಲಕ ಹೆಸರುಗಳನ್ನು ನೋಂದಣಿ ಫಲಕದ ಮೇಲೆ ಹಾಕಿಕೊಳ್ಳಬಾರದೆಂದು ಪರಿಷತ್ ಕಾರ್ಯದರ್ಶಿ ಕೆ. ಆರ್. ಮಹಾಲಕ್ಷ್ಮಿ ಸೂಚಿಸಿದ್ದಾರೆ.

ಆಧಾರ: ವಿಜಯವಾಣಿ, ದಿನಾಂಕ:29.03.2021.

## 90. ವಿಧಾನಸಭೆಯ 9ನೇ ಅಧಿವೇಶನದ ಮುಂದುವರೆದ ಉಪವೇಶನದ ಕಾರ್ಯಕಲಾಪಗಳ ಸಂಕ್ಷಿಪ್ತ ವರದಿ

04ನೇ ಮಾರ್ಚ್ ರಿಂದ 24ನೇ ಮಾರ್ಚ್, 2021 ರವರೆಗೆ 13 ದಿನಗಳ ಕಾಲ ಸುಮಾರು 44 ಗಂಟೆ 30 ನಿಮಿಷಗಳ ಕಾಲ ಕಾರ್ಯಕಲಾಪ ನಡೆಸಲಾಗಿದೆ.

- ದಿನಾಂಕ:04.03.2021 ರಂದು "ಒಂದು ರಾಷ್ಟ್ರ – ಒಂದು ಚುನಾವಣೆ" ಕುರಿತಂತೆ ನನ್ನ ಪ್ರಸ್ತಾವಿಕ ಭಾಷಣವನ್ನು ಮಂಡಿಸಿರುತ್ತೇನೆ.
- 2021–22 ನೇ ಸಾಲಿನ ಆಯವ್ಯಯ ಅಂದಾಜುಗಳನ್ನು ದಿನಾಂಕ: 08.03.2021ರಂದು ಹಾಗೂ ಅನುದಾನದ ಬೇಡಿಕೆಗಳನ್ನು ದಿನಾಂಕ: 22.03.2021ರಂದು ಸನ್ಮಾನ್ಯ ಮುಖ್ಯಮಂತ್ರಿಯವರು ಮಂಡಿಸಿದ್ದು, ದಿನಾಂಕ: 24.03.2021 ರಂದು ಸನ್ಮಾನ್ಯ ಮುಖ್ಯಮಂತ್ರಿಯವರ ಉತ್ತರದ ನಂತರ ಮತಕ್ಕೆ ಹಾಕಿ ಅಂಗೀಕರಿಸಲಾಯಿತು.
- 2020–21 ನೇ ಸಾಲಿನ ಪೂರಕ ಅಂದಾಜುಗಳ ಮೂರನೇ ಹಾಗೂ ಅಂತಿಮ ಕಂತನ್ನು ದಿನಾಂಕ: 23.03.2021 ರಂದು ಮಂಡಿಸಿದ್ದು, ದಿನಾಂಕ: 24.03.2021 ರಂದು ಮತಕ್ಕೆ ಹಾಕಿ ಅಂಗೀಕರಿಸಲಾಯಿತು.
- ರಾಜ್ಯದ ಮಾಜಿ ಸಚಿವರಾಗಿದ್ದ ಶ್ರೀ ಹೆಚ್.ಟಿ. ಕೃಷ್ಣಪ್ಪ, ಶ್ರೀ ಬಿ.ಡಿ. ಬಸವರಾಜು, ವಿಧಾನಸಭೆಯ ಮಾಜಿ ಸದಸ್ಯರಾಗಿದ್ದ ಶ್ರೀ ವಾಲ್ಮೀಕ ನಾಯಕ, ನ್ಯಾಯಮೂರ್ತಿ ಶ್ರೀ ರಾಮಾ ಜೋಯಿಸ್, ಖ್ಯಾತ ಕವಿ ಡಾ:ಎನ್.ಎಸ್. ಲಕ್ಷ್ಮೀನಾರಾಯಣ ಭಟ್ ಹಾಗೂ ಕೃಷಿ ವಿಜ್ಞಾನಿ ಡಾ: ಎಂ. ಮಹದೇವಪ್ಪ ಅವರುಗಳ ನಿಧನ ಕುರಿತಂತೆ ಸಂತಾಪ ಸೂಚನಾ ನಿರ್ಣಯವನ್ನು ಮಂಡಿಸಿ, ಅಂಗೀಕರಿಸಲಾಗಿದೆ.
- ರಾಜ್ಯಪಾಲರಿಂದ ಒಪ್ಪಿಗೆ ಪಡೆದ ವಿಧೇಯಕಗಳ ಬಗ್ಗೆ ಕಾರ್ಯದರ್ಶಿಯವರ ವರದಿಯನ್ನು ಮಂಡಿಸಲಾಗಿದೆ.
- ಭಾರತ ಸಂವಿಧಾನದ 151(2)ನೇ ಅನುಚ್ಛೇದದ ಮೇರೆಗೆ, ಭಾರತದ ಲೆಕ್ಕನಿಯಂತ್ರಕರು ಮತ್ತು ಮಹಾ ಲೆಕ್ಕಪರಿಶೋಧಕರು ನೀಡಿರುವ 2019–20 ನೇ ಸಾಲಿನ ಧನವಿನಿಯೋಗ ಲೆಕ್ಕಗಳು ಮತ್ತು ಹಣಕಾಸು ಲೆಕ್ಕಗಳನ್ನು (ಸಂಪುಟ I ಮತ್ತು II) ಸದನದಲ್ಲಿ ಮಂಡಿಸಲಾಗಿದೆ.
- ಕರ್ನಾಟಕ ವಿಧಾನಮಂಡಲದ ಅಧೀನ ಶಾಸನ ರಚನಾ ಸಮಿತಿಯ 50ನೇ ವರದಿ, ಸ್ಥಳೀಯ ಸಂಸ್ಥೆಗಳ ಮತ್ತು ಪಂಚಾಯತ್ ರಾಜ್ ಸಂಸ್ಥೆಗಳ ಸಮಿತಿಯ 33 ನೇ ವರದಿ,

ಕರ್ನಾಟಕ ವಿಧಾನ ಸಭೆಯ ಸರ್ಕಾರಿ ಭರವಸೆಗಳ ಸಮಿತಿಯ 9ನೇ ವರದಿ ಮತ್ತು 06 ಅಧಿಸೂಚನೆಗಳು, 40 ವಾರ್ಷಿಕ ವರದಿಗಳು, 68 ಲೆಕ್ಕ ಪರಿಶೋಧನಾ ವರದಿಗಳು, 03 ವಿಶೇಷ ವರದಿಗಳನ್ನು ಮಂಡಿಸಲಾಗಿದೆ.

- ಕನ್ನಡ ವಿಶ್ವವಿದ್ಯಾಲಯದ ಆಡಳಿತ ಮಂಡಳಿ, ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯ ಹಾಗೂ ಕರ್ನಾಟಕ ರಾಜ್ಯ ಡಾ: ಗಂಗೂಬಾಯಿ ಹಾನಗಲ್ ಸಂಗೀತ ಮತ್ತು ಪ್ರದರ್ಶಕ ಕಲೆಗಳ ವಿಶ್ವವಿದ್ಯಾಲಯ ಪ್ರಶಾಸನ ಸಭೆಗಳಿಗೆ ತಲಾ ಒಬ್ಬರು ಸದಸ್ಯರನ್ನು ಚುನಾಯಿಸುವ ಬಗ್ಗೆ ದಿನಾಂಕ: 17.03.2021ರಂದು ಸದನದಲ್ಲಿ ಚುನಾವಣಾ ಪ್ರಸ್ತಾವವನ್ನು ಮಂಡಿಸಿ, ಸದರಿ ವಿಶ್ವವಿದ್ಯಾಲಯಗಳ ಆಡಳಿತ ಮಂಡಳಿ, ಪ್ರಶಾಸನ ಸಭೆಗೆ ಸದಸ್ಯರನ್ನು ನಾಮನಿರ್ದೇಶನ ಮಾಡಲು ದಿನಾಂಕ: 24.03.2021ರಂದು ಮಾನ್ಯ ಸಭಾಧ್ಯಕ್ಷರಿಗೆ ಸದನವು ಅಧಿಕಾರ ನೀಡಿತು.

- ದಿ ಎಂಪ್ಲಾಯ್ಮೆಂಟ್ ಆಫ್ ಮ್ಯಾನ್ಯುಯಲ್ ಸ್ಕ್ಯಾವೆಂಜರ್ಸ್ ಅಂಡ್ ಕನ್ಸಟ್ರಕ್ಷನ್ ಆಫ್ ಡ್ರೈ ಲ್ಯಾಟ್ರೈನ್ಸ್ (ಪ್ರೋಹಿಬಿಷನ್) ಆಕ್ಟ್, 1993 (1993ರ ಕೇಂದ್ರ ಅಧಿನಿಯಮ 46), ಅನ್ನು ನಿರಸನಗೊಳಿಸುವ ಅಧಿಕೃತ ನಿರ್ಣಯವನ್ನು ಸದನವು ದಿನಾಂಕ:23.03.2021 ರಂದು ಅಂಗೀಕರಿಸಲಾಗಿದೆ.

- ಈ ಅಧಿವೇಶನದಲ್ಲಿ 11 ವಿಧೇಯಕಗಳನ್ನು ಮಂಡಿಸಲಾಗಿದ್ದು, ಒಟ್ಟು 09 ವಿಧೇಯಕಗಳನ್ನು ಅಂಗೀಕರಿಸಲಾಗಿದೆ (ಮಂಡಿಸಿ ಪರ್ಯಾಲೋಚಿಸಿ).

- ನಿಯಮ 60 ರಡಿಯಲ್ಲಿ ನೀಡಿದ್ದ 06 ಸೂಚನೆಗಳನ್ನು ನಿಯಮ 69ಕ್ಕೆ ಪರಿವರ್ತಿಸಿ ಚರ್ಚಿಸಲಾಗಿರುತ್ತದೆ.

- ಒಟ್ಟು 3287 ಪ್ರಶ್ನೆಗಳನ್ನು ಸ್ವೀಕರಿಸಲಾಗಿದ್ದು, ಸದನದಲ್ಲಿ ಉತ್ತರಿಸಬೇಕಾಗಿದ್ದ 165 ಪ್ರಶ್ನೆಗಳ ಪೈಕಿ 158 ಪ್ರಶ್ನೆಗಳಿಗೆ ಉತ್ತರಿಸಲಾಗಿದೆ. ಲಿಖಿತ ಮೂಲಕ ಉತ್ತರಿಸುವ 1872 ಪ್ರಶ್ನೆಗಳ ಉತ್ತರಗಳನ್ನು ಮಂಡಿಸಲಾಗಿದೆ.

- ನಿಯಮ 351 ರಡಿಯಲ್ಲಿ 128 ಸೂಚನೆಗಳನ್ನು ಅಂಗೀಕರಿಸಿದ್ದು, 87 ಸೂಚನೆಗಳ ಉತ್ತರಗಳನ್ನು ಸ್ವೀಕರಿಸಲಾಗಿದೆ.

- ಗಮನ ಸೆಳೆಯುವ 233 ಸೂಚನೆಗಳ ಪೈಕಿ 40 ಸೂಚನೆಗಳನ್ನು ಚರ್ಚಿಸಲಾಗಿದೆ. 46 ಸೂಚನೆಗಳ ಉತ್ತರಗಳನ್ನು ಮಂಡಿಸಲಾಗಿದೆ.

- ಶೂನ್ಯ ವೇಳೆಯಲ್ಲಿ ಒಟ್ಟು 17 ಸೂಚನೆಗಳನ್ನು ಚರ್ಚಿಸಲಾಗಿದೆ.

ಸದನ ನಡೆಸಲು ಸಹಕರಿಸಿದ ಸಭಾ ನಾಯಕರಾದ ಮಾನ್ಯ ಮುಖ್ಯಮಂತ್ರಿಯವರಿಗೆ, ಮಾನ್ಯ ವಿರೋಧ ಪಕ್ಷದ ನಾಯಕರಿಗೆ, ಸಚಿವ ಸಂಪುಟದ ಸದಸ್ಯರಿಗೆ, ಉಪ ಸಭಾಧ್ಯಕ್ಷರಿಗೆ, ಸರ್ಕಾರಿ ಹಾಗೂ ವಿರೋಧ ಪಕ್ಷದ ಮುಖ್ಯ ಸಚೇತಕರಿಗೆ, ಎಲ್ಲಾ ಸದಸ್ಯರುಗಳಿಗೆ, ಮಾಧ್ಯಮ ಪ್ರತಿನಿಧಿಗಳಿಗೆ, ಇಲಾಖಾ ಮುಖ್ಯಸ್ಥರು, ಅಧಿಕಾರಿ–ಸಿಬ್ಬಂದಿಯವರಿಗೆ, ವಿಧಾನಸಭೆ ಸಚಿವಾಲಯದ ಅಧಿಕಾರಿ ಹಾಗೂ ಸಿಬ್ಬಂದಿಯವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ನಾಡಿನ ಜನತೆಯು ಕೊರೋನಾ ಕುರಿತು ಮುಂಜಾಗ್ರತೆ ವಹಿಸುವಂತೆ ಕೋರುತ್ತೇನೆ.

**ಈಗ ರಾಷ್ಟ್ರಗೀತೆಯೊಂದಿಗೆ ಸದನವನ್ನು ಅನಿರ್ದಿಷ್ಟ ಅವಧಿಗೆ ಮುಂದೂಡುತ್ತಿದ್ದೇನೆ.**

*****

## 91. 15ನೇ ವಿಧಾನಸಭೆ ದಿನಾಂಕ:04.03.2021 ರಿಂದ 24.03.2021 ರವರೆಗೆ ನಡೆದ ಒಂಭತ್ತನೇ ಅಧಿವೇಶನ (ಮುಂದುವರೆದ ಉಪವೇಶನದಲ್ಲಿ) ಮಂಡಿಸಲಾದ/ಅಂಗೀಕರಿಸಲಾದ ವಿಧೇಯಕಗಳ ಪಟ್ಟಿ

| ಕ್ರ.ಸಂ. Sl.No | ವಿಧೇಯಕಗಳ ಹೆಸರು Name of the Bill | ವಿಧೇಯಕಗಳು | | | ಷರಾ Remarks |
|---|---|---|---|---|---|
| | | ವಿಧಾನಸಭೆ Legislative Assembly | | ವಿಧಾನ ಪರಿಷತ್ತು Legislative Council | |
| | | ಮಂಡಿಸಿದ ದಿನಾಂಕ Date of Introduction | ಅಂಗೀಕರಿಸಿದ ದಿನಾಂಕ Date of Passing | ಅಂಗೀಕರಿಸಿದ ದಿನಾಂಕ Date of Passing | |
| 1 | 2 | 3 | 4 | 6 | 7 |
| 1 | ಕರ್ನಾಟಕ ಪೌರಸಭೆಗಳ (ತಿದ್ದುಪಡಿ) ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:12)<br>The Karnataka Municipalities (Amendment) Bill, 2021 (L.A. Bill No. 12 of 2021) | **9.3.2021** | **15.03.2021** | **17.03.2021** | |
| 2 | ಕರ್ನಾಟಕ ಸೊಸೈಟಿಗಳ ನೋಂದಣಿ (ತಿದ್ದುಪಡಿ) ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:13)<br>The Karnataka Societies Registration (Amendment) Bill, 2021 (L.A. Bill No. 13 of 2021) | **9.3.2021** | **23.03.2021** | **24.03.2021** | |
| 3 | ಕರ್ನಾಟಕ ಲೇವಾದೇವಿದಾರರ (ತಿದ್ದುಪಡಿ) ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:14)<br>The Karnataka Money Lenders (Amendment) Bill, 2021 (L.A. Bill No. 14 of 2021) | **9.3.2021** | **15.03.2021** | **17.03.2021** | |
| 4 | ಕರ್ನಾಟಕ ಕೃಷ್ಣ ಜಲಾನಯನ ಪ್ರದೇಶಾಭಿವೃದ್ಧಿ ಪ್ರಾಧಿಕಾರ (ನಿರಸನಗೊಳಿಸುವ) ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:15)<br>The Karnataka Krishna Basin Development Authority (Repeal) Bill, 2021 (L.A. Bill No. 15 of 2021) | **16.03.2021** | **18.03.2021** | **22.03.2021** | |
| 5 | ಕರ್ನಾಟಕ ಧನವಿನಿಯೋಗ ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:16)<br>The Karnataka Appropriation Bill, 2021 (L.A. Bill No. 16 of 2021) | **24.03.2021** | **24.03.2021** | **24.03.2021** | |

| ಕ್ರ.ಸಂ. Sl.No | ವಿಧೇಯಕಗಳ ಹೆಸರು Name of the Bill | ವಿಧೇಯಕಗಳು | | | ಷರಾ Remarks |
|---|---|---|---|---|---|
| | | ವಿಧಾನಸಭೆ Legislative Assembly | | ವಿಧಾನ ಪರಿಷತ್ತು Legislative Council | |
| | | ಮಂಡಿಸಿದ ದಿನಾಂಕ **Date of Introduction** | ಅಂಗೀಕರಿಸಿದ ದಿನಾಂಕ **Date of Passing** | ಅಂಗೀಕರಿಸಿದ ದಿನಾಂಕ **Date of Passing** | |
| 6 | ಕರ್ನಾಟಕ ಜಲಸಾರಿಗೆ ಮಂಡಳಿ (ತಿದ್ದುಪಡಿ) ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:17) The Karnataka Maritime Board (Amendment) Bill, 2021 (L.A. Bill No. 17 of 2021) | **18.03.2021** | **23.03.2021** | **24.03.2021** | |
| 7 | ಕರ್ನಾಟಕ ಆರ್ಥಿಕ ಹೊಣೆಗಾರಿಕೆ (ತಿದ್ದುಪಡಿ) ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:18) The Karnataka Fiscal Responsibility (Amendment) Bill, 2021 (L.A. Bill No. 18 of 2021) | **24.03.2021** | **24.03.2021** | **24.03.2021** | |
| 8 | ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ (ತಿದ್ದುಪಡಿ) ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:19) The Karnataka Transparency in Public Procurements (Amendment) Bill, 2021 (L.A. Bill No. 19 of 2021) | **23.03.2021** | **24.03.2021** | **24.03.2021** | |
| 9 | ಕರ್ನಾಟಕ ಧನವಿನಿಯೋಗ (ಸಂಖ್ಯೆ.2) ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:20) The Karnataka Appropriation (No.2)Bill, 2021 (L.A. Bill No. 20 of 2021) | **24.03.2021** | **24.03.2021** | **24.03.2021** | |
| 10 | ಕರ್ನಾಟಕ ಸೌಹಾರ್ದ ಸಹಕಾರಿ (ತಿದ್ದುಪಡಿ) ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:21) The Karnataka Souharda Sahakari (Amendment) Bill, 2021 (L.A. Bill No. 21 of 2021) | **23.03.2021** | | | |
| 11 | ಕರ್ನಾಟಕ ಸಹಕಾರ ಸಂಘಗಳ (ತಿದ್ದುಪಡಿ) ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:22) The Karnataka Co-Operative Societies (Amendment) Bill, 2021 (L.A. Bill No. 22 of 2021) | **23.03.2021** | | | |

## 92. ವಿಧಾನ ಪರಿಷತ್ತಿನ 143ನೇ ಅಧಿವೇಶನದ ಮುಂದುವರೆದ ಉಪವೇಶನದ ಕಾರ್ಯಕಲಾಪಗಳ ಸಂಕ್ಷಿಪ್ತ ವರದಿ

ವಿಧಾನ ಪರಿಷತ್ತಿನ 143ನೇ ಅಧಿವೇಶನದ ಮುಂದುವರೆದ ಉಪವೇಶನದಲ್ಲಿ ನಡೆದಿರುವ ಕಾರ್ಯಕಲಾಪಗಳ ವಿವರವನ್ನು ಸದನಕ್ಕೆ ತಿಳಿಸಲು ಇಚ್ಛಿಸುತ್ತೇನೆ. ಪ್ರಸ್ತುತ ಅಧಿವೇಶನವು ದಿನಾಂಕ:04.03.2021 ರಿಂದ 24.03.2021ರವರೆಗೆ ಒಟ್ಟು 13 ದಿನಗಳು ಅಂದರೆ, 45ಗಂಟೆ 26 ನಿಮಿಷಗಳ ಕಾಲ ನಡೆಸಲಾಗಿರುತ್ತದೆ.

ದಿನಾಂಕ: 04.03.2021ರಂದು ಬೆಳಗ್ಗೆ 11.00 ಗಂಟೆಗೆ ಪ್ರಾರಂಭವಾಗಿ ಕಳೆದ ಅಧಿವೇಶನದಿಂದೀಚೆಗೆ ನಿಧನರಾದ ಗಣ್ಯರುಗಳಿಗೆ ಸದನವು ತನ್ನ ಸಂತಾಪವನ್ನು ವ್ಯಕ್ತಪಡಿಸಿತು.

ಕಳೆದ ಅಧಿವೇಶನದಲ್ಲಿ ವರದಿಯನ್ನು ಒಪ್ಪಿಸಿದ ನಂತರ ರಾಷ್ಟ್ರಪತಿಯವರಿಂದ ಹಾಗೂ ರಾಜ್ಯಪಾಲರಿಂದ ಒಪ್ಪಿಗೆ ಪಡೆದ ವಿಧೇಯಕಗಳ ಪಟ್ಟಿಯನ್ನು ಕಾರ್ಯದರ್ಶಿಯವರು ಮಂಡಿಸಿದರು.

ಒಟ್ಟು 08 ಅರ್ಜಿಗಳನ್ನು ಸದನಕ್ಕೆ ಒಪ್ಪಿಸಲಾಗಿರುತ್ತದೆ. ದಿನಾಂಕ:08.03.2021ರಂದು ಮಾನ್ಯ ಮುಖ್ಯಮಂತ್ರಿಯವರು 2021–2022ನೇ ಸಾಲಿನ ಆಯವ್ಯಯ ಅಂದಾಜುಗಳನ್ನು ಒಪ್ಪಿಸಿದರು.

ಸಭೆಯ ಮುಂದಿಡಲಾಗುವ ಕಾಗದ ಪತ್ರಗಳ 03, 04 ಮತ್ತು 05ನೇ ಪಟ್ಟಿಗಳನ್ನು ಮಂಡಿಸಲಾಯಿತು.

ಭಾರತ ಲೆಕ್ಕನಿಯಂತ್ರಕರು ಮತ್ತು ಮಹಾ ಲೆಕ್ಕಪರಿಶೋಧಕರು ನೀಡಿರುವ 2019ಕ್ಕೆ ಕೊನೆಗೊಂಡ ವರ್ಷದ ಸಾರ್ವಜನಿಕ ವಲಯ ಉದ್ಯಮಗಳ ಮೇಲಿನ ವರದಿಯನ್ನು (ಸಂಖ್ಯೆ:5) ಸದನದ ಮುಂದೆ ಮಂಡಿಸಲಾಯಿತು.

ಹಕ್ಕುಬಾಧ್ಯತಾ ಸಮಿತಿಯ 97ನೇ ವರದಿಯನ್ನು, ಅರ್ಜಿಗಳ ಸಮಿತಿಯ 28ನೇ ವರದಿಯನ್ನು, ಅಧೀನ ಶಾಸನ ರಚನಾ ಸಮಿತಿಯ 50ನೇ ವರದಿಯನ್ನು ಹಾಗೂ ಸ್ಥಳೀಯ ಸಂಸ್ಥೆಗಳ ಮತ್ತು ಪಂಚಾಯತ್ ರಾಜ್ ಸಂಸ್ಥೆಗಳ ಸಮಿತಿಯ 33ನೇ ವರದಿಯನ್ನು ಒಪ್ಪಿಸಲಾಯಿತು.

ಪ್ರಸ್ತುತ ಅಧಿವೇಶನದಲ್ಲಿ 1951 ಪ್ರಶ್ನೆಗಳನ್ನು ಸ್ವೀಕರಿಸಿದ್ದು, ಅದರಲ್ಲಿ 195 ಪ್ರಶ್ನೆಗಳನ್ನು ಚುಕ್ಕೆ ಗುರುತಿನ ಪ್ರಶ್ನೆಗಳನ್ನಾಗಿ ಅಂಗೀಕರಿಸಿದ್ದು, ಅವುಗಳ ಪೈಕಿ 178 ಪ್ರಶ್ನೆಗಳಿಗೆ ಸದನದಲ್ಲಿ ಉತ್ತರಿಸಲಾಯಿತು. ಲಿಖಿತ ಮೂಲಕ ಉತ್ತರಿಸುವ ಒಟ್ಟು 1756 ಪ್ರಶ್ನೆಗಳ ಪೈಕಿ 972 ಪ್ರಶ್ನೆಗಳಿಗೆ ಸದನದಲ್ಲಿ ಉತ್ತರವನ್ನು ಮಂಡಿಸಲಾಯಿತು.

ನಿಯಮ 72ರಡಿಯಲ್ಲಿ 138 ಸೂಚನೆಗಳನ್ನು ಸ್ವೀಕರಿಸಿದ್ದು, ಅವುಗಳ ಪೈಕಿ 09 ಸೂಚನೆಗಳಿಗೆ ಉತ್ತರಿಸಲಾಯಿತು ಹಾಗೂ 28 ಸೂಚನೆಗಳಿಗೆ ಉತ್ತರಗಳನ್ನು ಮಂಡಿಸಲಾಯಿತು.

ನಿಯಮ 330ರಡಿಯಲ್ಲಿ 62 ಸೂಚನೆಗಳನ್ನು ಸ್ವೀಕರಿಸಿದ್ದು, ಅವುಗಳ ಪೈಕಿ 11 ಪ್ರಸ್ತಾವಗಳಿಗೆ ಉತ್ತರಿಸಲಾಯಿತು ಹಾಗೂ 19 ಪ್ರಸ್ತಾವಗಳಿಗೆ ಉತ್ತರಗಳನ್ನು ಮಂಡಿಸಲಾಯಿತು.

ಶೂನ್ಯ ವೇಳೆಯ ಒಟ್ಟು 63 ಪ್ರಸ್ತಾವಗಳ ಪೈಕಿ 01 ಪ್ರಸ್ತಾವಕ್ಕೆ ಸದನದಲ್ಲಿ ಉತ್ತರಿಸಲಾಗಿದ್ದು, 27 ಪ್ರಸ್ತಾವಗಳಿಗೆ ಉತ್ತರಗಳನ್ನು ಸದನದಲ್ಲಿ ಮಂಡಿಸಲಾಯಿತು.

ನಿಯಮ 59ರ ಅಡಿಯಲ್ಲಿ 05 ಸೂಚನೆಗಳನ್ನು ಸ್ವೀಕರಿಸಲಾಗಿದ್ದು, 2 ಸೂಚನೆಗಳನ್ನು ನಿಯಮ 68ಕ್ಕೆ ಪರಿವರ್ತಿಸಿ ಚರ್ಚಿಸಿ ಉತ್ತರಿಸಲಾಗಿರುತ್ತದೆ.

ನಿಯಮ 68ರ ಅಡಿಯಲ್ಲಿ 06 ಸೂಚನೆಗಳನ್ನು ಸ್ವೀಕರಿಸಲಾಗಿದ್ದು, ಒಂದು ಸೂಚನೆಯನ್ನು ಚರ್ಚಿಸಿ ಉತ್ತರಿಸಲಾಯಿತು ಹಾಗೂ 2 ಸೂಚನೆಗಳನ್ನು ತಡೆಹಿಡಿಯಲಾಯಿತು

ವಿಧಾನ ಸಭೆಯಿಂದ ಅಂಗೀಕೃತ ರೂಪದಲ್ಲಿರುವ 09 ವಿಧೇಯಕಗಳಿಗೆ ವಿಧಾನ ಪರಿಷತ್ತು ತನ್ನ ಸಹಮತಿಯನ್ನು ನೀಡಿರುತ್ತದೆ.

ಶ್ರೀ ಎನ್. ರವಿಕುಮಾರ್ ಅವರು ನಿಯಮ 72ರ ಅಡಿಯಲ್ಲಿ ಪ್ರಸ್ತಾಪಿಸಿದ ಸೂಚನೆಯನ್ನು ಪರಿಶೀಲಿಸಿ ವರದಿ ಸಲ್ಲಿಸಲು ಜಂಟಿ ಸದನ ಸಮಿತಿಯನ್ನು ರಚಿಸಲು ಸದನದ ಒಪ್ಪಿಗೆ ಪಡೆಯಲಾಯಿತು.

ಮೂರು ವಿಶೇಷ ಸದನ ಸಮಿತಿಗಳ ಕಾಲಾವಧಿಯನ್ನು ವಿಸ್ತರಿಸುವ ಪ್ರಸ್ತಾವವನ್ನು ಮಂಡಿಸಿ ಅಂಗೀಕರಿಸಲಾಯಿತು.

ದಿ ಎಂಪ್ಲಾಯ್‌ಮೆಂಟ್‌ಆಫ್ ಮ್ಯಾನ್ಯುಯಲ್ ಸ್ಕ್ಯಾವೆಂಜರ್ಸ್ ಅಂಡ್ ಕನ್ಸ್ಟ್ರಕ್ಷನ್ ಆಫ್ ಡ್ರೈ ಲ್ಯಾಟ್ರೈನ್ಸ್ (ಪ್ರೋಹಿಬಿಷನ್) ಆಕ್ಟ್, 1993 (1993ರ ಕೇಂದ್ರ ಅಧಿನಿಯಮ 46)ಅನ್ನು ನಿರಸನಗೊಳಿಸುವ ಅಧಿಕೃತ ನಿರ್ಣಯವನ್ನು ಮಂಡಿಸಿ ಅಂಗೀಕರಿಸಲಾಗಿರುತ್ತದೆ.

**ಮಾನ್ಯ ಸಭಾನಾಯಕರು ಹಾಗೂ ವಿರೋಧ ಪಕ್ಷದ ನಾಯಕರು ಮಾತನಾಡಿದ ನಂತರ:–**

ಮಾನ್ಯ ಮುಖ್ಯಮಂತ್ರಿಗಳಿಗೆ, ಮಾನ್ಯ ಉಪ ಮುಖ್ಯಮಂತ್ರಿಗಳಿಗೆ ಸಭಾನಾಯಕರಿಗೆ, ವಿರೋಧ ಪಕ್ಷದ ನಾಯಕರಿಗೆ, ಎಲ್ಲಾ ಮಂತ್ರಿ ವರ್ಗದವರಿಗೆ, ಸರ್ಕಾರದ ಮುಖ್ಯ ಸಚೇತಕರಿಗೆ, ವಿರೋಧ ಪಕ್ಷದ ಮುಖ್ಯ ಸಚೇತಕರಿಗೆ, ಪತ್ರಿಕಾ ಹಾಗೂ ಮಾಧ್ಯಮ ವರದಿಗಾರರಿಗೆ, ವಿಧಾನ ಪರಿಷತ್ತಿನ ಸಚಿವಾಲಯದ ಅಧಿಕಾರಿ/ನೌಕರವರ್ಗದವರಿಗೆ ಮತ್ತು ಸರ್ಕಾರದ ಎಲ್ಲಾ ಅಧಿಕಾರಿ/ನೌಕರ ವೃಂದದವರಿಗೆ ಸದನದ ಕಾರ್ಯಕಲಾಪಗಳನ್ನು ಸುಗಮವಾಗಿ ನಡೆಸಲು ಸಹಕರಿಸಿದ್ದಕ್ಕೆ ತುಂಬು ಹೃದಯದ ಧನ್ಯವಾದಗಳನ್ನು ಸಲ್ಲಿಸುತ್ತಾ, **ಸದನವನ್ನು ಅನಿರ್ದಿಷ್ಟಕಾಲದವರೆಗೆ ಮುಂದೂಡುತ್ತಿದ್ದೇನೆ.**

## 93. ವಿಧಾನ ಪರಿಷತ್ತು 143ನೇ ಅಧಿವೇಶನ ಮುಂದುವರೆದ ಉಪವೇಶನ ವಿಧೇಯಕಗಳ ವಿವರ (ದಿನಾಂಕ: 04.03.2021 ರಿಂದ 24.03.2021 ರವರೆಗೆ)

| ಕ್ರ ಸಂ | ವಿಧೇಯಕದ ಹೆಸರು | ಸಂಖ್ಯೆ | ವಿ ಸ ಅಂಗೀಕರಿಸಿರುವ ದಿನಾಂಕ | ವಿ ಪ ಅಂಗೀಕರಿಸಿರುವ ದಿನಾಂಕ |
|---|---|---|---|---|
| 1 | **ಕರ್ನಾಟಕ ಪೌರಸಭೆಗಳ (ತಿದ್ದುಪಡಿ) ವಿಧೇಯಕ, 2021**<br>The Karnataka Municipalities (Amendment)Bill, 2021 | 12 | 15.03.2021 | 17.03.2021 |
| 2. | **ಕರ್ನಾಟಕ ಸೊಸೈಟಿಗಳ ನೋಂದಣಿಗಳ (ತಿದ್ದುಪಡಿ) ವಿಧೇಯಕ, 2021**<br>The Karnatak Societies Registration (Amendment) Bill, 2021 | 13 | 24.03.2021 | 24.03.2021 |
| 3. | **ಕರ್ನಾಟಕ ಲೇವಾದೇವಿದಾರರ (ತಿದ್ದುಪಡಿ) ವಿಧೇಯಕ,2021**<br>The Karnatka Money Lenders (Amendment) Bill, 2021 | 14 | 15.03.2021 | 17.03.2021 |
| 4. | **ಕರ್ನಾಟಕ ಕೃಷ್ಣ ಜಲಾನಯನ ಪ್ರದೇಶಾಭಿವೃದ್ಧಿ ಪ್ರಾಧಿಕಾರ (ನಿರಸನಗೊಳಿಸುವ) ವಿಧೇಯಕ, 2021**<br>The Karnataka Krishna Basin Development Authority (Repeal) Bill, 2021 | 15 | 18.03.2021 | 22.03.2021 |

| ಕ್ರ ಸಂ | ವಿಧೇಯಕದ ಹೆಸರು | ಸಂಖ್ಯೆ | ವಿ ಸ ಅಂಗೀಕರಿಸಿರುವ ದಿನಾಂಕ | ವಿ ಪ ಅಂಗೀಕರಿಸಿರುವ ದಿನಾಂಕ |
|---|---|---|---|---|
| 5. | **ಕರ್ನಾಟಕ ಧನವಿನಿಯೋಗ ವಿಧೇಯಕ, 2021**<br>The Karnataka Appropriation Bill, 2021 | 16 | 24.03.2021 | 24.03.2021 |
| 6 | **ಕರ್ನಾಟಕ ಜಲಸಾರಿಗೆ ಮಂಡಳಿ (ತಿದ್ದುಪಡಿ) ವಿಧೇಯಕ, 2021**<br>The Karnataka Marinetime Board (Amendment) Bill, 2021 | 17 | 24.03.2021 | 24.03.2021 |
| 7 | **ಕರ್ನಾಟಕ ಆರ್ಥಿಕ ಹೊಣೆಗಾರಿಕೆ (ತಿದ್ದುಪಡಿ) ವಿಧೇಯಕ**<br>**2021**<br>The Karnataka Fiscal Responsibility (Amendment) Bill, 2021 | 18 | 24.03.2021 | 24.03.2021 |
| 8 | **ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ**<br>**(ತಿದ್ದುಪಡಿ) ವಿಧೇಯಕ, 2021**<br>The Karnataka Transparency in Public Procurements (Amendment) Bill, 2021 | 19 | 24.03.2021 | 24.03.2021 |
| 9 | **ಕರ್ನಾಟಕ ಧನವಿನಿಯೋಗ (ಸಂಖ್ಯೆ–2) ವಿಧೇಯಕ, 2021**<br>The Karnataka Appropriation (No-2)Bill, 2021 | 20 | 24.03.2021 | 24.03.2021 |

**ಮಾಜಿ ಶಾಸಕರಾದ ಶ್ರೀ ಎನ್ ರಾಜಣ್ಣರವರು 2021ರ ನೂತನ ವರ್ಷ ನಿಮಿತ್ತ ಸನ್ಮಾನ್ಯ ಸಭಾಧ್ಯಕ್ಷರಿಗೆ ಶುಭ ಕೋರಿದ ಸಂದರ್ಭ:**







ವಿಧಾನ ಸಭೆ ಕಾರ್ಯದರ್ಶಿಯವರಾದ ಶ್ರೀಮತಿ ಎಂ.ಕೆ ವಿಶಾಲಾಕ್ಷಿರವರು ಹಾಗೂ ಇತರೆ ಅಧಿಕಾರಿ ವರ್ಗದವರು 2021ರ ನೂತನ ವರ್ಷದ ನಿಮಿತ್ತ ಸನ್ಮಾನ್ಯ ಸಭಾಧ್ಯಕ್ಷರನ್ನು ಶುಭ ಕೋರಿದ ಸಂದರ್ಭ.

**ದಿನಾಂಕ: 03.01.2021 ರಂದು ಬಳ್ಳಾರಿ ಜಿಲ್ಲೆ ಸಿರುಗುಪ್ಪ ತಾಲ್ಲೂಕಿನಲ್ಲಿ ನಡೆದ ಸಾಕ್ಷ್ಯಚಿತ್ರ ಬಿಡುಗಡೆ ಸಮಾರಂಭದಲ್ಲಿ ಸನ್ಮಾನ್ಯ ಸಭಾಧ್ಯಕ್ಷರಾದ ಶ್ರೀ ವಿಶ್ವೇಶ್ವರ ಹೆಗಡೆ, ಕಾಗೇರಿರವರು ಭಾಗವಹಿಸಿ ಸಾಕ್ಷ್ಯಚಿತ್ರವನ್ನು ಬಿಡುಗಡೆಗೊಳಿಸಿದ ಸಂದರ್ಭ:**






**ದಿನಾಂಕ: 04.01.2021ರಂದು ವಿಧಾನ ಮಂಡಲದ ಜಂಟಿ ಅಧಿವೇಶನದ ಪೂರ್ವ ಸಿದ್ಧತೆಯ ಕುರಿತು ಸನ್ಮಾನ್ಯ ಸಭಾಧ್ಯಕ್ಷರು ವಿಧಾನಸೌಧದ ಮೊದಲನೇ ಮಹಡಿಯಲ್ಲಿರುವ ಕೊಠಡಿ ಸಂಖ್ಯೆ; 106ರಲ್ಲಿ ಮಾಧ್ಯಮದವರೊಂದಿಗೆ ಸಭೆ ನಡೆಸಿದ ಸಂದರ್ಭ.**



**ದಿನಾಂಕ:05.01.2021ರಂದು ಕರ್ನಾಟಕ ಸರ್ಕಾರದ ಮುಖ್ಯ ಕಾರ್ಯದರ್ಶಿಯವರಾದ ಶ್ರೀ ಪಿ. ರವಿಕುಮಾರ್‌ರವರು ಮುಖ್ಯ ಕಾರ್ಯದರ್ಶಿಯಾಗಿ ಅಧಿಕಾರವಹಿಸಿಕೊಂಡು ಸನ್ಮಾನ್ಯ ಸಭಾಧ್ಯಕ್ಷರನ್ನು ಬೇಟಿ ಮಾಡಿದ ಸಂದರ್ಭ.**



**ದಿನಾಂಕ: 05.01.2021 ರಂದು ಅಖಿಲ ಕರ್ನಾಟಕ ಬ್ರಾಹ್ಮಣರ ಸಮಾಜದ ಅಧ್ಯಕ್ಷರಾದ ಶ್ರೀ ಹೆಚ್.ಎಸ್. ಸಚ್ಚಿದಾನಂದ ಮೂರ್ತಿ ಹಾಗೂ ಸದಸ್ಯರೊಂದಿಗೆ ಸನ್ಮಾನ್ಯ ಸಭಾಧ್ಯಕ್ಷರೊಂದಿಗೆ ಚರ್ಚಿಸುತ್ತಿರುವ ಸಂದರ್ಭ**



ದಿನಾಂಕ: 05.01.2021ರಂದು ಸನ್ಮಾನ್ಯ ಸಭಾಧ್ಯಕ್ಷರು ಭಾರತೀಯ ಬಾಹ್ಯಾಕಾಶ ಸಂಶೋಧನಾ ಸಂಸ್ಥೆಗೆ (ISRO) ಭೇಟಿ ನೀಡಿ ಸಂಸ್ಥೆಯ ಮುಖ್ಯಸ್ಥರೊಂದಿಗೆ ಚರ್ಚಿಸಿದ ಸಂದರ್ಭ.






**ದಿನಾಂಕ: 06.01.2021 ರಂದು ವಿಧಾನಸೌಧದ ಬ್ಯಾಂಕ್ವೆಟ್ ಹಾಲ್‌ನಲ್ಲಿ ಕರ್ನಾಟಕ ರಾಜ್ಯ ಬ್ರಾಹ್ಮಣರ ಅಭಿವೃದ್ಧಿ ನಿಗಮದವತಿಯಿಂದ ಆಯೋಜಿಸಿದ ಪ್ರತಿಭೋತ್ಸವ ಕಾರ್ಯಕ್ರಮದಲ್ಲಿ ಸನ್ಮಾನ್ಯ ಸಭಾಧ್ಯಕ್ಷರು ಭಾಗವಹಿಸಿದ ಸಂದರ್ಭ:**




.



**ದಿನಾಂಕ: 19.01.2021ರಂದು ಚಲನಚಿತ್ರ ನಿರ್ಮಾಪಕರು/ನಿರ್ದೇಶಕರಾದ ಶ್ರೀ ರಾಜೇಂದ್ರ ಸಿಂಗ್ ಬಾಬು ರವರು ಸನ್ಮಾನ್ಯ ಸಭಾಧ್ಯಕ್ಷರನ್ನು ಭೇಟಿ ಮಾಡಿದ ಸಂದರ್ಭ**



**ದಿನಾಂಕ: 21.01.2021ರಂದು ಸನ್ಮಾನ್ಯ ಸಭಾಧ್ಯಕ್ಷರು ನವದೆಹಲಿಯಲ್ಲಿ ಸನ್ಮಾನ್ಯ ಲೋಕಸಭಾ ಅಧ್ಯಕ್ಷರಾದ ಶ್ರೀ ಓಂ ಬಿರ್ಲಾರವರನ್ನು ಭೇಟಿ ಮಾಡಿದ ಸಂದರ್ಭ:**



**ದಿನಾಂಕ: 21.01.2021 ರಂದು ಉಡುಪಿಯಲ್ಲಿ ನಡೆದ ಪರ್ಯಾಯ ಶ್ರೀ ಅದಮಾರು ಮಠದ ಕಾರ್ಯಕ್ರಮದಲ್ಲಿ ಸನ್ಮಾನ್ಯ ಸಭಾಧ್ಯಕ್ಷರು ಭಾಗವಹಿಸಿ ಮಾತನಾಡಿದ ಸಂದರ್ಭ:**





**ದಿನಾಂಕ: 28.01.2021ರಂದು ಪ್ರಾರಂಭಗೊಳ್ಳಲಿರುವ ಅಧಿವೇಶನದ ಪೂರ್ವ ಸಿದ್ದತೆಯ ಪ್ರಯುಕ್ತ ಅಧಿಕಾರಿಗಳೊಂದಿಗೆ ಸನ್ಮಾನ್ಯ ಸಭಾಧ್ಯಕ್ಷರು ಚರ್ಚಿಸುತ್ತಿರುವ ಸಂದರ್ಭ:**





**ದಿನಾಂಕ: 26.01.2021 ರಂದು ಗಣರಾಜ್ಯೋತ್ಸವದ ನಿಮಿತ್ತ ರಾಜಭವನದಲ್ಲಿ ಸನ್ಮಾನ್ಯ ರಾಜ್ಯಪಾಲರು ಏರ್ಪಡಿಸಿದ ಚಹಾಕೂಟದಲ್ಲಿ ಸನ್ಮಾನ್ಯ ಸಭಾಧ್ಯಕ್ಷರು ಭಾಗವಹಿಸಿದ ಸಂದರ್ಭ:**





**ದಿನಾಂಕ: 28.01.2021ರಂದು ಸನ್ಮಾನ್ಯ ರಾಜ್ಯಪಾಲರು ಜಂಟಿ ಅಧಿವೇಶನಕ್ಕೆ ಆಗಮಿಸುವ ಸಂದರ್ಭದಲ್ಲಿ ಸನ್ಮಾನ್ಯ ಸಭಾಧ್ಯಕ್ಷರು ಸನ್ಮಾನ್ಯ ರಾಜ್ಯಪಾಲರನ್ನು ಸ್ವಾಗತಿಸುತ್ತಿರುವ ಸಂದರ್ಭ:**



**ದಿನಾಂಕ: 28.01.2021 ರಂದು ಸನ್ಮಾನ್ಯ ಮುಖ್ಯಮಂತ್ರಿಯವರು, ಸನ್ಮಾನ್ಯ ಸಭಾಪತಿಯವರು ಹಾಗೂ ಸನ್ಮಾನ್ಯ ಸಭಾಧ್ಯಕ್ಷರು ಸನ್ಮಾನ್ಯ ರಾಜ್ಯಪಾಲರನ್ನು ಜಂಟಿ ಅಧಿವೇಶನಕ್ಕೆ ಕರೆತರುವ ಸಂದರ್ಭ:**



ದಿನಾಂಕ: 29.01.2021 ರಂದು ವಿಧಾನ ಸಭೆಯ ಕಾರ್ಯಕಲಾಪಗಳ ಸಲಹಾ ಸಮಿತಿಯ ಸಭೆ



ದಿನಾಂಕ: 01.02.2021 ರಂದು ವಿಧಾನ ಸಭೆಯ ಕಾರ್ಯಕಲಾಪಗಳ ಸಲಹಾ ಸಮಿತಿಯ ಸಭೆ



**ದಿನಾಂಕ: 02.02.2021ರಂದು ನ್ಯಾಷನಲ್ ಲಾ ಸ್ಕೂಲ್ ಆಫ್ ಇಂಡಿಯಾ ಯೂನಿವರ್ಸಿಟಿಯ ವಿದ್ಯಾರ್ಥಿಗಳು ಅಧಿವೇಶನವನ್ನು ವೀಕ್ಷಿಸಿ, ಸನ್ಮಾನ್ಯ ಸಭಾಧ್ಯಕ್ಷರನ್ನು ಹಾಗೂ ಸನ್ಮಾನ್ಯ ಗೃಹ ಸಚಿವರನ್ನು ಭೇಟಿ ಮಾಡಿದ ಸಂದರ್ಭ:**



**ದಿನಾಂಕ: 02.02.2021ರಂದು ಶಿರಸಿಯ ಗ್ರಾಮಸ್ಥರು ಸನ್ಮಾನ್ಯ ಸಭಾಧ್ಯಕ್ಷರು ಹಾಗೂ ಸನ್ಮಾನ್ಯ ಗೃಹ ಸಚಿವರನ್ನು ಭೇಟಿ ಮಾಡಿದ ಸಂದರ್ಭ**



**ದಿನಾಂಕ: 03.02.2021ರಂದು ಸನ್ಮಾನ್ಯ ಸಭಾಧ್ಯಕ್ಷರು ನಗರ ಪಾಲಿಕೆಯ ಕುರಿತು ಮಾನ್ಯ ಪೌರಡಾಳಿತ ಸಚಿವರೊಂದಿಗೆ ಸಭೆ ನಡೆಸಿದ ಸಂದರ್ಭ**



**ದಿನಾಂಕ: 03.02.2021ರಂದು, ಸನ್ಮಾನ್ಯ ಸಭಾಧ್ಯಕ್ಷರು, ದಿನಾಂಕ: 04.03.2021ರಿಂದ ಪ್ರಾರಂಭವಾಗಲಿರುವ ಒಂಭತ್ತನೇ ಅಧಿವೇಶನದ ಮುಂದುವರೆದ ಉಪವೇಶನಕ್ಕೆ ಸಂಬಂಧಿಸಿದಂತೆ ಪೂರ್ವ ಸಿದ್ಧತೆಗಳ ಕುರಿತು ಪರಿಶೀಲಿಸುತ್ತಿರುವ ಸಂದರ್ಭ:**



**ದಿನಾಂಕ: 03.03.2021ರಂದು ಕರ್ನಾಟಕ ವಿಧಾನ ಮಂಡಲ ಹಾಗೂ "ಪಿ.ಆರ್.ಎಸ್ ಶಾಸನ ಸಂಶೋಧನಾ ಸಂಸ್ಥೆ" ನವದೆಹಲಿ ಇವರ ಸಹಯೋಗದೊಂದಿಗೆ ಮಾನ್ಯ ಶಾಸಕರುಗಳಿಗೆ ಆಯವ್ಯಯ ಮತ್ತು ರಾಜ್ಯ ಹಣಕಾಸು ಕುರಿತು ವಿಕಾಸಸೌಧದಲ್ಲಿ ಕಾರ್ಯಾಗಾರದ ಕಾರ್ಯಕ್ರಮವನ್ನು ಸನ್ಮಾನ್ಯ ಸಭಾಪತಿಯವರ ಉಪಸ್ಥಿತಿಯಲ್ಲಿ, ಸನ್ಮಾನ್ಯ ಸಭಾಧ್ಯಕ್ಷರು ಉದ್ಘಾಟಿಸಿದ ಸಂದರ್ಭ:**



**ಸದರಿ ಕಾರ್ಯಗಾರವನ್ನು ಉದ್ದೇಶಿಸಿ ಸನ್ಮಾನ್ಯ ಸಭಾಧ್ಯಕ್ಷರು ಮಾತನಾಡುತ್ತಿರುವ ಸಂದರ್ಭ:**



**ದಿನಾಂಕ: 05.02.2021ರಂದು ಸಂಸದೀಯ ಮೌಲ್ಯಗಳ ಕುಸಿತವನ್ನು ತಡೆಗಟ್ಟುವ ನಿಟ್ಟಿನಲ್ಲಿ ಒಂದು ಆತ್ಮಾವಲೋಕನ ಕಾರ್ಯಕ್ರಮದ ಪೂರ್ವಸಿದ್ದತೆಯ ಕುರಿತು ಸನ್ಮಾನ್ಯ ಸಭಾಧ್ಯಕ್ಷರು ವಿಧಾನಸಭೆ ಸಚಿವಾಲಯದ ಅಧಿಕಾರಿಗಳೊಂದಿಗೆ ಸಭೆಯನ್ನು ನಡೆಸಿದ ಸಂದರ್ಭ:**



**ಕರ್ನಾಟಕ ವಿಧಾನ ಪರಿಷತ್ತಿನ ನೂತನ ಸಭಾಪತಿಗಳಾಗಿ ಆಯ್ಕೆಯಾದ ಮಾನ್ಯ ಶ್ರೀ ಬಸವರಾಜ ಹೊರಟ್ಟಿ, ರವರು ದಿನಾಂಕ 09–03–2021ರಂದು ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಬಿ.ಎಸ್ ಯಡಿಯೂರಪ್ಪ ನವರನ್ನು ಅಭಿನಂದಿಸಿದರು. ಗೃಹ ಮತ್ತು ಕಾನೂನು ಸಂಸದೀಯ ವ್ಯವಹಾರಗಳ ಸಚಿವ ಶ್ರೀ ಬಸವರಾಜ ಬೊಮ್ಮಾಯಿ ಹಾಗೂ ವಿಧಾನ ಪರಿಷತ್ತಿನ ಸರ್ಕಾರಿ ಮುಖ್ಯ ಸಚೇತಕರಾದ ಮಹಾಂತೇಶ್ ಕವಟಗಿಮಠ ರವರು ಉಪಸ್ಥಿತರಿದ್ದರು.**



ನೂತನ ಸಭಾಪತಿಗಳಾಗಿ ಆಯ್ಕೆಯಾದ ಶ್ರೀ ಬಸವರಾಜ ಹೊರಟ್ಟಿ, ಅವರನ್ನು ಯುವ ಸಬಲೀಕರಣ ಹಾಗೂ ಕ್ರೀಡಾ ಸಚಿವರಾದ ಶ್ರೀ ಕೆ.ಸಿ ನಾರಾಯಣ ಗೌಡ ರವರು ದಿನಾಂಕ 09–03–2021ರಂದು ಅಭಿನಂದಿಸಿದರು.



ನೂತನ ಸಭಾಪತಿಗಳಾಗಿ ಆಯ್ಕೆಯಾದ ಶ್ರೀ ಬಸವರಾಜ ಹೊರಟ್ಟಿ, ಅವರನ್ನು ದಿನಾಂಕ 09–03–2021ರಂದು ಪ್ರಾಥಮಿಕ ಪ್ರೌಢಶಿಕ್ಷಣ ಸಚಿವರಾದ ಶ್ರೀ ಎಸ್.ಸುರೇಶ್ ಕುಮಾರ್ ರವರು ಅಭಿನಂದಿಸಿದರು.



**ನೂತನ ಸಭಾಪತಿಗಳಾಗಿ ಆಯ್ಕೆಯಾದ ಶ್ರೀ ಬಸವರಾಜ ಹೊರಟ್ಟಿ, ಅವರನ್ನು ದಿನಾಂಕ 09-03-2021ರಂದು ಶ್ರೀ ಹೆಚ್.ಡಿ. ಕುಮಾರಸ್ವಾಮಿ ರವರು ಅಭಿನಂದಿಸಿದರು.**



**ಕರ್ನಾಟಕ ವಿಧಾನ ಪರಿಷತ್ತಿಗೆ ನೂತನ ಸಭಾಪತಿಗಳಾಗಿ ಆಯ್ಕೆಯಾದ ಶ್ರೀ ಬಸವರಾಜ ಹೊರಟ್ಟಿಯವರು ದಿನಾಂಕ 10-02-2021ರಂದು ಮಾನ್ಯ ಮಾಜಿ ಪ್ರಧಾನಿಗಳಾದ ಶ್ರೀ ಹೆಚ್.ಡಿ ದೇವೇಗೌಡ ಅವರನ್ನು ಭೇಟಿಯಾಗಿ ಅಭಿನಂದನೆಗಳನ್ನು ಸಲ್ಲಿಸಿ, ಆಶೀರ್ವಾದ ಪಡೆದರು. ಈ ಸಂದರ್ಭದಲ್ಲಿ ಮಾಜಿ ಶಾಸಕರಾದ ಶ್ರೀ ಎನ್.ಹೆಚ್ ಕೋನರೆಡ್ಡಿ ರವರು ಉಪಸ್ಥಿತರಿದ್ದರು.**



**ನೂತನ ಸಭಾಪತಿಗಳಾಗಿ ಆಯ್ಕೆಯಾದ ಶ್ರೀ ಬಸವರಾಜ ಹೊರಟ್ಟಿ ಅವರನ್ನು ದಿನಾಂಕ 10-02-2021ರಂದು ಆಹಾರ, ನಾಗರೀಕ ಸರಬರಾಜು ಸಚಿವರಾದ ಶ್ರೀ ಉಮೇಶ ಕತ್ತಿ, ರವರು ಅಭಿನಂದಿಸಿದರು. ಉಪಸಭಾಪತಿಗಳಾದ ಎಂ.ಕೆ ಪ್ರಾಣೇಶ್ ರವರು ಹಾಗೂ ಗಣಿ ಮತ್ತು ಭೂ ವಿಜ್ಞಾನ ಸಚಿವರಾದ ಶ್ರೀ ಆರ್. ಮುರುಗೇಶ್ ನಿರಾಣಿ ರವರು ಉಪಸ್ಥಿತರಿದ್ದರು.**



**ನೂತನ ಸಭಾಪತಿಗಳಾಗಿ ಆಯ್ಕೆಯಾದ ಶ್ರೀ ಬಸವರಾಜ ಹೊರಟ್ಟಿ ಅವರನ್ನು ಗಣಿ ಮತ್ತು ಭೂ ವಿಜ್ಞಾನ ಸಚಿವರಾದ ಶ್ರೀ ಆರ್. ಮುರುಗೇಶ್ ನಿರಾಣಿರವರು ಹಾಗೂ ಮಾಜಿ ಶಾಸಕರಾದ ಶ್ರೀ ಹೆಚ್.ಎಂ. ವಿಶ್ವನಾಥ್ ಅವರು ಅಭಿನಂದಿಸಿದರು.**



ನೂತನ ಸಭಾಪತಿಗಳಾಗಿ ಆಯ್ಕೆಯಾದ ಶ್ರೀ ಬಸವರಾಜ ಹೊರಟ್ಟಿ ಅವರನ್ನು ದಿನಾಂಕ 10–02–2021ರಂದು ಮಾಜಿ ಸಚಿವರಾದ ಶ್ರೀಮತಿ ಉಮಾಶ್ರೀ ರವರು ಹಾಗೂ ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್ ಮತ್ತು ಇತರರು ಅಭಿನಂದಿಸಿದರು.



ಕರ್ನಾಟಕ ವಿಧಾನ ಪರಿಷತ್ತಿಗೆ ನೂತನ ಸಭಾಪತಿಗಳಾಗಿ ಆಯ್ಕೆಯಾದ ಶ್ರೀ ಬಸವರಾಜ ಹೊರಟ್ಟಿ ಯವರನ್ನು ದಿನಾಂಕ 10–02–2021ರಂದು ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದ ಸಿಬ್ಬಂದಿಗಳು ಅಭಿನಂದಿಸಿದ ಸಂದರ್ಭ.



ಕರ್ನಾಟಕ ವಿಧಾನ ಪರಿಷತ್ತಿನ ನೂತನ ಸಭಾಪತಿಗಳಾಗಿ ಆಯ್ಕೆಯಾದ ಶ್ರೀ ಬಸವರಾಜ ಹೊರಟ್ಟಿಯವರನ್ನು ದಿನಾಂಕ 11–02–2021ರಂದು ಕರ್ನಾಟಕ ವಕೀಲರ ಪರಿಷತ್ ವತಿಯಿಂದ ಅಭಿನಂದಿಸಲಾಯಿತು. ಈ ಸಂದರ್ಭದಲ್ಲಿ ವಕೀಲರಾದ ಶ್ರೀ ಎ.ಪಿ ರಂಗನಾಥ್ ಮತ್ತು ಅವರ ಸಹೋದ್ಯೋಗಿ ವೃಂದದವರು ಭಾಗಿಯಾಗಿದ್ದರು.



ನೂತನಸಭಾಪತಿಗಳಾಗಿ ಆಯ್ಕೆಯಾದ ಶ್ರೀ ಬಸವರಾಜ ಹೊರಟ್ಟಿ, ಅವರು ದಿನಾಂಕ 12–02–2021ರಂದು ಸಿದ್ದಗಂಗಾ ಮಠಾಧ್ಯಕ್ಷರಾದ ಶ್ರೀ ಸಿದ್ದಲಿಂಗ ಮಹಾಸ್ವಾಮಿಗಳನ್ನು ಭೇಟಿಮಾಡಿ ಆಶೀರ್ವಾದ ಪಡೆದರು.



**ನೂತನ ಸಭಾಪತಿಗಳಾಗಿ ಆಯ್ಕೆಯಾದ ಶ್ರೀ ಬಸವರಾಜ ಹೊರಟ್ಟಿ ಅವರು ದಿನಾಂಕ 13–2–2021ರಂದು ಶ್ರೀ ಜಗದ್ಗುರು ಮರುಘರಾಜೇಂದ್ರ ಬೃಹನ್ಮಠ ಚಿತ್ರದುರ್ಗದ ಶ್ರೀ ಮರುಘಾರಾಜೇಂದ್ರ ಮಹಾಸ್ವಾಮಿಗಳನ್ನು ಭೇಟಿ ಮಾಡಿ ಆಶೀರ್ವಾದ ಪಡೆದು ಅಭಿನಂದನೆ ಸ್ವೀಕರಿಸಿದರು.**




**ಸನ್ಮಾನ್ಯ ಸಭಾಧ್ಯಕ್ಷರು ಅಖಿಲ ಭಾರತೀಯ ವಿದ್ಯಾರ್ಥಿ ಪರಿಷತ್, ಬೆಂಗಳೂರು ಪ್ರಾಂತ ಸಮ್ಮೇಳನ ಕಾರ್ಯಕ್ರಮವನ್ನು ದಿನಾಂಕ 13.02.2021 ರಂದು ಉದ್ಘಾಟಿಸಿ ಮಾತನಾಡುತ್ತಿರುವ ಸಂದರ್ಭ:**



**ಸನ್ಮಾನ್ಯ ಸಭಾಧ್ಯಕ್ಷರು ರಾಜ್ಯದ ಮಾಜಿ ಮುಖ್ಯಮಂತ್ರಿಗಳಾದ ಶ್ರೀ ಎಸ್.ಎಂ.ಕೃಷ್ಣರವರನ್ನು ದಿನಾಂಕ: 13.02.2021ರಂದು ಭೇಟಿ ಮಾಡಿದ ಸಂದರ್ಭ:**



**ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿಯವರು ಧಾರವಾಡ ಬಂಜಾರ ಸೇವಾ ಸಂಘ, ಇವರು ದಿನಾಂಕ: 14.02.2021ರಂದು ಆಯೋಜಿಸಿದ್ದ ಸಂತ ಸೇವಾಲಾಲರ 282ನೇ ಜಯಂತ್ಯೋತ್ಸವದಲ್ಲಿ ಕಾರ್ಯಕ್ರಮದಲ್ಲಿ ಭಾಗಿಯಾಗಿದ್ದರು. ಕಾರ್ಯಕ್ರಮದಲ್ಲಿ ಸಮಾಜದ ಮುಖಂಡರುಗಳು ಉಪಸ್ಥಿತರಿದ್ದರು.**



ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿಯವರನ್ನು ದಿನಾಂಕ 14-02-2021ರಂದು ಅವ್ವ ಸೇವಾ ಟ್ರಸ್ಟ್ ಮತ್ತು ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು. ಶ್ರೀ ಸಿದ್ದರೂಢ ಸೇವಾ ಸಮಿತಿ, ಚಿಕ್ಕಾಲಗುಂಡಿಯಲ್ಲಿ ನಡೆದ ಕಾರ್ಯಕ್ರಮದಲ್ಲಿ ಅಭಿನಂದಿಸಲಾಯಿತು. ವಿಧಾನ ಪರಿಷತ್ತಿನ ಸದಸ್ಯರಾದ ಹನುಮಂತ ಆರ್. ನಿರಾಣಿರವರು ಮತ್ತು ಅವ್ವ ಸೇವಾ ಟ್ರಸ್ಟ್ ಪದಾಧಿಕಾರಿಗಳು ಹಾಗೂ ಕನ್ನಡ ಸಂಸ್ಕೃತಿ ಇಲಾಖೆಯ ಅಧಿಕಾರಿಗಳು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.




ದಿನಾಂಕ: 16.02.2021ರಂದು ಸನ್ಮಾನ್ಯ ಸಭಾಧ್ಯಕ್ಷರು ಶಿರಸಿ ತಾಲ್ಲೂಕಿನ ಟಿ.ಎಸ್.ಎಸ್. ಸಂಸ್ಥೆಯ ಪ್ರಮುಖರೊಂದಿಗೆ ಸಹಕಾರ ಇಲಾಖೆಯ ವಿಷಯದ ಕುರಿತು ಸಭೆ ನಡೆಸಿದ ಸಂದರ್ಭ



ವಿಧಾನ ಪರಿಷತ್ತಿನ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿ ರವರು ದಿನಾಂಕ: 16.02.2021ರಂದು ಚನ್ನಪ್ಪ ನಿಂಗಪ್ಪ ನಿರಾಣಿ ಬಾಲಕಿಯರ ಸರ್ಕಾರಿ ಪದವಿಪೂರ್ವ ಕಾಲೇಜು ಬೀಳಗಿ, ನೂತನ ಕಟ್ಟಡದ ಉದ್ಘಾಟನಾ ಕಾರ್ಯಕ್ರಮದಲ್ಲಿ ಭಾಗಿಯಾಗಿರುವುದು. ಗಣಿ ಮತ್ತು ಭೂ ವಿಜ್ಞಾನ ಸಚಿವರಾದ ಶ್ರೀ ಮುರುಗೇಶ ಆರ್. ನಿರಾಣಿರವರು ಹಾಗೂ ವಿಧಾನ ಪರಿಷತ್ ಸದಸ್ಯರಾದ ಹನುಮಂತ ಆರ್. ನಿರಾಣಿ ರವರು ಉಪಸ್ಥಿತರಿರುವುದು.



ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿಯವರನ್ನು ದಿನಾಂಕ 23-02-2021ರಂದು ಆತ್ಮೀಯ ಶಿಕ್ಷಕ ವೃಂದದವರ ಗೃಹ ಕಚೇರಿಯಲ್ಲಿ ಅಭಿನಂದಿಸಿತು. ಈ ಸಂದರ್ಭದಲ್ಲಿ ರಾಜ್ಯಾದಾದ್ಯಂತ ಆಗಮಿಸಿದ್ದ ನೂರಾರು ಶಿಕ್ಷಕರು ಉಪಸ್ಥಿತರಿದ್ದರು.



**ದಿನಾಂಕ 3–3–2021ರಂದು ನಡೆದ ಆಯವ್ಯಯ ಮತ್ತು ರಾಜ್ಯ ಹಣಕಾಸು ಕುರಿತ ಕಾರ್ಯಾಗಾರದಲ್ಲಿ ಮಾನ್ಯ ವಿಧಾನ ಪರಿಷತ್ತಿನ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿಯವರು ಮತ್ತು ವಿಧಾನಸಭೆಯ ಅಧ್ಯಕ್ಷರಾದ ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿಯವರು ಕಾರ್ಯಾಗಾರ ಕುರಿತಾಗಿ ಸಮಾಲೋಚಿಸುತ್ತಿರುವುದು.**




**ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿ ಯವರನ್ನು ದಿನಾಂಕ: 03.03.2021ರಂದು ಮಾನ್ಯ ನಿವೃತ್ತ ನ್ಯಾಯಮೂರ್ತಿಗಳ ಬಳಗ ಭೇಟಿ ಮಾಡಿ ಶುಭಹಾರೈಸಿದ ಸಂದರ್ಭ.**



ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿ ಯವರನ್ನು ದಿನಾಂಕ: 03.03.2021ರಂದು ಮಾನ್ಯ ನಿವೃತ್ತ ನ್ಯಾಯಮೂರ್ತಿಗಳ ಬಳಗ ಭೇಟಿ ಮಾಡಿ ಶುಭಹಾರೈಸಿದ ಸಂದರ್ಭ. ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿ ಯವರೊಂದಿಗೆ ಮಾನ್ಯ ಕರ್ನಾಟಕ ವಿಧಾನ ಪರಿಷತ್ತಿನ ಮಾಜಿ ಸಭಾಪತಿಗಳು ತಮ್ಮ ಅನುಭವ, ಸಲಹೆ ಸೂಚನೆಗಳ, ವಿಚಾರ ವಿನಿಮಯ ಮಾಡಿಕೊಂಡ ಕ್ಷಣ.




ದಿನಾಂಕ: 04.03.2021ರಂದು ಪ್ರಾರಂಭವಾಗಲಿರುವ ಅಧಿವೇಶನದ ಮೊದಲ ಎರಡು ದಿನಗಳಂದು ಸದನದಲ್ಲಿ “ಒಂದು ರಾಷ್ಟ್ರ–ಒಂದು ಚುನಾವಣೆ” ಕುರಿತು ನಡೆಯಲಿರುವ ವಿಶೇಷ ಚರ್ಚೆಯ ಬಗ್ಗೆ ದಿನಾಂಕ: 02.03.2021ರಂದು ಸನ್ಮಾನ್ಯ ಸಭಾಧ್ಯಕ್ಷರು ಪತ್ರಿಕಾಗೋಷ್ಠಿಯಿನ್ನು ನಡೆಸಿ ಪತ್ರಿಕಾ ಪ್ರತಿನಿಧಿಗಳಿಗೆ ಮಾಹಿತಿಯನ್ನು ನೀಡುತ್ತಿರುವ ಸಂದರ್ಭ:



ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿಯವರು ದಿನಾಂಕ 06–03–2021ರಂದು ಹುಬ್ಬಳ್ಳಿ ವೈದ್ಯಕೀಯ ವಿಜ್ಞಾನ ಸಂಸ್ಥೆ, ಹುಬ್ಬಳ್ಳಿಯಲ್ಲಿ ಕರೋನಾ ಲಸಿಕೆಯನ್ನು ಪಡೆಯುತ್ತಿರುವುದು.



ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿಯವರು ಹುಬ್ಬಳ್ಳಿ ವೈದ್ಯಕೀಯ ವಿಜ್ಞಾನ ಸಂಸ್ಥೆ, ಹುಬ್ಬಳ್ಳಿಯಲ್ಲಿ ಕರೋನಾ ಲಸಿಕೆಯನ್ನು ಪಡೆದು ಕರೋನಾ ಲಸಿಕೆಯ ಬಗ್ಗೆ ಸಾರ್ವಜನಿಕರಲ್ಲಿ ಇರುವ ಆತಂಕವನ್ನು ನಿವಾರಣೆ ಮಾಡಲು ಮತ್ತು ಲಸಿಕೆ ಪಡೆಯಲು ಉತ್ತೇಜಿಸಿ, ಮಾಧ್ಯಮ ಮಿತ್ರರೊಂದಿಗೆ ಪತ್ರಿಕಾಗೋಷ್ಠಿಯನ್ನು ನಡೆಸಿದರು. ಈ ಸಂದರ್ಭದಲ್ಲಿ ಅವರೊಟ್ಟಿಗೆ ಶ್ರೀಮತಿ ಹೇಮಲತ ಹೊರಟ್ಟಿಯವರು ಕರೋನಾ ಲಸಿಕೆಯನ್ನು ಪಡೆದು ಭಾಗಿಯಾಗಿದ್ದರು.



ಮಾನ್ಯ ವಿಧಾನ ಪರಿಷತ್ತಿನ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿಯವರು ದಿನಾಂಕ: **07.03.2021**ರಂದು ಹುಬ್ಬಳ್ಳಿ ನಗರದಲ್ಲಿ ನೂತನ ಅಂಬೇಡ್ಕರ್ ಭವನ ಉದ್ಘಾಟನೆ ಮಾಡುತ್ತಿರುವುದು. ಸಮಾಜ ಕಲ್ಯಾಣ ಇಲಾಖಾ ಸಚಿವರಾದ ಶ್ರೀ ಬಿ. ಶ್ರೀರಾಮುಲು ಮತ್ತು ಬೃಹತ್ ಮತ್ತು ಮಧ್ಯಮ ಕೈಗಾರಿಕಾ ಸಚಿವರಾದ ಶ್ರೀ ಜಗದೀಶ್ ಶೆಟ್ಟರ್ ರವರು ಕಾರ್ಯಕ್ರಮದಲ್ಲಿ ಉಪಸ್ಥಿತರಿರುವುದು.




ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿಯವರನ್ನು ದಿನಾಂಕ: **09.03.2021**ರಂದು ತಮ್ಮ ವಿಧಾನಸೌಧದ ಕಚೇರಿಯಲ್ಲಿ ಉತ್ತರ ಕರ್ನಾಟಕ ಭಾಗದ ರೈತರ ನಿಯೋಗ ಭೇಟಿ ಮಾಡಿ, ಕೃಷಿ ಬೆಂಬಲ ಬೆಲೆ ಮತ್ತು ಇತರ ಸಾಗುವಳಿ ಜಮೀನಿಗೆ ಸಂಬಂಧಿಸಿದಂತೆ, ಇರುವ ಅನೇಕ ಸಮಸ್ಯೆಗಳನ್ನು ಸುಧೀರ್ಘವಾಗಿ ಚರ್ಚಿಸಿ ಸಮಸ್ಯೆಗೆ ಪರಿಹಾರ ಒದಗಿಸುವಂತೆ ಮನವಿ ಮಾಡಿತು. ಈ ಸಂದರ್ಭದಲ್ಲಿ ಅನೇಕ ರಥ ಮುಖಂಡರುಗಳು ಭಾಗಿಯಾಗಿದ್ದರು.



ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿಯವರು ದಿನಾಂಕ: 09.03.2021ರಂದು ಲೀಡ್ ಇಂಡಿಯಾ ಫೌಂಡೇಷನ್ ಇವರು ಆಯೋಜಿಸಿದ್ದ, ವಿಝುನ್ ಡಿಜಿಟಲ್ ಇಂಡಿಯಾ ಕಾರ್ಯಕ್ರಮದಲ್ಲಿ ಭಾಗಿಯಾಗಿದ್ದು, ಅವರು ಹೊರತಂದಿರುವ ಪುಸ್ತಿಕೆಯನ್ನು ಅನಾವರಣಗೊಳಿಸಿದರು. ಕಾರ್ಯಕ್ರಮದಲ್ಲಿ ಗಣಿ ಮತ್ತು ಭೂ ವಿಜ್ಞಾನ ಸಚಿವರಾದ ಶ್ರೀ ಮುರುಗೇಶ್ ಆರ್. ನಿರಾಣಿರವರು ಮತ್ತು ಸಂಸ್ಥೆಯ ಎಲ್ಲಾ ಪಧಾಧಿಕಾರಿಗಳು ಭಾಗಿಯಾಗಿದ್ದರು.




ಕರ್ನಾಟಕ ವಿಧಾನಪರಿಷತ್ತಿನ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿಯವರು ದಿನಾಂಕ: 13.03.2021ರಂದು ತಮ್ಮ ಸ್ಥಳೀಯ ಶಾಸಕರ ಪ್ರದೇಶಾಭಿವೃದ್ದಿ ಅನುದಾನದಲ್ಲಿ, ನೂರಾರು ವಿಕಲಚೇತನರಿಗೆ ತ್ರಿಚಕ್ರ ವಾಹನಗಳನ್ನು ಒದಗಿಸಿ ಕೀಲಿಯನ್ನು ಹಸ್ತಾಂತರಿಸುತ್ತಿರುವುದು.



**ಸನ್ಮಾನ್ಯ ಸಭಾಧ್ಯಕ್ಷರು ದಿನಾಂಕ: 17.03.2021ರಂದು ವಿಧಾನ ಸಭೆಯ ನಿಯಮಾವಳಿ ಸಮಿತಿಯ ಅಧ್ಯಕ್ಷರಾಗಿ ಸಭೆಯಲ್ಲಿ ಭಾಗವಹಿಸುತ್ತಿರುವ ಸಂದರ್ಭ:**



**ದಿನಾಂಕ: 18.03.2021 ರಂದು ಸನ್ಮಾನ್ಯ ಸಭಾಧ್ಯಕ್ಷರು ಮಾನ್ಯ ಸಹಕಾರ ಸಚಿವರು, ಮಾನ್ಯ ಕಾರ್ಮಿಕ ಸಚಿವರು ಹಾಗೂ ಇಲಾಖಾ ಮುಖ್ಯಸ್ಥರೊಂದಿಗೆ ಸಭೆ ನಡೆಸಿದ ಸಂದರ್ಭ:**



ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿಯವರು ದಿನಾಂಕ: 20.03.2021ರಂದು ಧಾರವಾಡ ಜಿಲ್ಲೆ, ಹುಬ್ಬಳ್ಳಿ ತಾಲ್ಲೂಕಿನಲ್ಲಿ ಕಂದಾಯ ಇಲಾಖೆ ಹಮ್ಮಿಕೊಂಡಿದ್ದ, ಜಿಲ್ಲಾಧಿಕಾರಿಗಳ ನಡೆ ಹಳ್ಳಿಯ ಕಡೆ ಕಾರ್ಯಕ್ರಮದಲ್ಲಿ ಸಭೆಯನ್ನುದ್ದೇಶಿಸಿ ಮಾತನಾಡುತ್ತಿರುವುದು. ಕಂದಾಯ ಸಚಿವರಾದ ಶ್ರೀ ಆರ್. ಅಶೋಕ್ ರವರು ಹಾಗೂ ಧಾರವಾಡ ಜಿಲ್ಲಾಧಿಕಾರಿಗಳು ಹಾಗೂ ಇಲಾಖೆಯ ಇತರ ಅಧಿಕಾರಿಗಳು ಉಪಸ್ಥಿತರಿದ್ದರು.



ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿ ರವರು ದಿನಾಂಕ: 21.03.2021ರಂದು ಮಾಜಿ ಸಚಿವರಾದ ಹೆಚ್.ಎಂ ರೇವಣ್ಣರವರ ಅಭಿನಂದನಾ ಕಾರ್ಯಕ್ರಮವನ್ನು ಉದ್ಘಾಟಿಸಿ ಸನ್ಮಾನಿಸುತ್ತಿರುವುದು. ಕಾರ್ಯಕ್ರಮದಲ್ಲಿ ಮಾಜಿ ಮುಖ್ಯಮಂತ್ರಿಗಳಾದ ವೀರಪ್ಪ ಮೊಯಿಲಿ ವಿಧಾನಸಭೆಯ ವಿರೋಧ ಪಕ್ಷದ ನಾಯಕರಾದ ಶ್ರೀ ಸಿದ್ದರಾಮಯ್ಯ ನವರು, ಮಾಜಿ ಸಚಿವರಾದ ಶ್ರೀ ರಾಮಲಿಂಗರೆಡ್ಡಿ ರವರು ಹಾಗೂ ದಲಿತ ಕವಿ ಸಿದ್ದಲಿಂಗಯ್ಯ, ಶ್ರೀಮತಿ ಬಿ.ಟಿ ಲಲಿತಾ ನಾಯಕ್ ಮತ್ತು ಹಲವು ಗಣ್ಯರು ಉಪಸ್ಥಿತರಿದ್ದರು.





**ಸನ್ಮಾನ್ಯ ಸಭಾಧ್ಯಕ್ಷರು ದಿನಾಂಕ: 22.03.2021 ರಂದು ವೈದ್ಯಕೀಯ ಶಿಕ್ಷಣ ಇಲಾಖೆಯ ಪ್ರಧಾನ ಕಾರ್ಯದರ್ಶಿರವರೊಂದಿಗೆ ಚರ್ಚಿಸುತ್ತಿರುವ ಸಂದರ್ಭ:**



**ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿಯವರನ್ನು ದಿನಾಂಕ: 22.03.2021 ರಂದು ಅನುದಾನಿತ/ಅನುದಾನ ರಹಿತ ಪಾಲಿಟೆಕ್ನಿಕ್ ಕಾಲೇಜುಗಳ ಸಂಘದ ಪದಾಧಿಕಾರಿಗಳು ಭೇಟಿ ಮಾಡಿ ಅಭಿನಂದಿಸಿ ಶುಭ ಹಾರೈಸಿದರು.**



ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿಯವರು ದಿನಾಂಕ: 22.03.2021 ರಂದು ಅನುದಾನಿತ/ಅನುದಾನ ರಹಿತ ಖಾಸಗಿ ಪಾಲಿಟೆಕ್ನಿಕ್ ಕಾಲೇಜುಗಳ ಹಲವು ಕುಂದುಕೊರತೆಗಳ ನಿವಾರಣೆಗಾಗಿ, ಮಾನ್ಯ ಉಪಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ ಸಚಿವರಾದ ಶ್ರೀ ಡಾ: ಸಿ.ಎನ್ ಅಶ್ವತ್ಥ್ ನಾರಾಯಣ್ ರವರೊಂದಿಗೆ ಸಭೆಯಲ್ಲಿ ಭಾಗವಹಿಸಿರುವುದು. ಕಾರ್ಯಕ್ರಮದಲ್ಲಿ ಹಲವಾರು ಖಾಸಗಿ ಪಾಲಿಟೆಕ್ನಿಕ್ ಕಾಲೇಜುಗಳ ಸಂಘದ ಪದಾಧಿಕಾರಿಗಳು ಉಪಸ್ಥಿತರಿರುವುದು.



ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿಯವರು 2019ರಲ್ಲಿ ಕಡ್ಡಾಯವಾಗಿ ವರ್ಗಾವಣೆಗೊಂಡ ಶಿಕ್ಷಕರ ಸಮಸ್ಯೆಗಳನ್ನು ಪರಿಹರಿಸುವಂತೆ, ದಿನಾಂಕ: 22.03.2021 ರಂದು ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಬಿ.ಎಸ್ ಯಡಿಯೂರಪ್ಪರವರ ಜೊತೆ ಚರ್ಚಿಸುತ್ತಿರುವುದು.



ಶಿರಸಿ ಕ್ಷೇತ್ರದ ಸಹಕಾರಿ ಪ್ರಮುಖರು ಸನ್ಮಾನ್ಯ ಸಭಾಧ್ಯಕ್ಷರೊಂದಿಗೆ ಮಾನ್ಯ ಕಾರ್ಮಿಕ ಸಚಿವರು, ಮಾನ್ಯ ಸಹಕಾರ ಸಚಿವರುಗಳನ್ನು ದಿನಾಂಕ: 23.03.2021ರಂದು ಭೇಟಿ ಮಾಡಿದ ಸಂದರ್ಭ:



ಸನ್ಮಾನ್ಯ ಸಭಾಧ್ಯಕ್ಷರು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು ಹಾಗೂ ಇಲಾಖೆಯವರೊಂದಿಗೆ ದಿನಾಂಕ: 23.03.2021ರಂದು ಚರ್ಚಿಸಿದ ಸಂದರ್ಭ.



ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿಯವರು ಅನುದಾನಿತ/ಅನುದಾನ ರಹಿತ ಖಾಸಗಿ ಶಾಲಾ ಶಿಕ್ಷಕರುಗಳ ಹಲವಾರು ಸಮಸ್ಯೆಗಳ ನಿವಾರಣೆಗಾಗಿ, ದಿನಾಂಕ: 23.03.2021ರಂದು ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಶಿಕ್ಷಣ ಸಚಿವರಾದ ಶ್ರೀ ಎಸ್. ಸುರೇಶ್‌ಕುಮಾರ್ ರವರೊಂದಿಗೆ ಸಭೆಯಲ್ಲಿ ಭಾಗವಹಿಸಿರುವುದು. ಕಾರ್ಯಕ್ರಮದಲ್ಲಿ ಹಲವಾರು ಖಾಸಗಿ ಶಾಲೆಗಳ ಶಿಕ್ಷಕರುಗಳು ಉಪಸ್ಥಿತರಿರುವುದು.



ದಿನಾಂಕ: 24.03.2021ರಂದು ಸನ್ಮಾನ್ಯ ಸಭಾಧ್ಯಕ್ಷರ ಚಹಾ ಕೊಠಡಿಯಲ್ಲಿ ನಡೆದ ನಿಯಮಾವಳಿ ಸಮಿತಿ ಸಭೆಯಲ್ಲಿ ಸನ್ಮಾನ್ಯ ಸಭಾಧ್ಯಕ್ಷರು ಚರ್ಚಿಸುತ್ತಿರುವ ಸಂದರ್ಭ.



**ಸನ್ಮಾನ್ಯ ಸಭಾಧ್ಯಕ್ಷರು ಸನ್ಮಾನ್ಯ ಅರಣ್ಯ ಸಚಿವರು, ಶಾಸಕರು ಹಾಗೂ ಅಧಿಕಾರಿಗಳೊಂದಿಗೆ ದಿನಾಂಕ: 25.03.2021ರಂದು ಚರ್ಚಿಸುತ್ತಿರುವ ಸಂದರ್ಭ**



**ಸನ್ಮಾನ್ಯ ಸಭಾಧ್ಯಕ್ಷರು ಮಾನ್ಯ ವಸತಿ ಸಚಿವರು ಹಾಗೂ ವಸತಿ ಇಲಾಖೆಯ ಅಧಿಕಾರಿಗಳೊಂದಿಗೆ ದಿನಾಂಕ: 25.03.2021ರಂದು ಚರ್ಚಿಸುತ್ತಿರುವ ಸಂದರ್ಭ**



**ದಿನಾಂಕ: 25.3.2021ರಂದು ಸನ್ಮಾನ್ಯ ಸಭಾಧ್ಯಕ್ಷರು ಅಧಿವೇಶನ ಮುಕ್ತಾಯಗೊಂಡ ನಂತರ ಪತ್ರಿಕಾಗೋಷ್ಠಿ ನಡೆಸಿದ ಸಂದರ್ಭ:**



**ಸನ್ಮಾನ್ಯ ಸಭಾಧ್ಯಕ್ಷರು ದಿನಾಂಕ: 25.03.2021ರಂದು ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು, ಮಾನ್ಯ ಸಣ್ಣ ಕೈಗಾರಿಕೆ ಸಚಿವರು ಹಾಗೂ ಕೆ.ಐ.ಎ.ಡಿ.ಬಿ ಅಧ್ಯಕ್ಷರು ಮತ್ತು ಸಂಬಂಧಪಟ್ಟ ಇಲಾಖಾ ಮುಖ್ಯಸ್ಥರೊಂದಿಗೆ ಸಭೆ ನಡೆಸಿದ ಸಂದರ್ಭ:**



**ದಿನಾಂಕ: 28.03.2021ರಂದು ಸನ್ಮಾನ್ಯ ಸಭಾಧ್ಯಕ್ಷರು ಬೆಂಗಳೂರು ಗಾಯನ ಸಮಾಜದ ಕಾರ್ಯಕ್ರಮದಲ್ಲಿ ಭಾಗವಹಿಸಿದ ಸಂದರ್ಭ:**




**ಕರ್ನಾಟಕ ಕಾರ್ಯನಿರತ ಪತ್ರಕರ್ತರ ಸಂಘದ ಸಹಯೋಗದೊಂದಿಗೆ ಕನ್ನಡ ಅಭಿವೃದ್ಧಿ ಪ್ರಾಧಿಕಾರ ಕನ್ನಡ ಕಾಯಕ ವರ್ಷಾಚರಣೆ ಅಂಗವಾಗಿ ಹಮ್ಮಿಕೊಂಡಿದ್ದ "ಮಾಧ್ಯಮಗಳಲ್ಲಿ ಸರಿ ಕನ್ನಡ" ಬಳಕೆ ಅಭಿಯಾನಕ್ಕೆ ದಿನಾಂಕ 30–03–2021ರಂದು ಸನ್ಮಾನ್ಯ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿಯವರು ಚಾಲನೆ ನೀಡಿದರು. ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಮತ್ತು ಚಿತ್ರ ನಿರ್ದೇಶಕರಾದ ಶ್ರೀ ಟಿ.ಎಸ್. ನಾಗಭರಣ ಹಾಗೂ ಪತ್ರಕರ್ತರ ಸಂಘದ ಪದಾಧಿಕಾರಿಗಳು ಉಪಸ್ಥಿತರಿದ್ದರು.**



ಕರ್ನಾಟಕ ಕಾರ್ಯನಿರತ ಪತ್ರಕರ್ತರ ಸಂಘದ ಸಹಯೋಗದೊಂದಿಗೆ ಕನ್ನಡ ಅಭಿವೃದ್ಧಿ ಪ್ರಾಧಿಕಾರ ಕನ್ನಡ ಕಾಯಕ ವರ್ಷಾಚರಣೆ ಅಂಗವಾಗಿ ಹಮ್ಮಿಕೊಂಡಿದ್ದ "ಮಾಧ್ಯಮಗಳಲ್ಲಿ ಸರಿ ಕನ್ನಡ" ಬಳಕೆ ಅಭಿಯಾನಕ್ಕೆ ದಿನಾಂಕ 30–03–2021ರಂದು ಸನ್ಮಾನ್ಯ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿಯವರು ಭಿತ್ತಿ ಪತ್ರ ಪ್ರದರ್ಶಿಸುವ ಮೂಲಕ ಚಾಲನೆ ನೀಡಿದರು.




ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ದಿನಾಂಕ 31–3–2021ರಂದು ವಿಧಾನಸೌಧದಲ್ಲಿರುವ ಸಚಿವಾಲಯದ ಗ್ರಂಥಾಲಯವನ್ನು ವೀಕ್ಷಣೆ ಮಾಡಿ, ಅಲ್ಲಿರುವ ಸೌಲಭ್ಯಗಳ ಬಗ್ಗೆ ಪರಿಶೀಲಿಸಿದರು.



ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿಯವರು ದಿನಾಂಕ 31–03–2021ರಂದು ನ್ಯಾಷನಲ್ ಪ್ರೆಸ್ ಕೌನ್ಸಿಲ್ ಆಫ್ ಇಂಡಿಯಾ ಇವರು ಆಯೋಜಿಸಿರುವ ರಾಷ್ಟ್ರೀಯ ಮಹಿಳಾ ಸಾಧಕಿಯರ ಪುರಸ್ಕಾರ ಕಾರ್ಯಕ್ರಮವನ್ನು ಉದ್ಘಾಟಿಸುತ್ತಿರುವುದು. ಕಾರ್ಯಕ್ರಮದಲ್ಲಿ ಹಲವಾರು ಮಹಿಳಾ ಸಾಧಕಿಯರು ಹಾಗೂ ಮಾಧ್ಯಮ ಮುಖ್ಯಸ್ಥರುಗಳು ಹಾಗೂ ಪ್ರತಿನಿಧಿಗಳು ಉಪಸ್ಥಿತರಿದ್ದರು.




ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿಯವರನ್ನು ನ್ಯಾಷನಲ್ ಪ್ರೆಸ್ ಕೌನ್ಸಿಲ್ ಆಫ್ ಇಂಡಿಯಾ ವತಿಯಿಂದ ಕಾರ್ಯಕ್ರಮ ಆಯೋಜಕರು ಸನ್ಮಾನಿಸುತ್ತಿರುವುದು.



# ಭಾಗ-2

# ಸಂಸತ್ತಿನ ಸುದ್ದಿಗಳು

## 1. ಫೆಬ್ರವರಿ 1ಕ್ಕೆ ಕೇಂದ್ರ ಬಜೆಟ್

ಕೇಂದ್ರ ಮುಂಗಡ ಪತ್ರ ಈ ಬಾರಿ ಫೆಬ್ರವರಿ 1ಕ್ಕೆ ಮಂಡನೆಯಾಗಲಿದೆ. ಇದಕ್ಕೂ ಮುನ್ನ ಜನವರಿ 29ರಂದು ಲೋಕಸಭೆ, ರಾಜ್ಯಸಭೆಗಳ ಜಂಟಿ ಅಧಿವೇಶನ ನಡೆಯಲಿದ್ದು, ರಾಷ್ಟ್ರಪತಿ ರಾಮನಾಥ ಕೋವಿಂದ ಭಾಷಣ ಮಾಡಲಿದ್ದಾರೆ. ಇದೇ ಮೊದಲ ಬಾರಿಗೆ ಸಂಸತ್ ಸದಸ್ಯರು 3 ಬೇರೆ-ಬೇರೆ ಸ್ಥಳಗಳಲ್ಲಿ ಅಂದರೆ ರಾಜ್ಯ ಸಭಾ ಚೇಂಬರ್, ಲೋಕಸಭಾ ಚೇಂಬರ್, ಸೆಂಟ್ರಲ್ ಹಾಲ್‌ಗಳಲ್ಲಿ ಆಸೀನರಾಗಲಿದ್ದಾರೆ. ಮೊದಲ ಹಂತದ ಸಂಸತ್ ಅಧಿವೇಶನ ಜನವರಿ 29ರಂದು ಆರಂಭವಾಗಿ ಫೆಬ್ರವರಿ 15ರ ತನಕ ನಡೆಯಲಿದೆ. ಎರಡನೇ ಹಂತ ಮಾರ್ಚ್ 8ರಿಂದ ಶುರುವಾಗಿ ಏಪ್ರಿಲ್ 8ರ ತನಕ ನಡೆಯಲಿದೆ. ಸಂಸದೀಯ ವ್ಯವಹಾರಗಳ ಸಚಿವ ಸಂಪುಟ ಸಮಿತಿ ಈ ನಿರ್ಧಾರ ತೆಗೆದುಕೊಂಡಿದೆ.

ಆಧಾರ: ವಿಜಯವಾಣಿ, ದಿನಾಂಕ:06.01.2021.

## 2. 29 ರಿಂದ 2 ಹಂತದಲ್ಲಿ ಕೇಂದ್ರ ಬಜೆಟ್ ಅಧಿವೇಶನ: ಜೋಶಿ

ಸಂಸತ್ತಿನ ಬಜೆಟ್ ಅಧಿವೇಶನ ಎರಡು ಹಂತದಲ್ಲಿ ನಡೆಸಲಾಗುತ್ತದೆ. ಜನವರಿ 29ರಿಂದ ಫೆಬ್ರವರಿ 15ರವರೆಗೆ ಕೇಂದ್ರ ಆಯವ್ಯಯ ಮಂಡನೆ ಸೇರಿ ಮೊದಲ ಹಂತದ ಅಧಿವೇಶನ, ಮಾರ್ಚ್ 8ರಿಂದ ಏಪ್ರಿಲ್ 8ರವರೆಗೆ ಎರಡನೇ ಹಂತದ ಪ್ರಶ್ನೋತ್ತರ ವೇಳೆ ಸೇರಿದಂತೆ ಪೂರ್ಣ ಪ್ರಮಾಣದ ಅಧಿವೇಶನ ನಡೆಯಲಿದೆ ಎಂದು ಕೇಂದ್ರ ಸಂಸದೀಯ ವ್ಯವಹಾರಗಳ ಸಚಿವ ಪ್ರಹ್ಲಾದ್ ಜೋಶಿ ತಿಳಿಸಿದರು. ಸುದ್ದಿಗಾರರೊಂದಿಗೆ ಮಾತನಾಡಿದ ಅವರು, ಅಧಿವೇಶನ ಹಿನ್ನೆಲೆಯಲ್ಲಿ ಪ್ರಧಾನಿ ನರೇಂದ್ರ ಮೋದಿ ನೇತೃತ್ವದಲ್ಲಿ ಸರ್ವಪಕ್ಷಗಳ ಸಭೆ ನಡೆಯಲಿದೆ. ವಿವಿಧ ವಿಷಯ-ಸಮಸ್ಯೆಗಳ ಕುರಿತಾಗಿ ಮಾತುಕತೆಗೆ ಕೇಂದ್ರ ಸರ್ಕಾರ ಮುಕ್ತ ಮನಸ್ಸು ಹೊಂದಿದೆ. ಸಮಸ್ಯೆಗಳ ಇತ್ಯರ್ಥಕ್ಕೆ ಎಲ್ಲರ ಸಹಕಾರ ಅಗತ್ಯವಾಗಿದೆ. ಕೇಂದ್ರ ಹಣಕಾಸು ಸಚಿವೆ ನಿರ್ಮಲಾ ಸೀತಾರಾಮನ್ ಅವರು 2021-2022ನೇ ಸಾಲಿನ ಕೇಂದ್ರ ಆಯವ್ಯಯ ಮಂಡಿಸಲಿದ್ದಾರೆ. ಸಂಸತ್ತಿನ ಎರಡನೇ ಹಂತದ ಬಜೆಟ್ ಅಧಿವೇಶನ ಮಾರ್ಚ್ 8ರಿಂದ ಏಪ್ರಿಲ್ 8ರವರೆಗೆ ನಡೆಯಲಿದೆ. ಪ್ರಶ್ನೋತ್ತರ ವೇಳೆ ಸೇರಿ ಪೂರ್ಣ ಪ್ರಮಾಣದ ಅಧಿವೇಶನ ನಡೆಸಲಾಗುತ್ತದೆ ಎಂದರು.

ಆಧಾರ: ಉದಯವಾಣಿ, ದಿನಾಂಕ:11.01.2021

## 3. 29 ರಿಂದ ಬಜೆಟ್ ಅಧಿವೇಶನ ಶುರು

ಸಂಸತ್‌ನ ಮುಂಗಡಪತ್ರ ಅಧಿವೇಶನ ಆರಂಭವಾಗಲಿದ್ದು, ಹಣಕಾಸು ಸಚಿವೆ ನಿರ್ಮಲಾ ಸೀತಾರಾಮನ್ ಅವರು ಫೆಬ್ರವರಿ 1 ರಂದು 2021-2022ನೇ ವರ್ಷದ ಬಜೆಟ್ ಮಂಡಿಸಲಿದ್ದಾರೆ. ಬಜೆಟ್ ಅಧಿವೇಶನ ಎರಡು ಹಂತಗಳಲ್ಲಿ ನಡೆಯಲಿದೆ. ಮೊದಲ ಹಂತದ ಅಧಿವೇಶನ ಫೆಬ್ರವರಿ 15ರವರೆಗೆ ಹಾಗೂ ಎರಡನೇ ಹಂತದ ಅಧಿವೇಶನ ಮಾರ್ಚ್ 8ರಿಂದ ಏಪ್ರಿಲ್ 8ರವರೆಗೆ ನಿಗದಿಯಾಗಿದೆ. ರಾಷ್ಟ್ರಪತಿ ರಾಮನಾಥ್ ಕೋವಿಂದ್ ಅವರು ಜನವರಿ 29ರಂದು ಮಧ್ಯಾಹ್ನ 11 ಗಂಟೆಗೆ ಉಭಯ ಸದನಗಳನ್ನು ಉದ್ದೇಶಿಸಿ ಮಾತನಾಡಲಿದ್ದಾರೆ. ಫೆಬ್ರವರಿ 15 ರಂದು ಮೊದಲ ಹಂತದ ಅಧಿವೇಶನ ಮುಕ್ತಾಯಗೊಂಡ ಬಳಿಕ ನಾನಾ ಸ್ಥಾಯಿ ಸಮಿತಿಗಳ ಸಭೆ ನಡೆಯಲಿದ್ದು, ಸಚಿವಾಲಯ ಹಾಗೂ ಇಲಾಖೆಗಳ ಅನುದಾನ ಬೇಡಿಕೆ ವರದಿಯು ಈ ಅವಧಿಯಲ್ಲಿ ಸಿದ್ಧವಾಗಲಿದೆ.

ಆಧಾರ: ವಿಜಯವಾಣಿ, ದಿನಾಂಕ:15.01.2021.

## 4. ಐದು ಪಟ್ಟು ಹೆಚ್ಚಳ: ರಾಜ್ಯ ಸಭೆಯಲ್ಲಿ ಪ್ರಾದೇಶಿಕ ಭಾಷೆ ಬಳಕೆ

ರಾಜ್ಯ ಸಭಾ ಅಧಿವೇಶನದಲ್ಲಿ 2018 ರಿಂದ 2020ರವರೆಗೆ ಪ್ರಾದೇಶಿಕ ಭಾಷೆಗಳ ಬಳಕೆ ಐದು ಪಟ್ಟು ಹೆಚ್ಚಳವಾಗಿದೆ. ಅಧಿಸೂಚಿತ 22 ಭಾಷೆಗಳ ಪೈಕಿ ಹಿಂದಿ, ಇಂಗ್ಲೀಷ್ ನಂತರ ಉರ್ದು, ತಮಿಳು, ಸಂಸ್ಕೃತದ ಬಳಕೆ ಅಧಿಕವಾಗಿದೆ. ಈ ಅವಧಿಯಲ್ಲಿ ಕನ್ನಡ ಐದು ಬಾರಿಯಷ್ಟೆ ಬಳಕೆಯಾಗಿದೆ. ಪ್ರಾದೇಶಿಕ ಭಾಷೆಯನ್ನು ಸಂಸದರು ಬಳಸಿರುವ ಪ್ರಮಾಣಕ್ಕೆ ಹೋಲಿಸಿದರೆ 2018ರಿಂದ 2020ರವರೆಗೆ ಶೇಕಡ 512ರಷ್ಟು ಏರಿಕೆ ಕಂಡಿದೆ ಎಂದು ರಾಜ್ಯಸಭಾ ಸಚಿವಾಲಯ ನಡೆಸಿದ ಅಧ್ಯಯನದಿಂದ ತಿಳಿದುಬಂದಿದೆ.

ಡೋಗ್ರಿ, ಕಾಶ್ಮೀರ, ಕೊಂಕಣಿ ಮತ್ತು ಸಂಥಾಲಿ ಭಾಷೆಗಳು ಮೊದಲ ಬಾರಿಗೆ ಬಳಕೆಯಾಗಿದ್ದು, ಅಸ್ಸಾಮಿ, ಬೋಡೋ, ಗುಜರಾತಿ, ಮಥಲಿ, ಮಣಿಪುರಿ, ನೇಪಾಳಿ ಭಾಷೆಗಳನ್ನು ದೀರ್ಘಾವಧಿಯ ನಂತರ ಮಾತನಾಡಲಾಗಿದೆ. 2004 ರಿಂದ 2017ರವರೆಗೆ ಇಂಗ್ಲೀಷ್, ಹಿಂದಿ ಬಿಟ್ಟು ಅನ್ಯ 10 ಭಾಷೆಗಳನ್ನು 923 ಕಲಾಪಗಳಲ್ಲಿ 269 ಸಲ(ಶೇ0.291) ಪ್ರಯೋಗಿಸಲಾಗಿದೆ. 2018 ರಿಂದ 2020ರವರೆಗೆ 33 ಕಲಾಪಗಳಲ್ಲಿ 49 ಸಾರಿ(ಶೇ1.49) ಪ್ರಾದೇಶಿಕ ಭಾಷೆ ಬಳಕೆಯಾಗಿದೆ ಎಂದು ಸಚಿವಾಲಯ ತಿಳಿಸಿದೆ. 2017ರಲ್ಲಿ ಎಂ.ವೆಂಕಯ್ಯನಾಯ್ಡು ಉಪ ರಾಷ್ಟ್ರಪತಿಗಳಾದ ಬಳಿಕ(ಪದ ನಿಮಿತ್ತ ಅವರೇ ಮೇಲ್ಮನೆಯ ಸಭಾಧ್ಯಕ್ಷರು) ಪ್ರಾದೇಶಿಕ ಭಾಷೆ ಬಳಸುವಂತೆ ಸದಸ್ಯರಿಗೆ ಉತ್ತೇಜನ ನೀಡುತ್ತಿದ್ದಾರೆ. ಭಾರತದ ಇತರ ಭಾಷೆಗಳು ರಾಜ್ಯಸಭೆಯಲ್ಲಿ ಹೆಚ್ಚು-ಹೆಚ್ಚು ಕೇಳುತ್ತಿವೆ.

ಆಧಾರ: ವಿಜಯವಾಣಿ, ದಿನಾಂಕ:17.01.2021.

## 5. ಅಧಿವೇಶನದಲ್ಲಿ ಆಹಾರ ಸಬ್ಸಿಡಿ ರದ್ದು

ಕೇಂದ್ರ ಬಜೆಟ್ ಅಧಿವೇಶನ ಜನವರಿ 29ರಿಂದ ಆರಂಭವಾಗುತ್ತಿದ್ದು, ಸಂಸತ್ ಭವನದ ಕ್ಯಾಂಟೀನ್ ಆಹಾರದ ಮೇಲಿನ ಸಬ್ಸಿಡಿ ರದ್ದುಗೊಳಿಸಲಾಗಿದೆ. ಇದರಿಂದ ಊಟ, ತಿಂಡಿ ದುಬಾರಿಯಾಗಲಿದೆ ಎಂದು ಲೋಕಸಭಾ ಸ್ಪೀಕರ್ ಓಂ ಬಿರ್ಲಾ ಹೇಳಿದ್ದಾರೆ. ಸರ್ಕಾರದ ಈ ಕ್ರಮಕ್ಕೆ ಆರ್ಥಿಕ ಸಂಕಷ್ಟ ಕಾರಣ ಎಂದು ನಿರ್ದಿಷ್ಟವಾಗಿ ಹೇಳದಿದ್ದರೂ, ಲೋಕಸಭಾ ಸಚಿವಾಲಯವು ಕ್ಯಾಂಟೀನ್ ಸಬ್ಸಿಡಿಗಾಗಿ ವಾರ್ಷಿಕ ರೂ.8 ಕೋಟಿಗಳಿಗಿಂತ ಹೆಚ್ಚು ಹಣ ಖರ್ಚು ಮಾಡುತ್ತಿತ್ತು. ಸಂಸತ್ ಕ್ಯಾಂಟೀನ್ ನಿರ್ವಹಣೆಯನ್ನು ಉತ್ತರ ರೈಲ್ವೆಯ ಬದಲಿಗೆ ಐಟಿಡಿಸಿ ನಡೆಸಲಿದೆ ಎಂದು ಹೇಳಿದರು.

ಆಧಾರ: ವಿಶ್ವವಾಣಿ, ದಿನಾಂಕ:20.01.2021.

## 6. ಸಂಸತ್ ಅಧಿವೇಶನ ಇಂದು ಶುರು

ಎರಡು ಹಂತಗಳ ಸಂಸತ್‌ನ ಬಜೆಟ್ ಅಧಿವೇಶನ ಶುರುವಾಗಲಿದ್ದು, ರಾಷ್ಟ್ರಪತಿ ರಾಮನಾಥ ಕೋವಿಂದ್ ಉಭಯ ಸದನಗಳನ್ನು ಉದ್ದೇಶಿಸಿ ಮಾತನಾಡಲಿದ್ದಾರೆ. ಆರ್ಥಿಕ ಸಮೀಕ್ಷೆಯೂ ಮಂಡನೆಯಾಗಲಿದೆ. ಫೆಬ್ರವರಿ 1ರಂದು ವಿತ್ತ ಸಚಿವೆ ನಿರ್ಮಲಾ ಸೀತಾರಾಮನ್ ಮುಂಗಡಪತ್ರ ಮಂಡಿಸಲಿದ್ದಾರೆ.

ಕೊರೋನಾ ನಿಯಮದ ಹಿನ್ನೆಲೆಯಲ್ಲಿ ರಾಜ್ಯಸಭೆ ಮತ್ತು ಲೋಕಸಭೆಯ ಕಲಾಪಗಳು ತಲಾ ಐದು ಗಂಟೆಗಳಿಗೆ ನಿಗದಿಯಾಗಿವೆ. ಲೋಕಸಭೆಯ ಕಲಾಪಗಳು ಬೆಳಗ್ಗೆ ರಾಜ್ಯಸಭೆ ಕಲಾಪಗಳು ಸಂಜೆ ವೇಳೆ ನಡೆಯಲಿವೆ ಅಧಿವೇಶನದ ಮತ್ತೊಂದು ಪ್ರಮುಖ ಅಂಶವೆಂದರೆ ವಾರಾಂತ್ಯಗಳಲ್ಲಿ ಕಲಾಪಗಳು ನಡೆಯುವುದಿಲ್ಲ. ಮೂರು ಕೃಷಿ ಕಾಯ್ದೆಗಳ ವಿರುದ್ಧ ಜನವರಿ 26ರಂದು ನವದೆಹಲಿಯ ಕೆಂಪುಕೋಟೆ ಆವರಣ ಮತ್ತು ಇತರ ಪ್ರದೇಶಗಳಲ್ಲಿ ಕೋಲಾಹಲದ ಅಹಿತಕರ ಘಟನೆ ನಡೆದ ಹಿನ್ನೆಲೆಯಲ್ಲಿ ಬಜೆಟ್ ಅಧಿವೇಶನದಲ್ಲಿಯೂ ಪ್ರತಿಪಕ್ಷಗಳು ಸರ್ಕಾರದ ನಿಲುವು ಖಂಡಿಸಿ ಧರಣಿ ನಡೆಸುವ ಸಾಧ್ಯತೆಗಳು ಹೆಚ್ಚಾಗಿವೆ.

ಆಧಾರ:ಉದಯವಾಣಿ, ದಿನಾಂಕ:29.01.2021.

## 7. ಸಂಸತ್ತಿನ ಬಜೆಟ್ ಅಧಿವೇಶನ : ರಾಷ್ಟ್ರಪತಿ ಭಾಷಣ ವಿಪಕ್ಷ ಬಹಿಷ್ಕಾರ

ಸಂಸತ್ತಿನ ಬಜೆಟ್ ಅಧಿವೇಶನವು ಆರಂಭವಾಗಲಿದೆ. ಈ ಬಾರಿ ಅಧಿವೇಶನವು ಹೆಚ್ಚು ಕೃಷಿ ಕ್ಷೇತ್ರಕ್ಕೆ ಸಂಬಂಧಿಸಿದ ಮೂರು ವಿವಾದಾತ್ಮಕ ಕಾಯ್ದೆಗಳು, ಅದರ ವಿರುದ್ಧ ರೈತರು ಎರಡು ತಿಂಗಳಿಗೂ ಹೆಚ್ಚು ಕಾಲದಿಂದ ನಡೆಸುತ್ತಿರುವ ಪ್ರತಿಭಟನೆ, ಗಣರಾಜ್ಯೋತ್ಸವ ಸಂದರ್ಭದಲ್ಲಿ ರೈತರು ನಡೆಸಿದ ಟ್ರ್ಯಾಕ್ಟರ್ ರ್ಯಾಲಿಯಲ್ಲಿನ ಹಿಂಸಾಚಾರಗಳೆಲ್ಲವೂ ಸಂಸತ್ತಿನಲ್ಲಿ ಪ್ರತಿಫಲಿಸಬಹುದು.

ರಾಷ್ಟ್ರಪತಿಯವರು ಜಂಟಿ ಅಧಿವೇಶನವನ್ನು ಉದ್ದೇಶಿಸಿ ಮಾಡುವ ಭಾಷಣವನ್ನೇ ಬಹಿಷ್ಕರಿಸಲು 18 ವಿರೋಧ ಪಕ್ಷಗಳು ನಿರ್ಧರಿಸುವ ಮೂಲಕ ಅಧಿವೇಶನ ಸುಲಲಿತವಲ್ಲ ಎಂಬ ಸೂಚನೆ ನೀಡಿವೆ.

ಸಂಸತ್ತಿನ ಬಜೆಟ್ ಅಧಿವೇಶನವನ್ನು ಉದ್ದೇಶಿಸಿ ರಾಷ್ಟ್ರಪತಿ ಮಾಡಲಿರುವ ಭಾಷಣವನ್ನು ಬಹಿಷ್ಕರಿಸಲು ಕಾಂಗ್ರೆಸ್, ಎನ್‌ಸಿಪಿ, ಶಿವಸೇನಾ, ಟಿಎಂಸಿ ಸೇರಿ 16 ವಿರೋಧ ಪಕ್ಷಗಳು ನಿರ್ಧರಿಸಿವೆ. ಭಾಷಣವನ್ನು ಬಹಿಷ್ಕರಿಸುವುದಾಗಿ ಆಮ್‌ಆದ್ಮಿ ಪಕ್ಷವು ಪ್ರತ್ಯೇಕ ಹೇಳಿಕೆಯಲ್ಲಿ ತಿಳಿಸಿದೆ. ಕೇಂದ್ರದ ಆಡಳಿತಾರೂಢ ಮೈತ್ರಿ ಕೂಟ ಎನ್‌ಡಿಎ ಭಾಗವಾಗಿದ್ದ ಶಿರೋಮಣಿ ಅಕಾಲಿ ದಳ ಕೂಡ ಇಂತಹುದೆ ನಿರ್ಧಾರ ಕೈಗೊಂಡಿದೆ. ಪ್ರತಿಭಟನೆ ನಡೆಸುತ್ತಿರುವ ರೈತರಿಗೆ ಬೆಂಬಲವಾಗಿ ಈ ಕ್ರಮ ಎಂದು ವಿರೋಧ ಪಕ್ಷಗಳು ಹೇಳಿವೆ.

ಗಣರಾಜ್ಯೋತ್ಸವ ದಿನ ರೈತರು ನಡೆಸಿದ ಟ್ರ್ಯಾಕ್ಟರ್ ರ್ಯಾಲಿ ಸಂದರ್ಭದಲ್ಲಿ ನಡೆದ ಹಿಂಸಾಚಾರದಲ್ಲಿ ಸರ್ಕಾರದ ಪತ್ರದ ಬಗ್ಗೆ ಸ್ವತಂತ್ರ ತನಿಖೆ ನಡೆಸಬೇಕು ಎಂದು ಈ ಪಕ್ಷಗಳು ಒತ್ತಾಯಿಸಿವೆ. ವಿವಾದಾತ್ಮಕವಾದ ಮೂರು ಕೃಷಿ ಕಾಯ್ದೆಗಳನ್ನು ಹಿಂದಕ್ಕೆ ಪಡೆಯಬೇಕು ಎಂದು ಆಗ್ರಹಿಸಿವೆ.

ಲಕ್ಷಾಂತರ ರೈತರು ಪ್ರತಿಭಟನೆ ನಡೆಸುತ್ತಿದ್ದರೂ ಸರ್ಕಾರ ಸಂವೇದನಾರಹಿತವಾಗಿ ವರ್ತಿಸುತ್ತಿದೆ ಎಂದು ರಾಜ್ಯ ಸಭೆಯಲ್ಲಿ ವಿರೋಧ ಪಕ್ಷದ ನಾಯಕ ಗುಲಾಂ ನಬಿ ಆಜಾದ್ ಹೇಳಿದ್ದಾರೆ.

ಆಧಾರ: ಪ್ರಜಾವಾಣಿ, ದಿನಾಂಕ:29.01.2021.

## 8. ಗುಲಾಂಗೆ ಮೋದಿ ಭಾವುಕ ಸಲಾಂ

ಮನಗೆದ್ದವರ ಬಗ್ಗೆ ಮಾತನಾಡುವಾಗ ಹೃದಯ ಭಾರವಾಗುತ್ತದೆ. ಮಾತುಗಳು ಮೌನಕ್ಕೆ ಜಾರುತ್ತವೆ. ಕಣ್ಣಂಚಲ್ಲಿ ನೀರು ಅರಿವಿಲ್ಲದಂತೆ ಜಾರಿರುತ್ತದೆ. ಇಂತಹ ಎಲ್ಲ ಭಾವನಾತ್ಮಕ ಕ್ಷಣಗಳಿಗೆ ರಾಜ್ಯ ಸಭೆ ಸಾಕ್ಷಿಯಾಯಿತು. ಇತ್ತೀಚಿನ ದಿನಗಳಲ್ಲಿ ಸದನ ಎಂದರೆ ಬರೀ ಕಿತ್ತಾಟ ರಂಪಾಟ, ಏರುದನಿಗಳ ಮನೆ ಎಂಬ ಅಭಿಪ್ರಾಯ ಹೆಚ್ಚುತ್ತಿರುವ ಸಂದರ್ಭದಲ್ಲೇ ಮಾತಿನ ಮನೆ ಎನಿಸಿಕೊಂಡ ರಾಜ್ಯ ಸಭೆ ಮೌನ ಮತ್ತು ಮೆಚ್ಚುಗೆಗೆ ಪಾತ್ರವಾಯಿತು. ಇದಕ್ಕೆ ಕಾರಣ ಪ್ರಧಾನಿ ನರೇಂದ್ರ ಮೋದಿಯವರ ಮಾತು.

ಗುಲಾಂನಬಿ ಆಜಾದ್ ಅವರ ರಾಜ್ಯಸಭಾ ಸದಸ್ಯ ಸ್ಥಾನದ ಅವಧಿ ಅಂತ್ಯವಾಗಿದ್ದರಿಂದ ಅವರಿಗೆ ವಿದಾಯ ಹೇಳುವ ಸಂದರ್ಭದಲ್ಲಿ ಮೋದಿ ಭಾಷಣ ಮಾಡಿದರು. ಅಧಿಕಾರ ಬರುತ್ತದೆ, ಹೋಗುತ್ತದೆ. ಆದರೆ ಅದನ್ನು ಹೇಗೆ ನಿರ್ವಹಿಸಬೇಕು ಎಂಬುದನ್ನು ಆಜಾದ್‌ರಿಂದ ಕಲಿಯಬೇಕು. ನಾನು ಅವರನ್ನು ಒಬ್ಬ ನಿಜವಾದ ಸ್ನೇಹಿತನಂತೆ ಕಾಣುತ್ತೇನೆ. ಅವರ ಕೆಲಸಗಳ ಆಧಾರದ ಮೇಲೆ ಅವರನ್ನು ಗೌರವಿಸುತ್ತೇನೆ ಎಂದು ಹೇಳುವಾಗ ಗದ್ಗದಿತರಾದ ಮೋದಿ, ನಂತರ ಕಣ್ಣೀರು ಒರೆಸಿಕೊಂಡು ಆಜಾದ್‌ಗೆ ನಮಸ್ಕಾರದ ರೂಪದಲ್ಲಿ ಸೆಲ್ಯೂಟ್ ಹೊಡೆದು ತಮ್ಮ ಅಭಿಮಾನ ವ್ಯಕ್ತಪಡಿಸಿದರು.

**ಮೋದಿ ಮೌನವಾದ ಕ್ಷಣ**: ನಾನು ಗುಜರಾತ್ ಸಿಎಂ ಆಗಿದ್ದೆ, ಆಜಾದ್ ಜಮ್ಮು ಕಾಶ್ಮೀರದ ಸಿಎಂ ಆಗಿದ್ದರು. ಭಯೋತ್ಪಾದಕ ದಾಳಿ ನಡೆದ ಸಂದರ್ಭದಲ್ಲಿ ಗುಜರಾತಿನ ಹಲವರು ಆಪಾಯಕ್ಕೆ ಒಳಗಾಗಿದ್ದಾರೆ ಎಂದು ಆಜಾದ್ ಅವರೇ ನನಗೆ ಕರೆ ಮಾಡಿ ತಿಳಿಸಿದರು. ಅಗಲೇ ಅವರ ದು:ಖದಲ್ಲಿ ಮಾತನಾಡಿದ್ದರು. ನಂತರ ನಾನು ಕೂಡಲೇ ರಕ್ಷಣಾ ಮಂತ್ರಿ ಪ್ರಣಬ್ ಮುಖರ್ಜಿ ಅವರಿಗೆ ಕರೆ ಮಾಡಿ ಸಹಾಯ ಕೇಳಿದೆ. ರಾತ್ರಿ ಮತ್ತೆ ಕರೆ ಮಾಡಿದ ಆಜಾದ್, ಆಪಾಯದಲ್ಲಿ ಇರುವವರು ನನ್ನ

ಕುಟುಂಬದವರಂತೆ, ಅವರೆಲ್ಲರ ರಕ್ಷಣೆಗೆ ನಾನಿದ್ದೇನೆ ಎಂದು ಭಾವುಕರಾಗಿದ್ದರು. ಇಂತಹ ಅತ್ಯುತ್ತಮ ಸ್ನೇಹಿತ ಆಜಾದ್ ಎಂದು ಮೋದಿ ಗದ್ದದಿತರಾದರು. ಅವರ ಕಣ್ಣಂಚಲ್ಲಿ ನೀರು ಜಾರಿದ್ದವು. ಆ ಕ್ಷಣಕ್ಕೆ ಸಭೆಯಲ್ಲಿದ್ದ ಸರ್ವಪಕ್ಷ ಸದಸ್ಯರು ಮೇಜುಕುಟ್ಟಿ ಅಭಿಮಾನ ವ್ಯಕ್ತಪಡಿಸಿದರು.

ಆಧಾರ: ವಿಶ್ವವಾಣಿ, ದಿನಾಂಕ:10.02.2021

## 9. ಅಜಾದ್‌ಗೆ ಭಾವುಕ ವಿದಾಯ

ಪ್ರಧಾನಿ ನರೇಂದ್ರ ಮೋದಿ ಮತ್ತು ಕಾಂಗ್ರೆಸ್‌ನ ಗುಲಾಂ ನಬಿ ಅಜಾದ್ ಭಾವುಕರಾದ ಘಟನೆಗೆ ರಾಜ್ಯಸಭೆ ಸಾಕ್ಷಿಯಾಗಿದೆ. 28 ವರ್ಷಗಳಿಂದ ರಾಜ್ಯ ಸಭೆ ಸದಸ್ಯರಾಗಿರುವ ಕಾಂಗ್ರೆಸ್‌ನ ಗುಲಾಂ ನಬಿ ಸೇರಿದಂತೆ ಹಲವರಿಗೆ ಶುಭ ಹಾರೈಸುತ್ತಾ ಮಾತನಾಡಿದ ಪ್ರಧಾನಿ 'ರಾಜ್ಯಸಭೆಯಲ್ಲಿ ಪ್ರತಿಪಕ್ಷ ನಾಯಕ ಗುಲಾಂ ನಬಿ ಅಜಾದ್ ಅವರ ಸ್ಥಾನ ತುಂಬುವುದು ಕಷ್ಟ ಅವರು ಕೆಲಸ ಮಾಡುವ ರೀತಿ ಎಲ್ಲರಿಗೂ ಮಾದರಿ, ಅವರು ಪಕ್ಷ, ಸದನ, ದೇಶದ ಬಗ್ಗೆ ಅತೀವ ಕಾಳಜಿ ಹೊಂದಿದ್ದಾರೆ' ಎಂದರು.

ಜಮ್ಮು ಮತ್ತು ಕಾಶ್ಮೀರದಲ್ಲಿ ಅಜಾದ್ ಮುಖ್ಯಮಂತ್ರಿಯಾಗಿದ್ದಾಗ ಗುಜರಾತ್‌ನಿಂದ ತೆರಳಿದ್ದ ಯಾತ್ರಾರ್ಥಿಗಳನ್ನು ಗುರಿಯಾಗಿಸಿ ಉಗ್ರರು ದಾಳಿ ನಡೆಸಿದ್ದರು. ಅವರು ಮೊದಲು ತಮಗೆ ಫೋನ್ ಮಾಡಿದರು. ಗದ್ಗದಿತರಾಗಿ ಮಾತನಾಡಿದ್ದ ಅವರಿಗೆ ಮಾತನಾಡಲೂ ಸಾಧ್ಯವಾಗುತ್ತಿರಲಿಲ್ಲ. ಆಗ ರಕ್ಷಣಾ ಸಚಿವರಾಗಿದ್ದ ಪ್ರಣಬ್ ಮುಖರ್ಜಿಗೆ ಫೋನ್ ಮಾಡಿ ಮೃತದೇಹಗಳನ್ನು ಸಾಗಿಸಲು ಐಎಎಫ್ ವಿಮಾನ ನೀಡಬೇಕೆಂದು ಕೇಳಿದ್ದರು. ಅದಕ್ಕೆ ಅವರು ಒಪ್ಪಿದ್ದರು ಎಂದು ನೆನಪಿಸಿಕೊಂಡರು ಪ್ರಧಾನಿ.

ಹುದ್ದೆಗಳು ಬರಬಹುದು, ಹೋಗಬಹುದು. ನಾವೆಲ್ಲರೂ ಅಜಾದ್‌ರಿಂದ ಕಲಿಯಬೇಕಾದ್ದು ತುಂಬ ಇದೆ. ಅವರು ನನ್ನ ಅತ್ಯುತ್ತಮ ಸ್ನೇಹಿತ ಅವರು ಅಷ್ಟು ಬೇಗ ನಿವೃತ್ತಿಯಾಗಲು ಬಿಡುವುದಿಲ್ಲ ಎನ್ನುತ್ತಲೇ ಮೋದಿ ಗದ್ಗದಿತರಾದರು.

ಸ್ವರ್ಗ ಭಾರತದಲ್ಲಿಯೇ ಇದೆ: ಇನ್ನು, ಅಜಾದ್ ಅವರಿಗೂ ವಿದಾಯ ಭಾಷಣದ ವೇಳೆ ಕಣ್ಣೀರನ್ನು ತಡೆಹಿಡಿಯಲು ಸಾಧ್ಯವಾಗಲಿಲ್ಲ. ಭಾವುಕರಾಗಿಯೇ ಮಾತನಾಡಿದ ಅವರು, 'ಪಾಕಿಸ್ತಾನಕ್ಕೆ ಭೇಟಿ ನೀಡಿದ ಹಲವಾರು ಮಂದಿಗಳಲ್ಲಿ ನಾನೂ ಒಬ್ಬ ಹಿಂದೂಸ್ತಾನದ ಮುಸ್ಲಿಂ ಎಂದು ಹೇಳಿಕೊಳ್ಳಲು ಹೆಮ್ಮೆಯಾಗುತ್ತದೆ. ನನಗೆ ಸ್ವರ್ಗ ಭಾರತದಲ್ಲಿಯೇ ಇದೆ. ದೇಶಕ್ಕೆ ಸ್ವಾತಂತ್ರ್ಯ ಲಭಿಸಿದ ಬಳಿಕ ಜನಿಸಿದ್ದೇನೆ. ಪಾಕಿಸ್ತಾನದಲ್ಲಿ ನಡೆಯುವ ಘಟನೆಗಳ ಬಗ್ಗೆ ಓದಿದಾಗ ಹಿಂದೂಸ್ಥಾನದ ಮುಸ್ಲಿಂ ಎಂದು ಕರೆಯಿಸಿಕೊಳ್ಳಲು ಹೆಮ್ಮೆಯಾಗುತ್ತದೆ ಎಂದರು. ದೇಶದಲ್ಲಿ ಭಯೋತ್ಪಾದನೆ ಮತ್ತು ಉಗ್ರವಾದ ಕೊನೆಯಾಗಲಿ ಎಂದು ನಾನು ಪ್ರಾರ್ಥಿಸುತ್ತೇನೆ ಎಂದು ಹೇಳಿದರು.

ಜಗತ್ತಿನಾದ್ಯಂತ ಮುಸ್ಲಿಂ ಸಮುದಾಯಗಳು ಒಳಜಗಳದಲ್ಲಿ ನಿರತರಾಗಿರುವ ಹೊತ್ತಿನಲ್ಲಿ ಭಾರತದಲ್ಲಿ ಸಮುದಾಯದ ಜನರು ಹೆಮ್ಮೆ ಪಡಬೇಕಾಗಿದೆ ಎಂದು ಅವರು ಹೇಳಿದರು.

**ವಾಜಪೇಯಿ, ಇಂದಿರಾರನ್ನು ನೆನೆದರು:** ಪ್ರತಿಪಕ್ಷ ನಾಯಕ ಹೇಗೆ ಇರಬೇಕು ಎಂಬುದರ ಬಗ್ಗೆ ಮಾಜಿ ಪ್ರಧಾನಿ, ಅಟಲ್ ಬಿಹಾರಿ ವಾಜಪೇಯಿ ಅವರಿಂದ ಕಲಿತೆ ಎಂಬುದನ್ನು ನೆನಪಿಸಿಕೊಂಡರು. ನಾನು ಇಂದು ಈ ಸ್ಥಾನಕ್ಕೇರಿದ್ದೇನೆ ಎಂದರೆ ಅದಕ್ಕೆ ಮಾಜಿ ಪ್ರಧಾನಿ ದಿ.ಇಂದಿರಾ ಗಾಂಧಿ ಹಾಗೂ ದಿವಂಗತ ಸಂಜಯ್ ಗಾಂಧಿ ಅವರು ಕಾರಣ ಎಂದು ಅಜಾದ್ ಹೇಳಿದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:10.02.2021

## 10.ಹೊಸ ಕೃಷಿ ಕಾಯ್ದೆ ಐಚ್ಛಿಕ

ಕೃಷಿ ಕ್ಷೇತ್ರದ ಸುಧಾರಣೆಗಾಗಿ ಜಾರಿಗೊಳಿಸಿರುವ ಹೊಸ 3 ಕಾನೂನುಗಳಿಂದ ಹಳೆಯ ಮಾರುಕಟ್ಟೆ ವ್ಯವಸ್ಥೆಯ ಮೇಲೆ ಯಾವುದೇ ಪರಿಣಾಮ ಉಂಟಾಗದು ಎಂದಿರುವ ಪ್ರಧಾನಿ ನರೇಂದ್ರ ಮೋದಿ, ಹಳೆಯದೋ ಅಥವಾ ಹೊಸತೋ ಎಂಬ ಆಯ್ಕೆ ರೈತರಿಗೆ ಬಿಟ್ಟಿದ್ದೆಂದು ಸ್ಪಷ್ಟಪಡಿಸಿದ್ದಾರೆ. ಈ

ಮೂಲಕ ಬಿಕ್ಕಟ್ಟು ಪರಿಹಾರದ ನಿಟ್ಟಿನಲ್ಲಿ ಹೊಸ ಸೂತ್ರ ಮುಂದಿಟ್ಟಿದ್ದಾರೆ. ಲೋಕಸಭೆಯಲ್ಲಿ ರಾಷ್ಟ್ರಪತಿಯವರ ಭಾಷಣಕ್ಕೆ ವಂದನಾ ನಿರ್ಣಯದ ಮೇಲೆ 90 ನಿಮಿಷ ಮಾತನಾಡಿದ ಅವರು ಭಾರತಕ್ಕೆ ಕೃಷಿ ಕಾನೂನುಗಳ ಅಗತ್ಯ ಏಕೇಂಬುದನ್ನು ನಿರೂಪಿಸಿದರು. 'ಈ ಸದನ, ನಮ್ಮ ಸರ್ಕಾರ ಮತ್ತು ನಮಗೆಲ್ಲರಿಗೂ ಮೂರು ಕೃಷಿ ಕಾನೂನುಗಳ ವಿಚಾರವಾಗಿ ಧ್ವನಿ ಎತ್ತಿದ ರೈತರ ಬಗ್ಗೆ ಗೌರವವಿದೆ. ನಮ್ಮ ಸಂಪುಟದ ಉನ್ನತ ಸಚಿವರೆಲ್ಲರೂ ಪ್ರತಿಭಟನಾ ನಿರತ ರೈತರ ಬಗ್ಗೆ ನಮಗೆ ಅಪಾರ ಗೌರವವಿದೆ. ಹೊಸ ಕಾನೂನುಗಳಲ್ಲಿ ಯಾವುದೇ ಲೋಪ ದೋಷಗಳಿದ್ದರೂ, ಆ ಬಗ್ಗೆ ಚರ್ಚೆ ನಡೆಸುವುದಕ್ಕೆ ಮುಕ್ತ ಸ್ವಾಗತವಿದೆ. ಅಷ್ಟೇ ಅಲ್ಲ, ಆ ಲೋಪದೋಷ ಪರಿಷ್ಕರಣೆಗೂ ಸರ್ಕಾರ ಕ್ರಮ ತೆಗೆದುಕೊಳ್ಳುತ್ತದೆ ಎಂದರು.

**ಸ್ಥಗಿತವಾಗಿಲ್ಲ:**ಕೃಷಿ ಕಾನೂನು ಜಾರಿಯಾದ ನಂತರದಲ್ಲಿ ಯಾವುದೇ ಕೃಷಿ ಮಂಡಿ ಮುಚ್ಚಲಾಗಿಲ್ಲ. ಅಂತೆಯೇ ಕನಿಷ್ಠ ಬೆಂಬಲ ಬೆಲೆ (ಎಂಎಸ್‌ಪಿ)ಯನ್ನು ಸ್ಥಗಿತಗೊಳಿಸಲಾಗಿಲ್ಲ. ಬದಲು ಎಂಎಸ್‌ಪಿಯನ್ನು ಹೆಚ್ಚಿಸಲಾಗಿದೆ. ಈ ವಾಸ್ತಾವಾಂಶಗಳನ್ನು ಯಾರಿಂದಲೂ ನಿರಾಕರಿಸಲಾಗದು ಮತ್ತು ನಿರ್ಲಕ್ಷಿಸಲೂ ಆಗದು ಎಂದು ಮೋದಿ ಪುನರುಚ್ಚರಿಸಿದರು. ಪ್ರಧಾನಿ ಭಾಷಣವನ್ನು ಧಿಕ್ಕರಿಸಿ ಕಾಂಗ್ರೆಸ್ ಸದಸ್ಯರು ಸಭಾತ್ಯಾಗ ಮಾಡಿದರು.

ಆಧಾರ:ವಿಜಯವಾಣಿ, ದಿನಾಂಕ:11.02.2021.

## 11. ಸಂಸತ್ ಭವನಕ್ಕೆ ಶತಮಾನದ ಸಂಭ್ರಮ

ಭಾರತದ ಸಂಸತ್ ಭವನಕ್ಕೆ ಒಂದು ಶತಮಾನ ಪೂರ್ಣಗೊಂಡಿದೆ. 100 ವರ್ಷಗಳ ಹಿಂದೆ ಅಂದರೆ, ಫೆಬ್ರವರಿ 12, 1921ರಂದು ಬ್ರಿಟನ್‌ನ ಸ್ಯೂಕ್ ಆಫ್ ಕನ್ನಾಟ್ ದೆಹಲಿಯಲ್ಲಿನ ಸಂಸತ್ ಭವನಕ್ಕೆ ಅಡಿಗಲ್ಲು ಹಾಕಿದ್ದರು.

560 ಅಡಿ ವ್ಯಾಸ, ಒಂದು ಮೈಲಿಯ 1ನೇ 3 ಭಾಗದಷ್ಟು ಸುತ್ತಳತೆ ಹೊಂದಿರುವ ಕಟ್ಟಡಕ್ಕೆ ಸರ್ ಹರ್ಬರ್ಟ್ ಬೇಕರ್, ಸರ್ ಎಡ್ವಿನ್ ಲೂಟೆನ್ಸ್ ವಿನ್ಯಾಸ ರೂಪಿಸಿದ್ದರು. ಇವರ ಮಾರ್ಗದರ್ಶನದಲ್ಲಿ ಬ್ರಿಟಿಷ್ ಇಂಡಿಯಾದ ಅನುಕೂಲಕ್ಕಾಗಿ ದೆಹಲಿಯ ಹೃದಯ ಭಾಗದ ರೈಸಿಬಾ ಹಿಲ್‌ನಲ್ಲಿ ಸಂಸತ್ ಕಟ್ಟಡದ ನಿರ್ಮಾಣ ಕೆಲಸಗಳು ಚಾಲನೆಗೊಂಡಿದ್ದವು. 6 ವರ್ಷಗಳ ಕಾಮಗಾರಿ ಬಳಿಕ 1927ರಲ್ಲಿ ಸಂಸತ್ ಭವನ ಮತ್ತು ಕೇಂದ್ರ ಸರ್ಕಾರದ ಸಚಿವಾಲಯದ ಕಟ್ಟಡ ನಿರ್ಮಾಣ ಶುರುವಾಗಿದೆ.

ಆಧಾರ:ಉದಯವಾಣಿ, ದಿನಾಂಕ:13.02.2021.

## 12.ರಾಜ್ಯಸಭೆ ವಿರೋಧ ಪಕ್ಷದ ನಾಯಕರಾಗಿ ಖರ್ಗೆ ಆಯ್ಕೆ

ಕಾಂಗ್ರೆಸ್‌ನ ಹಿರಿಯ ನಾಯಕ ಮಲ್ಲಿಕಾರ್ಜುನ್ ಖರ್ಗೆ ಅವರು ರಾಜ್ಯಸಭೆಯಲ್ಲಿ ವಿರೋಧ ಪಕ್ಷದ ನಾಯಕರಾಗಲಿದ್ದಾರೆ.

ಸದ್ಯ ವಿರೋಧ ಪಕ್ಷದ ನಾಯಕರಾಗಿರುವ ಹಿರಿಯ ಮುಖಂಡ ಗುಲಾಂ ನಬಿ ಆಜಾದ್ ಅವರ ರಾಜ್ಯಸಭಾ ಸದಸ್ಯತ್ವ ಫೆಬ್ರವರಿ 15ರಂದು ಮುಕ್ತಾಯಗೊಳ್ಳುವುದು. ಈ ಹಿನ್ನೆಲೆಯಲ್ಲಿ ರಾಜ್ಯ ಸಭೆಯಲ್ಲಿ ಪಕ್ಷವನ್ನು ಮುನ್ನಡೆಸಲು ಮಲ್ಲಿಕಾರ್ಜುನ್ ಖರ್ಗೆ ಅವರನ್ನು ಆಯ್ಕೆ ಮಾಡಿರುವುದಾಗಿ ಕಾಂಗ್ರೆಸ್ ಹೈಕಮಾಂಡ್ ತಿಳಿಸಿದೆ.

ವಿರೋಧ ಪಕ್ಷದ ನಾಯಕರನ್ನಾಗಿ ಖರ್ಗೆ ಅವರ ಆಯ್ಕೆ ಮಾಡಿರುವ ಕುರಿತು ಕಾಂಗ್ರೆಸ್ ಅಧ್ಯಕ್ಷೆ ಸೋನಿಯಾ ಗಾಂಧಿ ಅವರು ರಾಜ್ಯಸಭೆಯ ಸಭಾಪತಿ ಎಂ.ವೆಂಕಯ್ಯ ನಾಯ್ಡು ಅವರಿಗೆ ಪತ್ರ ಬರೆದಿದ್ದಾರೆ.

ಆಜಾದ್ ಅವರ ಅಧಿಕಾರಾವಧಿ ಮುಗಿದ ನಂತರ, ವಿರೋಧ ಪಕ್ಷದ ನಾಯಕ ಸ್ಥಾನಕ್ಕೆ ರಾಜ್ಯ ಸಭೆಯಲ್ಲಿ ಉಪ ನಾಯಕರಾಗಿರುವ ಆನಂದ್ ಶರ್ಮಾ, ಹಿರಿಯ ಮುಖಂಡರಾದ ದಿಗ್ವಿಜಯ್ ಸಿಂಗ್

ಹಾಗೂ ಪಿ.ಚಿದಂಬರಂ ಅವರ ಹೆಸರುಗಳು ಕೇಳಿ ಬಂದಿದ್ದವು. ಈಗ ಖರ್ಗೆ ಅವರಿಗೆ ಈ ಪಟ್ಟ ಕಟ್ಟುವುದಾಗಿ ಪ್ರಕಟಿಸುವ ಮೂಲಕ ಕಾಂಗ್ರೆಸ್ ಈ ಕುರಿತ ಎಲ್ಲ ಊಹಾಪೋಹಗಳಿಗೆ ತೆರೆ ಎಳೆದಿದೆ.

ಗಾಂಧಿ ಕುಟುಂಬದ ನಿಷ್ಠರಾಗಿರುವ, 78 ವರ್ಷದ ಖರ್ಗೆ, ರಾಜ್ಯ ಸಭೆಯಲ್ಲಿ ವಿರೋಧ ಪಕ್ಷದ ಸ್ಥಾನವನ್ನು ಪಡೆಯುತ್ತಿರುವ ರಾಜ್ಯದ ಎರಡನೇ ಮುಖಂಡರಾಗಿದ್ದಾರೆ. 2019ರಲ್ಲಿ ನಡೆದ ಲೋಕಸಭಾ ಚುನಾವಣೆಯಲ್ಲಿ ರಾಜ್ಯಸಭೆಗೆ ಆಯ್ಕೆ ಮಾಡಲಾಯಿತು.

ಆಗಿನ ಜನತಾ ಪಾರ್ಟಿ ಸಂಸ್ಥಾಪಕರಲ್ಲೊಬ್ಬರಾದ, ಮೈಸೂರಿನ ಎಂ.ಎಸ್.ಗುರುಪಾದಸ್ವಾಮಿ ಅವರು ಎರಡು ಬಾರಿ ವಿರೋಧ ಪಕ್ಷದ ನಾಯಕರಾಗಿ ಕಾರ್ಯನಿರ್ವಹಿಸಿದ್ದರು.

1971ರ ಮಾರ್ಚ್‌ನಿಂದ 1972ರ ಏಪ್ರಿಲ್‌ವರೆಗೆ, 1991ರ ಜೂನ್‌ನಿಂದ ಜುಲೈವರೆಗೆ ಗುರುಪಾದಸ್ವಾಮಿ ಅವರು ಈ ಹುದ್ದೆಯಲ್ಲಿದ್ದರು.

ರಾಜ್ಯಸಭೆಯಲ್ಲಿ ವಿರೋಧ ಪಕ್ಷದ ನಾಯಕ ಹುದ್ದೆಯನ್ನು 1969ರಲ್ಲಿ ಸೃಷ್ಟಿಸಲಾಯಿತು. ಕಾಂಗ್ರೆಸ್(ಒ) ಪಕ್ಷದ ನಾಯಕ ಶ್ಯಾಮನಂದನ್ ಮಿಶ್ರಾ ಅವರು ವಿರೋಧ ಪಕ್ಷದ ಮೊದಲ ನಾಯಕರಾಗಿ ಕಾರ್ಯನಿರ್ವಹಿಸಿದ್ದರು.

ಆಧಾರ: ಪ್ರಜಾವಾಣಿ, ದಿನಾಂಕ:13.02.2021.

## 13. ಬೆಲೆ ಬಿಸಿಗೆ ಕರಗಿದ ಕಲಾಪ

ಸಂಸತ್ತಿನ ಉಭಯ ಸದನಗಳ ಕಲಾಪಗಳು ಇಂಧನ ಬೆಲೆ ಏರಿಕೆಯ ಬಿಸಿಯಲ್ಲಿ ಕರಗಿ ಹೋದವು. ಗಗನಕ್ಕೇರಿರುವ ಪೆಟ್ರೋಲ್, ಡೀಸೆಲ್ ಬೆಲೆ ನಿಯಂತ್ರಣ ಕುರಿತು ಚರ್ಚೆಗೆ ಅನುವು ಮಾಡಿಕೊಡಿ ಎಂದು ಆಗ್ರಹಿಸಿ ಪ್ರತಿಪಕ್ಷಗಳು ಗದ್ದಲ ನಡೆಸಿದ್ದರಿಂದ ರಾಜ್ಯಸಭೆ ಮತ್ತು ಲೋಕಸಭೆ ಕಲಾಪಗಳು ಪ್ರಮುಖ ಯಾವುದೇ ಚರ್ಚೆ ಕಾಣದೇ ಮುಂದೂಡಿಕೆಯಾದವು.

ಇಂಧನ ಬೆಲೆ ದೇಶದ ಜನರನ್ನು ಕಂಗೆಡಿಸಿದೆ. ಪೆಟ್ರೋಲ್, ಡೀಸೆಲ್ ದರ ನಾಗಾಲೋಟದಲ್ಲಿವೆ. ಅಡುಗೆ ಅನಿಲ ಬೆಲೆ ಗ್ರಾಹಕರ ಕೈ ಸುಡುತ್ತಿದೆ. ಜಲ್ವಂತ ಸಮಸ್ಯೆ ಬಗ್ಗೆ ಮೊದಲು ಚರ್ಚೆ ನಡೆಸುವುದನ್ನು ಬಿಟ್ಟು ಉಳಿದ ಸಂಗತಿಗಳು ಏಕೆ ಬೇಕು ವಿಷಯ ಚರ್ಚೆಗೆ ಅವಕಾಶ ನೀಡಿ ಎಂದು ರಾಜ್ಯಸಭೆಯಲ್ಲಿ ಪ್ರತಿಪಕ್ಷ ಸದಸ್ಯರು ದಿನದ ಕಲಾಪ ಆರಂಭಗೊಳ್ಳುತ್ತಿದ್ದಂತೆಯೇ ಆಗ್ರಹ ಮಂಡಿಸಿದರು. "ಬಜೆಟ್ ಮೇಲಿನ ಚರ್ಚೆಯ ಹಲವು ಮಹತ್ವದ ವಿಷಯಗಳು ಬಾಕಿ ಉಳಿದಿವೆ. ಮೊದಲು ಆ ಬಗ್ಗೆ ಚರ್ಚಿಸೋಣ. ನಂತರ ಬೆಲೆ ಏರಿಕೆ ಚರ್ಚೆಗೆ ಅನುವು ಮಾಡಿಕೊಡಲಾಗುವುದು," ಎಂದು ಸಭಾಪತಿ ಸಮಾಧಾನಪಡಿಸಲು ಯತ್ನಿಸಿದರು. ಆದರೆ ಇದಕ್ಕೆ ಕಿವಿಗೊಡದ ಪ್ರತಿಪಕ್ಷ ಸದಸ್ಯರು ಸದನದ ಬಾವಿಗಿಳಿದು ಪ್ರತಿಭಟಿಸಿದರು.

ಗದ್ದಲ ನಿಯಂತ್ರಣಕ್ಕೆ ಬಾರದೇ ಹೋದಾಗ ಬೆಳಗಿನ ಕಲಾಪವನ್ನು 11 ಗಂಟೆಗೆ ಮುಂದೂಡಲಾಯಿತು. ಮತ್ತೆ ಸದನ ಸೇರಿದಾಗ ಅದೇ ರಾಗ ಮರುಕಳಿಸಿತು. ನಂತರ 1 ಗಂಟೆಗೆ, ಬಳಿಕ 1.15ಕ್ಕೆ, ಆ ಬಳಿಕ 1.30ಕ್ಕೆ ಹೀಗೆ ಹಲವು ಬಾರಿ ಮುಂದೂಡಲ್ಪಟ್ಟ ಸದನ ಅಂತಿಮವಾಗಿ ಸಭಾಪತಿ ಪೀಠದಲ್ಲಿದ್ದ ವಂದನಾ ಚವಾಣ್ ದಾಟಿಸಿದರು.

**ಕೆಳಮನೆಯಲ್ಲೂ ಅದೇ ಕಥೆ:** ಲೋಕಸಭೆಯಲ್ಲೂ ಇಂಧನ ಬೆಲೆ ಏರಿಕೆ ಗದ್ದಲವು ದಿನದ ಕಲಾಪವನ್ನು ಬಲಿ ಪಡೆದು ಕೊಂಡಿತು. ಸದನ ಸೇರುತ್ತಿದ್ದಂತೆಯೇ ಪ್ರತಿಪಕ್ಷಗಳು" ತೈಲ ಬೆಲೆ ಗಗನಮುಖಿ, ಏನು ಸ್ವಾಮಿ, ಇದು ಅಧ್ವಾನ" ಎಂದು ಆಕ್ರೋಶ ವ್ಯಕ್ತಪಡಿಸಿದವು. ವಿಷಯ ಕುರಿತು ಕಾಂಗ್ರೆಸ್ ನೇತೃತ್ವದಲ್ಲಿ ಪ್ರತಿಪಕ್ಷಗಳು ನಿಲುವಳಿ ಸೂಚನೆ ಮಂಡನೆಗೆ ಮುಂದಾದವು ಅದಕ್ಕೆ ಅವಕಾಶ ನೀಡದ ಸ್ಪೀಕರ್ ಓಂ ಬಿರ್ಲಾ, "ನಿಲುವಳಿಗೆ ಖಂಡಿತ ಈಗ ಅವಕಾಶ ಇಲ್ಲ, ಪ್ರಮುಖ ವಿಷಯಗಳು ಮುಗಿದ ಬಳಿಕ ನೋಡೋಣ, ಸುಮ್ಮನಿರಿ", ಎಂದು ಸಮಾಧಾನಪಡಿಸಿದರು. ಅದಕ್ಕೆ ಬೆಲೆ ಕೊಡದೇ ಪ್ರತಿಪಕ್ಷಗಳು ಗದ್ದಲ ಮುಂದುವರಿಸಿದಾಗ ಸದನ ಹಲವು ಬಾರಿ ಮುಂದೂಡಿಕೆಯಾಗಿ ಹೋಯಿತು.

ಆಧಾರ: ವಿಜಯ ಕರ್ನಾಟಕ, ದಿನಾಂಕ:09.03.2021.

## 14.ಸಂಸದ್ ಟಿವಿ ಆರಂಭ

ಲೋಕಾಸಭಾ ಮತ್ತು ರಾಜ್ಯಸಭಾ ಟಿವಿಗಳನ್ನು ಒಗ್ಗೂಡಿಸಲಾಗಿದ್ದು, ಸಂಸದ್ ಟಿವಿ ಹೆಸರಿನಲ್ಲಿ ನೂತನ ವಾಹಿನಿ ಕಾರ್ಯಾರಂಭಗೊಂಡಿದೆ. ಲೋಕಾಸಭೆ ಕಲಾಪಗಳು ಹಿಂದಿಯಲ್ಲಿ, ರಾಜ್ಯಸಭೆ ಕಲಾಪಗಳು ಆಂಗ್ಲ ಭಾಷೆಯಲ್ಲಿ ಪ್ರಸಾರವಾಗಲಿವೆ. ವಾಹಿನಿಯ ಸಿಇಓ ಆಗಿ ನಿವೃತ್ತ ಐಎಎಸ್ ಅಧಿಕಾರಿ ರವಿ ಕಪೂರ್ ಅವರನ್ನು ಒಂದು ವರ್ಷದ ಅವಧಿಗೆ ನೇಮಿಸಲಾಗಿದೆ. ಎರಡೂ ವಾಹಿನಿಗಳನ್ನೂ ಒಗ್ಗೂಡಿಸಲು ಲೋಕಸಭಾಧ್ಯಕ್ಷ ಓಂ ಬಿರ್ಲಾ ಹಾಗೂ ರಾಜ್ಯಸಭಾ ಸಭಾಪತಿ ವೆಂಕಯ್ಯ ನಾಯ್ಡು ಒಮ್ಮತದಿಂದ ತೀರ್ಮಾನ ತೆಗೆದುಕೊಂಡಿದ್ದಾರೆ.

ಆಧಾರ: ವಿಶ್ವವಾಣಿ, ದಿನಾಂಕ:13.03.2021.

## 15. ಟೋಲ್ ಬೂತ್ ಬದಲು ಜಿಪಿಎಸ್

ಟೋಲ್ ಬೂತ್ ಬದಲು ಬೇರೆ ವ್ಯವಸ್ಥೆ ಬರುವ ಪ್ರಸ್ತಾಪ ಜಾರಿಯಾಗುವತ್ತ ಮತ್ತೊಂದು ಹೆಜ್ಜೆ ಮುಂದಡಿ ಇಟ್ಟಿದೆ. "ಮುಂದಿನ 1 ವರ್ಷದೊಳಗೆ ದೇಶದ ಎಲ್ಲ ಟೋಲ್ ಬೂತ್‌ಗಳನ್ನು ತೆರವುಗೊಳಿಸಲಾಗುವುದು. ಜಿಪಿಎಸ್ ಆಧರಿಸಿ ಟೋಲ್ ಸಂಗ್ರಹ ವ್ಯವಸ್ಥೆ ಆರಂಭಿಸಲಾಗುವುದು," ಎಂದು ಕೇಂದ್ರ ಸಾರಿಗೆ ಸಚಿವ ನಿತಿನ್ ಗಡ್ಕರಿ ಲೋಕಸಭೆಯಲ್ಲಿ ತಿಳಿಸಿದ್ದಾರೆ.

"ಜಿಪಿಎಸ್ ಇಮೇಜಿಂಗ್ ತಂತ್ರಜ್ಞಾನ ಆಧಾರದಲ್ಲಿ ಟೋಲ್ ಸಂಗ್ರಹಿಸಲಾಗುವುದು. ಸದ್ಯಕ್ಕೆ ಶೇ.93ರಷ್ಟು ವಾಹನಗಳಲ್ಲಿ ಫಾಸ್ಟ್‌ಟ್ಯಾಗ್ ಅಳವಡಿಕೆಯಾಗಿದೆ. ಶೇ.7ರಷ್ಟು ವಾಹನಗಳು ಮಾತ್ರ ಇಮ್ಮಡಿ ಟೋಲ್ ಪಾವತಿಸಿದರೂ ಜಿಪಿಎಸ್ ಅಳವಡಿಸಿಲ್ಲ. ಟೋಲ್ ಪಾವತಿಸದ ವಾಹನ ಮಾಲೀಕರ ವಿರುದ್ಧ ಕ್ರಮ ಕೈಗೊಳ್ಳಲು ಪೊಲೀಸರಿಗೆ ಸೂಚಿಸಲಾಗಿದೆ," ಎಂದರು.

ಈ ನಡುವೆ, ಹಳೆಯ ವಾಹನ ಗುಜರಿ ನೀತಿಯನ್ನು ಗಡ್ಕರಿ ಅನಾವರಣಗೊಳಿಸಿದ್ದಾರೆ. ಹಳೆಯ ವಾಹನಗಳನ್ನು ಗುಜರಿ ಕೇಂದ್ರಗಳಿಗೆ ನೀಡುವ ಗ್ರಾಹಕರಿಗೆ ರಸ್ತೆ ತೆರಿಗೆಯಲ್ಲಿ ಶೇ.25 ವಿನಾಯಿತಿ ಸಿಗಲಿದೆ ಎಂದಿದ್ದಾರೆ. ಇದೇ ವೇಳೆ, ಹಳೆ ವಾಹನಗಳ ಕುರಿತ ನಿಯಮಾವಳಿಗಳನ್ನು ಉಲ್ಲಂಘಿಸಿದರೆ ದಂಡ ಮತ್ತು ವಿಳಂಬ ಶುಲ್ಕವನ್ನು ತೆರಬೇಕಾಗುತ್ತದೆ ಎಂಬುದರ ಸುಳಿವು ನೀಡಿದ್ದಾರೆ.

- ವಾಹನ ಗುಜರಿ ನೀತಿಯಡಿ ಹಳೆ ಕಾರು ಕೊಟ್ಟವರಿಗೆ ಹೊಸ ಕಾರು ಖರೀದಿಯಲ್ಲಿ 5% ವಿನಾಯಿತಿ
- ರಸ್ತೆ ತೆರಿಗೆಯಲ್ಲಿ 25% ಕಡಿತ ಪ್ರಸ್ತಾಪ
- 15 ವರ್ಷ ಹಳೆಯ ಕಾರು ಆರ್‌ಸಿ ನವೀಕರಣಕ್ಕೆ ಶುಲ್ಕ 8 ಪಟ್ಟು ಹೆಚ್ಚಳ
- ನೋಂದಣಿ ವಿಳಂಬಕ್ಕೆ ಮಾಸಿಕ ರೂ 300–500 ದಂಡ
- 15 ವರ್ಷ ಹಳೆಯ ಬಸ್‌ನ ಫಿಟ್ನೆಸ್ ನವೀಕರಣ ಶುಲ್ಕ ರೂ.12,500ಗೆ ಹೆಚ್ಚಳ

ಹೊಸ ನೀತಿಯಿಂದ ಹೊಸ ವಾಹನ ಖರೀದಿಯಲ್ಲಿ ದರ ಕಡಿತದ ಅನುಕೂಲ ಸಿಗಲಿದೆ. ಪರಿಸರ ಮಾಲಿನ್ಯ ನಿಯಂತ್ರಣ ದೃಷ್ಟಿಯಿಂದಲೂ ಇದು ವರದಾನವಾಗಲಿದೆ. ಆಟೋಮೊಬೈಲ್ ವಲಯಕ್ಕೂ ಪುಷ್ಟಿ ನೀಡಲಿದೆ. ಉದ್ಯೋಗ ಸೃಷ್ಟಿಗೂ ಕಾರಣವಾಗಲಿದೆ.

ಆಧಾರ: ವಿಜಯ ಕರ್ನಾಟಕ, ದಿನಾಂಕ: 19.03.2021

## 16.ಸಂಸತ್‌ನಲ್ಲಿ ಮಹಾವಸೂಲಿ ಗದ್ದಲ

ಮಹಾರಾಷ್ಟ್ರ ಗೃಹ ಸಚಿವ ಅನಿಲ್ ದೇಶಮುಖ್‌ರ 100 ಕೋಟಿ ಲಂಚ ಪ್ರಕರಣ ಸಂಸತ್‌ನಲ್ಲಿ ಕೋಲಾಹಲ ಸೃಷ್ಟಿಸಿದೆ. ಭ್ರಷ್ಟಾಚಾರ ಆರೋಪಕ್ಕೆ ಗುರಿಯಾಗಿರುವ ಮಹಾರಾಷ್ಟ್ರ ವಿಕಾಸ ಅಘಾಡಿ (ಎಂವಿಎ) ಸರ್ಕಾರ ರಾಜೀನಾಮೆ ನೀಡಬೇಕು ಎಂದು ಬಿಜೆಪಿ ಒತ್ತಾಯಿಸಿತು. ಶಿವಸೇನೆ, ಎನ್‌ಸಿಪಿ

ಸಂಸದ ಪ್ರತಿಭಟನೆಯ ನಡುವೆಯೇ ಬಿಜೆಪಿ ಸಂಸದ ಮನೋಜ್ ಕೋಟಕ್ ಅವರು ಐಪಿಎಸ್ ಅಧಿಕಾರಿ ಪರಂ ಬೀರ್ ಸಿಂಗ್ ಸಿಎಂ ಉದ್ಧವ್ ಠಾಕ್ರೆಗೆ ಬರೆದ ಪತ್ರ ಪ್ರಸ್ತಾಪಿಸಿದ್ದಾರೆ. ಸರ್ಕಾರದಲ್ಲಿ ಇರುವವರು ಅಧಿಕಾರಿಗಳನ್ನು ಯಾವ ರೀತಿ ಬಳಕೆ ಮಾಡುತ್ತಿದ್ದಾರೆ ಎಂಬುದು ಗೊತ್ತಾಗುತ್ತದೆ. ಕೇಂದ್ರ ತನಿಖಾ ಸಂಸ್ಥೆಯಿಂದ ಈ ಬಗ್ಗೆ ತನಿಖೆಯಾಗಬೇಕು ಎಂದು ಒತ್ತಾಯಿಸಿದ್ದಾರೆ. ಅದಕ್ಕೆ ಶಿವಸೇನೆ ಸಂಸದರು 'ಅತ್ಯಂತ ಭ್ರಷ್ಟರಾಗಿರುವವರೇ ಕೇಂದ್ರ ತನಿಖಾ ಸಂಸ್ಥೆಗಳಿಂದ ತನಿಖೆಗೆ ಒತ್ತಾಯಿಸಿದ್ದಾರೆ' ಎಂದು ತಿರುಗೇಟು ನೀಡಿದ್ದಾರೆ. ಮಹಾರಾಷ್ಟ್ರದಲ್ಲಿರುವ ಸದ್ಯದ ಸರ್ಕಾರದಲ್ಲಿನ ಪಕ್ಷಗಳು ಪರಸ್ಪರ ಹೊಂದಿಕೊಳ್ಳುತ್ತಿಲ್ಲ ಯಾವ ಕಾರಣಕ್ಕಾಗಿ ಗೃಹ ಸಚಿವರನ್ನು ಸಮರ್ಥಿಸಲಾಗುತ್ತಿವೆ ಎಂದು ಜಬಲ್ಪುರ ಬಿಜೆಪಿ ಸಂಸದ ರಾಕೇಶ್ ಸಿಂಗ್ ಪ್ರಶ್ನೆ ಮಾಡಿದ್ದಾರೆ.

**ಪವಾರ್ ಹೇಳಿಕೆಗೆ ಟೀಕೆ:** ಪ್ರಕರಣಕ್ಕೆ ಸಂಬಂಧಿಸಿದಂತೆ ಅನಿಲ್ ದೇಶ್‌ಮುಖ್ ರಾಜೀನಾಮೆ ನೀಡುವ ಅಗತ್ಯವಿಲ್ಲ ಐಪಿಎಸ್ ಅಧಿಕಾರಿ ಪರಂಬೀರ್ ಸಿಂಗ್ ಆರೋಪ ಮಾಡಿದ ಸಂದರ್ಭದ ದಿನಗಳಲ್ಲಿ ದೇಶಮುಖ್ ಬಾಗ್ಪುರ್ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯತ್ತಿದ್ದರು ಅದಕ್ಕೆ ಪ್ರಮಾಣ ಪತ್ರವೇ ಇದೆ ಎಂದರು. ರಾಜೀನಾಮೆ ಪಡೆಯ ಬೇಕೆ ಎಂಬ ವಿಚಾರ ಸಿಎಂ ಉದ್ಧವ್ ಠಾಕ್ರೆಗೆ ಬಿಟ್ಟ ವಿಚಾರ ಎಂದರು ಪವಾರ್. ಈ ನಿಟ್ಟಿನಲ್ಲಿ ಯಾವುದೇ ಒತ್ತಡ ಇಲ್ಲ ಎಂದು ಶಿವಸೇನೆ ಹೇಳಿದೆ. ಅದಕ್ಕೆ ಟ್ವೀಟ್ ಮೂಲಕ ಲೇವಡಿ ಮಾಡಿರುವ ಬಿಜೆಪಿ ಮುಖಂಡ ಅಮಿತ್ ಮಾಳವೀಯ ಫೆಬ್ರವರಿ 5–15 ರವರೆಗೆ ದೇಶ್‌ಮುಖ್ ಆಸ್ಪತ್ರೆಯಲ್ಲಿದ್ದರು. ಫೆಬ್ರವರಿ 16–27ರವರೆಗೆ ಕ್ವಾರಂಟೈನ್‌ನಲ್ಲಿದ್ದರು. ಆದರೆ ಅವರು ಫೆಬ್ರವರಿ 15ರಂದು ಪತ್ರಿಕಾಗೋಷ್ಠಿ ನಡೆಸಿದ್ದರು. ಇದೆಂಥಾ ಸುಳ್ಳು ಎಂದು ಪ್ರಶ್ನಿಸಿದ್ದಾರೆ.

**ವರದಿ ಕಳುಹಿಸಿ:** ಮಹಾರಾಷ್ಟ್ರದಲ್ಲಿನ ಬೆಳವಣಿಗೆ ಬಗ್ಗೆ ಕೇಂದ್ರ ಸರ್ಕಾರಕ್ಕೆ ವರದಿ ಕಳುಹಿಸುವಂತೆ ರಾಜ್ಯಪಾಲ ಭಗತ್ ಸಿಂಗ್ ಕೋಶಿಯಾರಿಗೆ ಬಿಜೆಪಿ ಒತ್ತಾಯಿಸಿದೆ. ಇದೇ ವಿಚಾರಕ್ಕೆ ಸಂಬಂಧಿಸಿದಂತೆ ಬಿಜೆಪಿ ನಿಯೋಗ ರಾಜ್ಯಪಾಲರನ್ನು ಭೇಟಿಯಾಗಲಿದೆ.

ಆಧಾರ: ಉದಯವಾಣಿ, ದಿನಾಂಕ:23.03.2021.

## 17. ಗಣಿ ಕಾಯ್ದೆ ತಿದ್ದುಪಡಿ ಲೋಕಸಭೆಯಲ್ಲಿ ಅಂಗೀಕಾರ

ಗಣಿಗಾರಿಕೆ ಕ್ಷೇತ್ರದಲ್ಲಿ ಮಹತ್ವದ ಸುಧಾರಣೆಗಳನ್ನು ತರಲು ಮುಂದಾಗಿರುವ ಕೇಂದ್ರ ಸರ್ಕಾರ, ಗಣಿ ಹಾಗೂ ಖನಿಜ ಕಾಯ್ದೆಯ ತಿದ್ದುಪಡಿ ಮಸೂದೆಯನ್ನು ಲೋಕಸಭೆಯಲ್ಲಿ ಮಂಡಿಸಿ ಅಂಗೀಕಾರ ಪಡೆದುಕೊಂಡಿದೆ. ಈ ತಿದ್ದುಪಡಿಯಿಂದ ದೊಡ್ಡ ಪ್ರಮಾಣದಲ್ಲಿ ಉದ್ಯೋಗ ಸೃಷ್ಟಿಯಾಗಲಿದೆ. ಕೇಂದ್ರ ಸರ್ಕಾರ ಗಣಿಗಳ ಹರಾಜು ಪ್ರಕ್ರಿಯೆ ನಡೆಸಿದರೂ, ಆದಾಯ ರಾಜ್ಯ ಸರ್ಕಾರಗಳಿಗೆ ಸಿಗಲಿದೆ ಎಂದು ಕಲ್ಲಿದ್ದಲು ಮತ್ತು ಗಣಿ ಸಚಿವ ಪ್ರಹ್ಲಾದ್ ಜೋಶಿ ಲೋಕಸಭೆಗೆ ಮಾಹಿತಿ ನೀಡಿದ್ದಾರೆ.

ಗಣಿ ಕ್ಷೇತ್ರದಲ್ಲಿ ಖಾಸಗಿ ಹೂಡಿಕೆ, ನೂತನ ತಂತ್ರಜ್ಞಾನ ತರಲು ಈ ಕಾಯ್ದೆ ನೆರವಾಗಲಿದೆ. ಉದ್ಯಮದಲ್ಲಿ ಹೊಸ ಅವಕಾಶಗಳು ಸೃಷ್ಟಿಯಾಗಲಿವೆ. ರಾಜ್ಯ ಸರ್ಕಾರಗಳಿಗೆ ಈ ಕಾಯ್ದೆಯಿಂದ ಹೆಚ್ಚಿನ ಅನುಕೂಲ ಆಗಲಿದೆ. ಗಣಿ ಹರಾಜಿನಿಂದ ಬರುವ ಎಲ್ಲ ಲಾಭ ಆಯಾ ರಾಜ್ಯ ಸರ್ಕಾರಗಳಿಗೆ ಲಭ್ಯವಾಗಲಿದೆ. ಜೊತೆಗೆ ಗಣಿಗಳ ಹರಾಜು ಸಹಿತ ಎಲ್ಲ ಪ್ರಕ್ರಿಯೆಗಳು ಪಾರದರ್ಶಕವಾಗಿ ನಡೆಯಲಿವೆ ಎಂದು ಅವರು ಮಾಹಿತಿ ನೀಡಿದರು.

ಭಾರತ 95 ವಿವಿಧ ಖನಿಜಗಳನ್ನು ಹೊಂದಿದೆ. ದಕ್ಷಿಣ ಆಫ್ರಿಕಾ, ಆಸ್ಟ್ರೇಲಿಯಾದಷ್ಟೇ ಪ್ರಮಾಣದ ಖನಿಜಗಳನ್ನು ಉತ್ಪಾದನೆ ಮಾಡುವ ಸಾಮರ್ಥ್ಯ ಹೊಂದಿದೆ. ಆದರೂ ಪ್ರತಿವರ್ಷ ದೊಡ್ಡ ಪ್ರಮಾಣದಲ್ಲಿ ಕಲ್ಲಿದ್ದಲು ಇನ್ನಿತರ ಸಂಪನ್ಮೂಲಗಳನ್ನು ಆಮದು ಮಾಡಿಕೊಳ್ಳಲಾಗುತ್ತಿದೆ. ಪ್ರಸ್ತುತ ಭಾರತದ ಜಿಡಿಪಿಗೆ ಗಣಿಗಾರಿಕೆ ಶೇ.1.75 ಕೊಡುಗೆ ನೀಡುತ್ತಿದೆ. ಹೊಸ ಕಾಯ್ದೆ ಜಾರಿಗೆ ಬಂದ ಬಳಿಕ ಈ ಪ್ರಮಾಣ ಶೇ. 2.5ಕ್ಕೆ ಏರಿಕೆ ಆಗಲಿದೆ ಎಂದು ಸಚಿವ ಜೋಶಿ ಹೇಳಿದರು.

ಮುಂದಿನ ದಿನಗಳಲ್ಲಿ ಗಣಿಗಾರಿಕೆ ಕ್ಷೇತ್ರದಲ್ಲಿ 55 ಲಕ್ಷ ನೇರ ಹಾಗೂ ಪರೋಕ್ಷ ಉದ್ಯೋಗ ಲಭ್ಯವಾಗಲಿದೆ. ದೇಶದಲ್ಲಿ ಗಣಿಗಾರಿಕೆ ಚಟುವಟಿಕೆಯೂ ಚುರುಕಾಗಲಿದೆ. ಹರಾಜಾಗುವ ಗಣಿಗಳ

ಸಂಖ್ಯೆಯೂ ಏರಿಕೆ ಆಗಲಿದೆ. ಪಾರದರ್ಶಕ ರೀತಿಯಲ್ಲಿ ಹರಾಜು ಪ್ರಕ್ರಿಯೆ ನಡೆಯಲಿದೆ. ಖನಿಜ ಶೋಧನೆಯಿಂದ ಹಿಡಿದು ಉತ್ಪಾದನೆವರೆಗಿನ ಎಲ್ಲ ಪ್ರಕ್ರಿಯೆಗಳನ್ನು ಸರಳಗೊಳಿಸಲಾಗುವುದು. ದೊಡ್ಡ ಪ್ರಮಾಣದಲ್ಲಿ ಉದ್ಯೋಗ ಸೃಷ್ಟಿ ಮಾಡುವುದು, ಖನಿಜ ಉತ್ಪಾದನೆ ಹೆಚ್ಚಿಸುವುದು, ಆಮದು ಪ್ರಮಾಣ ಕಡಿಮೆ ಮಾಡುವುದು ಕಾಯ್ದೆಯ ಪ್ರಮುಖ ಉದ್ದೇಶವಾಗಿದೆ ಎಂದು ಸಚಿವ ಜೋಶಿ ವಿವರಿಸಿದರು. ಭಾರತದ ಕಂಪನಿಗಳ ಜೊತೆ ಪಾಲುದಾರಿಕೆ ಹೊಂದುವ ಮೂಲಕ ವಿದೇಶಿ ಕಂಪನಿಗಳೂ ಗಣಿ ಹರಾಜು ಪ್ರಕ್ರಿಯೆಯಲ್ಲಿ ಭಾಗಿ ಆಗಬಹುದು. ಇದರಿಂದ ವಿದೇಶಿ ಹೂಡಿಕೆಯೂ ಹೆಚ್ಚಳವಾಗುತ್ತದೆ ಎಂದು ಅಭಿಪ್ರಾಯಪಟ್ಟರು.

**ಸಮಿತಿ ರಚನೆಗೆ ಕಾಂಗ್ರೆಸ್ ಆಗ್ರಹ:** ಗಣಿ ಕಾಯ್ದೆಗೆ ತಿದ್ದುಪಡಿ ತರುವುದನ್ನು ವಿರೋಧಿಸುತ್ತಿಲ್ಲ. ಆದರೆ ಇಂಥ ಮಹತ್ವದ ಕಾಯ್ದೆಗಳ ಬಗ್ಗೆ ಪರಾಮರ್ಶೆ ನಡೆಯಬೇಕು. ಈ ಮಸೂದೆಯನ್ನು ಸ್ಥಾಯಿ ಸಮಿತಿಗೆ ವರ್ಗಾವಣೆ ಮಾಡಬೇಕು ಎಂದು ಕಾಂಗ್ರೆಸ್ ಸಂಸದರು ಆಗ್ರಹಿಸಿದ್ದಾರೆ. ಗಣಿಗಾರಿಕೆ ನಡೆಯುವ ಪ್ರದೇಶದ ಸಂಸದರು ಈ ಸಮಿತಿಯಲ್ಲಿ ಸದಸ್ಯರಾಗಿರಬೇಕು ಎಂದು ಒತ್ತಾಯಿಸಿದರು.

**ಪ್ರಮುಖ ಅಂಶಗಳ ಚರ್ಚೆ:**

- ಅಂತರರಾಷ್ಟ್ರೀಯ ಹಸಿವಿನ ಸೂಚ್ಯಂಕದಲ್ಲಿ ಭಾರತಕ್ಕೆ 94ನೇ ಸ್ಥಾನ ನೀಡಿರುವ ಜಾಗತಿಕ ರೇಟಿಂಗ್ ಸಂಸ್ಥೆಯ ವಿರುದ್ಧ ಕೃಷಿ ಸಚಿವ ನರೇಂದ್ರ ಸಿಂಗ್ ತೋಮರ್ ಹರಿಹಾಯ್ದಿದ್ದಾರೆ. ಇದು ನಿಖರ, ಪ್ರಾತಿನಿಧ್ಯ ಹಾಗೂ ಸೂಕ್ತವಾದ ಅಂಕಿಅಂಶ ಅಲ್ಲ ಎಂದಿದ್ದಾರೆ.
- ರೈಲ್ವೆ ಮೂಲಸೌಕರ್ಯವನ್ನು ಖಾಸಗೀಕರಣಗೊಳಿಸುವ ಯಾವುದೇ ಪ್ರಸ್ತಾವನೆ ಇಲ್ಲ. ಕೆಲ ಆಸ್ತಿಗಳನ್ನು ಮಾತ್ರ ಮಾರಾಟ ಮಾಡಲಾಗುತ್ತದೆ ಎಂದು ರೈಲ್ವೆ ಸಚಿವ ಪಿಯೂಷ್ ಗೋಯೆಲ್ ಮಾಹಿತಿ.
- ಕೊರೋನಾ ಲಸಿಕೆ ಕೊವ್ಯಾಕ್ಸಿನ್ ಉತ್ತಮ ಫಲಿತಾಂಶ ನೀಡುತ್ತಿದ್ದು, ಇದನ್ನು ಬದಲಾವಣೆ ಮಾಡುವ ಚಿಂತನೆ ಇಲ್ಲ.

**ಯೂರಿಯಾ ಕೊರತೆ ಇಲ್ಲ:** ದೇಶದ ಯಾವುದೇ ರಾಜ್ಯದಲ್ಲಿ ಯೂರಿಯಾ ಗೊಬ್ಬರದ ಕೊರತೆ ಇಲ್ಲ ಎಂದು ಸಚಿವ ಸದಾನಂದ ಗೌಡ ಸಂಸತ್‌ಗೆ ಲಿಖಿತ ಉತ್ತರ ನೀಡಿದ್ದಾರೆ. ಫೆಬ್ರವರಿವರೆಗೆ ಕೇಂದ್ರ ಸರ್ಕಾರ 388.10 ಲಕ್ಷ ಟನ್ ಯೂರಿಯಾ ಗೊಬ್ಬರವನ್ನು ರಾಜ್ಯಗಳಿಗೆ ಪೂರೈಕೆ ಮಾಡಿದೆ. ಆಯಾ ರಾಜ್ಯಗಳ ಕೃಷಿ ಚಟುವಟಿಕೆಗಳನ್ನು ಪರಿಶೀಲಿಸಿ ರಾಜ್ಯಗಳಿಗೆ ಅಗತ್ಯವಾದಷ್ಟು ಪ್ರಮಾಣದ ರಸಗೊಬ್ಬರ ಪೂರೈಕೆ ಮಾಡಲಾಗುತ್ತಿದೆ. ಉತ್ಪಾದನೆ, ಪೂರೈಕೆ ನಡುವೆ ಸಮನ್ವಯ ಸಾಧಿಸುವಂತೆ ರಾಜ್ಯಗಳಿಗೆ ಸೂಚನೆ ನೀಡಲಾಗಿದೆ. ಯೂರಿಯಾ ಗೊಬ್ಬರ ಪ್ರತಿ 45 ಕೆಜಿಗೆ ಗರಿಷ್ಠ 242 ಮಾರಾಟ ದರವನ್ನು ಸರ್ಕಾರ ನಿಗದಿ ಮಾಡಿದೆ ಎಂದು ಮಾಹಿತಿ ನೀಡಿದರು.

ಆಧಾರ: ವಿಜಯವಾಣಿ, ದಿನಾಂಕ: 20.03.2021

## 18. ದಿಲ್ಲಿ ಆಡಳಿತ ಕುರಿತ ಕಾಯಿದೆಗೆ ಲೋಕಸಭೆ ಸಮ್ಮತಿ

ದೇಶದ ರಾಜಧಾನಿ ದಿಲ್ಲಿ ಮೇಲೆ ಕೇಂದ್ರ ಸರ್ಕಾರ ಹಿಡಿತವನ್ನು ಇನ್ನಷ್ಟು ಬಿಗಿಗೊಳಿಸುವ ನಿಟ್ಟಿನಲ್ಲಿ ರಾಷ್ಟ್ರ ರಾಜಧಾನಿ ದಿಲ್ಲಿ ಭೂಪ್ರದೇಶ ತಿದ್ದುಪಡಿ ವಿಧೇಯಕಕ್ಕೆ ಲೋಕಸಭೆಯ ಅನುಮೋದನೆ ದೊರೆತಿದೆ. ಇದು ಕೇಂದ್ರಾಡಳಿತ ಪ್ರದೇಶದಲ್ಲಿ ಚುನಾಯಿತ ಸರ್ಕಾರಕ್ಕಿಂತ ಲೆಫ್ಟಿನೆಂಟ್ ಗವರ್ನರ್‌ಗೆ ಹೆಚ್ಚಿನ ಅಧಿಕಾರ ನೀಡುತ್ತದೆ. ಚುನಾಯಿತ ಸರ್ಕಾರ ಕೈಗೊಳ್ಳುವ ಯಾವುದೇ ಆಡಳಿತಾತ್ಮಕ ಕ್ರಮಕ್ಕೆ ಮೊದಲು ಗವರ್ನರ್ ಸಮ್ಮತಿ ಪಡೆಯುವುದು ಕಡ್ಡಾಯವಾಗಲಿದೆ.

ವಿಧೇಯಕ ಅಂಗೀಕಾರವು ಅರವಿಂದ್ ಕೇಜ್ರಿವಾಲ್ ಸರ್ಕಾರಕ್ಕೆ ದೊಡ್ಡ ಹಿನ್ನಡೆ ಎಂದೇ ವ್ಯಾಖ್ಯಾನಿಸಲಾಗಿದೆ. ಕೇಜ್ರಿವಾಲ್ ಸರ್ಕಾರ ಮತ್ತು ಲೆಫ್ಟಿನೆಂಟ್ ಗವರ್ನರ್ ನಡುವಿನ ಜಟಾಪಟಿ ಬಗ್ಗೆ

ಸುಪ್ರೀಂಕೋರ್ಟ್ ತೀರ್ಪು ನೀಡಿದ ಮೂರು ವರ್ಷಗಳ ಬಳಿಕ ಈ ವಿಧೇಯಕ ಸಂಸತ್ತಿನಲ್ಲಿ ಮಂಡಿಸಲಾಗಿದೆ. ಸಿಎಂ ಅರವಿಂದ್ ಕೇಜ್ರಿವಾಲ್ "ಈ ಬೆಳವಣಿಗೆ ದಿಲ್ಲಿ ನಾಗರಿಕರಿಗೆ ಮಾಡಿದ ಅವಮಾನ," ಎಂದು ಆಕ್ರೋಶ ವ್ಯಕ್ತಪಡಿಸಿದ್ದಾರೆ.

ಆಧಾರ: ವಿಜಯ ಕರ್ನಾಟಕ, ದಿನಾಂಕ: 23.03.2021

## 19.ಜೈವಿಕ ಕೀಟನಾಶಕ ಬಳಕೆ ಹೆಚ್ಚಿಸಲು ಕ್ರಮ

ರೈತರು ಖರೀದಿಸುವ ಕೀಟನಾಶಕಗಳ ಮೇಲಿನ ಸಬ್ಸಿಡಿಯನ್ನು ಕಂಪನಿಗಳಿಗೆ ನೀಡುವ ಬದಲು, ನೇರವಾಗಿ ರೈತರ ಬ್ಯಾಂಕ್ ಖಾತೆಗೆ ವರ್ಗಾಯಿಸುವ ಬಗ್ಗೆ ಸರ್ಕಾರ ಗಮನ ಹರಿಸುತ್ತಿದೆ. ಈ ಕುರಿತಂತೆ ಕೆಲ ವಿಚಾರಗಳನ್ನು ಚರ್ಚಿಸಿ, ಸ್ಪಷ್ಟವಾದ ಯೋಜನೆ ರೂಪಿಸುವ ಪ್ರಯತ್ನಕ್ಕೆ ಕೈ ಹಾಕಲಾಗಿದೆ ಎಂದು ಕೇಂದ್ರ ರಸಗೊಬ್ಬರ ಸಚಿವ ಡಿ.ವಿ. ಸದಾನಂದ ಗೌಡ ತಿಳಿಸಿದ್ದಾರೆ.

ಲೋಕಸಭಾ ಕಲಾಪದಲ್ಲಿ ಬಿಜೆಪಿ ಸಂಸದ ಜಗದಂಬಿಕಾ ಪಾಲ್ ಅವರು ಸಬ್ಸಿಡಿ ಹಣ ನೇರ ವರ್ಗಾವಣೆಗೆ ಬಗ್ಗೆ ಕೇಳಿದ ಪ್ರಶ್ನೆಗೆ ಉತ್ತರಿಸಿದರು. ಬಿಜೆಪಿಯ ಮತ್ತೊಬ್ಬ ಸಂಸದ ವರುಣ್ ಗಾಂಧಿ ಮಾತನಾಡಿ, ರೈತರಿಗೆ ನೇರ ಹಣ ವರ್ಗಾವಣೆಯು ಬಿತ್ತನೆ ಕಾಲದಲ್ಲಿ ಆದರೆ ರೈತರಿಗೆ ಹೆಚ್ಚು ಉಪಯೋಗವಾಗುತ್ತದೆ. ಈ ಬಗ್ಗೆ ಸರ್ಕಾರ ಗಮನಹರಿಸಿದೆಯೇ ಎಂದು ಕೇಳಿದರು.

ಇದಕ್ಕೆ ಉತ್ತರಿಸಿದ ಸದಾನಂದ ಗೌಡ, ಹಣ ವರ್ಗಾವಣೆಯನ್ನು ಬಿತ್ತನೆ ಕಾಲದಲ್ಲಿ ಮಾಡಬೇಕೇ, ಬೇಡವೇ ಎಂಬುದನ್ನು ಕೃಷಿ ಇಲಾಖೆ ನಿರ್ಧರಿಸಬೇಕಿದೆ ಎಂದರು. ಇದೇ ವೇಳೆ, ಬಿಜೆಪಿಯ ಉದಯ್ ಸಿಂಗ್ ಮಾತನಾಡಿ, ಕೀಟನಾಶಕ, ರಸಗೊಬ್ಬರದ ಸಬ್ಸಿಡಿಯು ರಾಸಾಯನಿಕ ಕೀಟನಾಶಕಗಳಿಗೆ ಅನ್ವಯವಾಗುವುದಿಲ್ಲವೇ ಎಂದು ಪ್ರಶ್ನಿಸಿದರು. ಇದಕ್ಕೆ ಉತ್ತರಿಸಿದ ಗೌಡರು, ರಾಸಾಯನಿಕ ಕೀಟ ನಾಶಕಗಳ ಬಳಕೆಯನ್ನು ಆದಷ್ಟೂ ತಗ್ಗಿಸಿ, ಜೈವಿಕ ಕೀಟನಾಶಕಗಳ ಬಳಕೆಯನ್ನು ಹೆಚ್ಚಿಸಲು ಸರ್ಕಾರ ಮುಂದಡಿಯಿಟ್ಟಿದೆ. ಈ ಬಗ್ಗೆ ಸ್ಪಷ್ಟ ರೂಪುರೇಷೆ ರೂಪಿಸಲಾಗುತ್ತದೆ ಎಂದರು.

ಕಾಂಗ್ರೆಸ್‌ನ ಮನೀಶ್ ತಿವಾರಿ, ಸರ್ಕಾರ ಈಗಾಗಲೇ ನ್ಯಾಷನಲ್ ಫರ್ಟಿಲೈಸರ್ಸ್ ಲಿಮಿಟೆಡ್‌ನಿಂದ ಬಂಡವಾಳ ಹಿಂದೆಗೆಯಲು ಕ್ರಮ ಕೈಗೊಂಡಿದೆ. ಅದರಿಂದ ಬರುವ ಹಣವನ್ನು ರಾಷ್ಟ್ರೀಯ ಏಕತಾ ನಿಧಿಯಲ್ಲಿ ಹಾಕುವ ಬದಲು, ಆ ಹಣವನ್ನು ಹಸಿರು ಕೀಟನಾಶಕಗಳ ಬಳಕೆಯ ಉತ್ತೇಜನಕ್ಕೆ ಬಳಸಬಹುದೇ ಎಂದು ಕೇಳಿದರು. ಇದಕ್ಕೆ ಉತ್ತರಿಸಿದ ಸಚಿವರು, ಈ ಸಲಹೆಯನ್ನು ಪರಿಶೀಲಿಸಲಾಗುತ್ತದೆ" ಎಂದರು.

ಕರ್ನಾಟಕದ ಮತ್ತೊಬ್ಬ ಸಂಸದ ಎಲ್.ಹನುಮಂತಯ್ಯ ಮಾತನಾಡಿ, ಲಕ್ಷದ್ವೀಪದಲ್ಲಿ ಕೇವಲ 70 ಸಾವಿರ ಜನಸಂಖ್ಯೆಯಿದ್ದು, ಅಲ್ಲಿ ಅಪರಾಧ ಪ್ರಮಾಣ ಕಡಿಮೆಯಿದೆ. ಕೇಂದ್ರಾಡಳಿತ ಪ್ರದೇಶಗಳಲ್ಲಿ ಅಪರಾಧ ನಿಯಂತ್ರಣ ತಡೆ ಕಾಯ್ದೆ ಜಾರಿಗೊಳಿಸುವ ಔಚಿತ್ಯವನ್ನು ಪ್ರಶ್ನಿಸಿದರು. ಈಗ ಅಲ್ಲಿ ಚಾಲ್ತಿಯಲ್ಲಿರುವ ಅಪರಾಧ ನಿರ್ಬಂಧ ಕಾನೂನುಗಳೇ ಅಲ್ಲಿ ಕಾನೂನು ಸುವ್ಯವಸ್ಥೆ ಪಾಲನೆಗೆ ಸಾಕು ಎಂದು ಅವರು ಆಗ್ರಹಿಸಿದರು.

**ಈರಣ್ಣ ಆಗ್ರಹ:** ಕರ್ನಾಟಕ ಸೇರಿ ದೇಶದ ವಿವಿಧೆಡೆ ಇನ್ನೂ ಅಸ್ತಿತ್ವದಲ್ಲಿರುವ ಗರ್ಭಿಣಿಯರ ರಕ್ತ ಹೀನತೆ ಸಮಸ್ಯೆ ಬಗ್ಗೆ ರಾಜ್ಯಸಭಾ ಸದಸ್ಯ ಈರಣ್ಣ ಕಡಾಡಿ ಅವರು ಸರ್ಕಾರದ ಗಮನ ಸೆಳೆದರು. ಇದಕ್ಕೆ ಉತ್ತರಿಸಿದ ಕೇಂದ್ರ ಆರೋಗ್ಯ ಸಚಿವ ಡಾ. ಹರ್ಷವರ್ಧನ್, ದೇಶದಲ್ಲಿ ಶೇ.50ರಷ್ಟು ಗರ್ಭಿಣಿಯರು ಇನ್ನೂ ಈ ಸಮಸ್ಯೆಯಿಂದ ಬಳಲುತ್ತಿದ್ದಾರೆ. ಈ ಬಗ್ಗೆ ಸೂಕ್ತ ಕ್ರಮಗಳನ್ನು ಕೈಗೊಳ್ಳಲಾಗಿದೆ' ಎಂದರು.

**ಹಿಂದಿ ಹೇರಿಕೆಗೆ ಚಂದ್ರಶೇಖರ್ ವಿರೋಧ:** ಕಲಾಪದಲ್ಲಿ ಮಾತನಾಡಿದ ಕರ್ನಾಟಕದ ಕಾಂಗ್ರೆಸ್ ಸಂಸದ ಬಿ.ಜಿ.ಚಂದ್ರಶೇಖರ್, ಕೊರೋನಾ ವಿರುದ್ಧ ಜನಜಾಗೃತಿ ಮೂಡಿಸುವ ಫಲಕಗಳಲ್ಲಿ ಪ್ರಾಂತೀಯ ಭಾಷೆಗಳ ಮೇಲೆ ಹಿಂದಿ ಹೇರಿಕೆ ಅವ್ಯಾಹತವಾಗಿ ನಡೆಯುತ್ತಿದೆ ಎಂದು ಆಪಾದಿಸಿದರು. ಎಲ್ಲಿ ನೋಡಿದರೂ ಇಂಗ್ಲೀಷ್ ಅಥವಾ ಹಿಂದಿ ಭಾಷೆಯಲ್ಲಿರುವ ಜಾಗೃತಿ ಫಲಕಗಳು, ಪ್ರಕಟಣೆಗಳು

ರಾರಾಜಿಸುತ್ತಿವೆ. ಈ ಮೂಲಕ, ಪ್ರಾಂತೀಯ ಭಾಷೆಗಳನ್ನು ಕಡೆಗಣಿಸಲಾಗಿದೆ ಎಂದು ಅವರು ತೀವ್ರ ಅಸಮಾಧಾನ ವ್ಯಕ್ತಪಡಿಸಿದರು.

ಆಧಾರ: ಉದಯವಾಣಿ, ದಿನಾಂಕ: 24.03.2021

## 20. ಪಿಎಫ್ ಮಿತಿ ರೂ. 5 ಲಕ್ಷಕ್ಕೆ ಏರಿಕೆ, ತೆರಿಗೆ ವಿನಾಯಿತಿ ಮಿತಿ ವಿಸ್ತರಣೆ ಹಣಕಾಸು ವಿಧೇಯಕಕ್ಕೆ ಒಪ್ಪಿಗೆ

ಭವಿಷ್ಯ ನಿಧಿಗೆ(ಪಿಎಫ್) ವಾರ್ಷಿಕ ಹೂಡಿಕೆ ಮಿತಿಯನ್ನು ರೂ.2.5 ಲಕ್ಷದಿಂದ ರೂ.5 ಲಕ್ಷಕ್ಕೆ ಏರಿಕೆ ಮಾಡಿ ತೆರಿಗೆ ವಿನಾಯಿತಿ ಮಿತಿಯನ್ನು ವಿಸ್ತರಿಸಿರುವುದಾಗಿ ವಿತ್ತ ಸಚಿವೆ ನಿರ್ಮಲಾ ಸೀತಾರಾಮನ್ ಸಂಸತ್ತಿಗೆ ತಿಳಿಸಿದರು. ಈ ಮಧ್ಯೆ. 2021–22ರ ಹಣಕಾಸು ವಿಧೇಯಕಕ್ಕೆ 127 ತಿದ್ದುಪಡಿ ಸಹಿತ ಲೋಕಸಭೆ ಧ್ವನಿಮತದಿಂದ ಅಂಗೀಕರಿಸಿದೆ.

ಲೋಕಸಭೆಯಲ್ಲಿ ವಿಧೇಯಕದ ಮೇಲಿನ ಚರ್ಚೆ ವೇಳೆ ಮಾತನಾಡಿದ ಸಚಿವೆ ಈ ವಿನಾಯಿತಿಯು ಪಿಎಫ್‌ಗೆ ಉದ್ಯೋಗದಾತರು ಕೊಡುಗೆ ನೀಡದೇ ಇರುವ ಕೇಸ್‌ಗಳಿಗೆ ಅನ್ವಯಿಸುತ್ತದೆ ಎಂದು ಸ್ಪಷ್ಟಪಡಿಸಿದರು. ಇದಕ್ಕೂ ಮುನ್ನ ಫೆಬ್ರವರಿ 1 ರಂದು ಕೇಂದ್ರ ಮುಂಗಡ ಪತ್ರ ಮಂಡಿಸುವ ವೇಳೆ ಅವರು ಉದ್ಯೋಗಿಗಳು ವಾರ್ಷಿಕ 2.5 ಲಕ್ಷ ರೂಪಾಯಿಗಿಂತ ಹೆಚ್ಚು ಪಿಎಫ್‌ಗೆ ಹೂಡಿಕೆ ಮಾಡಿದರೆ ಏಪ್ರಿಲ್ 1 ರಿಂದ ಅಂತಹ ಹೂಡಿಕೆಗೆ ತೆರಿಗೆ ಪಾವತಿಸಬೇಕಾಗುತ್ತದೆ ಎಂದು ಹೇಳಿದ್ದರು.

ಈ ಬದಲಾವಣೆಯಿಂದ ತೆರಿಗೆ ಪಾವತಿಸಬೇಕಾದವರು ಶೇಕಡ 1ರಷ್ಟು ಜನ ಮಾತ್ರ. ಉಳಿದವರ ಹೂಡಿಕೆ ರೂ2.5 ಲಕ್ಷದೊಳಗೆ ಇರುವ ಕಾರಣ ಅವರಿಗೆ ಇದರಿಂದ ಯಾವುದೇ ತೊಂದರೆ ಆಗಲಾರದು ಎಂದು ಸಚಿವೆ ಸ್ಪಷ್ಟಪಡಿಸಿದರು.

**ಇಂಧನ ಜಿಎಸ್‌ಟಿ ವ್ಯಾಪ್ತಿಗೆ ಚರ್ಚೆ:** ಮುಂದಿನ ಜಿಎಸ್‌ಟಿ ಕೌನ್ಸಿಲ್ ಸಭೆಯಲ್ಲಿ ಪೆಟ್ರೋಲ್, ಡೀಸೆಲ್ ಅನ್ನು ಜಿಎಸ್‌ಟಿ ವ್ಯಾಪ್ತಿಗೆ ತರುವ ಬಗ್ಗೆ ಚರ್ಚೆ ನಡೆಸಲಾಗುವುದು. ಈ ವಿಚಾರವಾಗಿ ಸಂಸತ್ ಸದಸ್ಯರು ಅನೇಕರು ಪ್ರಸ್ತಾಪಿಸಿದ ಕಾರಣ, ಚರ್ಚೆ ನಡೆಸಿ ತೀರ್ಮಾನ ತೆಗೆದುಕೊಳ್ಳಬೇಕಾಗುತ್ತದೆ. ಕೇಂದ್ರ ಸರ್ಕಾರಕ್ಕಷ್ಟೇ ಇದರಿಂದ ಆದಾಯ ಲಭ್ಯವಾಗುತ್ತಿರುವುದಿಲ್ಲ. ರಾಜ್ಯಗಳ ಆದಾಯಕ್ಕೂ ಬಹುದೊಡ್ಡ ಪಾಲು ಇದರಿಂದಲೇ ಬರುತ್ತಿದೆ ಎಂದು ಸಚಿವೆ ನಿರ್ಮಲಾ ತಿಳಿಸಿದರು.

**ರಾಜ್ಯ ಸಭೆ ಕಲಾಪ ಮುಂದೂಡಿಕೆ:** ದೆಹಲಿಯ ಲೆಫ್ಟಿನೆಂಟ್ ಗವರ್ನರ್‌ಗೆ ಪರಮಾಧಿಕಾರ ನೀಡುವ ಮಸೂದೆ ವಿಚಾರವಾಗಿ ಆಪ್ ಮತ್ತು ಕಾಂಗ್ರೆಸ್ ಸದಸ್ಯರು ರಾಜ್ಯಸಭೆಯಲ್ಲಿ ಗದ್ದಲ ನಡೆಸುವ ಕಾರಣ ಕಲಾಪವನ್ನು ಎರಡು ಸಾರಿ ಕಿರು ಅವಧಿಯವರೆಗೆ ಮುಂದೂಡಲಾಗಿತ್ತು. ಭ್ರಷ್ಟಚಾರದ ಆರೋಪಕ್ಕೆ ಗುರಿಯಾಗಿರುವ ಮಹಾರಾಷ್ಟ್ರ ಗೃಹ ಸಚಿವ ಅನಿಲ್ ದೇಶ್‌ಮುಖ್ ರಾಜೀನಾಮೆಗೆ ಆಗ್ರಹಿಸಿ ರಾಜ್ಯಸಭೆಯಲ್ಲಿ ಪ್ರತಿಭಟನೆ ನಡೆಯಿತು.

**ಸರ್ಕಾರ ನೀಡಿದ ಮಾಹಿತಿ:**

- ಕಳೆದ ಎರಡು ವರ್ಷಗಳ ಅವಧಿಯಲ್ಲಿ 15.5ಲಕ್ಷ ಸೈಬರ್ ಸೆಕ್ಯುರಿಟಿ ಘಟನೆಗಳಾಗಿದ್ದು, 2020ರಲ್ಲೇ 11.58 ಲಕ್ಷ ಸೈಬರ್ ಸೆಕ್ಯುರಿಟಿ ಬೆದರಿಕೆ ಉಂಟಾಗಿತ್ತು.
- ಹಿರಿಯರ ಅಪೌಷ್ಟಿಕತೆ ಹೋಗಲಾಡಿಸಲು ಪೋಷಣ್ ಅಭಿಯಾನ ಆರಂಭಿಸಲು ಸರ್ಕಾರ ಚಿಂತನೆ ನಡೆಸಿದೆ.
- ಪೌರತ್ವ ತಿದ್ದುಪಡಿ ಕಾನೂನು ಅಡಿ ನಿಯಮ ರೂಪಿಸುವುದಕ್ಕೆ ಲೋಕಸಭೆ ಸಮಿತಿಗೆ ಏಪ್ರಿಲ್ 9 ರಾಜ್ಯ ಸಭೆ ಸಮಿತಿಗೆ ಜುಲೈ 9ರ ತನಕ ಕಾಲಾವಕಾಶ ನೀಡಿದ ಸಂಸತ್ತು.
- 2020ರ ಅಕ್ಟೋಬರ್ ನಂತರ ಸತತ 5 ತಿಂಗಳ ಜಿಎಸ್‌ಟಿ ಸಂಗ್ರಹ ರೂ.1 ಲಕ್ಷ ಕೋಟಿ ದಾಟಿದೆ.

- ಡಿಸೆಂಬರ್ ಕೊನೆಗೆ ಬ್ಯಾಂಕುಗಳ ಎನ್‌ಪಿಎ ಪ್ರಮಾಣ ರೂ.5.70 ಲಕ್ಷ ಕೋಟಿಗೆ ಇಳಿಕೆಯಾಗಿದೆ.
- ಜಾಗತಿಕ ದರಕ್ಕೆ ಅನುಗುಣವಾಗಿ ದೇಶೀಯವಾಗಿಯೂ ಖಾದ್ಯ ತೈಲ ಬೆಲೆಯಲ್ಲಿ ಹೆಚ್ಚಿನ ಏರಿಕೆ ಆಗಿಲ್ಲ.
- ರಾಷ್ಟ್ರೀಯ ಮೀನುಗಾರಿಕೆ ನೀತಿ–2020ರ ಬಗ್ಗೆ ಸಲಹೆ ಮತ್ತು ಆಕ್ಷೇಪಗಳನ್ನು ಆಹ್ವಾನಿಸಲಾಗಿದೆ.
- ದೇಶದಲ್ಲಿ ಹೊಸದಾಗಿ 22 ಏಮ್ಸ್‌ಗಳನ್ನು ಸ್ಥಾಪಿಸಲಾಗುತ್ತಿದ್ದು, ಇದರ ಪ್ರಗತಿ ಕಾರ್ಯ ವಿವಿಧ ಹಂತದಲ್ಲಿ ಇದೆ.

ಆಧಾರ: ವಿಜಯವಾಣಿ, ದಿನಾಂಕ:24.03.2021.

## 21. ವಿಧಾನಸಭೆ ಚುನಾವಣೆ ಪ್ರಚಾರಕ್ಕೆ ಅನುವು: ಸಂಸತ್ ಅಧಿವೇಶನ ಮುಕ್ತಾಯ

ಅಸ್ಸಾಂ, ಕೇರಳ, ಪಶ್ಚಿಮ ಬಂಗಾಳ, ತಮಿಳುನಾಡು ಮತ್ತು ಪುದುಚೇರಿ ವಿಧಾನಸಭೆಗಳಿಗೆ ಚುನಾವಣೆ ನಡೆಯಲಿರುವ ಹಿನ್ನೆಲೆಯಲ್ಲಿ ಸಂಸತ್‌ನ ಬಜೆಟ್ ಅಧಿವೇಶನವು ನಿಗದಿಪಡಿಸದ ಅವಧಿಗೆ ಮುನ್ನವೇ ಮುಕ್ತಾಯಗೊಂಡಿತು.

ರಾಜಕೀಯ ಮುಖಂಡರಿಗೆ ಚುನಾವಣಾ ಪ್ರಚಾರದಲ್ಲಿ ಪಾಲ್ಗೊಳ್ಳಲು ಅನುವು ಮಾಡಿಕೊಡುವ ನಿಟ್ಟಿನಲ್ಲಿ ಏಪ್ರಿಲ್ 8ರವರೆಗೆ ನಿಗದಿಯಾಗಿದ್ದ ಅಧಿವೇಶನವನ್ನು ನಿರೀಕ್ಷೆಯಂತೆಯೇ ಅನಿರ್ದಿಷ್ಟ ಅವಧಿಗೆ ಮುಂದೂಡಲಾಯಿತು.

ಪ್ರಧಾನಿ ನರೇಂದ್ರ ಮೋದಿ, ಕಾಂಗ್ರೆಸ್ ಮುಖಂಡ ರಾಹುಲ್ ಗಾಂಧಿ ಮತ್ತಿತರ ಪ್ರಮುಖರು ಅಧಿವೇಶನದ ಕೊನೆಯ ದಿನದ ಕಲಾಪದಲ್ಲಿ ಪಾಲ್ಗೊಂಡಿದ್ದರು.

ಜನವರಿ 23ರಂದು ಪ್ರಾರಂಭವಾದ ಬಜೆಟ್ ಅಧಿವೇಶನ 24 ದಿನ ನಡೆದಿದ್ದರೂ, ವಿವಿಧ ವಿಷಯಗಳ ಕುರಿತ ಚರ್ಚೆಗೆ ಅವಕಾಶ ದೊರೆಯದ ಕಾರಣ ಆಡಳಿತರೂಢ ಎನ್‌ಡಿಎ ಸರ್ಕಾರ ವಿರೋಧ ಪಕ್ಷಗಳ ಟೀಕೆ ಎದುರಿಸಬೇಕಾಯಿತು.

ತೈಲ ಮತ್ತು ಅಡುಗೆ ಅನಿಲದ ಬೆಲೆ ಹೆಚ್ಚಳ ಹಾಗೂ ಕೃಷಿ ಕಾಯ್ದೆ ತಿದ್ದುಪಡಿ ಕುರಿತಂತೆ ವಿಪಕ್ಷಗಳಿಗೆ ಸಮಗ್ರ ಚರ್ಚೆಗೆ ಅವಕಾಶ ನೀಡಿದ್ದರಿಂದ ಮಾರ್ಚ್ 8ರಂದು ಪ್ರಾರಂಭವಾದ ಬಜೆಟ್ ಅಧಿವೇಶನದ ದ್ವಿತೀಯ ಭಾಗದ ಮೊದಲ ಮೂರು ದಿನಗಳ ಕಲಾಪವು ಪ್ರತಿಭಟನೆಗೆ ಸಾಕ್ಷಿಯಾಯಿತು.

ಲೋಕಸಭೆಯ ಸ್ಪೀಕರ್ ಓಂ ಬಿರ್ಲಾ ಕೊರೋನಾ ಪೀಡಿತರಾಗಿರುವ ಕಾರಣ ಅಧಿವೇಶನದ ಕೊನೆಯ ದಿನ ಸ್ಪೀಕರ್ ಸ್ಥಾನದಲ್ಲಿ ಆಸೀನರಾಗಿದ್ದ ಬಿಜು ಜನತಾದಳದ (ಬಿಜೆಡಿ) ಹಿರಿಯ ಸದಸ್ಯ ಭರ್ತೃಹರಿ ಮೆಹತಾಬ್ ಸಮಾರೋಪ ಭಾಷಣ ಮಾಡಿದರು.

ಬಜೆಟ್ ಅಧಿವೇಶನದ ಸಂದರ್ಭ ಲೋಕಸಭೆಯಲ್ಲಿ 24 ದಿನ, 134 ಗಂಟೆಗಳ ಕಾಲ ಕಲಾಪ ನಡೆದಿದ್ದು, ವಿವಿಧ ವಿಷಯಗಳ ಮೇಲೆ ಚರ್ಚೆ ನಡೆಸಿ, ಮಹತ್ವದ 18 ಮಸೂದೆಗಳನ್ನು ಅಂಗೀಕರಿಸಲಾಗಿದೆ. ರಾಜ್ಯಸಭೆಯಲ್ಲಿ 23 ದಿನ, 104 ಗಂಟೆ 23 ನಿಮಿಷ ಕಲಾಪ ನಡೆದಿದೆ ಎಂದು ಸಂಸದೀಯ ವ್ಯವಹಾರಗಳ ಸಚಿವ ಪ್ರಹ್ಲಾದ್ ಜೋಶಿ ಸುದ್ದಿಗಾರರೊಂದಿಗೆ ತಿಳಿಸಿದರು.

ಸಂಸತ್ ಸದಸ್ಯತ್ವದ 17 ವರ್ಷಗಳ ನನ್ನ ಅನುಭವದಲ್ಲಿ ಇದೇ ಮೊದಲ ಬಾರಿಗೆ ವಿರೋಧ ಪಕ್ಷಗಳ ಒಂದು ಬೇಡಿಕೆಯತ್ತ ಅಧ್ಯಕ್ಷರು ಗಮನ ಹರಿಸಲಿಲ್ಲ ಯಾವುದೇ ಚರ್ಚೆಗೂ ನಮಗೆ ಅವಕಾಶ ದೊರೆಯಲಿಲ್ಲ ಎಂದು ರಾಜ್ಯಸಭೆ ಸದಸ್ಯ, ಕಾಂಗ್ರೆಸ್ ಜೈರಾಮ್ ರಮೇಶ್ ಸುದ್ದಿಗಾರರೆದುರು ದೂರಿದರು.

ಆಧಾರ: ಪ್ರಜಾವಾಣಿ, ದಿನಾಂಕ:26.03.2021.

## 22. ಬಜೆಟ್ ಅಧಿವೇಶನದಲ್ಲಿ ಗರಿಷ್ಠ ಉತ್ಪಾದಕತೆ ದಾಖಲು

ಕೇಂದ್ರ ಬಜೆಟ್ ಅಧಿವೇಶನ ಈ ಬಾರಿ ಗರಿಷ್ಠ ಉತ್ಪಾದಕತೆಯನ್ನು ಪ್ರದರ್ಶಿಸಿದೆ. ನಿಗದಿತ ಏಪ್ರಿಲ್ 8ಕ್ಕಿಂತ ಎರಡು ವಾರ ಮುಂಚಿತಾಗಿಯೇ ಬಜೆಟ್ ಅಧಿವೇಶನ ಸಂಪನ್ನಗೊಂಡಿದೆ. ಈ ಅವಧಿಯಲ್ಲಿ ಸಂಸತ್ತಿನ ಉಭಯ ಸದನಗಳು 18 ಮಸೂದೆಗಳನ್ನು ಅಂಗೀಕರಿಸಿವೆ ಎಂದು ಕೇಂದ್ರ ಸಂಸದೀಯ ವ್ಯವಹಾರಗಳ ಸಚಿವ ಪ್ರಹ್ಲಾದ ಜೋಶಿ ಹೇಳಿದ್ದಾರೆ.

ಪಂಚ ರಾಜ್ಯ ಚುನಾವಣೆ ಕಾರಣ ವಿವಿಧ ಪಕ್ಷಗಳ ಪ್ರಮುಖರು ಅಲ್ಲಿ ಪ್ರಚಾರ ಮತ್ತು ಇತರೆ ಚುನಾವಣಾ ಕೆಲಸ ನಿಮಿತ್ತ ತೆರಳಬೇಕಾದ ಕಾರಣ ಮುಂಚಿತವಾಗಿ ಅಧಿವೇಶನವನ್ನು ಕೊನೆಗೊಳಿಸಲಾಗಿದೆ. ಲೋಕಸಭೆ 24 ಕಲಾಪ ನಡೆಸಿದರೆ, ರಾಜ್ಯಸಭೆ 23 ಕಲಾಪ ನಡೆಸಿತು. ಮೊದಲ ಹಂತದಲ್ಲಿ ಲೋಕಸಭೆ 12 ಕಲಾಪ, ರಾಜ್ಯಸಭೆ 11 ಕಲಾಪ ನಡೆಸಿವೆ ಎಂದು ಸಚಿವ ಜೋಶಿ ವಿವರಿಸಿದರು.

ಜನವರಿ 29ರಂದು ಆರಂಭವಾದ ಬಜೆಟ್ ಅಧಿವೇಶನದಲ್ಲಿ ಒಟ್ಟು 20 ಮಸೂದೆಗಳು ಮಂಡಿಸಲ್ಪಟ್ಟಿವೆ. ಈ ಪೈಕಿ ಲೋಕಸಭೆಯಲ್ಲಿ 17 ಮತ್ತು ರಾಜ್ಯಸಭೆಯಲ್ಲಿ 3 ಮಸೂದೆಗಳು ಮಂಡನೆಯಾಗಿವೆ. ಇದರಲ್ಲಿ 18 ಲೋಕಸಭೆಯಲ್ಲಿ, 19 ರಾಜ್ಯಸಭೆಯಲ್ಲಿ ಅಂಗೀಕರಿಸಲ್ಪಟ್ಟ ಮಸೂದೆಗಳ ಸಂಖ್ಯೆ 18 ಎಂದು ಜೋಶಿ ಹೇಳಿದರು.

ಆಧಾರ: ವಿಜಯವಾಣಿ, ದಿನಾಂಕ:26.03.2021

## 23. ಸಂಸತ್ ಕಲಾಪ ಮುಂದೂಡಿಕೆ

ಎರಡೂವರೆ ತಿಂಗಳಿನಿಂದ ನಡೆಯುತ್ತಿದ್ದ ಸಂಸತ್ ಬಜೆಟ್ ಅಧಿವೇಶನ ಮುಕ್ತಾಯವಾಗಿದ್ದು ಸಂಸತ್ ಅಧಿವೇಶನವು ಅನಿರ್ದಿಷ್ಟಾವಧಿಗೆ ಮುಂದೂಡಲ್ಪಟ್ಟಿದೆ. ಈ ಬಾರಿಯ ಕಲಾಪವು ಶೇ.114 ರಷ್ಟು ಫಲದಾಯಕವಾಗಿತ್ತು ಎಂದು ಸರ್ಕಾರ ತಿಳಿಸಿದೆ. ಕಲಾಪದಲ್ಲಿ 18 ವಿಧೇಯಕಗಳನ್ನು 2 ಸದನಗಳಲ್ಲಿ ಅಂಗೀಕರಿಸಲಾಗಿದೆ. ಜನವರಿ 29ರಿಂದ ಶುರುವಾಗಿದ್ದ ಅಧಿವೇಶನ ಏಪ್ರಿಲ್ 8ರಂದು ಅಧಿಕೃತವಾಗಿ ಮುಕ್ತಾಯವಾಗಬೇಕಿತ್ತು. ಐದು ರಾಜ್ಯಗಳಲ್ಲಿನ ವಿಧಾನಸಭೆ ಚುನಾವಣೆ ಹಿನ್ನೆಲೆಯಲ್ಲಿ ಈ ನಿರ್ಧಾರ ಕೈಗೊಳ್ಳಲಾಗಿದೆ.

**ಸ್ಪೀಕರ್ ಧನ್ಯವಾದ:** ಕೊರೋನಾ ಸೋಂಕಿಗೆ ತುತ್ತಾಗಿರುವ ಸ್ಪೀಕರ್ ಓಂ ಬಿರ್ಲಾ, ಕಲಾಪದ ಕಡೆಯ ದಿನಗಳಿಗೆ ಹಾಜರಾಗಲಿಲ್ಲ, ಕಲಾಪಗಳನ್ನು ಸುಗಮವಾಗಿ ನಡೆಸಿದ್ದಕ್ಕಾಗಿ ಬಿರ್ಲಾ ಅವರು ಸಮಿತಿಯ ಸದಸ್ಯರಿಗೆ ಧನ್ಯವಾದ ಅರ್ಪಿಸಿದ್ದಾರೆ.

**ಗದ್ದಲದ ನಡುವೆಯೂ ಚರ್ಚೆ:** ಲೋಕಸಭೆಯಲ್ಲಿ ಫೆಬ್ರವರಿ 1 ರಂದು ಕೇಂದ್ರ ಸರ್ಕಾರ ತನ್ನ ಬಜೆಟ್ ಮಂಡಿಸಿತ್ತು. ರೈತರ ಪ್ರತಿಭಟನೆ ಕುರಿತಾಗಿ ವಿಪಕ್ಷಗಳು ನಡೆಸಿದ ಗದ್ದಲ ನಡೆಸಿದ ಕಾರಣ ಮೂರು ದಿನ ಕಲಾಪ ನಡೆಯಲಿಲ್ಲ. ಮಾರ್ಚ್ 8ರಿಂದ ಮತ್ತೊಂದು ಸುತ್ತಿನ ಬಜೆಟ್ ಅಧಿವೇಶನ ಆರಂಭವಾಯಿತು. ಈ ಬಾರಿ ಕಲಾಪವನ್ನು ಎರಡು ಭಾಗಗಳಾಗಿ ವಿಂಗಡಿಸಲಾಗಿತ್ತು. ಮೊದಲಾರ್ಧದಲ್ಲಿ, ವಿವಿಧ ಇಲಾಖೆಗಳ ಆರ್ಥಿಕ ಬೇಡಿಕೆಯ ವಿಶ್ಲೇಷಣೆಗಾಗಿ ನೇಮಿಸಲಾಗಿದ್ದ ಸ್ಥಾಯಿ ಸಮಿತಿಗಳ ವರದಿಯ ಚರ್ಚೆಗಳು ನಡೆದವು. ದ್ವಿತೀಯಾರ್ಧದಲ್ಲಿ 2021–22 ರ ಆರ್ಥಿಕ ಮಸೂದೆಯ ಬಗ್ಗೆ ಚರ್ಚೆಗಳನ್ನು ನಡೆಸಲಾಯಿತು.

ಆಧಾರ: ಉದಯವಾಣಿ, ದಿನಾಂಕ:26.03.2021

# ಭಾಗ–3

# ಕೇಂದ್ರ ಸರ್ಕಾರದ ಸುದ್ದಿಗಳು

## 1. ಇಂದಿನಿಂದ 10 ವ್ಯವಸ್ಥೆ ಬದಲು

ಜನವರಿ 1 ರಿಂದ ದೇಶದಲ್ಲಿ ಅನೇಕ ನಿಯಮಗಳು ಬದಲಾಗಲಿವೆ. ದೇಶಾದ್ಯಂತ ನಾಲ್ಕು ಚಕ್ರವಾಹನಗಳಿಗೆ ಫಾಸ್ಟ್ಯಾಗ್ ಕಡ್ಡಾಯ, ಬ್ಯಾಂಕಿಂಗ್ ವಂಚನೆ ತಡೆಯಲು ಹೊಸ ಚೆಕ್ ಪಾವತಿ ವ್ಯವಸ್ಥೆ, ಚಿಕ್ಕ ಉದ್ದಿಮೆಗಳಿಗಾಗಿ ಜಿಎಸ್‌ಟಿ ಫೈಲಿಂಗ್ ವ್ಯವಸ್ಥೆ ಜಾರಿಯಾಗಲಿದೆ. ಹೊಸ ನಿಯಮಗಳ ಬಗ್ಗೆ ಇಲ್ಲಿದೆ ಮಾಹಿತಿ:–

- **ಚೆಕ್‌ಗಳಿಗಾಗಿ 'ಪಾಸಿಟಿವ್ ಪಾವತಿ'** : ಜನವರಿ 1 ರಿಂದ 50 ಸಾವಿರ ರೂಪಾಯಿಗೂ ಅಧಿಕ ಮೊತ್ತದ ಚೆಕ್ ವಹಿವಾಟು ನಡೆಸುವವರು ಬ್ಯಾಂಕ್ ಖಾತೆ, ಚೆಕ್ ನಂಬರ್, ಚೆಕ್ ದಿನಾಂಕ, ಪಾವತಿದಾರರ ಹೆಸರು ಸೇರಿದಂತೆ ಇತರೆ ಮುಖ್ಯ ವಿವರಗಳನ್ನು ಮತ್ತೊಮ್ಮೆ ಖಾತ್ರಿ ಪಡಿಸಬೇಕಾಗುತ್ತದೆ, ಇಲ್ಲದಿದ್ದರೆ ಚೆಕ್ ಬೌನ್ಸ್ ಆಗುವ ಸಾಧ್ಯತೆ ಇರುತ್ತದೆ.
- **ಕಾಂಟ್ಯಾಕ್ಟ್‌ಲೆಸ್ ಕಾರ್ಡ್ ವಹಿವಾಟು ಮಿತಿ ಹೆಚ್ಚಳ:** ಕಾಂಟ್ಯಾಕ್ಟ್‌ಲೆಸ್ ಕಾರ್ಡ್‌ಗಳ ಪಾವತಿ ಮಿತಿಯನ್ನು ರೂ.5000 ರೂಪಾಯಿಗೆ ಹೆಚ್ಚಿಸಲಾಗಿದೆ. ಇದುವರೆಗೂ ಈ ಮಿತಿ ಕೇವಲ ರೂ.2000 ರೂಪಾಯಿಗಳಷ್ಟು ಮಾತ್ರವಿತ್ತು.
- **ಚಿಕ್ಕ ಉದ್ಯಮಗಳ ಜಿಎಸ್‌ಟಿ ರಿಟರ್ನ್ಸ್** : ರೂ.5 ಕೋಟಿ ರೂಪಾಯಿಯವರೆಗೆ ಟರ್ನ್ ಓವರ್ ಚಿಕ್ಕ ಉದ್ಯಮಗಳು, ಇನ್ಮುಂದೆ ವರ್ಷಕ್ಕೆ 12 ಬಾರಿ ಜಿಎಸ್‌ಟಿ ರಿಟರ್ನ್ಸ್ ಫೈಲ್ ಮಾಡುವ ಬದಲು ಕೇವಲ 4 ಬಾರಿ ರಿಟರ್ನ್ಸ್ ಫೈಲ್ ಮಾಡಿದರೆ ಸಾಕು.
- **ಹೆಚ್ಚಲಿದೆ ಎಲ್‌ಸಿಡಿ ಟಿವಿ ದರ:** ಎಲ್‌ಸಿಡಿ ಟಿವಿ, ಫ್ರಿಡ್ಜ್ ಮತ್ತು ಇತರ ಗೃಹೋಪಯೋಗಿ ವಸ್ತುಗಳು ಹೊಸ ವರ್ಷದಿಂದ ದುಬಾರಿಯಾಗಲಿವೆ. ತಾಮ್ರ, ಉಕ್ಕು, ಅಲ್ಯುಮಿನಿಯಂ ದರ ಹೆಚ್ಚಾದ್ದರಿಂದ ಈ ನಿರ್ಧಾರ.
- **ಸರಳ ವಿಮೆ ಪಾಲಿಸಿ:** ದೇಶದ ವಿಮಾ ಯೋಜನೆ ಕಂಪನಿಗಳೆಲ್ಲವೂ ಜನವರಿ 1 ರಿಂದ 'ಸರಳ ಜೀವನ ವಿಮೆ' ಎನ್ನುವ ಏಕರೂಪದ ವಿಮಾ ಪಾಲಿಸಿಯನ್ನು ಜಾರಿ ಮಾಡಬೇಕು ಎಂದು ಐ.ಆರ್.ಡಿ.ಎ.ಐ ಆದೇಶಿಸಿದೆ. ನವ ಗ್ರಾಹಕರಿಗೆ ಇದು ವರಮಾನವೆನ್ನಲಾಗುತ್ತದೆ.
- **ಎಲ್‌ಪಿಜಿ ಸಿಲಿಂಡರ್ ಬೆಲೆಗಳು:** ತೈಲ ಮಾರುಕಟ್ಟೆ ಕಂಪನಿಗಳು ಪ್ರತಿ ತಿಂಗಳ ಮೊದಲ ದಿನ ಎಲ್‌ಪಿಜಿಯ ಬೆಲೆಯನ್ನು ಪರಿಷ್ಕರಿಸಲಿದೆ. ಹೀಗಾಗೀ ತಿಂಗಳ ಮಧ್ಯದಲ್ಲಿ ಬೆಲೆ ಏರಿಕೆಯಾಗದೇ ತಿಂಗಳ ಆರಂಭದಲ್ಲೇ ನಿಶ್ಚಯವಾಗಲಿದೆ.
- **ಲ್ಯಾಂಡ್ ಲೈನ್ ಟು ಮೊಬೈಲ್ ಫೋನ್‌ಗೆ ಕರೆ:** ಲ್ಯಾಂಡ್ ಲೈನ್‌ಗಳಿಂದ ಮೊಬೈಲ್ ಫೋನ್‌ಗಳಿಗೆ ಕರೆ ಮಾಡಲು ಬಯಸುವವರು '0' ನಮೂದಿಸುವುದು ಕಡ್ಡಾಯ. 0 ಬಟನ್ ಒತ್ತಿದ ಬಳಿಕವೇ ಮೊಬೈಲ್ ಸಂಖ್ಯೆಯನ್ನು ಒತ್ತಬೇಕಾಗುತ್ತದೆ.
- **ಕಾರುಗಳು ದುಬಾರಿ:** ದೇಶದ ಪ್ರಮುಖ ಕಾರು ಉತ್ಪಾದಕ ಕಂಪನಿಗಳಾದ ಮಾರುತಿ ಸುಜುಕಿ ಇಂಡಿಯಾ, ಮಹೀಂದ್ರ ಮತ್ತು ಮಹೀಂದ್ರಾ ಹ್ಯುಂಡೈ ಜನವರಿ 1 ರಿಂದ ತನ್ನ ವಾಹನಗಳ ಬೆಲೆಯನ್ನು ಹೆಚ್ಚಿಸಲಿದೆ.
- **ಕೆಲವು ಮೊಬೈಲ್‌ಗಳಲ್ಲಿ ವಾಟ್ಸ್‌ಆ್ಯಪ್ ಕೆಲಸ ಮಾಡಲ್ಲ:** ಜನಪ್ರಿಯ ಮೆಸೇಜಿಂಗ್ ಪ್ಲಾಟ್‌ಫಾರ್ಮ್ ವಾಟ್ಸ್‌ಆ್ಯಪ್ ಜನವರಿ 1 ರಿಂದ ಕೆಲವೊಂದು ಮೊಬೈಲ್ ಫೋನ್‌ಗಳಲ್ಲಿ ಸೇವೆಯನ್ನು ಸ್ಥಗಿತಗೊಳಿಸಲಿದೆ.

- **ಯುಪಿಸಿಐ ಪಾವತಿಗೆ ಶುಲ್ಕ:** ಆಮೆಜಾನ್ ಪೇ, ಗೂಗಲ್ ಪೇ ಮತ್ತು ಫೋನ್ ಪೇ ವಹಿವಾಟಿನ ಮೇಲೆ ಬಳಕೆದಾರರು ಹೆಚ್ಚುವರಿ ಶುಲ್ಕವನ್ನು ಪಾವತಿಸಬೇಕಾಗಬಹುದು. ಜನವರಿ 1 ರಿಂದ ಥರ್ಡ್ ಪಾರ್ಟಿ ಅಪ್ಲಿಕೇಶನ್ ಪೂರೈಕೆದಾರರು ನಡೆಸುತ್ತಿರುವ ಯುಪಿಸಿಐ ಪಾವತಿ ಸೇವೆಗೆ ಹೆಚ್ಚುವರಿ ಶುಲ್ಕ ವಿಧಿಸಲು ಎನ್‌ಪಿಸಿಐ ನಿರ್ಧರಿಸಿದೆ ಎಂದು ಹೇಳಲಾಗುತ್ತಿದೆ. ಹೊಸ ವರ್ಷದಿಂದ ಥರ್ಡ್ ಪಾರ್ಟಿ ಅಪ್ಲಿಕೇಶನ್‌ಗಳಿಗೆ ಎನ್‌ಪಿಸಿಐ ಶೇ.30ರ ಕ್ಯಾಪ್ ವಿಧಿಸಿದೆ.

ಆಧಾರ: ಉದಯವಾಣಿ, ದಿನಾಂಕ:01.01.2021

## 2. ಜಿಎಸ್‌ಟಿ ಸಂಗ್ರಹದಲ್ಲಿ ಮಹಾದಾಖಲೆ

ಕೊರೋನಾ ನಂತರದಲ್ಲಿ ಆರ್ಥಿಕತೆ ಚೇತರಿಸಿಕೊಂಡಿದೆ ಎಂಬುದಕ್ಕೆ ಸಾಕ್ಷಿಯಾಗಿ, ಡಿಸೆಂಬರ್ ತಿಂಗಳಲ್ಲಿ ರೂ.1.15 ಲಕ್ಷ ಕೋಟಿ ಜಿಎಸ್‌ಟಿ ಸಂಗ್ರಹವಾಗಿದೆ. ವಿಶೇಷವೆಂದರೆ 2017ರ ಜೂನ್ 1 ರಂದು ಜಿಎಸ್‌ಟಿ ಜಮಾನ ಆರಂಭವಾಗಿದ್ದು, ಇದೇ ಮೊದಲ ಬಾರಿಗೆ ಈ ಮೊತ್ತದ ಜಿಎಸ್‌ಟಿ ಸಂಗ್ರಹವಾಗಿದೆ. ಹಾಗೇಯೇ ಆಟೋಮೊಬೈಲ್ ಮಾರುಕಟ್ಟೆ ಕೂಡ ನಿರೀಕ್ಷೆಗೂ ಮೀರಿ ಚೇತರಿಸಿಕೊಂಡಿದೆ.

ಕೊರೋನಾ ಅವಧಿಯಲ್ಲಿ ಸಂಪೂರ್ಣವಾಗಿ ಇಳಿಕೆ ಕಂಡಿದ್ದ ಜಿಎಸ್‌ಟಿ ಸಂಗ್ರಹ ಕಳೆದ ನಾಲ್ಕು ತಿಂಗಳುಗಳಿಂದಲೂ ಏರಿಕೆಯ ಹಾದಿ ಹಿಡಿದಿದೆ. ಸೆಪ್ಟೆಂಬರ್‌ನಲ್ಲಿ ರೂ.95,480 ಕೋಟಿ, ಆಕ್ಟೋಬರ್‌ನಲ್ಲಿ ರೂ.1,05,155 ಕೋಟಿ, ನವೆಂಬರ್‌ನಲ್ಲಿ ರೂ.1,04,963 ಕೋಟಿ ಹಾಗೂ ಡಿಸೆಂಬರ್‌ನಲ್ಲಿ ರೂ.1,15,174 ಕೋಟಿ ರೂಪಾಯಿ ಸಂಗ್ರಹವಾಗಿದೆ. 2019ರ ಏಪ್ರಿಲ್‌ನಲ್ಲಿ ರೂ.1,13,865 ಕೋಟಿ ಸಂಗ್ರಹವಾಗಿದ್ದೇ ಇದುವರೆಗಿನ ದಾಖಲೆ.

ಜಿಎಸ್‌ಟಿ ಸಂಗ್ರಹದಲ್ಲಿ ಏರಿಕೆಯಾಗುತ್ತಿದ್ದು, ಇದು ಆರ್ಥಿಕ ಚೇತರಿಕೆಯನ್ನು ತೋರಿಸುತ್ತಿದೆ ಎಂದು ಕೇಂದ್ರ ವಿತ್ತ ಸಚಿವಾಲಯ ಹೇಳಿದೆ. 2019ರ ಡಿಸೆಂಬರ್‌ಗೆ ಹೋಲಿಕೆ ಮಾಡಿದರೆ, 2020ರ ಡಿಸೆಂಬರ್‌ನಲ್ಲಿ ಶೇ.11.06 ರಷ್ಟು ಏರಿಕೆಯಾಗಿದೆ.

ಆಧಾರ: ಉದಯವಾಣಿ, ದಿನಾಂಕ:02.01.2021

## 3. ಒಂದು ದೇಶ, ಒಂದು ಗ್ಯಾಸ್ ಗ್ರಿಡ್

ತೈಲ ಕೊರತೆ, ಪರಿಸರ ಮಾಲಿನ್ಯಕ್ಕೆ ಪರಿಹಾರವಾಗಿ ನೈಸರ್ಗಿಕ ಅನಿಲ ಬಳಕೆ ಪ್ರಮಾಣವನ್ನು ಗಣನೀಯವಾಗಿ ಹೆಚ್ಚಿಸುವ ನಿಟ್ಟಿನಲ್ಲಿ ಒಂದು ದೇಶ, ಒಂದು ಗ್ಯಾಸ್ ಗ್ರಿಡ್ ಪರಿಕಲ್ಪನೆಯನ್ನು ಸಾಕಾರಗೊಳಿಸಲು ಕೇಂದ್ರ ಸರ್ಕಾರ ಬದ್ಧವಾಗಿರುವುದಾಗಿ ಪ್ರಧಾನಿ ನರೇಂದ್ರ ಮೋದಿ ಹೇಳಿದ್ದಾರೆ. ಕೊಚ್ಚಿ–ಮಂಗಳೂರು ನೈಸರ್ಗಿಕ ಅನಿಲ್ ಪೈಪ್‌ಲೈನ್ ಯೋಜನೆಯನ್ನು ವಿಡಿಯೋ ಕಾನ್ಫರೆನ್ಸ್ ಮೂಲಕ ಲೋಕಾರ್ಪಣೆ ಮಾಡಿ ಪ್ರಧಾನಿ ಮಾತನಾಡಿದರು. ಒಂದು ದೇಶ, ಒಂದು ಗ್ಯಾಸ್ ಗ್ರಿಡ್ ಪರಿಕಲ್ಪನೆ ಪೂರ್ಣಪ್ರಮಾಣದಲ್ಲಿ ಸಾಕಾರಗೊಂಡಾಗ ರಸಗೊಬ್ಬರ, ರಾಸಾಯನಿಕ, ಪೆಟ್ರೋಲಿಯಂ ಮತ್ತು ಇಂಧನವಲಯಗಳಿಗೆ ಹೆಚ್ಚಿನ ಲಾಭವಾಗಲಿದೆ. ಬಡ, ಮಧ್ಯಮ ವರ್ಗದ ಜನರು ಮತ್ತು ಕೈಗಾರಿಕೋದ್ಯಮಿಗಳಿಗೆ ಅನುಕೂಲವಾಗಲಿದೆ. ಅಲ್ಲದೆ ಸಾವಿರಾರು ಕೋಟಿ ವಿದೇಶಿ ವಿನಿಮಯ ಮೊತ್ತ ಉಳಿತಾಯವಾಗಲಿದೆ ಎಂದರು.

ಸಾರಿಗೆ ಸಂಪರ್ಕ ಹಾಗೂ ಪರಿಸರ ಸ್ನೇಹಿ ಇಂಧನವಲಯದಲ್ಲಿ ಪ್ರಗತಿ ಸಾಧಿಸಿದ ದೇಶಗಳು ಅಭಿವೃದ್ಧಿ ನಕ್ಷೆಯಲ್ಲಿ ಮುಂಚೂಣೆಯಲ್ಲಿರುತ್ತವೆ. ಭಾರತವು ಅಭಿವೃದ್ದಿಯ ಮುಂಚೂಣಿಯಲ್ಲಿರಲು ಎಲ್ಲ ಪ್ರಯತ್ನ ಮಾಡಲಾಗುತ್ತಿದೆ. ಕೇಂದ್ರವು ಇಂಧನ ಪೂರೈಕೆಗೆ ಒಂದು ಸಮಗ್ರ ಯೋಜನೆ ರೂಪಿಸಿದ್ದು, ಪರಿಸರ ಸ್ನೇಹಿ ಇಂಧನ ಬಳಕೆಗೆ ಆದ್ಯತೆ ನೀಡುತ್ತಿದೆ. ಆ ಮೂಲಕ ಜನಸ್ನೇಹಿ ಹಾಗೂ ಉದ್ಯಮ ಸ್ನೇಹಿ ವಾತಾವರಣ ನಿರ್ಮಿಸಲು ಶ್ರಮಿಸುತ್ತಿದೆ ಎಂದರು.

**ಹೆಚ್ಚಳದ ಗುರಿ:** ದೇಶದಲ್ಲಿ ನೈಸರ್ಗಿಕ ಅನಿಲ ಬಳಕೆ ಶೇ.6.3 ರಷ್ಟಿದ್ದು, 2030ರ ವೇಳೆಗೆ ಇದನ್ನು ಶೇ.15ಕ್ಕೆ ಹೆಚ್ಚಿಸುವ ಗುರಿ ಹೊಂದಲಾಗಿದೆ. ಕೊಚ್ಚಿ–ಮಂಗಳೂರು ಪೈಪ್‌ಲೈನ್‌ನಿಂದ ಈ ಭಾಗದ ಕೈಗಾರಿಕೋದ್ಯಮಗಳಿಗೆ ಅನುಕೂಲವಾಗಲಿದೆ. ಜೊತೆಗೆ ವಾಹನಗಳಲ್ಲಿ ಸಿಎನ್‌ಜಿ ಬಳಕೆಗೂ ಉತ್ತೇಜನ ದೊರೆಯಲಿದೆ. ಈ ವ್ಯಾಪ್ತಿಯಲ್ಲಿ ಸುಮಾರು 700 ಸಿಎನ್‌ಜಿ ಸ್ಟೇಷನ್ ಸ್ಥಾಪಿಸಲಾಗುವುದು ಎಂದು ಪ್ರಧಾನಿ ತಿಳಿಸಿದರು.

**ಸರ್ಕಾರ ಬದ್ಧ:** ಅಕ್ಕಿ ಮತ್ತು ಕಬ್ಬಿನಿಂದ ಎಥೆನಾಲ್ ಉತ್ಪಾದಿಸಲು ಪ್ರಾಮಾಣಿಕ ಕೆಲಸ ನಡೆಯುತ್ತಿದೆ. 10 ವರ್ಷಗಳಲ್ಲಿ ಪೆಟ್ರೋಲ್‌ನಲ್ಲಿ ಶೇ.20 ಎಥೆನಾಲ್ ಮಿಶ್ರಣ ಮಾಡುವ ಗುರಿ ನಿಗದಿಪಡಿಸಲಾಗಿದೆ. ಪ್ರತಿಯೊಬ್ಬ ನಾಗರಿಕನಿಗೆ ಕೈಗೆಟುಕುವ, ಮಾಲಿನ್ಯ ರಹಿತ ಇಂಧನ ಮತ್ತು ವಿದ್ಯುತ್ ಒದಗಿಸಲು ಸರ್ಕಾರ ಬದ್ಧವಾಗಿದೆ ಎಂದು ಮೋದಿ ಹೇಳಿದರು.

**6 ವರ್ಷದಲ್ಲಿ ದುಪ್ಪಟ್ಟು ಸಾಧನೆ:** 1987 ರಿಂದ 2014ರ ಅವಧಿಯಲ್ಲಿ ದೇಶದಲ್ಲಿ 15 ಸಾವಿರ ಕಿ.ಮೀ ನೈಸರ್ಗಿಕ ಅನಿಲ ಪೈಪ್‌ಲೈನ್ ಅಳವಡಿಸಲಾಗಿತ್ತು. ಆದರೆ ಕಳೆದ ಆರು ವರ್ಷಗಳ ಅವಧಿಯಲ್ಲಿ 16 ಸಾವಿರ ಕಿ.ಮೀ. ನಷ್ಟು ನೈಸರ್ಗಿಕ ಅನಿಲ ಪೈಪ್‌ಲೈನ್ ಆಳವಡಿಸುವ ಹೊಸ ಕಾಮಗಾರಿಗಳಿಗೆ ಚಾಲನೆ ನೀಡಿದ್ದು, ಮುಂದಿನ ನಾಲ್ಕಾರು ವರ್ಷಗಳಲ್ಲಿ ಪೂರ್ಣಗೊಳ್ಳುವ ನಿರೀಕ್ಷೆ ಇದೆ ಎಂದು ಪ್ರಧಾನಿ ತಿಳಿಸಿದರು.

**ಕರಾವಳಿ ಭಾಗಕ್ಕೆ ಅನುಕೂಲ:** ಕೊಚ್ಚಿ–ಮಂಗಳೂರು ನೈಸರ್ಗಿಕ ಅನಿಲ ಪೈಪ್‌ಲೈನ್ ಯೋಜನೆಯಿಂದ ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಿಗೆ ಹೆಚ್ಚಿನ ಅನುಕೂಲವಾಗಲಿದೆ ಎಂದು ಮುಖ್ಯಮಂತ್ರಿಯವರು ಹೇಳಿದರು. ಈ ಭಾಗದಲ್ಲಿ 4 ಲಕ್ಷಕ್ಕೂ ಹೆಚ್ಚು ಮನೆಗಳಿಗೆ ಪೈಪ್ ಮೂಲಕ ನೈಸರ್ಗಿಕ ಅನಿಲ ಪೂರೈಸಲಾಗುವುದು. ವಾಣಿಜ್ಯ ಚಟುವಟಿಕೆಗಳಿಗೆ, ಉದ್ದಿಮೆಗಳಿಗೆ ವಿಶೇಷವಾಗಿ ಎಂಸಿಎಫ್ ಹಾಗೂ ಎಂಆರ್‌ಪಿಎಲ್‌ಗಳಿಗೆ ಅನುಕೂಲವಾಗಲಿದೆ ಎಂದರು. ಧಾಬೋಲ್–ಬೆಂಗಳೂರು ಅನಿಲ ಪೈಪ್‌ಲೈನ್ ಯೋಜನೆ ಈಗಾಗಲೇ ಕಾರ್ಯಗತವಾಗಿದ್ದು, ಬೆಂಗಳೂರು ನಗರವೊಂದರಲ್ಲೇ 25 ಸಾವಿರ ಮನೆಗಳಿಗೆ ಪೈಪ್ ಮೂಲಕ ನೈಸರ್ಗಿಕ ಅನಿಲ ಪೂರೈಸಲಾಗುತ್ತಿದೆ. ಸುಮಾರು 2.8 ಲಕ್ಷಕ್ಕೂ ಹೆಚ್ಚು ಜನರು ನೈಸರ್ಗಿಕ ಆನಿಲ ಸಂಪರ್ಕ ಕೋರಿ ನೋಂದಾಯಿಸಿಕೊಂಡಿದ್ದು, 1.68 ಲಕ್ಷ ಮನೆಗಳಲ್ಲಿ ಅಗತ್ಯ ಸೌಕರ್ಯ ಕಲ್ಪಿಸಲಾಗುತ್ತಿದೆ ಎಂದರು.

- 450 ಕಿ.ಮೀ ಪೈಪ್‌ಲೈನ್ ಅಳವಡಿಕೆ.
- 12 ಎಂಎಂಎಸ್ ಸಿಎಂಡಿ ಸಾಮರ್ಥ್ಯ
- ರೂ.3 ಸಾವಿರ ಕೋಟಿ ಮೊತ್ತದ ಯೋಜನೆ
- ಪರಿಸರ ಸ್ನೇಹಿ ಸಿಎಂಜಿ, ಸಿಎನ್‌ಜಿ ತಡೆರಹಿತ ಸರಬರಾಜು.
- ಪೆಟ್ರೋಕೆಮಿಕಲ್ಸ್, ಕೆಮಿಕಲ್ಸ್ ರಸಗೊಬ್ಬರ ಕ್ಷೇತ್ರಕ್ಕೆ ಬಹು ಉಪಯೋಗಿ.
- ಗೃಹ ಮತ್ತು ವಾಹನ ಬಳಕೆಗೂ ಸಹಕಾರಿ.

ಆಧಾರ: ವಿಜಯವಾಣಿ, ದಿನಾಂಕ:06.01.2021

## 4. ಲಸಿಕೆ ಹಂಚಿಕೆಗೆ ಪ್ರಧಾನಿ ಸೂತ್ರ

ದೇಶದಲ್ಲಿ ಕೊರೋನಾ ಸೋಂಕು ನಿಗ್ರಹಿಸುವ ಲಸಿಕೆ ನೀಡುವ ಕಾರ್ಯಕ್ರಮ ಜನವರಿ 16 ರಿಂದ ಆರಂಭಗೊಳ್ಳಲಿದೆ. ದೇಶದಲ್ಲಿ ಈಗ ಇರುವ ಸೋಂಕಿನ ಪರಿಸ್ಥಿತಿ ಹಾಗೂ ಲಸಿಕೆ ನೀಡಿಕೆಗೆ ರಾಜ್ಯಗಳು ಹಾಗೂ ಕೇಂದ್ರಾಡಳಿತ ಪ್ರದೇಶಗಳ ಪೂರ್ವ ತಯಾರಿ ಬಗ್ಗೆ ಪ್ರಧಾನಿ ನರೇಂದ್ರ ಮೋದಿ ನೇತೃತ್ವದ ಸಭೆಯಲ್ಲಿ ಸಮಗ್ರವಾಗಿ ಪರಿಶೀಲನೆ ನಡೆಸಿದ ನಂತರ ಈ ತೀರ್ಮಾನ ಕೈಗೊಳ್ಳಲಾಯಿತು.

ಸದ್ಯದಲ್ಲೇ ಲೊಹ್ರಿ, ಮಕರಸಂಕ್ರಾಂತಿ, ಪೊಂಗಲ್, ಮಘ, ಬಿಗು ಸೇರಿದಂತೆ ಹಲವಾರು ಹಬ್ಬಗಳು ಆಚರಿಸಲ್ಪಡುವ ಹಿನ್ನೆಲೆಯಲ್ಲಿ ಜನವರಿ 16ಕ್ಕೆ ಲಸಿಕೆ ನೀಡಿಕೆಗೆ ಚಾಲನೆ ನೀಡಲು ನಿರ್ಧರಿಸಲಾಯಿತು. ಆರಂಭದಲ್ಲಿ 3 ಕೋಟಿ ಆರೋಗ್ಯ ಕಾರ್ಯಕರ್ತರಿಗೆ, ಆ ಬಳಿಕ 50 ವರ್ಷಕ್ಕಿಂತ ಮೇಲ್ಪಟ್ಟ ಹಾಗೂ 50 ವರ್ಷಗಳಿಗಿಂತ ಕೆಳಗಿನ ನಾನಾ ರೀತಿಯ ರೋಗಪೀಡಿತರಿಗೆ ಲಸಿಕೆಯನ್ನು ಆದ್ಯತೆ ಮೇಲೆ ನೀಡಲಾಗುತ್ತಿದೆ. ಸಭೆಯಲ್ಲಿ ಸಂಪುಟ ಕಾರ್ಯದರ್ಶಿ, ಪ್ರಧಾನಿಯವರ ಪ್ರಧಾನ ಕಾರ್ಯದರ್ಶಿ, ಆರೋಗ್ಯ ಕಾರ್ಯದರ್ಶಿ ಮತ್ತಿತರ ಅಧಿಕಾರಿಗಳು ಉಪಸ್ಥಿತರಿದ್ದರು.

ಸಭೆಯಲ್ಲಿ ಕೋವಿನ್ ಆಪ್ ಕುರಿತಾಗಿಯೂ ಚರ್ಚೆ ನಡೆಯಿತು. ಲಸಿಕೆ ಸಂಗ್ರಹ, ಸಂಗ್ರಹಿಸಿಡುವ ತಾಪಮಾನ ಹಾಗೂ ವೈಯಕ್ತಿಕವಾಗಿ ಲಸಿಕೆ ಬಯಸುವ ಫಲಾನುಭವಿಗಳನ್ನು ನೋಂದಾಯಿಸುವ ಡಿಜಿಟಲೀಕರಣಗೊಂಡ ಸಮಗ್ರ ಮಾಹಿತಿ ಇರುವ ಆ್ಯಪ್ ಆಗಿದ್ದು, ಈಗಾಗಲೇ 79 ಲಕ್ಷ ಫಲಾನುಭವಿಗಳು ಅದರಲ್ಲಿ ಹೆಸರು ನೋಂದಾಯಿಸಿಕೊಂಡಿದ್ದಾರೆ.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:10.01.2021

## 5. 16 ರಿಂದ ಕೊರೋನಾ ಲಸಿಕೆ

ಕೋವಿಡ್ ಲಸಿಕೆ ವಿತರಣಾ ಅಭಿಯಾನವು ಜನವರಿ 16 ರಿಂದ ಆದ್ಯತೆ ಮೇರೆಗೆ ದೇಶದಾದ್ಯಂತ ಪ್ರಾರಂಭವಾಗಲಿದೆ ಎಂದು ಪ್ರಧಾನಿ ನರೇಂದ್ರ ಮೋದಿ ಟ್ವೀಟ್ ಮೂಲಕ ಬಹಿರಂಗ ಪಡಿಸಿದ್ದಾರೆ. ಕೊರೋನಾ ವಿರುದ್ಧದ ಹೋರಾಟದಲ್ಲಿ ಭಾರತವು ಐತಿಹಾಸಿಕ ಹೆಜ್ಜೆ ಇಡಲಿದೆ. ನಮ್ಮ ಧೈರ್ಯಶಾಲಿ ವೈದ್ಯರು, ಆರೋಗ್ಯ ಕಾರ್ಯಕರ್ತರು, ಸಫಾಯಿ ಕರ್ಮಚಾರಿಗಳು ಸೇರಿದಂತೆ ಮುಂಚೂಣಿ ಕಾರ್ಯಕರ್ತರಿಗೆ ಆದ್ಯತೆ ಮೇರೆಗೆ ಈ ಮೂಲಕ ಲಸಿಕೆ ನೀಡಲಾಗುವುದು ಎಂದು ತಿಳಿಸಿದ್ದಾರೆ.

ಕಳೆದ ವಾರವಷ್ಟೇ, ಸೀರಂ ಇನ್ಸ್‌ಸ್ಟಿಟ್ಯೂಟ್ ಆಫ್ ಇಂಡಿಯ ಮತ್ತು ಭಾರತ ಬಯೋಟೆಕ್ ಸಂಸ್ಥೆಗಳಿಗೆ ತುರ್ತು ಪರಿಸ್ಥಿತಿಯಲ್ಲಿ ಷರತ್ತುಬದ್ಧ ಲಸಿಕೆ ಬಳಕೆಗೆ ಡಿಸಿಜಿಐ ಅನುಮೋದನೆ ನೀಡಿತ್ತು.

ಮೇಡ್ ಇನ್ ಇಂಡಿಯಾ ಎಂಬ ಹೆಮ್ಮೆಯ ಎರಡು ಕೋವಿಡ್ ಲಸಿಕೆಗಳನ್ನು ಬೇರೆ ದೇಶಗಳೊಂದಿಗೆ ರಫ್ತು ಮಾಡುವ ಮೂಲಕ ಮಾನವ ಜನಾಂಗವನ್ನು ಉಳಿಸಲು ಭಾರತ ಸಿದ್ಧವಾಗಿದೆ ಎಂದು ಪ್ರಧಾನಿ ನರೇಂದ್ರ ಮೋದಿ ಹೇಳಿದ್ದಾರೆ.

16ನೇ ಪ್ರವಾಸಿ ಭಾರತೀಯ ದಿವಸ್ ವರ್ಚುವಲ್ ಸಮಾವೇಶ ಉದ್ಘಾಟಿಸಿ ಮಾತನಾಡಿದ ಅವರು ಭಾರತವು ಪಿಪಿಇ ಕಿಟ್‌ಗಳು, ಮಾಸ್ಕ್‌ಗಳು, ವೆಂಟಿಲೇಟರ್‌ಗಳು, ಪರೀಕ್ಷಾ ಕಿಟ್‌ಗಳನ್ನು ಆಮದು ಮಾಡಿಕೊಳ್ಳುತ್ತಿತ್ತು. ಆದರೀಗ ನಮ್ಮ ದೇಶ ಸ್ವಾವಲಂಬಿಯಾಗಿ, ರಫ್ತು ಮಾಡುವಷ್ಟು ಬದಲಾಗಿದ್ದೇವೆ ಎಂದು ಹೇಳಲು ಹೆಮ್ಮೆ ಎನಿಸುತ್ತದೆ ಎಂದರು.

ಆದ್ಯತೆಯ ಮೇರೆಗೆ 3 ಕೋಟಿ ಆರೋಗ್ಯ ಸೇವೆ ಮತ್ತು ಮುಂಚೂಣಿ ಕಾರ್ಯಕರ್ತರಿಗೆ ಲಸಿಕೆ ಹಾಕಲಾಗುವುದು. ಆ ಬಳಿಕ, 50 ವರ್ಷ ಮೇಲ್ಪಟ್ಟವರು, 50 ವರ್ಷದೊಳಗಿನ (ಅನಾರೋಗ್ಯ ಪೀಡಿತ) 27 ಕೋಟಿ ಜನರಿಗೆ ಲಸಿಕೆ ವಿತರಿಸಲಾಗುವುದು ಎಂದರು.

**ಬ್ರೆಜಿಲ್‌ನಿಂದ ಭಾರಿ ಬೇಡಿಕೆ**: ಬ್ರೆಜಿಲ್ ಅಧ್ಯಕ್ಷ ಜೈರ್ ಬೊಲ್ಸೊನಾರೋ ಅವರು ಪ್ರಧಾನಿ ಮೋದಿಗೆ ಪತ್ರ ಬರೆದಿದ್ದು, ಬ್ರೆಜಿಲ್‌ನಲ್ಲಿ ಕೊರೋನಾ ಪ್ರಕರಣಗಳ ಸಂಖ್ಯೆ ಹೆಚ್ಚಿದೆ. ಆದ್ದರಿಂದ ತುರ್ತಾಗಿ 20 ಲಕ್ಷಕ್ಕೂ ಹೆಚ್ಚಿನ ಕೋವಿಶೀಲ್ಡ್ ಲಸಿಕೆಯ ಡೋಸ್‌ಗಳನ್ನು ಆದಷ್ಟು ಶೀಘ್ರವೇ ಕಳುಹಿಸಿಕೊಡಿ ಎಂದು ಮನವಿ ಮಾಡಿಕೊಂಡಿದ್ದಾರೆ.

ಆಧಾರ: ವಿಶ್ವವಾಣಿ, ದಿನಾಂಕ:10.01.2021

## 6. ಲಸಿಕೆಗೆ ದುಂಬಾಲು ಬೇಡ

ನಮಗೇ ಮೊದಲು ಲಸಿಕೆ ಸಿಗಲಿ ಎಂದು ರಾಜಕಾರಣಿಗಳು ಆಶಿಸುವುದು ಬೇಡ. ಆರೋಗ್ಯ ಕಾರ್ಯಕರ್ತರು, ಕೊರೋನಾ ಸೋಂಕಿನ ವಿರುದ್ಧ ಹೋರಾಟದಲ್ಲಿ ಮುಂಚೂಣಿಯಲ್ಲಿ ಇರುವರಿಗೆ ಮೊದಲ ಲಸಿಕೆ ನೀಡಬೇಕು. ಹೀಗೆಂದು ಪ್ರಧಾನಿ ನರೇಂದ್ರ ಮೋದಿ ಖಡಕ್ ಆಗಿ ಹೇಳಿದ್ದಾರೆ. ಜನವರಿ 16 ರಂದು ಲಸಿಕೆ ವಿತರಣೆ ಶುರುವಾಗಲಿರುವ ಹಿನ್ನೆಲೆಯಲ್ಲಿ ಮುಖ್ಯಮಂತ್ರಿಗಳ ಜೊತೆಗೆ ನಡೆಸಿದ ವಿಡಿಯೋ ಕಾನ್ಫರೆನ್ಸ್‌ನಲ್ಲಿ ಮಾತನಾಡಿದರು.

ಹರಿಯಾಣದಲ್ಲಿ ಆದ್ಯತೆಯ ಪಟ್ಟಿಯಲ್ಲಿ ಶಾಸಕರು, ಸಂಸದರ ಹೆಸರುಗಳ ಇರುವ ಬಗ್ಗೆ ಬಹಿರಂಗವಾಗಿರುವಂತೆಯೇ ಪ್ರಧಾನಿ ನರೇಂದ್ರ ಮೋದಿ ಈ ಎಚ್ಚರಿಕೆ ನೀಡಿದ್ದಾರೆ. 50 ವರ್ಷದ ಮತ್ತು ಅದಕ್ಕಿಂತ ಮೇಲ್ಪಟ್ಟವರು, ಮಧುಮೇಹ, ಅಧಿಕ ರಕ್ತದ ಒತ್ತಡ ಸೇರಿದಂತೆ ಇತರ ಆರೋಗ್ಯ ಸಮಸ್ಯೆಯಿಂದ ಬಳಲುತ್ತಿರುವ 50 ವರ್ಷಕ್ಕಿಂತ ಕೆಳಗಿನ ವಯೋಮಾನದವರಿಗೂ ಲಸಿಕೆ ನೀಡಲು ಆದ್ಯತೆಯಲ್ಲಿ ಪರಿಗಣಿಸಬೇಕು ಎಂದು ಹೇಳಿದ್ದಾರೆ.

**ಮೊದಲ ಹಂತಕ್ಕೆ ನೆರವು:** ಮೊದಲ ಹಂತದಲ್ಲಿ ಮೂರು ಕೋಟಿ ಆರೋಗ್ಯ ಕಾರ್ಯಕರ್ತರಿಗೆ ಮತ್ತು ಕೊರೋನಾ ವಾರಿಯರ್ಸ್‌ಗಳಿಗೆ ಲಸಿಕೆ ನೀಡಲಾಗುತ್ತದೆ. ಅದರ ವೆಚ್ಚವನ್ನು ಕೇಂದ್ರ ಸರ್ಕಾರ ಭರಿಸಲಿದೆ ಎಂದರು. ಸಾರ್ವಜನಿಕ ಸೇವೆಯಲ್ಲಿ ಇರುವವರು ವಿಶೇಷವಾಗಿ ರಾಜಕಾರಣಿಗಳು ಮೊದಲ ಹಂತದಲ್ಲಿ ಭಾಗವಹಿಸುವುದು ಬೇಡ ಎಂದು  ಸೂಚ್ಯವಾಗಿ ಹೇಳಿದ್ದಾರೆ. ಮೊದಲ ಹಂತದಲ್ಲಿ ಒಟ್ಟು 30 ಕೋಟಿ ಮಂದಿಗೆ ಲಸಿಕೆ ನೀಡಲಾಗುತ್ತದೆ.

ದೇಶದಲ್ಲಿನ ಲಸಿಕೆ ನೀಡುವ ಕಾರ್ಯಕ್ರಮ ಜಗತ್ತಿನಲ್ಲಿಯೇ ಅತ್ಯಂತ ದೊಡ್ಡ ಕಾರ್ಯಕ್ರಮ ಎಂದು ಪ್ರಧಾನಿ ಬಣ್ಣಿಸಿದ್ದಾರೆ. ಕಡಿಮೆ ವೆಚ್ಚದಲ್ಲಿ ದೇಶದಲ್ಲಿಯೇ ಸಿದ್ಧಗೊಂಡ 2 ಲಸಿಕೆಗಳು ಹೆಚ್ಚು ವೆಚ್ಚದಾಯಕ ಅಲ್ಲ. ಇದು ನಮಗೆಲ್ಲರಿಗೂ ಹೆಮ್ಮೆಯ ವಿಚಾರ ಎಂದು ಹೇಳಿದ್ದಾರೆ. ದೇಶದ ಪ್ರತಿಯೊಂದು  ಜಿಲ್ಲೆಗಳಲ್ಲಿಯೂ ಲಸಿಕೆ ನೀಡುವುದು ಹೇಗೆ ಎಂಬ ಬಗ್ಗೆ ಪ್ರಾತ್ಯಕ್ಷಿತೆ ಯಶಸ್ವಿಯಾಗಿ ಮುಕ್ತಾಯವಾಗಿದೆ ಎಂದು ಪ್ರಧಾನಿ ಹರ್ಷ ವ್ಯಕ್ತಪಡಿಸಿದರು. ಎರಡನೇ ಹಂತ ಪ್ರವೇಶ ಮಾಡುತ್ತಿದ್ದಂತೆಯೇ ಇನ್ನು ಮೂರು ಲಸಿಕೆಗಳು ದೇಶವಾಸಿಗಳಿಗೆ ಲಭ್ಯವಾಗಲಿವೆ ಎಂದು ಹೇಳಿದ್ದಾರೆ.

**ವದಂತಿ ನಿಯಂತ್ರಿಸಿ:** ಲಸಿಕೆ ಬಗ್ಗೆ ದೇಶವಾಸಿಗಳಲ್ಲಿ ಭೀತಿ ಹುಟ್ಟಿಸುವ ವದಂತಿಗಳನ್ನು ನಿಯಂತ್ರಿಸಬೇಕು. ಅವರಲ್ಲಿ ಅರಿವು ಮೂಡಿಸುವ ನಿಟ್ಟಿನಲ್ಲಿ ಧಾರ್ಮಿಕ ಮತ್ತು ಸಾಮಾಜಿಕ ಗುಂಪುಗಳನ್ನು ವಿಶ್ವಾಸಕ್ಕೆ ತೆಗೆದುಕೊಂಡು ಅವರ ಮೂಲಕ ಸಾರ್ವಜನಿಕರಿಗೆ ಮನವರಿಕೆ ಮಾಡುವ ಕ್ರಮಗಳು ನಡೆಯಬೇಕು ಎಂದು ಹೇಳಿದ್ದಾರೆ. ಲಸಿಕೆ ಸುರಕ್ಷಿತವಾಗಿಲ್ಲ ಎಂಬ ವರದಿಗಳೇ ಆಧಾರ ರಹಿತ. ಸುರಕ್ಷತೆಯ ಎಲ್ಲ ಅಂಶಗಳನ್ನು ಪರಿಗಣಿಸಿದ್ದೇವೆ ಎಂದು ಮೋದಿ ತಿಳಿಸಿದ್ದಾರೆ. 16 ರಿಂದ ಲಸಿಕೆ ನೀಡಿಕೆ ಶುರುವಾಗಲಿದೆ. ಇತರ ದೇಶಗಳಿಗೆ ಹೋಲಿಕೆ ಮಾಡಿದರೆ ನಮ್ಮಲ್ಲಿ ಪರಿಸ್ಥಿತಿ ಉತ್ತಮವಾಗಿಯೇ ಇದೆ ಎಂದು ಹೇಳಿದ್ದಾರೆ.

**ಪ್ರತಿ ಡೋಸ್‌ಗೆ ರೂ.210:** ಪುಣೆಯ ಸೀರಮ್ ಇನ್‌ಸ್ಟಿಟ್ಯೂಟ್ ಆಫ್ ಇಂಡಿಯಾದ ಕೋವಿಶೀಲ್ಡ್ ಲಸಿಕೆಗೆ ಪ್ರತಿ ಡೋಸ್‌ಗೆ ಜಿಎಸ್‌ಟಿ ಸೇರಿ ರೂ.210. ಈ ಬಗ್ಗೆ ಕೇಂದ್ರ ಸರ್ಕಾರ ಮತ್ತು ಸೀರಮ್ ಒಪ್ಪಂದಕ್ಕೆ ಬಂದಿದೆ. ಅದಕ್ಕೆ ಪೂರಕವಾಗಿ ಕೇಂದ್ರ ಸರ್ಕಾರ ಸೀರಮ್‌ನಿಂದ 11 ಮಿಲಿಯಂ ಡೋಸ್ ಲಸಿಕೆ ಖರೀದಿಗೆ ಸೂಚನೆ ಹೊರಡಿಸಿದೆ. ಪುಣೆಯಿಂದ ಬೆಂಗಳೂರು ಸೇರಿದಂತೆ ದೇಶದ ವಿವಿಧ ಭಾಗಗಳಿಗೆ ಲಸಿಕೆ ಸಾಗಣೆ ಕಾರ್ಯ ಶುರುವಾಗಿದೆ. ಹೈದರಾಬಾದ್‌ನ ಭಾರತ್ ಬಯೋಟೆಕ್‌ನ ಕೋವ್ಯಾಕ್ಸಿನ್ ಖರೀದಿ ಬಗ್ಗೆಯೂ ಕೇಂದ್ರ ಸರ್ಕಾರ ಒಪ್ಪಂದ ಮಾಡಿಕೊಳ್ಳಲಿದೆ.

ಆಧಾರ: ಉದಯವಾಣಿ, ದಿನಾಂಕ:12.01.2021

## 7. 83 ತೇಜಸ್ ಯುದ್ಧ ವಿಮಾನ ಖರೀದಿ

ಬೆಂಗಳೂರಿನಲ್ಲಿ ಕೇಂದ್ರ ಕಚೇರಿ ಹೊಂದಿರುವ ಹಿಂದೂಸ್ತಾನ ಏರೋನಾಟಿಕ್ಸ್ ಲಿಮಿಟೆಡ್ (ಎಚ್.ಎ.ಎಲ್) ನಿಂದ 83 ತೇಜಸ್ ಹಗುರ ಯುದ್ಧ ವಿಮಾನಗಳ ಖರೀದಿಗೆ ಪ್ರಧಾನಿ ನರೇಂದ್ರ ಮೋದಿ ನೇತೃತ್ವದ ಭದ್ರತೆಗೆ ಸಂಬಂಧಿತ ಸಂಪುಟ ಸಮಿತಿ ಅನುಮೋದನೆ ನೀಡಿದೆ. ರೂ.48,000 ಕೋಟಿ ಮೊತ್ತದ ರಕ್ಷಣಾ ಒಪ್ಪಂದ ಇದಾಗಿದೆ. ಜೊತೆಗೆ ಇದು ಈವರೆಗಿನ ಅತಿದೊಡ್ಡ ದೇಶೀಯ ರಕ್ಷಣಾ ಒಪ್ಪಂದವೆಂಬ ಹಿರಿಮೆಗೂ ಪಾತ್ರವಾಗಿದೆ.

ಈ ಘೋಷಣೆ ಮಾಡಿರುವ ರಕ್ಷಣಾ ಸಚಿವ ರಾಜ್‌ನಾಥ್ ಸಿಂಗ್, ಭಾರತದ ರಕ್ಷಣಾ ಉತ್ಪಾದನಾ ಕ್ಷೇತ್ರದಲ್ಲಿ ಸ್ವಾವಲಂಬನೆಯನ್ನು ಸಾಧಿಸುವ ನಿಟ್ಟಿನಿಂದ ದಿಕ್ಕು ಬದಲಿಸಬಲ್ಲ ಒಪ್ಪಂದ ಇದಾಗಲಿದೆ. ತೇಜಸ್ ಲಘು ಯುದ್ಧ ವಿಮಾನಗಳು ಭಾರತೀಯ ವಾಯುಪಡೆಯ ಬೆನ್ನೆಲುಬಾಗಲಿದೆ ಎಂದು ಹರ್ಷಿಸಿದ್ದಾರೆ.

83 ವಿಮಾನಗಳ ಪೈಕಿ 73 ಸಿಂಗಲ್ ಎಂಜಿನ್ ಮತ್ತು 10 ಡಬಲ್ ಎಂಜಿನ್‌ಗಳದ್ದು, ಹಾಲಿ ಬಳಕೆಯಲ್ಲಿರುವ ವಿಮಾನಗಳಿಗೆ ಹೋಲಿಸಿದರೆ ಇದು ಸುಧಾರಿತ ಆವೃತ್ತಿಯಾದ 'ಮಾರ್ಕ್ ಎ' ಮಾದರಿಯದ್ದಾಗಿದೆ. ಲಘು ವಿಮಾನಗಳ ಪಟ್ಟಿಯಲ್ಲಿ ವಿಶ್ವದ ಪ್ರಮುಖವಾಗಲಿದೆ.

ಆಧಾರ: ಕನ್ನಡಪ್ರಭ, ದಿನಾಂಕ:14.01.2021

## 8. ಲಸಿಕೆ ಅಭಿಯಾನಕ್ಕೆ ಇಂದು ಪಿಎಂ ಚಾಲನೆ

ಪ್ರಧಾನಿ ನರೇಂದ್ರ ಮೋದಿ ಅವರು ಇಂದು ಕೋವಿಡ್–19 ವಿರುದ್ಧದ ಲಸಿಕೆ ಅಭಿಯಾನಕ್ಕೆ ಚಾಲನೆ ನೀಡಲಿದ್ದಾರೆ ಎಂದು ಕೇಂದ್ರ ಆರೋಗ್ಯ ಸಚಿವಾಲಯ ತಿಳಿಸಿದೆ.

ದೇಶದ ವಿವಿಧೆಡೆ ಮೊದಲ ದಿನ ಲಸಿಕೆ ಪಡೆಯಲಿರುವ ಕೆಲ ಆರೋಗ್ಯ ಕಾರ್ಯಕರ್ತರ ಜೊತೆಗೆ ಮೋದಿ ಅವರು ವಿಡಿಯೋ ಲಿಂಕ್ ಮೂಲಕ ಸಂವಾದ ನಡೆಸುವ ಸಾಧ್ಯತೆ ಇದೆ. ಕೋವಿನ್ ಆ್ಯಪ್ (ಕೋವಿಡ್ ವ್ಯಾಕ್ಸಿನ್ ಇಂಟಲಿಜೆನ್ಸ್ ನೆಟ್‌ವರ್ಕ್) ಕೂಡ ಬಿಡುಗಡೆ ಮಾಡುವ ನಿರೀಕ್ಷೆ ಇದೆ. ಈ ಆ್ಯಪ್, ಲಸಿಕೆ ಕುರಿತ ಮಾಹಿತಿ, ನೋಂದಣಿ ವಿತರಣೆ ಹಾಗೂ ಟ್ರ್ಯಾಕಿಂಗ್ ಸಹಿತ ವಿವಿಧ ಪ್ರಯೋಜನ ಒದಗಿಸಲಿದೆ ಎನ್ನಲಾಗಿದೆ.

ಕೋವಿಶೀಲ್ಡ್ ಹಾಗೂ ಕೋವ್ಯಾಕ್ಸೀನ್ ಲಸಿಕೆಯ ಒಟ್ಟು 1.65 ಕೋಟಿ ಡೋಸ್‌ಗಳನ್ನು ರಾಜ್ಯಗಳು ಹಾಗೂ ಕೇಂದ್ರಾಡಳಿತ ಪ್ರದೇಶಗಳಿಗೆ ವಿತರಿಸಲಾಗಿದೆ. ಲಸಿಕೆ ವಿತರಣೆ ವಿಚಾರದಲ್ಲಿ ಯಾವುದೇ ರಾಜ್ಯಕ್ಕೂ ಅನ್ಯಾಯ ಮಾಡಿಲ್ಲ ಎಂದು ಹೇಳಿದೆ.

**ರಾಜ್ಯದಲ್ಲಿ 243 ಕೇಂದ್ರ:** ರಾಜ್ಯದಲ್ಲಿ 243 ಹಾಗೂ ಬೆಂಗಳೂರಿನ 10 ಕೇಂದ್ರಗಳಲ್ಲಿ ಲಸಿಕೆ ನೀಡಲಾಗುತ್ತಿದೆ. ರಾಜ್ಯದಲ್ಲಿ ಒಟ್ಟು 7.17 ಲಕ್ಷ ಮಂದಿ ರಿಜಿಸ್ಟರ್ ಮಾಡಿಸಿಕೊಂಡಿದ್ದಾರೆ. ಸದ್ಯ 8.14 ಲಕ್ಷ ಲಸಿಕೆಗಳು ಕೇಂದ್ರದಿಂದ ಬಂದಿದೆ. ಪ್ರತಿ ಕೇಂದ್ರದಲ್ಲಿ 100 ಮಂದಿಗೆ ಲಸಿಕೆ ನೀಡಲು ನಿರ್ಧರಿಸಲಾಗಿದೆ.

- ಮೊದಲ ದಿನ ಸುಮಾರು 3 ಲಕ್ಷ ಆರೋಗ್ಯ ಕಾರ್ಯಕರ್ತರಿಗೆ ಲಸಿಕೆಯ ಡೋಸ್ ನೀಡಲಾಗುತ್ತದೆ.
- ಈಗಾಗಲೇ ನೋಂದಣಿ ಮಾಡಿಕೊಂಡಿರುವ ವೈದ್ಯರು, ಶುಶ್ರೂಷಕಿಯರು, ಸಫಾಯಿ ಕರ್ಮಚಾರಿಗಳು ಹಾಗೂ ಆಂಬ್ಯುಲೆನ್ಸ್ ಚಾಲಕರು ಮೊದಲ ದಿನ ಲಸಿಕೆಗೆ ಒಳಪಡಲಿದ್ದಾರೆ.
- ಒಂದು ಕೇಂದ್ರದಲ್ಲಿ ಗರಿಷ್ಠ 100 ಮಂದಿಗೆ ಲಸಿಕೆ ನೀಡಲಾಗುತ್ತದೆ.

ಆಧಾರ: ವಿಶ್ವವಾಣಿ, ದಿನಾಂಕ:16.01.2021

## 9. ಕೃಷಿ ಕಾಯ್ದೆ : ಮಾತುಕತೆ ಮತ್ತೆ ವಿಫಲ

ನೂತನ ಕೃಷಿ ಕಾಯ್ದೆಗಳ ವಿರುದ್ಧ ಪ್ರತಿಭಟನಾನಿರತ ರೈತರು ಮತ್ತು ಕೇಂದ್ರ ಕೃಷಿ ಸಚಿವಾಲಯದ ನಡುವೆ ನಡೆದ 9ನೇ ಸುತ್ತಿನ ಮಾತುಕತೆಯು ವಿಫಲವಾಗಿದೆ. ರೈತರು ಮತ್ತು ಸರ್ಕಾರವು ತಮ್ಮ ಪಟ್ಟುಗಳನ್ನು ಸಡಿಲಿಸದ ಕಾರಣ ಯಾವುದೇ ನಿರ್ಧಾರಕ್ಕೆ ಬರಲು ಸಾಧ್ಯವಾಗಿಲ್ಲ. ಜನವರಿ 19ಕ್ಕೆ 10ನೇ ಸುತ್ತಿನ ಮಾತುಕತೆ ನಿಗದಿಯಾಗಿದೆ.

ಇಲ್ಲಿನ ವಿಜ್ಞಾನ ಭವನದಲ್ಲಿ 5 ತಾಸು ನಡೆದ ಸಭೆಯಲ್ಲಿ 41 ರೈತ ಸಂಘಟನೆಗಳ ಪ್ರತಿನಿಧಿಗಳು, ಕೇಂದ್ರ ಕೃಷಿ ಸಚಿವ ನರೇಂದ್ರ ಸಿಂಗ್ ತೋಮರ್ ಮತ್ತು ಸಚಿವಾಲಯದ ಅಧಿಕಾರಿಗಳು ಇದ್ದರು.

ಕಾಯ್ದೆಗಳ ಬಗ್ಗೆ ನಿಮಗೆ ಇರುವ ಅಕ್ಷೇಪಗಳು ಮತ್ತು ಸಲಹೆಗಳನ್ನು ಪಟ್ಟಿ ಮಾಡಲು ಒಂದು ಅನೌಪಚಾರಿಕ ತಂಡವನ್ನು ರಚಿಸಿ ಎಂದು ತೋಮರ್ ಅವರು ರೈತರಿಗೆ ಸಲಹೆ ನೀಡಿದರು. ಆದರೆ, ರೈತರು ಕಾಯ್ದೆಗಳನ್ನು ರದ್ದುಪಡಿಸಬೇಕು ಎಂಬ ಪಟ್ಟನ್ನು ಸಡಿಲಿಸಲಿಲ್ಲ. 9ನೇ ಸುತ್ತಿನ ಮಾತುಕತೆಯೂ ವಿಫಲವಾಯಿತು.

ಪ್ರತಿಭಟನೆ ನಿರತ ರೈತರ ಮೇಲೆ ರಾಷ್ಟ್ರೀಯ ತನಿಖಾ ದಳದ ಅಧಿಕಾರಿಗಳು ಶೋಧ ಕಾರ್ಯ ನಡೆಸುತ್ತಿರುವುದರ ಬಗ್ಗೆ ರೈತರು ಸಭೆಯಲ್ಲಿ ಆಕ್ಷೇಪ ವ್ಯಕ್ತಪಡಿಸಿದರು. ಪ್ರತಿಭಟನೆ ನಿರತ ರೈತರ ಮೇಲೆ ಕಾನೂನುಬಾಹಿರ ಚಟುವಟಿಕೆಗಳ ತಡೆ ಕಾಯ್ದೆ ಅಡಿ ದಾಖಲಿಸಿರುವ ಪ್ರಕರಣಗಳನ್ನು ಹಿಂಪಡೆಯಬೇಕು ಎಂದು ರೈತ ಪ್ರತಿನಿಧಿಗಳು ಸಭೆಯಲ್ಲಿ ಒತ್ತಾಯಿಸಿದರು. ಇದು ರಾಜ್ಯ ಸರ್ಕಾರಗಳ ವ್ಯಾಪ್ತಿಯಲ್ಲಿ ಬರುತ್ತದೆ ಎಂದು ಸರ್ಕಾರದ ಪ್ರತಿನಿಧಿಗಳು ಆರಂಭದಲ್ಲಿ ತಿಳಿಸಿದರು. ಆದರೆ ಈ ಬಗ್ಗೆ ಕ್ರಮ ತೆಗೆದುಕೊಳ್ಳುತ್ತೇವೆ ಎಂದು ಸರ್ಕಾರದ ಪ್ರತಿನಿಧಿಗಳು ಒಪ್ಪಿಕೊಂಡರು. ಸರ್ಕಾರವು ಇದನ್ನು ಪ್ರತಿಷ್ಠೆಯ ವಿಷಯವನ್ನಾಗಿಸಿ ಕೊಂಡಿದೆ ಎಂದು ರೈತರು ಭಾವಿಸಿದ್ದಾರೆ. ಆದರೆ ಸರ್ಕಾರವು ಹಲವು ಸಮಸ್ಯೆಗಳನ್ನು ಬಗೆಹರಿಸಲು ಒಪ್ಪಿಕೊಂಡಿದೆ. ರೈತರು ತಮ್ಮ ಬೇಡಿಕೆಗಳನ್ನು ಸ್ವಲ್ಪ ಸಡಿಲಿಸಬೇಕು ಎಂದು ತೋಮರ್ ಅವರು ಹೇಳಿದರು. ಆದರೆ, ಕಾಯ್ದೆಗಳನ್ನು ರದ್ದುಪಡಿಸಬೇಕು ಎಂಬ ನಮ್ಮ ನಿಲುವಿನಲ್ಲಿ ಯಾವುದೇ ಬದಲಾವಣೆ ಇಲ್ಲ ಎಂದು ಪಂಜಾಬ್ ರೈತ ಮೋರ್ಚಾದ ನಾಯಕ ಬಲ್ಜಿತ್ ಸಿಂಗ್ ಬಾಲಿ ಹೇಳಿದರು.

ಮಾತುಕತೆಯ ಮೂಲಕ ಪರಿಹಾರ  ಕಂಡುಕೊಳ್ಳಬೇಕು. ನ್ಯಾಯಾಲಯದ ಮೂಲಕ ಅಲ್ಲ ಎಂದು ಸರ್ಕಾರ ಹೇಳಿದೆ. ಇದನ್ನು ನೋಡಿದರೆ ಪರಿಹಾರ ದೊರೆಯಬಹುದು ಎಂದು ಮತ್ತೊಬ್ಬ ರೈತ ನಾಯಕ ರಾಕೇಶ್ ಟಿಕಾಯತ್ ಹೇಳಿದರು.

ಆಧಾರ: ಪ್ರಜಾವಾಣಿ, ದಿನಾಂಕ:16.01.2021

## 10. ಪಿಎಂ ಕೌಶಲ ಅಭಿವೃದ್ಧಿ ಯೋಜನೆ

ಪ್ರಧಾನ ಮಂತ್ರಿ ಕೌಶಲ ವಿಕಾಸ್ ಯೋಜನೆ (ಪಿಎಂಕೆವಿವೈ)ಯ ಮೂರನೇ ಹಂತವು ಜನವರಿ 15ರಂದು ಆರಂಭವಾಗಿದೆ. ಕೇಂದ್ರ ಸರ್ಕಾರದ ಪ್ರಮುಖ ಯೋಜನೆಗಳಲ್ಲಿ ಒಂದಾಗಿರುವ ಪಿಎಂಕೆವಿವೈ ಅನ್ನು ಕೌಶಲ ಅಭಿವೃದ್ಧಿ ಮತ್ತು ಉದ್ಯಮಶೀಲತೆ ಸಚಿವಾಲಯ ನಡೆಸುತ್ತಿದೆ. ಇದಕ್ಕಾಗಿ ಸರ್ಕಾರ ರೂ.948.90 ಕೋಟಿ ಖರ್ಚು ಮಾಡಲಿದೆ. 2021–22ರ ವೇಳೆಗೆ ಯೋಜನೆಯಡಿ 1.5 ಕೋಟಿ ಜನರಿಗೆ ತರಬೇತಿ ನೀಡುವ ಗುರಿ ಹೊಂದಲಾಗಿದೆ.

**2015ರಲ್ಲಿ ಆರಂಭ:** ಕೇಂದ್ರ ಸರ್ಕಾರವು 2015ರಲ್ಲಿ ಪಿಎಂಕೆವಿವೈ ಅನ್ನು ಪ್ರಾರಂಭಿಸಿತು. ಎರಡನೇ ಹಂತ (ಪಿಎಂಕೆವಿವೈ2.0)ವನ್ನು 2016ರಲ್ಲಿ ಪ್ರಾರಂಭಿಸಲಾಯಿತು. ಪಿಎಂಕೆವಿವೈನ ಅಧಿಕೃತ ವೆಬ್‌ಸೈಟ್ಸ್ ಮೂಲಕ 2020ರ ಆಕ್ಟೋಬರ್ 20ರವರೆಗೆ ಒಟ್ಟು 33.20 ಲಕ್ಷ ಜನರಿಗೆ ತರಬೇತಿ ನೀಡಲಾಗಿದೆ. ಸರ್ಕಾರ 2020ರಲ್ಲಿ ರೂ.1 ಕೋಟಿ ಜನರಿಗೆ ತರಬೇತಿ ನೀಡುವ ಗುರಿ ಇಟ್ಟುಕೊಂಡಿತ್ತು.

**ಯೋಜನೆಯ ಉದ್ದೇಶವೇನು:** ದೇಶದ ಕೈಗಾರಿಕೆಗಳಿಗೆ ಕೌಶಲಯುಕ್ತ ಯುವಕರನ್ನು ಒದಗಿಸುವ ಉದ್ದೇಶದಿಂದ ಪಿಎಂಕೆವಿವೈಅನ್ನು ಜಾರಿಗೆ ತರಲಾಗಿದೆ. ಈ ತರಬೇತಿಯ ಲಾಭವನ್ನು ಪಡೆದುಕೊಳ್ಳುವ ಮೂಲಕ ಯುವಜನತೆ ಸ್ವಂತ ಉದ್ಯಮವನ್ನು ಪ್ರಾರಂಭಿಸಬಹುದು ಅಥವಾ ಬೇರೆಲ್ಲಾದರೂ ಉದ್ಯೋಗ ಪಡೆಯಬಹುದು. ಇದಲ್ಲದೆ ಈ ಯೋಜನೆಯಡಿ ತರಬೇತಿ ಪಡೆದ ಯುವಕರಿಗೆ ಸರ್ಕಾರದಿಂದ ಉದ್ಯೋಗ ದೊರೆಕಿಸಿಕೊಡುವ ಪ್ರಯತ್ನಗಳು ಸಹ ನಡೆಯುತ್ತವೆ. ಜಾಬ್ ಫೇರ್‌ನಂಥ ವೇದಿಕೆಗಳು ಇದಕ್ಕೆ ಪರಿಣಾಮಕಾರಿಯಾಗಿದೆ.

**ರೂ.1.5 ಲಕ್ಷ ಸಾಲ:** ಈ ಯೋಜನೆಯಡಿ ಸರ್ಕಾರವು ರೂ.1.5 ಲಕ್ಷಗಳವರೆಗೆ ಸಾಲವನ್ನು ನೀಡುತ್ತದೆ. ಕಡಿಮೆ ವಿದ್ಯಾವಂತರು ಅಥವಾ 10ನೇ 12ನೇ ತರಗತಿಯ ಡ್ರಾಪ್‌ಔಟ್ ಆದವರು ಈ ಯೋಜನೆಯ ಫಲಾನುಭವಿಗಳಾಗಬಹುದಾಗಿದೆ. ಈ ಯೋಜನೆಯಡಿ ತರಬೇತಿ ಪಡೆಯುವವರಿಗೆ ಪ್ರತಿ 6 ತಿಂಗಳುಗಳಿಗೊಮ್ಮೆ ಸರ್ಕಾರವು ಉದ್ಯೋಗ ಮೇಳವನ್ನು ಆಯೋಜಿಸುತ್ತದೆ.

729 ಪ್ರಧಾನಮಂತ್ರಿ ಕೌಶಲ ಕೇಂದ್ರ (ಪಿಎಂಕೆಕೆ)ಗಳು, ಇತರ ತರಬೇತಿ ಕೇಂದ್ರಗಳು ಮತ್ತು 200ಕ್ಕೂ ಹೆಚ್ಚು ಕೈಗಾರಿಕಾ ತರಬೇತಿ ಸಂಸ್ಥೆಗಳ ಮೂಲಕ ಅಭ್ಯರ್ಥಿಗಳಿಗೆ ತರಬೇತಿ ನೀಡಲಾಗುತ್ತದೆ. ಪಿಎಂಕೆವಿವೈ 3.0 ಅಡಿಯಲ್ಲಿ ದೇಶಾದ್ಯಂತ 600 ಜಿಲ್ಲೆಗಳಲ್ಲಿ ಮುಂದಿನ ಮೂರು ತಿಂಗಳುಗಳ ಅವಧಿಯಲ್ಲಿ 8 ಲಕ್ಷ ಅಭ್ಯರ್ಥಿಗಳಿಗೆ ತರಬೇತಿ ನೀಡಲು ನಿರ್ಧರಿಸಲಾಗಿದೆ.

ಆಧಾರ: ಉದಯವಾಣಿ, ದಿನಾಂಕ:17.01.2021

## 11. ಲಸಿಕೆ ಬಳಿಕ ಮೈ ಮರೆಯದಿರಿ

ಲಸಿಕೆಯ ಸುರಕ್ಷತೆ ಹಾಗೂ ಕ್ಷಮತೆ ಬಗ್ಗೆ ವಿಜ್ಞಾನಿಗಳಿಗೆ ಸಂಪೂರ್ಣ ಮನವರಿಕೆಯಾದ ಬಳಿಕವೇ ಎರಡು ಮೇಡ್ ಇನ್ ಇಂಡಿಯಾ ಲಸಿಕೆಗಳನ್ನು ಭಾರತದಲ್ಲಿ ತುರ್ತಾಗಿ ಬಳಸಲು ಅನುಮತಿ ನೀಡಲಾಗಿದೆ. ಲಸಿಕೆ ಕುರಿತ ವದಂತಿ, ಊಹಾಪೋಹಗಳ ಬಗ್ಗೆ ಎಚ್ಚರದಿಂದಿರಿ ಎಂದು ಪ್ರಧಾನಿ ನರೇಂದ್ರ ಮೋದಿ ಹೇಳಿದ್ದಾರೆ.

ವಿಶ್ವದ ಅತಿದೊಡ್ಡ ಲಸಿಕಾ ಅಭಿಯಾನಕ್ಕೆ ಚಾಲನೆ ನೀಡುವ ವೇಳೆ ಮಾತನಾಡಿದ ಅವರು ಕೊರೋನಾ ಲಸಿಕೆಯ ಎರಡು ಡೋಸ್‌ಗಳು ಅತ್ಯಂತ ಮುಖ್ಯ. ಒಂದು ಡೋಸ್ ಪಡೆದು, ಎರಡನೇ ಡೋಸ್ ಪಡಯುವುದನ್ನು ಮರೆಯಬೇಡಿ. ಕೊರೋನಾ ಲಸಿಕೆ ಪಡೆದ ಬಳಿಕವು ಮಾಸ್ಕ್ ಧರಿಸುವುದು ಸಾಮಾಜಿಕ ಅಂತರ ಪಾಲನೆ ಬಿಡಬೇಡಿ. ಲಸಿಕೆ ಜೊತೆಗೆ ಕಟ್ಟುನಿಟ್ಟಿನ ಶಿಸ್ತು ಕೂಡ ಮುಖ್ಯ ಎಂದು ಸಲಹೆ ಮಾಡಿದರು.

ಕೊರೋನಾ ವಿರುದ್ಧ ಭಾರತ ಆರಂಭಿಸಿರುವ ಲಸಿಕೆ ಮಾರಕ ವೈರಾಣು ವಿರುದ್ಧ ನಿರ್ಣಾಯಕ ವಿಜಯವನ್ನು ತಂದುಕೊಡಲಿವೆ. ವಿಶ್ವದ 100ಕ್ಕೂ ಅಧಿಕ ದೇಶಗಳಲ್ಲಿ 3 ಕೋಟಿಗಿಂತ ಕಡಿಮೆ ಜನಸಂಖ್ಯೆ ಇದೆ. ಭಾರತ ಮೊದಲ ಹಂತದಲ್ಲೇ 3 ಕೋಟಿ ಜನರಿಗೆ ಲಸಿಕೆ ಹಾಕುತ್ತಿದೆ. ಎರಡನೇ ಹಂತದಲ್ಲಿ ಲಸಿಕೆ ಪಡೆಯುವವರ ಸಂಖ್ಯೆ 30 ಕೋಟಿಗೆ ಏರಿಕೆಯಾಗಲಿದೆ. ವಿಶ್ವದಲ್ಲಿ ಭಾರತ ಹೊರತುಪಡಿಸಿದರೆ 30 ಕೋಟಿಗಿಂತ ಅಧಿಕ ಜನಸಂಖ್ಯೆ ಹೊಂದಿರುವ ದೇಶಗಳು ಎರಡೇ. ಒಂದು ಅಮೆರಿಕ, ಮತ್ತೊಂದು ಚೀನಾ ಎಂದು ತಿಳಿಸಿದರು.

ಕೊರೋನಾ ಲಸಿಕೆ ಪಡೆದ ಬಳಿಕ ಜನರು ಎಚ್ಚರಿಕೆ ಮರೆಯಬಾರದು. ಎರಡನೇ ಡೋಸ್ ಪಡೆದ ಎರಡು ವಾರಗಳ ಬಳಿಕ ದೇಹದಲ್ಲಿ ರೋಗ ನಿರೋಧಕ ಶಕ್ತಿ ಉತ್ಪಾದನೆಯಾಗುತ್ತದೆ. ಈ ಲಸಿಕೆಗಳ ಸುರಕ್ಷತೆ ಹಾಗು ಕ್ಷಮತೆ ಬಗ್ಗೆ ವಿಜ್ಞಾನಿಗಳು ಹಾಗೂ ತಜ್ಞರಿಗೆ ಮನವರಿಕೆಯಾಗಿದೆ. ಆನಂತರವಷ್ಟೇ ಲಸಿಕೆ ಬಳಕೆಗೆ ಅನುಮತಿ ನೀಡಲಾಗಿದೆ. ಅಪಪ್ರಚಾರ, ಗಾಳಿ ಸುದ್ಧಿ, ತಪ್ಪು ಮಾಹಿತಿಗಳ ಬಗ್ಗೆ ಜನ ಎಚ್ಚರಿಕೆ ವಹಿಸಬೇಕು ಎಂದು ಸಲಹೆ ಮಾಡಿದರು.

ವಿದೇಶಿ ಲಸಿಕೆಗಳಿಗೆ ಹೋಲಿಸಿದರೆ ಭಾರತದ ಲಸಿಕೆ ಅಗ್ಗ. ಅವುಗಳ ಬಳಕೆಯೂ ಸುಲಭ. ವಿದೇಶಿ ಲಸಿಕೆಯೊಂದಕ್ಕೆ ರೂ.5000 ಬೆಲೆ ಇದೆ. ಅದನ್ನು ಮೈನಸ್ 70 ಡಿಗ್ರಿಯಲ್ಲಿ ಸಂಗ್ರಹಿಸಿಡಬೇಕು. ಆದರೆ, ಭಾರತದಲ್ಲಿ ಬಳಕೆಯಾಗುತ್ತಿರುವ ಲಸಿಕೆಗಳು ಸಂಗ್ರಹಣೆಯಿಂದ ಸಾಗಣೆವರೆಗೆ ಭಾರತೀಯ ಪರಿಸ್ಥಿತಿಗೆ ತಕ್ಕುದಾಗಿವೆ. ಕೊರೋನಾ ವೈರಸ್ ವಿರುದ್ಧ ನಿರ್ಣಾಯಕ ಜಯವನ್ನು ತಂದು ಕೊಡಲಿವೆ ಎಂದು ತಿಳಿಸಿದರು.

ಕೊರೋನಾ ಹಾವಳಿಯಿಂದಾಗಿ ಜನರು ಅನುಭವಿಸಿದ ಬವಣೆ ನೆನೆದು ಪ್ರಧಾನಿ ನರೇಂದ್ರ ಮೋದಿ ಭಾವುಕರಾದರು. ಕುಟುಂಬದ ಯಾವುದಾದರೂ ಸದಸ್ಯ ಅನಾರೋಗ್ಯ ಪೀಡಿತರಾದರೆ ಅವರ ಶುಶ್ರೂಷೆ ಮಾಡಲು ಇಡೀ ಕುಟುಂಬ ಒಗ್ಗೂಡುತ್ತದೆ. ಆದರೆ ಕೊರೋನಾ ಅದಕ್ಕೂ ಕಲ್ಲು ಹಾಕಿತು. ಸೋಂಕು ಭೀತಿಯಿಂದ ಅನಾರೋಗ್ಯ ಪೀಡಿತರು ಏಕಾಂಗಿಯಾದರು. ಹಲವು ಅಸ್ವಸ್ಥ ಪುಟ್ಟಮಕ್ಕಳು ತಮ್ಮ ತಾಯಿಯಿಂದಲೇ ದೂರ ಉಳಿಯಬೇಕಾಗಿತ್ತು. ವಯೋವೃದ್ಧರು ಆಸ್ಪತ್ರೆಗಳಲ್ಲಿ ಏಕಾಂಗಿಯಾಗಿ ಸೋಂಕಿನ ವಿರುದ್ಧ ಹೋರಾಡುವ ಅನಿವಾರ್ಯ ಸ್ಥಿತಿಗೆ ದೂಡಲ್ಪಟ್ಟರು. ಮಕ್ಕಳು ಅವರ ಹತ್ತಿರ ಹೋಗದಂತಾದರು. ಹಲವು ವ್ಯಕ್ತಿಗಳು ನಿಧನರಾದರು. ಅವರಿಗೆ ಸಾಂಪ್ರದಾಯಿಕ ಅಂತಿಮ ಸಂಸ್ಕಾರವನ್ನು ನೆರವೇರಿಸಲು ಆಗಲಿಲ್ಲ ಎಂದು ಮೋದಿ ಭಾವುಕರಾದರು.

ಆಧಾರ: ಕನ್ನಡಪ್ರಭ, ದಿನಾಂಕ:17.01.2021

## 12. ಬಾಲನ್ಯಾಯ ಕಾಯ್ದೆ ತಿದ್ದುಪಡಿಗೆ ಅಸ್ತು

ಬಾಲನ್ಯಾಯ (ಮಕ್ಕಳ ಆರೈಕೆ ಮತ್ತು ರಕ್ಷಣೆ) ಕಾಯ್ದೆ–2015ರ ತಿದ್ದುಪಡಿ ಮಸೂದೆಗೆ ಕೇಂದ್ರ ಸರ್ಕಾರವು ಅನುಮೋದನೆ ನೀಡಿದೆ. ಉದ್ದೇಶಿತ ತಿದ್ದುಪಡಿಗಳು ಜಿಲ್ಲಾಧಿಕಾರಿಗೆ ಹೆಚ್ಚಿನ ಅಧಿಕಾರ ನೀಡುವುದಲ್ಲದೆ ಮಕ್ಕಳ ರಕ್ಷಣಾ ಘಟಕಗಳು ಹಾಗೂ ಬಾಲ ನ್ಯಾಯ ಪೊಲೀಸ್ ಘಟಕಗಳನ್ನು ಅವರ ಅಧಿಕಾರ ವ್ಯಾಪ್ತಿಯೊಳಗೆ ತರುತ್ತದೆ ಎಂದು ಸರ್ಕಾರ ಹೇಳಿದೆ.

ಪ್ರಧಾನಿ ನರೇಂದ್ರ ಮೋದಿ ಅಧ್ಯಕ್ಷತೆಯಲ್ಲಿ ನಡೆದ ಕೇಂದ್ರದ ಸಚಿವ ಸಂಪುಟ ಸಭೆಯಲ್ಲಿ ಇದಕ್ಕೆ ಅನುಮೋದನೆ ನೀಡಲಾಗಿದ್ದು. ಮುಂದಿನ ಅಧಿವೇಶನದಲ್ಲಿ ಬಾಲಾಪರಾಧ ನ್ಯಾಯ (ಮಕ್ಕಳ ಆರೈಕೆ ಮತ್ತು ರಕ್ಷಣೆ) ತಿದ್ದುಪಡಿ ಮಸೂದೆ–2021 ಅನ್ನು ಮಂಡಿಸುವ ಸಾಧ್ಯತೆ ಇದೆ. ತಿದ್ದುಪಡಿ ಮಸೂದೆಯು ಅಂಗೀಕಾರವಾದರೆ ಬಾಲ ನ್ಯಾಯವನ್ನು ಜಾರಿ ಮಾಡುವ ಎಲ್ಲಾ ಘಟಕಗಳ ಮೇಲುಸ್ತುವಾರಿ ಮಾಡುವ ಅಧಿಕಾರ ಜಿಲ್ಲಾಧಿಕಾರಿಗೆ ಲಭಿಸಲಿದೆ.

ಮಕ್ಕಳ ಕಲ್ಯಾಣ ಸಮಿತಿಗಳ ಕಾರ್ಯನಿರ್ವಹಣೆಯಲ್ಲಿ ಇನ್ನಷ್ಟು ದಕ್ಷತೆಯನ್ನು ತರುವ ಉದ್ದೇಶದಿಂದ ಇಂಥ ಸಮಿತಿಗಳಿಗೆ ಸದಸ್ಯರಾಗಿ ಆಯ್ಕೆಯಾಗುವವರ ಹಿನ್ನೆಲೆಯನ್ನು ಪರೀಕ್ಷಿಸಲು ಸಹ ಅವಕಾಶ ನೀಡಲಾಗಿದೆ. ಪ್ರಸಕ್ತ ಅಂಥ ವ್ಯವಸ್ಥೆ ಇಲ್ಲ ಎಂದು ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ ಖಾತೆಯ ಸಚಿವೆ ಸ್ಮೃತಿ ಇರಾನಿ ತಿಳಿಸಿದರು.

ಮಕ್ಕಳ ಆರೈಕೆ ಕೇಂದ್ರದ ನೋಂದಣಿಗಾಗಿ ಸರ್ಕಾರಕ್ಕೆ ಶಿಫಾರಸ್ಸು ಮಾಡುವುದಕ್ಕೂ ಮುನ್ನ ಜಿಲ್ಲಾಧಿಕಾರಿಯು ಅಂಥ ಸಂಸ್ಥೆಯ ಹಿನ್ನೆಲೆ ಮತ್ತು ಅದರ ಸಾಮರ್ಥ್ಯವನ್ನು ಕುರಿತು ಪರಿಶೀಲನೆ ನಡೆಸಬೇಕಾಗುತ್ತದೆ. ಈಗಿರುವ ವ್ಯವಸ್ಥೆಯಲ್ಲಿ ಸಂಸ್ಥೆಯೊಂದರ ಸಾಮರ್ಥ್ಯ ಹಾಗೂ ಇತರ ಸೌಲಭ್ಯಗಳ ಪರಿಶೀಲನೆ ನಡೆಸಲು ಅವಕಾಶ ಇಲ್ಲ. ಮಕ್ಕಳ ಕಲ್ಯಾಣ ಸಮಿತಿಗಳು ಬಾಲ ನ್ಯಾಯ ಪೊಲೀಸ್ ಘಟಕಗಳು ಹಾಗೂ ನೋಂದಾಯಿತ ಸಂಸ್ಥೆಗಳ ಕಾರ್ಯವೈಖರಿಯ ಬಗ್ಗೆಯೂ ಜಿಲ್ಲಾಧಿಕಾರಿ ಮೌಲ್ಯಮಾಪನ ಮಾಡಬಹುದು. ಮಾನವ ಕಳ್ಳಸಾಗಣಿಕೆ, ಮಾದಕ ವ್ಯಸನ ಪಾಲಕರಿಂದ ತ್ಯಜಿಸಲ್ಪಟ್ಟವರು ಮತ್ತು ಬಾಲಕಾರ್ಮಿಕ ಪದ್ಧತಿಯಿಂದ ರಕ್ಷಣೆಗೆ ಒಳಗಾದ ಮಕ್ಕಳನ್ನು ಆರೈಕೆ ಮತ್ತು ರಕ್ಷಣೆಯ ಅಗತ್ಯವಿರುವ ಮಕ್ಕಳು ಎಂದು ಪರಿಗಣಿಸಲು ಸಾಧ್ಯವಾಗುವಂತೆ ಬಾಲನ್ಯಾಯ ಕಾಯ್ದೆಯ ವ್ಯಾಪ್ತಿಯನ್ನು ವಿಸ್ತರಿಸಲಾಗಿದೆ ಎಂದು ಸ್ಮೃತಿ ತಿಳಿಸಿದರು.

ಆಧಾರ: ಪ್ರಜಾವಾಣಿ, ದಿನಾಂಕ:18.01.2021

## 13. ಸೋಮನಾಥ ಟ್ರಸ್ಟ್‌ಗೆ ನಮೋ ಸಾರಥ್ಯ

ಗುಜರಾತ್‌ನ ಗಿರ್–ಸೋಮನಾಥ್ ಜಿಲ್ಲೆಯ ಪ್ರಭಾಸ್ ಪಟಾಣ್ ಪಟ್ಟಣದ ಸೋಮನಾಥ ದೇವಾಲಯದ ಟ್ರಸ್ಟ್ ಅಧ್ಯಕ್ಷರಾಗಿ ಪ್ರಧಾನಿ ನರೇಂದ್ರ ಮೋದಿ ನೇಮಕವಾಗಿದ್ದಾರೆ. ಮೋದಿ ಅವರು ಟ್ರಸ್ಟ್‌ನ ಎಂಟನೇ ಅಧ್ಯಕ್ಷರಾಗಿದ್ದಾರೆ.

ಈ ದೇವಸ್ಥಾನದ ಆಡಳಿತ ಮಂಡಳಿ ಮುಖ್ಯಸ್ಥರ ಸ್ಥಾನ ವಹಿಸುತ್ತಿರುವ 2ನೇ ಪ್ರಧಾನಿ ಎಂಬ ಕೀರ್ತಿಗೆ ಮೋದಿ ಭಾಜನರಾಗಿದ್ದಾರೆ. ಇದಕ್ಕೂ ಮೊದಲು ಮೊರಾರ್ಜಿ ದೇಸಾಯಿಯವರು ಈ ಸ್ಥಾನ ಅಲಂಕರಿಸಿದ್ದರು. ಅವರು 1967 ರಿಂದ 1995ರ ತನಕ ಈ ಹೊಣೆಗಾರಿಕೆ ನಿಭಾಯಿಸಿದ್ದರು. ಕಳೆದ ವರ್ಷ ಅಸ್ತಂಗತರಾದ ಮಾಜಿ ಮುಖ್ಯಮಂತ್ರಿ ಕೇಶೂಭಾಯ್ ಪಟೇಲ್ ಅವರು ಈ ಟ್ರಸ್ಟ್‌ನ ಮುಖ್ಯಸ್ಥರಾಗಿ 2004 ರಿಂದ 2020ರತನಕ ಕರ್ತವ್ಯ ನಿರ್ವಹಿಸಿದ್ದರು. ಬಳಿಕ ಈ ಸ್ಥಾನ ಖಾಲಿಯಾಗಿತ್ತು. ಶ್ರೀ ಸೋಮನಾಥ ಟ್ರಸ್ಟ್‌ನ ವಿಶ್ವಸ್ಥರು ಸಭೆ ಸೇರಿ ಮೋದಿ ಅವರನ್ನು ಟ್ರಸ್ಟ್‌ನ ಮುಖ್ಯಸ್ಥರನ್ನಾಗಿ ಅವಿರೋಧವಾಗಿ ಆಯ್ಕೆ ಮಾಡಿದ್ದಾರೆ. ಬಿಜೆಪಿಯ ಹಿರಿಯ ನಾಯಕ ಎಲ್.ಕೆ. ಆಡ್ವಾಣಿ, ಕೇಂದ್ರ ಗೃಹ ಸಚಿವ ಅಮಿತ್ ಷಾ, ಗುಜರಾತಿನ ವಿದ್ವಾನ್ ಜೆಡಿ ಪಾರ್ಮರ್, ಉದ್ಯಮಿ ಹರ್ಷವರ್ಧನ್ ನಿಯೋಟಿಯಾ ಸದಸ್ಯರಾಗಿದ್ದಾರೆ ಎಂದು ಟ್ರಸ್ಟ್‌ನ ಕಾರ್ಯದರ್ಶಿ ಪಿ.ಕೆ. ಲಹೇರಿ ತಿಳಿಸಿದ್ದಾರೆ.

ಆಧಾರ: ವಿಜಯವಾಣಿ, ದಿನಾಂಕ:19.01.2021

## 14. ಕೇಂದ್ರ ಬಜೆಟ್ ಆ್ಯಪ್ ಅನಾವರಣ

ಕೇಂದ್ರ ಬಜೆಟ್ ಮಂಡನೆಯಾಗಲಿದ್ದು, ಇದೇ ಮೊದಲ ಬಾರಿಗೆ ಬಜೆಟ್ ಅನ್ನು ಕಾಗದರಹಿತವಾಗಿಸಲು ಉದ್ದೇಶಿಸಿರುವ ಕಾರಣ ವಿತ್ತ ಸಚಿವೆ ನಿರ್ಮಲಾ ಸೀತಾರಾಮನ್ ಅವರು ಕೇಂದ್ರ ಬಜೆಟ್ ಮೊಬೈಲ್ ಆ್ಯಪ್ ಅನ್ನು ಅನಾವರಣ ಮಾಡಿದ್ದಾರೆ. ಸಂಸದರು ಹಾಗೂ ಸಾರ್ವಜನಿಕರು ಬಜೆಟ್ ಪ್ರತಿಗಳನ್ನು ಸುಲಭವಾಗಿ ಪಡೆದುಕೊಳ್ಳಲು ಈ ಆ್ಯಪ್ ನೆರವಾಗಲಿದೆ ಎಂದು ನಿರ್ಮಲಾ ಹೇಳಿದ್ದಾರೆ.

ಇದೇ ವೇಳೆ ಪ್ರತಿ ವರ್ಷ ಬಜೆಟ್‌ಗೆ ಮುನ್ನ ನಡೆಯುವ ಸಾಂಪ್ರದಾಯಿಕ ಹಲ್ವಾ ಕಾರ್ಯಕ್ರಮಕ್ಕೂ ಸಚಿವೆ ನಿರ್ಮಲಾ ಚಾಲನೆ ನೀಡಿದ್ದಾರೆ. ವಿತ್ತ ಖಾತೆ ಸಹಾಯಕ ಸಚಿವ ಅನುರಾಗ್ ಠಾಕೂರ್ ಕೂಡ ಈ ವೇಳೆ ಉಪಸ್ಥಿತರಿದ್ದರು.

**ಏನಿದು ಮೊಬೈಲ್ ಆ್ಯಪ್:**

- ಈ ಆ್ಯಪ್‌ನಲ್ಲಿ ಕೇಂದ್ರ ಬಜೆಟ್‌ನ 14 ದಾಖಲೆಗಳು (ಆಯವ್ಯಯ, ಅನುದಾನದ ಬೇಡಿಕೆ, ಹಣಕಾಸು ವಿಧೇಯಕ ಇತ್ಯಾದಿ) ಲಭ್ಯವಿರಲಿದೆ.

  ಆ್ಯಪ್ ಬಳಕೆದಾರ ಸ್ನೇಹಿಯಾಗಿದ್ದು, ಇದರ ಮೂಲಕ ಯಾವುದೇ ದಾಖಲೆಯನ್ನು ಸುಲಭವಾಗಿ ಡೌನ್‌ಲೋಡ್ ಮಾಡಿಕೊಳ್ಳಬಹುದು, ಮುದ್ರಿಸಬಹುದು, ಹುಡುಕಾಟ ನಡೆಸಬಹುದು, ಝೂಮ್ ಔಟ್ ಮಾಡಬಹುದು.

- ಇಂಗ್ಲೀಷ್ ಮತ್ತು ಹಿಂದಿ ಭಾಷೆಯಲ್ಲಿ ಆ್ಯಪ್ ಲಭ್ಯವಿರಲಿದ್ದು, ಆಂಡ್ರಾಯ್ಡ್ ಮತ್ತು ಐಒಎಸ್ ಪ್ಲಾಟ್ ಫಾರಂಗಳಲ್ಲೂ ದೊರೆಯಲಿದೆ.
- ಈ ಆ್ಯಪ್ ಅನ್ನು ಕೇಂದ್ರ ಬಜೆಟ್‌ನ ವೆಬ್ ಪೋರ್ಟಲ್ ( http:/indiabudger.giv.in) ನಿಂದಲೂ ಡೌನ್ ಲೋಡ್ ಮಾಡಿಕೊಳ್ಳಬಹುದು.

- ಆರ್ಥಿಕ ವ್ಯವಹಾರಗಳ ಇಲಾಖೆಯ ಮಾರ್ಗದರ್ಶನದ ಮೇರೆಗೆ ರಾಷ್ಟ್ರೀಯ ಮಾಹಿತಿ ಕೇಂದ್ರ (ಎನ್‌ಐಸಿ) ಈ ಆ್ಯಪ್ ಅಭಿವೃದ್ಧಿಪಡಿಸಿದೆ.
- ಫೆಬ್ರವರಿ 1 ರಂದು ವಿತ್ತ ಸಚಿವೆ ನಿರ್ಮಲಾ ಸೀತಾರಾಮನ್ ಬಜೆಟ್ ಭಾಷಣ ಮಾಡಿದ ಬಳಿಕವಷ್ಟೇ ಈ ಮೊಬೈಲ್ ಆ್ಯಪ್‌ನಲ್ಲಿ ಬಜೆಟ್ ದಾಖಲೆಗಳು ಸಿಗಲಿವೆ.

ಆಧಾರ: ಉದಯವಾಣಿ, ದಿನಾಂಕ:24.01.2021

## 15. ಸ್ವಾವಲಂಬಿ ಭಾರತಕ್ಕೆ ನೇತಾಜಿ ಪ್ರೇರಣೆ

ಎಲ್‌ಎಸಿಯಿಂದ ಎಲ್‌ಒಸಿವರೆಗೆ (ವಾಸ್ತವ ಗಡಿ ರೇಖೆಯಿಂದ ಗಡಿ ನಿಯಂತ್ರಣ ರೇಖೆವರೆಗೆ) ಭಾರತ ಶಕ್ತಿಯ ಅವತಾರವಾಗಿ ಹೊರ ಹೊಮ್ಮಿದೆ. ನೇತಾಜಿ ಸುಭಾಷ್‌ಚಂದ್ರ ಬೋಸ್ ಅವರು ತಮ್ಮ ಜೀವಿತಾವಧಿಯಲ್ಲಿ ಇದನ್ನೇ ಬಯಸಿದ್ದರು ಎಂದು ಪ್ರಧಾನಿ ನರೇಂದ್ರ ಮೋದಿ ಹೇಳಿದ್ದಾರೆ.

ಕೋಲ್ಕೊತ್ತಾದ ವಿಕ್ಟೋರಿಯಾ ಸ್ಮಾರಕ ಭವನದಲ್ಲಿ ನಡೆದ ನೇತಾಜಿ ಅವರ 125ನೇ ಜನ್ಮ ದಿನಾಚರಣೆ ಸಮಾರಂಭದಲ್ಲಿ ಮಾತನಾಡಿದ ಪ್ರಧಾನಿ '130 ಕೋಟಿ ಭಾರತೀಯರು ಇಂದು ನೇತಾಜಿಯ ಋಣದಲ್ಲಿದ್ದೇವೆ. ಪ್ರತಿಯೊಬ್ಬರ ದೇಹದಲ್ಲಿಯೂ ಅವರ ಋಣದ ರಕ್ತ ಹರಿಯುತ್ತದೆ. ಅದಕ್ಕೆ ಪ್ರತಿಯಾಗಿ ಈಗ ನಾವು ದೇಶಕ್ಕಾಗಿ ಕಿಂಚಿತ್ತಾದರೂ ತ್ಯಾಗ ಮಾಡಲೇಬೇಕಿದೆ ಎಂದು ಹೇಳಿದರು. ನಾವು ಸ್ವಾವಲಂಬಿ ಭಾರತ ನಿರ್ಮಿಸಬೇಕು. ವಿಶ್ವದರ್ಜೆಯ ಶ್ರೇಷ್ಠ ಉತ್ಪನ್ನಗಳನ್ನು ನಾವು ಮಾರುಕಟ್ಟೆಗೆ ಬಿಡಬೇಕಿದೆ. ಹಾಗಾದಾಗ ಮಾತ್ರ ನಾವು ಆತ್ಮನಿರ್ಭರ ಸಾಧಿಸಲು ಸಾಧ್ಯ. ಇಂದು ಭಾರತವು ಕೊರೋನಾ ನಿರೋಧಕ ಲಸಿಕೆಯನ್ನು ಹಲವು ದೇಶಗಳಿಗೆ ರಫ್ತು ಮಾಡಿದೆ. ನೇತಾಜಿ ಬದುಕಿದಿದ್ದರೆ ಈ ಕ್ಷಣವನ್ನು ಕಂಡು ಆನಂದಪಡುತ್ತಿದ್ದರು ಎಂದು ಹೇಳಿದರು.

**ಹಲವು ಕಾರ್ಯಕ್ರಮಗಳಲ್ಲಿ ಭಾಗಿ:** ನಿಸ್ವಾರ್ಥ ದೇಶ ಸೇವೆಯ ಪರಾಕ್ರಮ ಮೆರೆದ ಸ್ವಾತಂತ್ರ್ಯ ಸೇನಾನಿ ಸುಭಾಷ್ ಚಂದ್ರ ಬೋಸ್ ಅವರ 125ನೇ ವರ್ಷದ ಜನ್ಮ ದಿನಾಚರಣೆಯನ್ನು ವೈಭವದಿಂದ ಆಚರಿಸಲಾಯಿತು. ಮಹಾನ್ ಹೋರಾಟಗಾರನ ತಾಯ್ನಾಡು ಪಶ್ಚಿಮ ಬಂಗಾಳದಲ್ಲಿ ನಡೆದ ವಿವಿಧ ಕಾರ್ಯಕ್ರಮಗಳಲ್ಲಿ ಪ್ರಧಾನಿ ನರೇಂದ್ರ ಮೋದಿ ಪಾಲ್ಗೊಂಡು ಗುಣಗಾನ ಮಾಡಿದರು. ಈ ದಿನವನ್ನು ಕೇಂದ್ರ ಸರ್ಕಾರ 'ಪರಾಕ್ರಮ ದಿನ' ಎಂದು ಘೋಷಣೆ ಮಾಡಿದ್ದು ವಿಶೇಷ.

ಬೋಸ್ ಸ್ಮರಣಾರ್ಥ ಮಧ್ಯಾಹ್ನದಿಂದ ಆಯೋಜನೆಗೊಂಡಿದ್ದ ವಿವಿಧ ಕಾರ್ಯಕ್ರಮಗಳಲ್ಲಿ ಪ್ರಧಾನಿ ಮೋದಿ ಪಾಲ್ಗೊಂಡರು. ಮೊದಲು ಕೋಲ್ಕತ್ತಾದ ವಿಕ್ಟೋರಿಯಾ ಸ್ಮಾರಕ ಭವನದಲ್ಲಿ ನಡೆದ ಕಾರ್ಯಕ್ರಮದಲ್ಲಿ ಪಾಲ್ಗೊಂಡು ಮಾತನಾಡಿದರು. ಬಳಿಕ ನೇತಾಜಿ ಭವನಕ್ಕೆ ಭೇಟಿ ನೀಡಿದರು. ಬೋಸ್ ಕುರಿತ ಅಂತರರಾಷ್ಟ್ರೀಯ ಸಮಾವೇಶಗಳಲ್ಲಿ ಪಾಲ್ಗೊಂಡಿದ್ದ ನಿಯೋಗ ಸದಸ್ಯರನ್ನು ನ್ಯಾಷನಲ್ ಲೈಬ್ರರಿಯಲ್ಲಿ ಭೇಟಿಯಾಗಿ ಮಾತುಕತೆ ನಡೆಸಿದರು.

ಏಪ್ರಿಲ್–ಮೇ ತಿಂಗಳಲ್ಲಿ ರಾಜ್ಯ ವಿಧಾನಸಭೆ ಚುನಾವಣೆ ನಡೆಯುತ್ತಿರುವುದರಿಂದ ಪ್ರಧಾನಿ ನರೇಂದ್ರ ಮೋದಿ ಅವರ ಬಂಗಾಳದ ಈ ಭೇಟಿಗೆ ವಿಶೇಷ ಮಹತ್ವ ಬಂದಿದೆ. ಆಡಳಿತಾರೂಢ ಟಿಎಂಸಿ ವಿರುದ್ಧ ಬಿಜೆಪಿ ಈ ಚುನಾವಣೆಯಲ್ಲಿ ನೇರ ಪೈಪೋಟಿಗೆ ಇಳಿದಿದೆ. ಬೋಸ್ ವಿಷಯದಲ್ಲಿ ಎರಡು ಪಕ್ಷಗಳು ಪೈಪೋಟಿಯ ಮೇಲೆ ಪ್ರತಿಪಾದನೆ ನಡೆಸಿದವು.

ವಿಕ್ಟೋರಿಯಾದಲ್ಲಿನ ಪ್ರಧಾನಿ ಭಾಷಣದ ಪ್ರಮುಖ ಅಂಶಗಳು:

- 2018ರಲ್ಲಿ ಅಂಡಮಾನ್ ದ್ವೀಪಕ್ಕೆ ನೇತಾಜಿ ಸುಭಾಷ್‌ಚಂದ್ರ ಬೋಸ್ ಅವರ ಹೆಸರನ್ನು ಇರಿಸಿ ಗೌರವಿಸುವ ಅವಕಾಶ ಲಭಿಸಿತು. ಅದು ನನ್ನ ಅದೃಷ್ಟದ ಫಳಿಗೆ.
- ದೇಶದ ಉತ್ಸುಕತೆ, ಕಾತುರವನ್ನು ಅರ್ಥ ಮಾಡಿಕೊಂಡ ನಮ್ಮ ಸರ್ಕಾರ ನೇತಾಜಿಗೆ ಸಂಬಂಧಿಸಿದ ಎಲ್ಲ ರಹಸ್ಯ ಕಡತಗಳನ್ನು ಬಹಿರಂಗ ಪಡಿಸಿತು. ಅಂದಿನ ಇಂಡಿಯನ್

ನ್ಯಾಷನಲ್ ಆರ್ಮಿಯಲ್ಲಿ ಇದ್ದು, ಕಾದಾಡಿದ ಕಲಿಗಳನ್ನು ಗಣರಾಜ್ಯೋತ್ಸವ ಪೆರೇಡ್‌ನಲ್ಲಿ ಪಾಲ್ಗೊಳ್ಳಲು ಅವಕಾಶ ನೀಡಲಾಗಿತ್ತು. ಇದು ಕೂಡ ನಮ್ಮ ಸರ್ಕಾರದ ಅದೃಷ್ಟವೇ ಸರಿ.

- ಸ್ವಾತಂತ್ರ್ಯ ಹೋರಾಟದ ಪ್ರಮುಖ ಘಟ್ಟದಲ್ಲಿ ನೇತಾಜಿ ದೇಶದಿಂದ ಹೊರ ನಡೆದರು. ದೇಶದ ಹೊರಗಿದ್ದುಕೊಂಡೇ ಸ್ವಾತಂತ್ರ್ಯಕ್ಕಾಗಿ ಕಾದಾಡುವ ಪಣ ತೊಟ್ಟಿದ್ದರು. ಅದನ್ನೇ ಸಾಧಿಸಿ ತೋರಿಸಿದರು, ಇದರಿಂದಾಗಿ ಭಾರತದ ಮೇಲಿನ ಸಾಮ್ರಾಜ್ಯಶಾಹಿಯ ಹಿಡಿತ ಸಡಿಲಗೊಂಡಿತು.

ಸಂದರ್ಭ ಯಾವುದೇ ಇರಲಿ ನೇತಾಜಿ ಹೆಸರು ಕೇಳಿದರೆ ಸಾಕು ನಾನು ಸ್ಫೂರ್ತಿಯಿಂದ ಪುಟಿದೇಳುತ್ತೇನೆ. ನೇತಾಜಿ ಬಹುದೊಡ್ಡ ಸ್ಫೂರ್ತಿಯ ಸೆಲೆ. ಜಾಗತಿಕ ಸಾಮ್ರಾಜ್ಯಶಾಹಿ ಶಕ್ತಿಯ ವಿರುದ್ಧ ಕೆಚ್ಚೆದೆಯಿಂದ ಹೋರಾಡಿದ ಧೀರ. ಅವರು ಅಂದು ದೇಶಕ್ಕಾಗಿ ಸ್ವಾತಂತ್ರ್ಯ ಕೇಳುವ ಬದಲು ಅದನ್ನು ಪಡೆದುಕೊಳ್ಳುವ ಪಣ ತೊಟ್ಟಿದ್ದರು. ಆ ಮಹಾನ್ ಶಕ್ತಿಗೆ ನಾನು ಇಂದು ತಲೆಬಾಗುತ್ತೇನೆ ಎಂದು ಪ್ರಧಾನಿ ಮೋದಿ ಹೆಮ್ಮೆಯಿಂದ ನುಡಿದರು. ದೇಶ ಈಗ ನಿರ್ಧಾರ ಮಾಡಿದೆ. ಪ್ರತಿ ವರ್ಷವು ತಪ್ಪದೇ ನೇತಾಜಿ ಜನ್ಮದಿನ ಆಚರಿಸುವ ಹುಮ್ಮಸ್ಸು ತೋರಿದೆ. ಅವರ ಜನ್ಮದಿನ ಜನವರಿ 23 'ಪರಾಕ್ರಮ ದಿನ'ವಾಗಿದೆ ಎಂದು ಹೇಳಿದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:24.01.2021

## 16. ವೋಟರ್ ಐಡಿಗೆ ಇ–ಸ್ಪರ್ಶ

ಇನ್ನು ಮತದಾರರ ಗುರುತಿನ ಚೀಟಿ ಡಿಜಿಟಲ್ ರೂಪದಲ್ಲಿ ಸಿಗಲಿದೆ. ರಾಷ್ಟ್ರೀಯ ಮತದಾರರ ದಿನದಂದು ಈ ಯೋಜನೆಗೆ ಕೇಂದ್ರ ಕಾನೂನು ಸಚಿವ ರವಿಶಂಕರ್ ಪ್ರಸಾದ್ ಚಾಲನೆ ನೀಡಲಿದ್ದಾರೆ. ಏಪ್ರಿಲ್–ಮೇನಲ್ಲಿ ಐದು ರಾಜ್ಯಗಳ ವಿಧಾನಸಭೆ ಚುನಾವಣೆ ನಡೆಯಲಿರುವ ಹಿನ್ನೆಲೆಯಲ್ಲಿ ಈ ಯೋಜನೆ ಅನುಷ್ಠಾನ ಮಹತ್ವ ಪಡೆದಿದೆ.

- ಜನವರಿ 25 – ಜನವರಿ 31 – ಮೊದಲ ಹಂತ: ಎಲ್ಲ ಹೊಸ ಮತದಾರರಿಗೆ ಅರ್ಜಿ ಹಾಕಲು ಅವಕಾಶ.
- ಫೆಬ್ರವರಿ 1 ರಿಂದ ಎರಡನೇ ಹಂತ: ಇತರ ಸಾಮಾನ್ಯ ಮತದಾರರಿಗೆ ಅವಕಾಶ.
- ಮತದಾರರ ಗುರುತಿನ ಚೀಟಿಗಾಗಿ ಫಾರಂ ನಂ.6ರಲ್ಲಿ ವಿವರಗಳನ್ನು ಭರ್ತಿ ಮಾಡಬೇಕು.
- ಮೊಬೈಲ್ ಸಂಸ್ಥೆ ನೀಡುವುದು ಕಡ್ಡಾಯ. ಈ ಹಿಂದೆ ಚುನಾವಣಾ ಆಯೋಗದ ವೆಬ್‌ಸೈಟ್‌ನಲ್ಲಿ ಮೊಬೈಲ್ ನಂಬರ್ ನಮೂದಿಸಿದ್ದರೆ ಅದನ್ನೇ ಮತ್ತೆ ಬಳಕೆ ಮಾಡಲು ಅಸಾಧ್ಯ.
- ಮೊಬೈಲ್ ಅಥವಾ ಕಂಪ್ಯೂಟರ್ ಮೂಲಕ ಡಿಜಿಟಲ್ ವೋಟರ್ ಐಡಿ ಡೌನ್ ಲೋಡ್ ಮಾಡಿಕೊಂಡು ಅದನ್ನು ಡಿಜಿ ಲಾಕರ್‌ನಲ್ಲಿ ಇಟ್ಟುಕೊಳ್ಳಬಹುದು ಅಥವಾ ಪಿಡಿಎಫ್ ಮಾದರಿಯಲ್ಲಿ ಮುದ್ರಿಸಿಕೊಳ್ಳಬಹುದು.

**ಚೀಟಿ ಹೇಗೆ ಇರಲಿದೆ:–**

- ಪಿಡಿಎಫ್ ಫಾರ್ಮಾಟ್‌ನಲ್ಲಿ ಇರಲಿದೆ.
- ಮತದಾರರ ಫೋಟೋ, ಸೀರಿಯಲ್ ನಂಬರ್, ಇತರ ವಿವರಗಳನ್ನು ಒಳಗೊಂಡ ಕ್ಯೂಆರ್ ಕೋಡ್ ಇರಲಿದೆ.

https://voterportal.eci.gov.in/https://nvsp.in/, ಈ ಪೋರ್ಟಲ್ ಮೂಲಕ ಅನಿವಾಸಿ ಭಾರತೀಯರಿಗೆ ನೋಂದಣಿ ಮಾಡಿಕೊಳ್ಳಲು ಅವಕಾಶ ಉಂಟು. ಇತರರಿಗೆ ಸ್ವವಿವರ ಅಪ್‌ಡೇಟ್, ನೋಂದಣಿ ಸೇರಿದಂತೆ ಹಲವು ಆಯ್ಕೆಗಳನ್ನು ನೀಡಲಾಗಿದೆ.

ಆಧಾರ: ಉದಯವಾಣಿ, ದಿನಾಂಕ:25.01.2021

## 17. ದೇಶದಲ್ಲಿ ತಲೆ ಎತ್ತಲಿವೆ 2 ಪ್ಲಾಸ್ಟಿಕ್ ಪಾರ್ಕ್

ಆತ್ಮನಿರ್ಭರ ಯೋಜನೆಯ ಭಾಗವಾಗಿ ಕೇಂದ್ರ ಸರ್ಕಾರ ಮತ್ತೊಂದು ಮಹತ್ವದ ಯೋಜನೆಗೆ ಕೈಹಾಕಿದ್ದು, ಇದರ ಭಾಗವಾಗಿ ದೇಶದಲ್ಲಿ ಎರಡು ಪ್ಲಾಸ್ಟಿಕ್ ಪಾರ್ಕ್ ಆರಂಭಿಸಲು ಮುಂದಾಗಿದೆ.

ಅತ್ಯಾಧುನಿಕ ತಂತ್ರಜ್ಞಾನದ ಸಹಾಯದೊಂದಿಗೆ ಆರಂಭಗೊಳ್ಳಲಿರುವ ಪ್ಲಾಸ್ಟಿಕ್ ಪಾರ್ಕ್, ಒಂದು ಕರ್ನಾಟಕದ ಕರಾವಳಿ ಭಾಗದ ಮಂಗಳೂರಿನಲ್ಲಿ ತಲೆ ಎತ್ತಿದರೆ, ಇನ್ನೊಂದು ಉತ್ತರ ಪ್ರದೇಶದ ಗೋರಖ್‌ಪುರದಲ್ಲಿ ನಿರ್ಮಾಣವಾಗಲಿದೆ. ಇದಕ್ಕಾಗಿ ಈಗಾಗಲೇ ಕೇಂದ್ರ ಸರ್ಕಾರ ಆಗತ್ಯ ತಯಾರಿ ನಡೆಸಿ, ರಾಜ್ಯ ಸರ್ಕಾರಕ್ಕೆ ಮಾಹಿತಿ ನೀಡಿದೆ.

ಸುದ್ಧಿಗಾರರೊಂದಿಗೆ ಮಾತನಾಡಿದ ಕೇಂದ್ರ ರಾಸಾಯನಿಕ ಮತ್ತು ರಸಗೊಬ್ಬರ ಖಾತೆ ಸಚಿವ ಸದಾನಂದಗೌಡ ಅವರು ಸ್ವಾವಲಂಬಿ ಭಾರತ ಯೋಜನೆಯಡಿ ದೇಶದ ಪ್ಲಾಸ್ಟಿಕ್ ಕೈಗಾರಿಕೆಗಳಿಗೆ ಉತ್ತೇಜನ ನೀಡುವ ಉದ್ದೇಶದಿಂದ ದೇಶದಲ್ಲಿ ಎರಡು ಪ್ಲಾಸ್ಟಿಕ್ ಪಾರ್ಕ್‌ಗಳನ್ನು ಅಭಿವೃದ್ಧಿ ಪಡಿಸಲಾಗುತ್ತಿದೆ. ಪಾರ್ಕ್ ಸ್ಥಾಪಿಸುವ ಬಗ್ಗೆ ಮೊನ್ನೆ ನಡೆದ ರಾಸಾಯನಿಕ ಇಲಾಖೆಯ ಯೋಜನೆ ಚಾಲನಾ ಸಮಿತಿ ಸಭೆಯಲ್ಲಿ ತಾತ್ವಿಕ ಒಪ್ಪಿಗೆ ನೀಡಿದ್ದೇವೆ ಎಂದರು.

ಈ ಸಂಬಂಧ ಈಗಾಗಲೇ ರಾಜ್ಯ ಸರ್ಕಾರಕ್ಕೆ ಪತ್ರ ಬರೆದು ಮಾಹಿತಿ ನೀಡಿದ್ದೇವೆ. ಆದಷ್ಟು ಬೇಗ ವಿಸ್ತೃತ ಯೋಜನಾ ವರದಿ (ಡಿಪಿಆರ್) ತಯಾರಿಸಿ, ಅಂತಿಮ ಒಪ್ಪಿಗೆ ಸಲ್ಲಿಸುವಂತೆ ರಾಜ್ಯ ಸರ್ಕಾರಕ್ಕೆ ತಿಳಿಸಲಾಗಿದೆ. ಆರು ತಿಂಗಳ ಒಳಗೆ ಅಂತಿಮ ಒಪ್ಪಿಗೆ ನೀಡಿ ಯೋಜನೆಯ ಆರಂಭಕ್ಕೆ ಕ್ರಮ ಕೈಗೊಳ್ಳಲಾಗುವುದು ಎಂದು ಸಚಿವರು ತಿಳಿಸಿದರು.

**ಅತ್ಯಾಧುನಿಕ ತಂತ್ರಜ್ಞಾನ:** ದೇಶದಲ್ಲಿ ಪ್ಲಾಸ್ಟಿಕ್ ಪಾರ್ಕ್ ಎನ್ನುವ ಕಲ್ಪನೆಯನ್ನು ಹೇಳುತ್ತಿದ್ದಂತೆ, ಅನೇಕರು ಚಕಿತರಾದರು. ಈ ಪಾರ್ಕ್‌ನಲ್ಲಿ ಏನಿರಲಿದೆ ಎನ್ನುವ ಕುತೂಹಲ ಅನೇಕರಿಗಿದೆ. ಇದೊಂದು ಪ್ಲಾಸ್ಟಿಕ್ ಸಂಬಂಧಿತ ಕೈಗಾರಿಕೆಗಳಿಗೆ ಸೀಮಿತವಾದ ಕೈಗಾರಿಕಾಭಿವೃದ್ಧಿ ಕೇಂದ್ರ. ಪ್ಲಾಸ್ಟಿಕ್ ಸಂಬಂಧಿತ ಕೈಗಾರಿಕೆಗಳ ಅಭಿವೃದ್ಧಿಗೆ ಬೇಕಾದ ಎಲ್ಲ ಆಧುನಿಕ ತಂತ್ರಜ್ಞಾನ ಸೌಕರ್ಯಗಳು ಇಲ್ಲಿರುತ್ತವೆ. ಇವು ಸಾಮಾನ್ಯ ಸೌಲಭ್ಯಗಳಾಗಿದ್ದು, ಇಲ್ಲಿ ಸ್ಥಾಪಿತವಾದ ಎಲ್ಲ ಕೈಗಾರಿಕಾ ಘಟಕಗಳು ಈ ಸೌಲಭ್ಯಗಳನ್ನು ಬಳಸಿಕೊಳ್ಳಬಹುದು. ಇದರಿಂದ ನಮ್ಮ ಸ್ವದೇಶಿ ಪ್ಲಾಸ್ಟಿಕ್ ಕೈಗಾರಿಕೆಗಳು ಅಂತರರಾಷ್ಟ್ರೀಯ ಗುಣಮಟ್ಟದ ಉತ್ಪನ್ನಗಳನ್ನು ತಯಾರಿಸಬಹುದು. ಆಗ ನಮ್ಮ ಕಂಪನಿಗಳು ಜಾಗತಿಕ ಮಾರುಕಟ್ಟೆಯಲ್ಲಿ ಪೈಪೋಟಿ ನಡೆಸಲು ಶಕ್ತವಾಗುತ್ತವೆ. ರಫ್ತು ವೃದ್ಧಿಯಾಗುತ್ತದೆ ಎಂದು ವಿಶ್ವಾಸ ವ್ಯಕ್ತಪಡಿಸಿದರು.

**ಶೇ.50ರಷ್ಟು ವೆಚ್ಚ ಕೇಂದ್ರ ಸರ್ಕಾರದ ಹೆಗಲಿಗೆ:–** ಪ್ಲಾಸ್ಟಿಕ್ ಪಾರ್ಕ್‌ನ ಯೋಜನೆ ಜಂಟಿ ಯೋಜನೆಯಾಗಿದೆ. ರಾಜ್ಯ ಸರ್ಕಾರ ಈ ಯೋಜನೆಯನ್ನು ಈಗಾಗಲೇ ಅಸ್ತಿತ್ವದಲ್ಲಿರುವ ಕೆಎಸ್‌ಐಡಿಸಿ ಮೂಲಕ ಅಥವಾ ಹೊಸ ವಿಶೇಷ ಉದ್ದೇಶದ ಕಂಪನಿ ಸ್ಥಾಪಿಸುವ ಮೂಲಕ ಅನುಷ್ಠಾನಗೊಳಿಸಬಹುದಾಗಿದೆ. ಈ ಪ್ಲಾಸ್ಟಿಕ್ ಪಾರ್ಕ್‌ನಲ್ಲಿ ಅಭಿವೃದ್ಧಿಪಡಿಸುವ ಸಾಮಾನ್ಯ ಸೌಕರ್ಯದ ಶೇ.50ರಷ್ಟು ವೆಚ್ಚವನ್ನು ಕೇಂದ್ರ ಸರ್ಕಾರ ಭರಿಸುತ್ತದೆ ಎಂದು ವಿವರಿಸಿದರು.

ಈ ಸಂಬಂಧ ಈಗಾಗಲೇ ರೂ.40 ಕೋಟಿಗಳನ್ನು ನಿಗದಿಪಡಿಸಲಾಗಿದೆ. ರೂ.40 ಕೋಟಿಗಳನ್ನು ನಾಲ್ಕು ಕಂತುಗಳಲ್ಲಿ ಬಿಡುಗಡೆ ಮಾಡಲಾಗುವುದು. ಆದಷ್ಟು ಬೇಗ ಡಿಪಿಆರ್ ಕಳುಹಿಸಿಕೊಡಿ ಎಂದು ರಾಜ್ಯಕ್ಕೆ ಕೇಳಿ ಕೊಂಡಿದ್ದೇವೆ. ನಾನು ಕೂಡ ಈ ಬಗ್ಗೆ ರಾಜ್ಯ ಸರ್ಕಾರಕ್ಕೆ ಪತ್ರ ಬರೆಯುತ್ತಿದ್ದೇನೆ ಎಂದು ತಿಳಿಸಿದರು.

ಆಧಾರ: ವಿಶ್ವವಾಣಿ, ದಿನಾಂಕ:25.01.2021

## 18. ಲಸಿಕೆ ಕುರಿತು ಸುಳ್ಳು ಸುದ್ದಿಗಳ ಹಿಮ್ಮೆಟ್ಟಿಸಿ

ಭಾರತೀಯ ವಿಜ್ಞಾನಿಗಳು ಕೋವಿಡ್–19 ಲಸಿಕೆ ಅಭಿವೃದ್ಧಿಪಡಿಸುವ ಮೂಲಕ ತಮ್ಮ ಕೆಲಸ ಮಾಡಿದ್ದಾರೆ. ಈಗ ಭಾರತೀಯ ಯುವಕರು ಸರಿಯಾದ ಮಾಹಿತಿಯ ಮೂಲಕ ಲಸಿಕೆಯ ಬಗ್ಗೆ ಹರಡಿರುವ ಸುಳ್ಳು ಸುದ್ದಿಗಳು ಹಾಗೂ ವದಂತಿಗಳನ್ನು ಹಿಮ್ಮೆಟ್ಟಿಸಬೇಕು ಎಂದು ಪ್ರಧಾನಿ ನರೇಂದ್ರ ಮೋದಿ ಕರೆ ನೀಡಿದ್ದಾರೆ.

ಗಣರಾಜ್ಯೋತ್ಸವ ಪೆರೇಡ್‌ನಲ್ಲಿ ಪಾಲ್ಗೊಳ್ಳಲಿರುವ ಎನ್‌ಸಿಸಿ ಕೆಡೆಟ್‌ಗಳು, ಎನ್‌ಎಸ್‌ಎಸ್ ಸ್ವಯಂಸೇವಕರು ಮತ್ತು ಕಲಾವಿದರನ್ನು ಉದ್ದೇಶಿಸಿ ಮಾತನಾಡಿದ ಅವರು, ಇಂಥ ಸಂಘಟನೆಗಳು ಸಂಕಷ್ಟದ ಸಮಯದಲ್ಲಿ ಮಹತ್ವದ ಪಾತ್ರ ವಹಿಸಿವೆ ಎಂದು ಶ್ಲಾಘಿಸಿದರು. ಕೋವಿಡ್ ಸಮಯದಲ್ಲಿ ನಿಮ್ಮ ಪರಿಶ್ರಮ ಶ್ಲಾಘನೀಯ. ಸರ್ಕಾರಕ್ಕೆ ಮತ್ತು ಆಡಳಿತಕ್ಕೆ ಅಗತ್ಯ ಎದುರಾದಾಗ ನೀವು ಮುಂದೆ ಬಂದು ಸಹಾಯ ಮಾಡಿದಿರಿ. ಆರೋಗ್ಯ ಸೇತು ಆ್ಯಪ್‌ನ ವಿಚಾರವಿರಲಿ ಅಥವಾ ಸಾಂಕ್ರಾಮಿಕದ ಬಗ್ಗೆ ಜಾಗೃತಿ ಮೂಡಿಸುವ ವಿಚಾರದಲ್ಲಾಗಲಿ ನಿಮ್ಮ ಕೆಲಸ ಶ್ಲಾಘನೀಯ. ನಿಮ್ಮ ಪ್ರಯತ್ನವನ್ನು ಮತ್ತೊಂದು ಹಂತಕ್ಕೆ ಒಯ್ಯಬೇಕಿದೆ. ಕೋವಿಡ್ ಲಸಿಕೆ ಪ್ರಕ್ರಿಯೆಯ ಬಗ್ಗೆ ದೇಶದ ಬಡವರು ಸಾರ್ವಜನಿಕರಿಗೆ ಸರಿಯಾದ ಮಾಹಿತಿ ತಲುಪಿಸಲು ಮುಂದಾಗಿ ಎಂದರು ಪ್ರಧಾನಿ.

**6 ದಿನಗಳಲ್ಲಿ 10 ಲಕ್ಷ ಮಂದಿಗೆ ಲಸಿಕೆ:** ಲಸಿಕೆ ಅಭಿಯಾನ ಆರಂಭವಾದ ಬಳಿಕ ಕೇವಲ 6 ದಿನಗಳಲ್ಲಿ ಭಾರತದಲ್ಲಿ 10 ಲಕ್ಷ ಮಂದಿಗೆ ಲಸಿಕೆ ವಿತರಿಸಲು ಯುಕೆ 18 ದಿನಗಳನ್ನು ತೆಗೆದುಕೊಂಡಿದ್ದರೆ, ಅಮೆರಿಕಕ್ಕೆ 10 ದಿನ ಬೇಕಾದವು ಎಂದು ಕೇಂದ್ರ ಆರೋಗ್ಯ ಇಲಾಖೆ ತಿಳಿಸಿದೆ. ಶನಿವಾರದಿಂದ ಭಾನುವಾರಕ್ಕೆ ದೇಶಾದ್ಯಂತ 14,849 ಮಂದಿಗೆ ಸೋಂಕು ದೃಢಪಟ್ಟಿದೆ. ಆರೋಗ್ಯ ಕಾರ್ಯಕರ್ತರ ಬಳಿಕ ಆದ್ಯತೆಯಲ್ಲಿ ವೈಮಾನಿಕ ಕ್ಷೇತ್ರದ ಸಿಬ್ಬಂದಿಗೆ ಲಸಿಕೆ ನೀಡಬೇಕು ಎಂದು ಆರೋಗ್ಯ ಇಲಾಖೆಗೆ ನಾಗರಿಕ ವಿಮಾನಯಾನ ಇಲಾಖೆ ಮನವಿ ಮಾಡಿದೆ.

ಆಧಾರ:ಉದಯವಾಣಿ, ದಿನಾಂಕ:25.01.2021

## 19. ಹಳೆ ಸರ್ಕಾರಿ ವಾಹನ 2022 ಏಪ್ರಿಲ್–1 ರಿಂದ ಗುಜರಿಗೆ

ಬಾರಿ ಪರಿಸರ ಮಾಲಿನ್ಯ ಉಂಟುಮಾಡುವ 15 ವರ್ಷದಷ್ಟು ಹಳೆಯದಾದ ವಾಹನಗಳನ್ನು ಗುಜರಿಗೆ ಹಾಕಿ ಹೊಸ ವಾಹನ ಖರೀದಿ ಪ್ರೋತ್ಸಾಹಿಸುವ ಸ್ಕ್ರಾಪ್ ಪಾಲಿಸಿ ಜಾರಿಗೆ ಕೊನೆಗೂ ಕೇಂದ್ರ ಸರ್ಕಾರ ಮುಂದಾಗಿದೆ. 2022ರ ಏಪ್ರಿಲ್–1 ರಿಂದ ಜಾರಿಗೆ ಬರುವಂತೆ, ಸರ್ಕಾರಿ ಮತ್ತು ಸಾರ್ವಜನಿಕ ವಲಯದ ಉದ್ಯಮಗಳಲ್ಲಿ ಬಳಕೆಯಲ್ಲಿರುವ 15 ವರ್ಷಗಳಷ್ಟು ಹಳೆಯದಾದ ವಾಹನಗಳನ್ನು ಗುಜರಿಗೆ ಹಾಕಲು ಸರ್ಕಾರ ನಿರ್ಧರಿಸಿದೆ.

ಹಲವು ವರ್ಷಗಳಿಂದ ಪ್ರಸ್ತಾವನೆಯ ಹಂತದಲ್ಲೇ ಇದ್ದ ಯೋಜನೆಯನ್ನು ಜಾರಿಗೊಳಿಸಲು ಕೇಂದ್ರ ರಸ್ತೆ ಸಾರಿಗೆ, ಹೆದ್ದಾರಿ ಖಾತೆ ಸಚಿವ ನಿತಿನ್ ಗಡ್ಕರಿ ಅನುಮೋದನೆ ನೀಡಿದ್ದು, ಶೀಘ್ರವೇ ಈ ಕುರಿತು ಸರ್ಕಾರ ಆದೇಶ ಹೊರಡಿಸಲಿದೆ ಎಂದು ಸಚಿವಾಲಯದ ಪ್ರಕಟಣೆಯಲ್ಲಿ ತಿಳಿಸಲಾಗಿದೆ.

ಎಲೆಕ್ಟ್ರಿಕ್ ವಾಹನ ಉತ್ತೇಜಿಸಲು 15 ವರ್ಷ ಹಳೆಯ ವಾಹನ ನಿಷೇಧಿಸುವ ಕುರಿತು ಮೋಟಾರು ವಾಹನ ಕಾಯ್ದೆಗೆ ತಿದ್ದುಪಡಿ ತರುವ ಬಗ್ಗೆ 2019ರ ಜೂನ್ 26 ರಂದು ಕೇಂದ್ರ ಸರ್ಕಾರ ಪ್ರಸ್ತಾಪ ಮಾಡಿತ್ತು. ಇನ್ನು ಇತ್ತೀಚೆಗಷ್ಟೇ ಹೇಳಿಕೆ ನೀಡಿದ್ದ ಸಚಿವ ಗಡ್ಕರಿ, ಹಳೆಯ ವಾಹನ ನಿಷೇಧಿಸುವ ಯೋಜನೆ ಕುರಿತು ನಾವು ಪ್ರಸ್ತಾಪ ಸಲ್ಲಿಸಿದ್ದು, ಶೀಘ್ರವೇ ಅದಕ್ಕೆ ಅನುಮೋದನೆ ಸಿಗುವ ವಿಶ್ವಾಸವಿದೆ. ಯೋಜನೆ ಜಾರಿ ಬಳಿಕ ಭಾರತ ಹೊಸ ವಾಹನಗಳ ಜಾಗತಿಕ ಕೇಂದ್ರವಾಗಲಿದೆ ಎಂದಿದ್ದಾರೆ.

**ಮಾಲಿನ್ಯಕಾರಕ ಹಳೆಯ ವಾಹನಗಳಿಗೆ ಹಸಿರು ತೆರಿಗೆ:** ಹಳೆ ವಾಹನ ನಿಷೇಧಿಸಲು ಕೇಂದ್ರದಿಂದ ಪರೋಕ್ಷ ಕ್ರಮ ಪರಿಸರಕ್ಕೆ ಮಾರಕವಾದ ಹಳೆಯ ಖಾಸಗಿ ವಾಹನ ನಿಷೇಧಿಸುವ ನಿಟ್ಟಿನಲ್ಲಿ ಮೊದಲ ಹೆಜ್ಜೆ ಇಟ್ಟಿರುವ ಕೇಂದ್ರ ಸರ್ಕಾರ, ಇಂಥ ವಾಹನಗಳ ಮೇಲೆ ಹಸಿರು ತೆರಿಗೆ ವಿಧಿಸಲು ನಿರ್ಧರಿಸಿದೆ. ಈ ಕುರಿತು ರಾಜ್ಯಗಳ ಅಭಿಪ್ರಾಯ ಸಂಗ್ರಹಿಸಿ ಶೀಘ್ರವೇ ಅಧಿಸೂಚನೆ ಹೊರಡಿಸಲಾಗುವುದು ಎಂದು ಕೇಂದ್ರ

ರಸ್ತೆ ಸಾರಿಗೆ, ಹೆದ್ದಾರಿ ಸಚಿವಾಲಯ ತನ್ನ ಪ್ರಕಟಣೆಯಲ್ಲಿ ತಿಳಿಸಿದೆ. 8 ವರ್ಷಗಳಷ್ಟು ಹಳೆಯ ಸಾರಿಗೆ ವಾಹನಗಳಿಗೆ ಫಿಟ್‌ನೆಸ್ ವರದಿ ನವೀಕರಣದ ಸಂದರ್ಭದಲ್ಲಿ ರಸ್ತೆ ತೆರಿಗೆಯ ಶೇ.10–25ರವರೆಗೆ ಹಸಿರು ತೆರಿಗೆ ವಿಧಿಸುವ ಉದ್ದೇಶ ಹೊಂದಲಾಗಿದೆ.

ಆಧಾರ: ಕನ್ನಡಪ್ರಭ, ದಿನಾಂಕ:26.01.2021

## 20. ರಫೇಲ್ ವಿರಾಟ ರೂಪ; ವೈವಿಧ್ಯ ವೈಭವ

ಒಂದೆಡೆ ರಫೇಲ್ ಬಲಭೀಮನ ಬ್ರಹ್ಮಾಸ್ತ್ರದ ಕೌತುಕ, ಟಿ–90 ಭೀಷ್ಮ ಟ್ಯಾಂಕ್‌ನ ವಿರಾಟ ರೂಪ, ಸುಖೋಯ್–30 ಎಂಕೆಐ ಯುದ್ಧ ವಿಮಾನದ ಚಮತ್ಕಾರ. ಮತ್ತೊಂದೆಡೆ, ಜನಪದ ಹಾಡುಗಳಿಗೆ ಪುಟಾಣಿಗಳ ನೃತ್ಯ ಆತ್ಮನಿರ್ಭರ, ಭಾರತ, ವಿಜಯನಗರ ಸಾಮ್ರಾಜ್ಯ ಆಯೋಧ್ಯೆಯ ರಾಮಮಂದಿರ ಬಿಂಬಿಸುವ ಸ್ತಬ್ಧಚಿತ್ತಗಳ ಲೋಕ. ಇದು ದೆಹಲಿಯ ರಾಜಪಥದಲ್ಲಿ 72ನೇ ಗಣರಾಜ್ಯೋತ್ಸವದ ದಿನದಂದು ನಡೆದ ಅಭೂತಪೂರ್ವ ಪೆರೇಡ್‌ನಲ್ಲಿ ದೇಶದ ರಕ್ಷಣಾ ಪಡೆಗಳ ಸಾಮರ್ಥ್ಯ ಹಾಗೂ ಸಾಂಸ್ಕೃತಿಕ ವೈಭವವು ಅನಾವರಣಗೊಂಡಿದ್ದು, ಅಲ್ಲಿ ನಡೆದಿದ್ದ 25 ಸಾವಿರದಷ್ಟು ಮಂದಿಯ ಕಣ್ಣುಗಳಿಗೆ ಹಬ್ಬ ಹಾಗೂ ಬೆರಗು ಮೂಡಿಸಿದವು.

ವಿವಿಧ ರಾಜ್ಯಗಳು ಕೇಂದ್ರಾಡಳಿತ ಪ್ರದೇಶಗಳ 17 ಸ್ತಬ್ಧಚಿತ್ರಗಳು, ಕೇಂದ್ರ ಸರ್ಕಾರದ ವಿವಿಧ ಇಲಾಖೆಗಳು 9 ಟ್ಯಾಬ್ಲೋಗಳು ಹಾಗೂ ರಕ್ಷಣಾ ಸಚಿವಾಲಯದ 6 ಸ್ತಬ್ಧಚಿತ್ರಗಳು ಪೆರೇಡ್‌ನಲ್ಲಿ ಭಾಗಿಯಾದವು. ಕೊರೋನಾ ಹಿನ್ನೆಲೆಯಲ್ಲಿ 15 ವರ್ಷದೊಳಗಿನ ಹಾಗೂ 65 ದಾಟಿದವರಿಗೆ ಪ್ರವೇಶಕ್ಕೆ ಅನುಮತಿಯಿಲ್ಲದ ಕಾರಣ, ಈ ವರ್ಷ ವೀಕ್ಷಕರ ಸಂಖ್ಯೆ ಸ್ವಲ್ಪಮಟ್ಟಿಗೆ ಕಡಿಮೆಯಿತ್ತು.

ಕಳೆದ 55 ವರ್ಷಗಳಲ್ಲಿ ಇದೇ ಮೊದಲ ಬಾರಿಗೆ ವಿದೇಶಿ ಅತಿಥಿಗಳು ಕಾರ್ಯಕ್ರಮದಲ್ಲಿ ಭಾಗಿಯಾಗಿರಲಿಲ್ಲ. ಆದರೆ, 122 ಸದಸ್ಯರ ಬಾಂಗ್ಲಾ ಸಶಸ್ತ್ರ ಪಡೆಯು ಪಥ ಸಂಚಲನದಲ್ಲಿ ಪಾಲ್ಗೊಂಡಿತ್ತು. 1971ರ ಯುದ್ಧದಲ್ಲಿ ಪಾಕಿಸ್ತಾನದ ವಿರುದ್ಧ ಭಾರತ ಜಯ ಸಾಧಿಸಿದ ನೆನಪಲ್ಲಿ ದೇಶವು ಸ್ವರ್ಣಿಮ್ ವಿಜಯ ವರ್ಷವನ್ನು ಆಚರಿಸುತ್ತಿದ್ದು, ಭಾರತೀಯ ಸೇನೆಯ ಟಿ–90 ಭೀಷ್ಮ, ಬಿಎಂಪಿ–2 ಶರಥ್, ಬ್ರಹ್ಮೋಸ್ ಕ್ಷಿಪಣಿಯ ಲಾಂಚರ್, ಪಿನಾಕಾ ಎಲೆಕ್ಟ್ರಾನಿಕ್ ವಾರ್‌ಫೇರ್ ಸಿಸ್ಟಂ ಸಂವಿಜಯ್ ಕೂಡ ಪರೇಡ್‌ನಲ್ಲಿ ಬಲಪ್ರದರ್ಶನ ಮಾಡಿದವು. ತೇಜಸ್ ಯುದ್ಧ ವಿಮಾನದ ಯಶಸ್ವಿ ಟೇಕ್ ಆಫ್ ಹಾಗೂ ಟ್ಯಾಂಕ್ ನಿಗ್ರಹ ಕ್ಷಿಪಣಿ ವ್ಯವಸ್ಥೆಯನ್ನು ಬಿಂಬಿಸುವ 2 ಸ್ತಬ್ಧ ಚಿತ್ರಗಳನ್ನು ದೇಶದ ಡಿಆರ್‌ಡಿಒ ಪ್ರದರ್ಶಿಸಿತ್ತು. ಪೆರೇಡ್ ಆರಂಭಕ್ಕೂ ಮುನ್ನ ಪ್ರಧಾನಿ ಮೋದಿ ರಾಷ್ಟ್ರೀಯ ಯುದ್ಧ ಸ್ಮಾರಕಕ್ಕೆ ಭೇಟಿ ನೀಡಿ ಪುಷ್ಪನಮನ ಸಲ್ಲಿಸಿದರು.

**ಪ್ರಸಕ್ತ ಗಣರಾಜ್ಯೋತ್ಸವ ಪರೇಡ್ ಹಲವು ಪ್ರಥಮಗಳಿಗೆ ಸಾಕ್ಷಿಯಾಗಿದೆ ಅವೆಂದರೆ:–**

- 2019 ರಲ್ಲಿ ಅಸ್ತಿತ್ವಕ್ಕೆ ಬಂದ ಕೇಂದ್ರಾಡಳಿತ ಪ್ರದೇಶ ಲಡಾಖ್‌ನ ಸ್ತಬ್ದ ಪ್ರದರ್ಶನ.
- ಉತ್ತರಪ್ರದೇಶದ ವತಿಯಿಂದ ಆಯೋಧ್ಯೆ ರಾಮಮಂದಿರದ ಟ್ಯಾಬ್ಲೋ ಭಾಗಿ.
- 'ವರ್ಟಿಕಲ್ ಚಾರ್ಲಿ' ಆಕಾರದಲ್ಲಿ ದೇಶದ ಬಲ ಭೀಮ ರಫೇಲ್ ಯುದ್ಧ ವಿಮಾನದ ಹಾರಾಟ.
- ಫ್ಲೈ ಪಾಸ್ಟ್‌ನಲ್ಲಿ ಮೊದಲ ಮಹಿಳಾ ಫೈಟರ್ ಪೈಲಟ್ ಭಾವನಾ ಕಾಂತ್ ಭಾಗಿ.
- ನೌಕಾಪಡೆಯಿಂದ 1971ರ ಭಾರತ – ಪಾಕ್ ಯುದ್ಧದ ವೇಳೆ ಪಾಲ್ಗೊಂಡಿದ್ದ ಐಎನ್‌ಎಸ್ ವಿಕ್ರಾಂತ್ ಸ್ತಬ್ಧಚಿತ್ರ.
- ಬಾಂಗ್ಲಾದೇಶದ ಸಶಸ್ತ್ರ ಪಡೆಯ 122 ಸದಸ್ಯರಿಂದಲೇ ಪೆರೇಡ್ ಆರಂಭ.

ಆಧಾರ: ಉದಯವಾಣಿ, ದಿನಾಂಕ:27.01.2021

## 21. ರಾಷ್ಟ್ರಪತಿ ಭಾಷಣ ಬಹಿಷ್ಕಾರ 16 ಪ್ರತಿಪಕ್ಷಗಳ ನಿರ್ಧಾರ

ಹೊಸ ಕೃಷಿ ಕಾಯಿದೆಗಳನ್ನು ವಿರೋಧಿಸಿ ನಡೆಯುತ್ತಿರುವ ರೈತರ ಪ್ರತಿಭಟನೆಗೆ ಬೆಂಬಲ ವ್ಯಕ್ತಪಡಿಸಿ ಸದನಗಳ ಜಂಟಿ ಸಭೆಯನ್ನು ಒಟ್ಟು 16 ಪಕ್ಷಗಳು ಬಹಿಷ್ಕರಿಸಲು ನಿರ್ಧರಿಸಿವೆ.

ಜನವರಿ 29ರಂದು ರಾಷ್ಟ್ರಪತಿ ರಾಮನಾಥ ಕೋವಿಂದ್ ಅವರು ಸಂಸತ್ತಿನ ಉಭಯ ಸದನಗಳನ್ನು ಉದ್ದೇಶಿಸಿ ಮಾತನಾಡಲಿದ್ದಾರೆ. ಗಣರಾಜ್ಯೋತ್ಸವದ ದಿನ ದೆಹಲಿಯಲ್ಲಿ ನಡೆದ ಹಿಂಸಾಚಾರದಲ್ಲಿ ಕೇಂದ್ರ ಸರ್ಕಾರದ ಪಾತ್ರದ ಕುರಿತು ತನಿಖೆ ನಡೆಸುವಂತೆ 16 ಪ್ರತಿಪಕ್ಷಗಳು ಒತ್ತಾಯಿಸಿದ್ದು, ಸದನಗಳ ಜಂಟಿ ಸಭೆಯನ್ನು ಬಹಿಷ್ಕರಿಸಲು ಉದ್ದೇಶಿಸುವೆ.

ಆಧಾರ: ವಿಶ್ವವಾಣಿ, ದಿನಾಂಕ:29.01.2021

## 22. ಇನ್ನಷ್ಟು ಮೇಡ್ ಇನ್ ಇಂಡಿಯಾ ಲಸಿಕೆ ಉತ್ಪಾದನೆ

ಕೋವಿಡ್–19 ವಿರುದ್ಧ ಹೋರಾಡಲು ಎರಡು ಲಸಿಕೆಗಳನ್ನು ಶೋಧಿಸಿ ಜಗತ್ತಿಗೆ ಪರಿಚಯಿಸಿರುವ ಭಾರತ ಇನ್ನಷ್ಟು ಲಸಿಕೆಗಳನ್ನು ಕಂಡು ಹಿಡಿಯಲಿದೆ ಎಂದು ಪ್ರಧಾನಿ ನರೇಂದ್ರ ಮೋದಿ ವಿಶ್ವಾಸ ವ್ಯಕ್ತಪಡಿಸಿದ್ದಾರೆ.

ಆನ್‌ಲೈನ್ ಮೂಲಕ ನಡೆದ ವಿಶ್ವ ಆರ್ಥಿಕ ವೇದಿಕೆಯ (ಡಬ್ಲ್ಯುಇಎಫ್) ದಾವೋಸ್ ಶೃಂಗಸಭೆಯಲ್ಲಿ ಮಾತನಾಡಿದ ಅವರು ದೇಶದ ಆರ್ಥಿಕ ಪರಿಸ್ಥಿತಿ ಶೀಘ್ರವೇ ಉತ್ತಮಗೊಳ್ಳಲಿದೆ ಎಂದು ಜಾಗತಿಕ ಉದ್ಯಮ ಕ್ಷೇತ್ರಕ್ಕೆ ಭರವಸೆ ನೀಡಿದರು. ಭಾರತದಲ್ಲಿ ಹೂಡಿಕೆ ಮುಂದೆ ಬರುವಂತೆ ಉದ್ಯಮಿಗಳಿಗೆ ಕರೆ ನೀಡಿದರು. ಲಸಿಕೆ ಅಭಿಯಾನ ಆರಂಭಿಸಿದ ಕೇವಲ 12 ದಿನಗಳಲ್ಲಿ ಭಾರತ 24 ಲಕ್ಷಕ್ಕೂ ಅಧಿಕ ಜನರಿಗೆ ಲಸಿಕೆ ಹಾಕಿದೆ. ಭಾರತ ಕೊರೋನಾ ವೈರಸ್‌ನ ಸುನಾಮಿ ಎದುರಿಸಲಿದೆ. ಭಾರತದಲ್ಲಿ 70–80 ಕೋಟಿ ಜನರು ಸೋಂಕಿತರಾಗಲಿದ್ದಾರೆ. 2 ಲಕ್ಷಕ್ಕೂ ಹೆಚ್ಚು ಮಂದಿ ಬಲಿಯಾಗಿದ್ದಾರೆ ಎಂದು ಕೆಲವರು ಊಹಿಸಿದ್ದರು. ಆದರೆ, ಹಾಗೇನೂ ಆಗಿಲ್ಲ. ದೇಶ ಸಾಂಕ್ರಾಮಿಕತೆಯನ್ನು ಯಶಸ್ವಿಯಾಗಿ ಎದುರಿಸಿದೆ ಎಂದು ಮೋದಿ ವಿವರಿಸಿದರು. ಭಾರತ ದೇಶೀಯವಾಗಿ ಲಸಿಕೆ ತಯಾರಿಸುವ ಜೊತೆಗೆ ವಿದೇಶಗಳಿಗೂ ಇದನ್ನು ರಫ್ತು ಮಾಡುತ್ತಿದೆ. ಕೊರೋನಾ ನಿಯಂತ್ರಿಸುವಲ್ಲಿ ಮಹತ್ವದ ಪಾತ್ರ ವಹಿಸುತ್ತದೆ. ಇನ್ನು ಭಾರತ ಅಭಿವೃದ್ಧಿ ಹಾಗೂ ವ್ಯಾಪಾರೋದ್ಯಮಕ್ಕೆ ಮತ್ತಷ್ಟು ಪ್ರಾಶಸ್ತ್ಯ ನೀಡಲಿದೆ ಎಂದು ಪ್ರಧಾನಿ ನರೇಂದ್ರ ಮೋದಿ ಹೇಳಿದರು.

**ಚೇತರಿಕೆ ಶೇ.97 ಏರಿಕೆ:** ಗುಣಮುಖರಾಗುತ್ತಿರುವ ಕೋವಿಡ್–19 ರೋಗಿಗಳ ಸಂಖ್ಯೆ ಸತತವಾಗಿ ಏರುತ್ತಿದ್ದು, ಚೇತರಿಕೆ ಪ್ರಮಾಣ ಶೇಕಡ 97 ಆಗಿದೆ. ಇದು ಜಗತ್ತಿನಲ್ಲೇ ಅಧಿಕ ಚೇತರಿಕೆ ಪ್ರಮಾಣದಲ್ಲಿ ಒಂದೆನಿಸಿದೆ ಎಂದು ಕೇಂದ್ರ ಆರೋಗ್ಯ ಸಚಿವಾಲಯ ತಿಳಿಸಿದೆ. ಬೆಳಗಿನವರೆಗಿನ 24 ಗಂಟೆಗಳ ಅವಧಿಯಲ್ಲಿ 14,301 ರೋಗಿಗಳು ಗುಣಮುಖರಾಗಿದ್ದು, ಅವರ ಒಟ್ಟು ಸಂಖ್ಯೆ 1,03,73,606ಕ್ಕೆ ಏರಿದೆ. ಸಕ್ರಿಯ ಪ್ರಕರಣಗಳ ಸಂಖ್ಯೆ 1,73,740ಕ್ಕೆ ಇಳಿದಿದ್ದು, ಒಟ್ಟು ಸೋಂಕಿನ ಶೇಕಡ 1.62 ಆಗಿದೆ. ಸೋಂಕಿನ ಪ್ರಮಾಣ ಕುಸಿಯುತ್ತಿರುವ ರಾಷ್ಟ್ರೀಯ ಪ್ರವೃತ್ತಿಗೆ ಅನುಗುಣವಾಗಿ 31 ರಾಜ್ಯಗಳು ಕೇಂದ್ರಾಡಳಿತ ಪ್ರದೇಶಗಳಲ್ಲಿ 5000ಕ್ಕಿಂತ ಕಡಿಮೆ ಸಕ್ರಿಯ ಪ್ರಕರಣಗಳು ದಾಖಲಾಗಿವೆ ಎಂದು ಸಚಿವಾಲಯ ವಿವರಿಸಿದೆ.

**ಶೇ.55 ಜನರಿಗೆ ಸೋಂಕು:** ಭಾರತದ ಶೇ.55 ಜನರು ಈಗಾಗಲೇ ಕೊರೋನಾ ಸೋಂಕಿತರಾಗಿರಬಹುದೆಂದು ದೇಶದ ಪ್ರಮುಖ ಡಯಾಗ್ನಾಸ್ಟಿಕ್ ಜಾಲದಲ್ಲಿ ಒಂದಾದ ಥೈರೋಕೇರ್ ಟೆಕ್ನಾಲಾಜೀಸ್ ಹೇಳಿದೆ. 7 ಲಕ್ಷಕ್ಕೂ ಅಧಿಕ ಜನರಲ್ಲಿ ನಡೆಸಿದ ಪ್ರತಿಕಾಯ ಪರೀಕ್ಷೆಗಳಿಂದ ಈ ಫಲಿತಾಂಶ ಹೊರಬಿದ್ದಿದೆ ಎಂದು ಅದು ತಿಳಿಸಿದೆ. ಸೋಂಕು ಹರಡುವಿಕೆ ತಡೆಯಬೇಕಾದರೆ ಜನಸಂಖ್ಯೆಯ ಕನಿಷ್ಠ ಶೇಕಡ 60 ರಿಂದ ಶೇ.70 ಜನರು ಪ್ರತಿರೋಧಶಕ್ತಿ ಹೊಂದಿರಬೇಕು ಎಂಬುದು ವಿಶ್ವ ಆರೋಗ್ಯ ಸಂಸ್ಥೆಯ (ಡಬ್ಲ್ಯುಎಚ್‌ಒ) ಅಭಿಪ್ರಾಯವಾಗಿದೆ.

**23.5 ಲಕ್ಷ ಮಂದಿಗೆ ಲಸಿಕೆ:** ಬೆಳಿಗ್ಗೆ 7.30 ರವರೆಗೆ ಲಭ್ಯವಾದ ಮಾಹಿತಿ ಪ್ರಕಾರ ದೇಶದಾದ್ಯಂತ 23.5 ಲಕ್ಷಕ್ಕೂ ಹೆಚ್ಚು ಜನರು ಕೊರೋನಾ ಲಸಿಕೆ ಪಡೆದಿದ್ದಾರೆ.

**ಹಲವು ಜಿಲ್ಲೆಗಳಲ್ಲಿ ಶೂನ್ಯ ಪ್ರಕರಣ:** ಕೊರೋನಾ ಲಸಿಕೆ ಅಭಿಯಾನ ಉತ್ತಮ ಪರಿಣಾಮ ಬೀರುತ್ತಿದ್ದು ದೇಶದ ಐದನೇ ಒಂದರಷ್ಟು ಜಿಲ್ಲೆಗಳಲ್ಲಿ ಕಳೆದ ಒಂದು ವಾರದಲ್ಲಿ ಒಂದೇ ಒಂದು ಹೊಸ ಪ್ರಕರಣ ದಾಖಲಾಗಿಲ್ಲ ಎಂದು ಕೇಂದ್ರ ಸರ್ಕಾರ ಹೇಳಿದೆ. ಲಸಿಕೆ ಅಭಿಯಾನ ಆರಂಭವಾಗಿ ಎರಡು ವಾರಗಳಾಗಿದ್ದು 24 ಲಕ್ಷಕ್ಕೂ ಅಧಿಕ ಮುಂಚೂಣಿ ಕಾರ್ಯಕರ್ತರು ಲಸಿಕೆ ಪಡೆದಿರುವುದರಿಂದ ಸೋಂಕಿನಲ್ಲಿ ಇಳಿಮುಖ ದಾಖಲಾಗಿದೆ. ಭಾರತ ಸಾಂಕ್ರಾಮಿಕತೆಗೆ ಯಶಸ್ವಿಯಾಗಿ ಅಂಕುಶ ಹಾಕಿದೆ ಎಂದು ಆರೋಗ್ಯ ಸಚಿವ ಹರ್ಷವರ್ಧನ್ ಹೇಳಿದ್ದಾರೆ.

ಭಾರತದಲ್ಲಿ ಕೊರೋನಾ:

- ಹೊಸ ಪ್ರಕರಣ:10,185.
- ಒಟ್ಟು:1,07,12,246
- ಒಟ್ಟು ಸಾವು: 1,53,971
- ಚೇತರಿಕೆ:1,03,83,830

ಆಧಾರ:ವಿಜಯವಾಣಿ, ದಿನಾಂಕ:29.01.2021

## 23. ಮನೆತನ ಕಾಪಾಡಿಕೊಂಡು ಜಗತ್ತಿನ ಮನಗೆದ್ದ ಭಾರತ

ಕೊರೋನಾ ಬಿಕ್ಕಟ್ಟಿನಲ್ಲಿ ಭಾರತ ತನ್ನ ದೇಶವಾಸಿಗಳನ್ನು ಕಾಪಾಡಿಕೊಳ್ಳುವ ಜೊತೆಗೆ, ವಿಶ್ವದ ಹಲವು ರಾಷ್ಟ್ರಗಳಿಗೆ ಕೊರೋನಾ ಲಸಿಕೆ ನೀಡಿ ಮಾನವೀಯತೆ ಮೆರೆದಿದೆ ಎಂದು ರಾಷ್ಟ್ರಪತಿ ರಾಮನಾಥ್ ಕೋವಿಂದ್ ಹೆಮ್ಮೆ ವ್ಯಕ್ತಪಡಿಸಿದ್ದಾರೆ.

ಈ ವರ್ಷದ ಮೊದಲ ಸಂಸತ್ ಕಲಾಪ ಮತ್ತು ಕೇಂದ್ರದ ಬಜೆಟ್ ಅಧಿವೇಶನದ ಜಂಟಿ ಸಭೆಯನ್ನು ಉದ್ದೇಶಿಸಿ ಅವರು ಸಂಸತ್ ಭವನದಲ್ಲಿ ಮಾತನಾಡಿದರು. ಜನೌಷಧ ಕೇಂದ್ರಗಳ ಮೂಲಕ ಕಡಿಮೆ ದರದಲ್ಲಿ ಔಷಧ ನೀಡಲಾಗಿದೆ. ದೇಶದಲ್ಲಿ ಬಡವರಿಗೆ ಉಚಿತವಾಗಿ ಚಿಕಿತ್ಸೆ ಸಿಗುತ್ತಿದೆ. ಆಯುಷ್ಮಾನ್ ಭಾರತ್ ಯೋಜನೆಯಿಂದ ಬಡವರಿಗೆ ಸಹಾಯವಾಗುತ್ತಿದೆ ಎಂದರು.

**ರಾಷ್ಟ್ರಪತಿಗಳು ಹೇಳಿದ್ದೇನು:–**

- ಸಾಂಕ್ರಾಮಿಕದಿಂದ ಹಲವರನ್ನು ಕಳೆದುಕೊಂಡೆವು, ಮಾಜಿ ರಾಷ್ಟ್ರಪತಿ ಪ್ರಣಬ್ ಮುಖರ್ಜಿಯವರು ಇದೇ ಸಂದರ್ಭದಲ್ಲಿ ನಿಧನ ಹೊಂದಿದರು. 6 ಸಂಸದರು ನಮ್ಮನ್ನು ಅಗಲಿದರು. ಎಲ್ಲರಿಗೂ ನನ್ನ ಗೌರವ ನಮನ.
- ನಮ್ಮ ಸರ್ಕಾರ ತೆಗೆದುಕೊಂಡ ಸಮಯೋಚಿತ ನಿರ್ಧಾರವು ಲಕ್ಷಾಂತರ ನಾಗರಿಕರ ಜೀವವನ್ನು ಉಳಿಸಿದೆ ಇದು ನನಗೆ ತೃಪ್ತಿ ತಂದಿದೆ.
- ದೇಶದಲ್ಲಿ ಹೊಸ ಪ್ರಕರಣಗಳ ಸಂಖ್ಯೆ ಕಡಿಮೆಯಾಗುತ್ತಿದೆ. ಗುಣಮುಖರಾಗುತ್ತಿರುವವರ ಸಂಖ್ಯೆ ಹೆಚ್ಚಾಗುತ್ತಿದೆ.
- ಭಾರತದ ವಿಶ್ವದಲ್ಲಿಯೇ ಅತೀ ದೊಡ್ಡ ಲಸಿಕೆ ಅಭಿಯಾನಕ್ಕೆ ಚಾಲನೆ ನೀಡಿರುವುದು ಹೆಮ್ಮೆಯ ವಿಚಾರ.
- ಬಡವರಿಗೆ ರೂ.5 ಲಕ್ಷದವರೆಗೂ ಉಚಿತ ಚಿಕಿತ್ಸೆ ಸಿಗುತ್ತಿದೆ. ಪ್ರತಿಯೊಬ್ಬರ ಆರೋಗ್ಯದ ಬಗ್ಗೆಯೂ ಕೇಂದ್ರ ಸರ್ಕಾರ ಕಾಳಜಿ ವಹಿಸಿದೆ.

- ➢ ರೈತರ ಉತ್ಪನ್ನಕ್ಕೆ ಒಂದೂವರೆ ಪಟ್ಟು ಕನಿಷ್ಠ ಬೆಂಬಲ ಬೆಲೆ ನೀಡಲು ನಿರ್ಧಾರ ಹಾಗೂ ನೀರಾವರಿ ಯೋಜನೆಗಳಲ್ಲಿ ಸುಧಾರಣೆ ಮಾಡಲಾಗಿದೆ
- ➢ ಕೇಂದ್ರ ಸರ್ಕಾರ ಎಲ್ಲಾ ವರ್ಗಗಳ ಕಲ್ಯಾಣಕ್ಕೆ ಕೆಲಸ ಮಾಡುತ್ತಿದೆ. ಆತ್ಮನಿರ್ಭರತೆಯತ್ತ ನಾವು ವೇಗವಾಗಿ ಮುನ್ನಡೆಯಬೇಕಿದೆ.
- ➢ ಕೊರೋನಾ ಸಂದರ್ಭದಲ್ಲಿ ಸರ್ಕಾರ ಹಲವು ಯೋಜನೆಗಳನ್ನು ನೀಡಿದೆ. ನಮ್ಮ ಒಂದು ಕೈಯಲ್ಲಿ ಕರ್ತವ್ಯ, ಮತ್ತೊಂದು ಕೈಯಲ್ಲಿ ಯಶಸ್ಸಿದೆ.

**ಆಶೋತ್ತರ ಈಡೇರಿಸೋಣ:** ಈ ದಶಕವನ್ನು ಸಂಪೂರ್ಣವಾಗಿ ಸದ್ಬಳಕೆ ಮಾಡಿಕೊಳ್ಳಬೇಕು. ಇದನ್ನು ಮನಸ್ಸಿನಲ್ಲಿಟ್ಟುಕೊಂಡೇ ಚರ್ಚೆ ನಡೆಯಬೇಕು. ಅದನ್ನೇ ದೇಶ ನಿರೀಕ್ಷೆ ಮಾಡುತ್ತಿದೆ. ಜನರ ಆಶೋತ್ತರ ಈಡೇರಿಸಲು ನಮ್ಮ ಕೊಡುಗೆ ಸಲ್ಲಿಸುವುದರಲ್ಲಿ ನಾವು ಹಿಂದೇಟು ಹಾಕಬಾರದು ಎಂದು ಪ್ರಧಾನಿ ನರೇಂದ್ರ ಮೋದಿ ಹೇಳಿದ್ದಾರೆ.

**ಬಿಗ್ ಫೈಟ್ ನಿರೀಕ್ಷೆ:** ಅಧಿವೇಶನವು ಹಲವು ಬಿಸಿಬಿಸಿ ಚರ್ಚೆಗಳಿಗೆ ಸಾಕ್ಷಿಯಾಗುವ ಸಾಧ್ಯತೆಯಿದೆ. ರೈತರ ಪ್ರತಿಭಟನೆ, ಆರ್ಥಿಕ ಹಿಂಜರಿತ, ಉದ್ಯೋಗ ನಷ್ಟ, ಸಿಒವಿಐಡಿ ಬಿಕ್ಕಟ್ಟನ್ನು ನಿಭಾಯಿಸುವುದು ಮತ್ತು ಚೀನಾದೊಂದಿಗೆ ಎಲ್‌ಎಸಿ ನಿಲುವು ಮುಂತಾದ ವಿಷಯಗಳ ಕುರಿತು ಸರ್ಕಾರವನ್ನು ತರಾಟೆಗೆ ತೆಗೆದುಕೊಳ್ಳಲು ವಿರೋಧ ಪಕ್ಷಗಳು ಸಿದ್ದತೆ ನಡೆಸಿವೆ.

ಆಧಾರ: ವಿಶ್ವವಾಣಿ, ದಿನಾಂಕ:30.01.2021

## 24. ಡಿಜಿಟಲ್ ಸೇವೆಗಳು ಕೈಗೆಟುಕುತ್ತಿಲ್ಲ

ತಾಂತ್ರಿಕವಾಗಿ ದೇಶ ಸಾಕಷ್ಟು ಪ್ರಗತಿ ಸಾಧಿಸಿದ್ದರೂ ಸಹ ಹೆಚ್ಚಿನ ಪ್ರಮಾಣದ ಜನತೆ ಡಿಜಿಟಲ್ ಸಾಧನಗಳು ಮತ್ತು ಸೇವೆಯನ್ನು ಪಡೆಯಲು ಸಾಧ್ಯವಾಗಿಲ್ಲ ಎಂದು ರಾಷ್ಟ್ರಪತಿ ರಾಮನಾಥ್ ಕೋವಿಂದ್ ವಿಷಾದ ವ್ಯಕ್ತಪಡಿಸಿದ್ದಾರೆ.

ಡಿಜಿಟಲ್‌ವಲಯದಲ್ಲಿ ಉನ್ನತ ಸಾಧನೆಗೈದ ರಾಜ್ಯಗಳು, ಜಿಲ್ಲೆಗಳು ವಿವಿಧ ಸಂಸ್ಥೆಗಳು ಹಾಗೂ ವಿನೂತನ ಕ್ರಮಗಳನ್ನು ಸಾಕಾರಗೊಳಿಸಿದವರಿಗೆ ಈ ಸಾಲಿನ ಡಿಜಿಟಲ್ ಪ್ರಶಸ್ತಿ ಪ್ರದಾನ ಮಾಡಿ ಮಾತನಾಡಿದ ಅವರು ನಾಗರಿಕರಿಗೆ ಹಲವು ವಿವಿಧ ಸೇವೆ ಕಲ್ಪಿಸಲು ಮಾಹಿತಿ ತಂತ್ರಜ್ಞಾನ ನಿರ್ಣಾಯಕ ಸಾಧನವಾಗಿದ್ದು, ಆರ್ಥಿಕ ವ್ಯವಸ್ಥೆಯ ರಥ ಸುಗಮವಾಗಿ ಸಾಗಲು ಸಹಕಾರಿಯಾಗಿದೆ ಎಂದರು.

ಕೋವಿಡ್–19 ಸಂಕಷ್ಟ ಪರಿಸ್ಥಿತಿಯಲ್ಲಿ ಮಾಹಿತಿ ತಂತ್ರಜ್ಞಾನ ಜನರ ಸಂಕಷ್ಟವನ್ನು ಗಣನೀಯ ಪ್ರಮಾಣದಲ್ಲಿ ಕಡಿಮೆ ಮಾಡಲು ಸಾಧ್ಯವಾಗಿದೆ. ಈ ಸಮಸ್ಯೆ ಆದಷ್ಟು ಶೀಘ್ರ ನಿವಾರಣೆಯಾಗುವ ವಿಶ್ವಾಸವಿದೆ. ಕೊರೋನಾ ಸೋಂಕಿನಿಂದಾಗಿ ಜಗತ್ತಿನ ಸಾಮಾಜಿಕ ಬಾಂಧವ್ಯ ಆರ್ಥಿಕ ಚಟುವಟಿಕೆಗಳು, ಆರೋಗ್ಯ, ರಕ್ಷಣೆ, ಶಿಕ್ಷಣ ಸೇರಿ ಜೀವನದ ಮತ್ತಿತರ ಆಯಾಮಗಳಲ್ಲಿ ಸಾಕಷ್ಟು ಬದಲಾವಣೆ ತಂದಿದೆ. ದೇಶದಲ್ಲಿ ಕೋವಿಡ್‌ನಿಂದಾದ ಸಂಕಷ್ಟವನ್ನು ತಗ್ಗಿಸಲು ಡಿಜಿಟಲ್ ವ್ಯವಸ್ಥೆ ಅನುಕೂಲಕರವಾಗಿತ್ತು ಎಂದರು.

ಡಿಜಿಟಲ್ ಒಳಗೊಳ್ಳುವಿಕೆ ನಮ್ಮ ಜೀವನದ ಪ್ರಮುಖ ಭಾಗವಾಗುತ್ತಿದ್ದು, ಸುಲಭವಾಗಿ ಬ್ಯಾಂಕಿಂಗ್ ವ್ಯವಹಾರ ನಡೆಸಲು ಸಾಧ್ಯವಾಗಿದೆ. ಪ್ರತಿಯೊಬ್ಬರು ತಮ್ಮ ಸರ್ಕಾರಿ ಕಚೇರಿಗಳಿಗೆ ಅಲೆಯುವುದು ಸಹ ಇದರಿಂದ ತಪ್ಪಿದಂತಾಗಿದೆ ಎಂದು ರಾಷ್ಟ್ರಪತಿ ಅವರು ಅಭಿಪ್ರಾಯಪಟ್ಟರು.

- ➢ ಉನ್ನತ ಸಾಧನೆಗೈದ ರಾಜ್ಯಗಳು, ಜಿಲ್ಲೆಗಳು ಹಾಗೂ ವಿನೂತನ ಕ್ರಮಗಳನ್ನು ಸಾಕಾರಗೊಳಿಸಿದವರಿಗೆ ಈ ಸಾಲಿನ ಡಿಜಿಟಲ್ ಪ್ರಶಸ್ತಿ ಪ್ರದಾನ.
- ➢ ಡಿಜಿಟಲ್ ತಂತ್ರಜ್ಞಾನದ ಮೂಲಕ ದೇಶದ ಮೂಲೆ ಮೂಲೆಗಳಲ್ಲೂ ಸಾಮಾಜಿಕ ಪರಿವರ್ತನೆ ಕನಸನ್ನು ನನಸು ಮಾಡಲು ಸಾಧ್ಯವಾಗಿದೆ.

- ಸರ್ಕಾರಿ ಕಛೇರಿಗಳು ಕಾಗದ ಮತ್ತು ಸಂಪರ್ಕರಹಿತವಾಗಿ ಕಾರ್ಯನಿರ್ವಹಿಸಲು ಅನುಕೂಲ.
- ಮಾಹಿತಿ ತಂತ್ರಜ್ಞಾನ ಜನರ ಸಂಕಷ್ಟವನ್ನು ಗಣನೀಯ ಪ್ರಮಾಣದಲ್ಲಿ ಕಡಿಮೆ ಮಾಡಲು ಸಾಧ್ಯವಾಗಿದೆ.
- ಕೋವಿಡ್ ಸಂಕಷ್ಟದಲ್ಲೂ ಡಿಜಿಟಲ್ ಸೇವೆಗಳಲ್ಲಿ ಯಾವುದೇ ರೀತಿಯಲ್ಲಿ ಬಾಧಕವಾಗಿಲ್ಲ.

ಕೇಂದ್ರ ಮಾಹಿತಿ ತಂತ್ರಜ್ಞಾನ ಮತ್ತು ದೂರಸಂಪರ್ಕ ಸಚಿವ ರವಿಶಂಕರ್ ಪ್ರಸಾದ್, ಕೋವಿಡ್ ಸಂಕಷ್ಟದಲ್ಲೂ ಡಿಜಿಟಲ್ ಸೇವೆಗಳಲ್ಲಿ ಯಾವುದೇ ರೀತಿಯಲ್ಲಿ ಬಾಧಕವಾಗಿಲ್ಲ. ಜಗತ್ತಿನ ಶೇಕಡ 85ರಷ್ಟು ಮಾಹಿತಿ ತಂತ್ರಜ್ಞಾನ ಸಂಸ್ಥೆಗಳು ಸುಗಮವಾಗಿ ಕಾರ್ಯನಿರ್ವಹಿಸುತ್ತಿವೆ. ಮನೆಯಿಂದಲೇ ಕೆಲಸ ಮಾಡುವುದರಲ್ಲೂ ಸಾಕಷ್ಟು ಸುಧಾರಣೆಗಳನ್ನು ಈ ಸಂದರ್ಭದಲ್ಲಿ ಅಳವಡಿಸಿಕೊಳ್ಳಲು ಸಾಧ್ಯವಾಗಿದೆ ಎಂದು ಹೇಳಿದರು.

ಇದಕ್ಕೂ ಮುನ್ನ ವಿಡಿಯೋ ಕಾನ್ಫರೆನ್ಸ್ ಮೂಲಕ ನಡೆದ ಸಮಾರಂಭದಲ್ಲಿ ರಾಷ್ಟ್ರೀಯ ಟೆಲಿ ಮೆಡಿಸನ್ ಸೇವೆ ನೀಡುವ ಇ-ಸಂಜೀವಿನಿ, ಕೋವಿಡ್-19 ಮಾದರಿ ಸಂಗ್ರಹ ವ್ಯವಸ್ಥೆಯಲ್ಲಿ ವಿನೂತನ ಕ್ರಮಗಳನ್ನು ಅಳವಡಿಸಿರುವ ಸಂಸ್ಥೆ, ಬಿಹಾರ ಸರ್ಕಾರದ ಪೋರ್ಟಲ್ ಮಧ್ಯಪ್ರದೇಶದ ಪ್ರಾಸಿ ಶ್ರಮಿಕ್ ಮತ್ತು ರೋಜ್‌ಗಾರ್ ಸೇತು ಪೋರ್ಟಲ್ ಸೇರಿ ಹಲವು ಸಂಸ್ಥೆಗಳಿಗೆ ರಾಷ್ಟ್ರಪತಿ ಅವರು ಪ್ರಶಸ್ತಿ ನೀಡಿದರು.

ಆಧಾರ: ವಿಶ್ವವಾಣಿ, ದಿನಾಂಕ:31.01.2021

## 25. ರೈತರ ಎರಡು ಬೇಡಿಕೆಗಳಿಗೆ ಒಮ್ಮತ

ಹೋರಾಟ ನಿರತ ರೈತರ ಸಮಸ್ಯೆಗೆ ಪರಿಹಾರ ಕಂಡುಹಿಡಿಯುವ ನಿಟ್ಟಿನಲ್ಲಿ ಮಾತುಕತೆ ನಡೆಯಿತು. ವಿದ್ಯುತ್ ದರ ಏರಿಕೆಯಿಂದ ರೈತರಿಗೆ ರಕ್ಷಣೆ ಹಾಗೂ ಕೂಳೆ ಸುಡುವುದರ ಮೇಲೆ ದಂಡ ವಿಧಿಸುವ ವಿಷಯಗಳನ್ನು ಇತ್ಯರ್ಥ ಪಡಿಸಬೇಕೆಂಬ ಬೇಡಿಕೆಯನ್ನು ಸರ್ಕಾರ ಒಪ್ಪಿಕೊಂಡಿದೆ. ಆದರೆ ಕೃಷಿ ಸಂಬಂಧಿತ ಮೂರು ಕಾನೂನುಗಳನ್ನು ರದ್ದು ಪಡಿಸಬೇಕೆ ಮತ್ತು ಕನಿಷ್ಠ ಬೆಂಬಲ ಬೆಲೆಯ ಖಾತರಿ ನೀಡಬೇಕೆಂಬ ಮುಖ್ಯ ಬೇಡಿಕೆ ಕುರಿತಾದ ಬಿಕ್ಕಟ್ಟು ಮುಂದುವರಿದಿದೆ. ಮುಂದಿನ ಸುತ್ತಿನ ಮಾತುಕತೆ ಫೆಬ್ರವರಿ 4 ರಂದು ನಡೆಯಲಿದೆ.

ಸರ್ಕಾರ ಹಾಗೂ 41 ರೈತ ಸಂಘಗಳ ಮುಖಂಡರ ನಡುವಿನ ಆರನೇ ಸುತ್ತಿನ ಮಾತುಕತೆ ವಿಜ್ಞಾನ ಭವನದಲ್ಲಿ ನಡೆಯಿತು. ಸುಮಾರು ಐದು ತಾಸುಗಳವರೆಗೆ ನಡೆದ ಈ ಸಭೆಯ ವಿವರಗಳನ್ನು ಕೇಂದ್ರ ಕೃಷಿ ಸಚಿವ ನರೇಂದ್ರ ಸಿಂಗ್ ತೋಮರ್ ಅವರು ಸೌಹಾರ್ದಯುತ ವಾತಾವರಣದಲ್ಲಿ ಮಾತುಕತೆ ನಡೆಯಿತು. ರೈತರ ಬೇಡಿಕೆಯ ಶೇ.50ರಷ್ಟು ಭಾಗವನ್ನು ಈಡೇರಿಸಲು ಸರ್ಕಾರ ಸಮ್ಮತಿಸಿದೆ. ಅಜೆಂಡಾದಲ್ಲಿ ನಾಲ್ಕು ಅಂಶಗಳ ಪೈಕಿ ಎರಡರ ಕುರಿತು ಸಹಮತ ಮೂಡಿದೆ ಎಂದರು.

ಸಭೆಯಲ್ಲಿ ಭಾಗವಹಿಸಿದ್ದ ಮೂವರು ಕೇಂದ್ರ ಸಚಿವರು ರೈತರೊಡನೆ ಊಟ ಮಾಡಿದರು. ಹೋರಾಟ ನಿರತ ರೈತರು ಅಲ್ಲಿ ಸಮುದಾಯ ಪಾಕಶಾಲೆಗಳನ್ನು ಸ್ಥಾಪಿಸಿದ್ದು (ಲಂಗಾರ್) ಅಲ್ಲಿ ರೈತರಿಗೆ ಊಟೋಪಚಾರ ಕಲ್ಪಿಸಲಾಗುತ್ತಿದೆ. ವಿಜ್ಞಾನ ಭವನದ ಹೊರಗಡೆಯೂ ಲಂಗಾರ್ ಹಾಕಲಾಗಿದ್ದು, ಅಲ್ಲೇ ಆಹಾರ ಪೂರೈಸಲಾಯಿತು.

ಆಧಾರ: ವಿಶ್ವವಾಣಿ, ದಿನಾಂಕ:31.01.2021

## 26. ಹಣಕಾಸು ಕೊರತೆಯಿಂದ ಯೋಜನಾ ವೆಚ್ಚದವರೆಗೆ

ಈ ಕೇಂದ್ರ ಬಜೆಟ್ ಎನ್ನುವುದು ಹಣಕಾಸು ವರ್ಷದಲ್ಲಿ ದೇಶದ ಆದಾಯ ಮತ್ತು ವೆಚ್ಚಗಳ ಅಂದಾಜು ಒದಗಿಸುವ ದಾಖಲೆ ಕೇಂದ್ರ ಹಣಕಾಸು ಸಚಿವೆ ನಿರ್ಮಲಾ ಸೀತಾರಾಮನ್ ಅವರು ಫೆಬ್ರವರಿ 1 ರಂದು ಕೇಂದ್ರ ಬಜೆಟ್ ಎನ್ನುವುದು ಹಣಕಾಸು ವರ್ಷದಲ್ಲಿ ದೇಶದ ಆದಾಯ ಮತ್ತು ವೆಚ್ಚಗಳ ಅಂದಾಜು ಒದಗಿಸುವ ದಾಖಲೆಯಾಗಿದೆ. ದೇಶಕ್ಕಾಗಿ ಹಣಕಾಸಿನ ಯೋಜನೆಯನ್ನು ರೂಪಿಸುವುದರ ಮೂಲಕ ವಿವಿಧ ಸರ್ಕಾರಿ ಯೋಜನೆಗಳು ಮತ್ತು ಇಲಾಖೆಗಳಿಗೆ ನಿರ್ದಿಷ್ಟ ಮೊತ್ತವನ್ನು ನಿರ್ಧರಿಸುತ್ತದೆ ಹಾಗೂ ನಿಗದಿಪಡಿಸುತ್ತದೆ.

2021–22ರ ಮುಂಗಡಪತ್ರ ರಚನೆಯ ಬಹುತೇಕ ಪ್ರಕ್ರಿಯೆಗಳು ಮುಕ್ತಾಯವಾಗಿವೆ. ಅದರಲ್ಲಿ ಏನೇನಿದೆ ಎಂಬುದು ಬಹಿರಂಗವಾಗಲು ಮಾತ್ರ ಕ್ಷಣಗಣನೆ ಆರಂಭವಾಗಿದೆ. ಪ್ರಧಾನಿ ನರೇಂದ್ರ ಮೋದಿ ನೇತೃತ್ವದ ಎನ್‌ಡಿಎ ಸರ್ಕಾರದಲ್ಲಿ ಹಣಕಾಸು ಸಚಿವರಾಗಿ ನಿರ್ಮಲ ನೀತಾರಾಮನ್ ಅವರಿಗೆ 2021ರ ಬಜೆಟ್ ಮೂರನೆಯದು. ಸಚಿವೆ ನಿರ್ಮಲಾ ಸೀತಾರಾಮನ್ ಅವರು ಹಿಂದೆಂದೂ ಕಂಡರಿಯದ ಮುಂಗಡ ಪತ್ರವನ್ನು ಮಂಡಿಸುವುದಾಗಿ ಇತ್ತೀಚೆಗೆ ಹೇಳಿದ್ದಾರೆ. ಕೊರೋನಾ ಬಿಕ್ಕಟ್ಟಿನ ಬಳಿಕ ಹಳಿ ತಪ್ಪಿರುವ ಆರ್ಥಿಕತೆಯ ಚೇತರಿಕೆಗೆ ಕಠಿಣ ಸುಧಾರಣಾ ಕ್ರಮಗಳನ್ನು ಘೋಷಿಸುವ ಸುಳಿವು ನೀಡಿದ್ದಾರೆ. ಆದರೂ ಈ ಬಾರಿಯ ಬಜೆಟ್‌ನಲ್ಲಿ ಕೆಲವು ನಿಯಮಗಳನ್ನು ಸರಳೀಕರಿಸಲಾಗಿದೆ. ಅವು ಏನು ಎಂಬುದನ್ನು ನೋಡೋಣ.

**ಬಜೆಟ್ ಅಂದಾಜು:** ಇದು ವರ್ಷದುದ್ದಕ್ಕೂ ವಿವಿಧ ಕ್ಷೇತ್ರಗಳಿಗೆ ಸರ್ಕಾರದ ಖರ್ಚಿನ ಅಂದಾಜು ಮತ್ತು ತೆರಿಗೆ ಶುಲ್ಕಗಳಿಂದ ನಿರೀಕ್ಷಿತ ಆದಾಯ ಒದಗಿಸುತ್ತದೆ. ವಾರ್ಷಿಕ ಹಣಕಾಸು ಮತ್ತು ಆದಾಯದ ಕೊರತೆಯನ್ನು ಒಳಗೊಂಡಿರುತ್ತದೆ.

**ಬಂಡವಾಳ / ಖರ್ಚು:** ಕ್ಯಾಪಿಟ್ ಶುಲ್ಕ, ಮಾರುಕಟ್ಟೆ ಸಾಲ, ಸಣ್ಣ ಉಳಿತಾಯ, ಭವಿಷ್ಯ ನಿಧಿ ಮತ್ತು ವಿವಿಧ ಸರ್ಕಾರಿ ಇಲಾಖೆಗಳಲ್ಲಿ ಮೀಸಲು ನಿಧಿಗಳನ್ನು ಒಳಗೊಂಡಿರುತ್ತದೆ. ಈ ಬಂಡವಾಳ ವೆಚ್ಚವು ಸರ್ಕಾರದ ಆಸ್ತಿಗಳನ್ನು ಹೆಚ್ಚಿಸುವುದರೊಂದಿಗೆ ಸಾಲ ಪಾವತಿ, ಸಾಲ ವಿತರಣೆ ಮತ್ತು ಮೂಲಸೌಕರ್ಯ ಅಥವಾ ಅಭಿವೃದ್ಧಿ ಕಾರ್ಯಗಳ ವೆಚ್ಚವನ್ನು ಒಳಗೊಂಡಿರುತ್ತದೆ.

**ಸೆಸ್:** ಸೆಸ್ ಒಂದು ನಿರ್ದಿಷ್ಟ ಉದ್ದೇಶಕ್ಕಾಗಿ ವಿಧಿಸಲಾಗುವ ಹೆಚ್ಚುವರಿ ತೆರಿಗೆಯಾಗಿದ್ದು, ಇದನ್ನು ಭಾರತದ ಕನ್ಸಾಲಿಡೇಟೆಡ್ ಫಂಡ್‌ನಲ್ಲಿ ಇರಿಸಲಾಗುತ್ತದೆ ಹಾಗೂ ತೆರಿಗೆಯಿಂದ ಸಂಗ್ರಹಿಸಿದ ಮೊತ್ತವನ್ನು ಕೇಂದ್ರ ಸರ್ಕಾರ ಇಡುತ್ತದೆ. ಉದಾಹರಣೆಗೆ, ಶಿಕ್ಷಣ ಸೆಸ್, ಮಾಧ್ಯಮಿಕ ಮತ್ತು ಉನ್ನತ ಶಿಕ್ಷಣ ಸೆಸ್, ಕೃಷಿ ಕಲ್ಯಾಣ್ ಸೆಸ್, ಸ್ವಚ್ಛ ಭಾರತ್ ಸೆಸ್.

**ನೇರ ತೆರಿಗೆ:** ಇದು ತೆರಿಗೆದಾರರು ಸರ್ಕಾರಕ್ಕೆ ನೇರವಾಗಿ ಪಾವತಿಸುವ ತೆರಿಗೆಯಾಗಿದೆ. ಇದನ್ನು ಕೇಂದ್ರವು ನೇರವಾಗಿ ವಿಧಿಸುತ್ತದೆ ಹಾಗೂ ಪಾವತಿಗಾಗಿ ಇತರೆ ಸ್ವತ್ತುಗಳಿಗೆ ವರ್ಗಾಯಿಸಲಾಗುವುದಿಲ್ಲ. ರಿಯಲ್ ಆಸ್ತಿ ತೆರಿಗೆ, ವೈಯಕ್ತಿಕ ಆಸ್ತಿ ತೆರಿಗೆ, ಆದಾಯ ತೆರಿಗೆ ಅಥವಾ ಸ್ವತ್ತುಗಳ ಮೇಲಿನ ತೆರಿಗೆಗಳು ಇದರಲ್ಲಿ ಬರುತ್ತವೆ.

**ಹಣದುಬ್ಬರ:** ದೇಶದ ಸರಕು ಮತ್ತು ಸೇವೆಗಳ ಸಾಮಾನ್ಯ ಬೆಲೆ ಏರಿಕೆಯೆ ಹಣದುಬ್ಬರ. ಇದು ಸಾಮಾನ್ಯವಾಗಿ ಶೇಕಡಾವಾರು ಅಂಕಗಳಲ್ಲಿ ವ್ಯಕ್ತವಾಗುತ್ತದೆ. ಹಣದುಬ್ಬರ ಹೆಚ್ಚಾದಾಗ ನಾಗರಿಕ ಖರೀದಿ ಸಾಮರ್ಥ್ಯ ಕುಸಿಯುತ್ತದೆ. ಖರೀದಿ ಸಾಮರ್ಥ್ಯ ಕಡಿಮೆಯಾದಾಗ, ಇದು ನಾಗರಿಕರ ಸಾಮಾನ್ಯ ಜೀವನ ವೆಚ್ಚದ ಮೇಲೆ ಪರಿಣಾಮ ಬೀರುತ್ತದೆ. ಅಂತಿಮವಾಗಿ ದೇಶದ ಆರ್ಥಿಕತೆಯ ಅವನತಿಗೆ ಕಾರಣವಾಗುತ್ತದೆ.

**ಹಣಕಾಸು ಕೊರತೆ:** ಒಟ್ಟು ಆದಾಯ ಮತ್ತು ಸರ್ಕಾರದ ಒಟ್ಟು ವೆಚ್ಚಗಳ ನಡುವಿನ ವ್ಯತ್ಯಾಸವನ್ನು ಹಣಕಾಸು ಕೊರತೆ ಎಂದು ಕರೆಯಲಾಗುತ್ತದೆ. ಇದು ಸರ್ಕಾರಕ್ಕೆ ಅಗತ್ಯವಿರುವ ಒಟ್ಟು ಸಾಲಗಳ ಪ್ರಮಾಣವನ್ನು ಸೂಚಿಸುತ್ತದೆ.

**ಆಕಸ್ಮಿಕ ನಿಧಿ**: ಆನಿರೀಕ್ಷಿತ ಸವಾಲುಗಳನ್ನು ಎದುರಿಸಲು ನಿರ್ದಿಷ್ಟವಾಗಿ ಸ್ಥಾಪಿಸಲಾದ ನಿಧಿ.

**ಅಬಕಾರಿ ತೆರಿಗೆ**: ಅಬಕಾರಿ ಸುಂಕವು ದೇಶದ ಹೊರಗಿನಿಂದ ಬರುವ ಸರಕುಗಳ ಮೇಲೆ ವಿಧಿಸಲಾಗುವ ಕಸ್ಟಮ್ ಸುಂಕಕ್ಕೆ ವಿರುದ್ಧವಾಗಿ ದೇಶದೊಳಗೆ ಸರಕುಗಳ ತಯಾರಿಕೆಗೆ ವಿಧಿಸುವ ತೆರಿಗೆಯನ್ನು ಸೂಚಿಸುತ್ತದೆ.

**ಜಿಎಸ್‌ಟಿ:** ಸರಕು ಮತ್ತು ಸೇವಾ ತೆರಿಗೆ (ಜಿಎಸ್‌ಟಿ) ಎಂಬುದು ದೇಶದಲ್ಲಿ ಸರಕು ಮತ್ತು ಸೇವೆಗಳಿಗೆ ವಿಧಿಸುವ ಪರೋಕ್ಷ ತೆರಿಗೆ.

**ಪರೋಕ್ಷ ತೆರಿಗೆ:** ತೆರಿಗೆದಾರರ ಮೇಲೆ ಪರೋಕ್ಷ ತೆರಿಗೆಯನ್ನು ನೇರವಾಗಿ ವಿಧಿಸಲಾಗುವುದಿಲ್ಲ. ಆದರೆ ಸರಕು ಮತ್ತು ಸೇವೆಗಳ ಮೇಲೆ ಹೆಚ್ಚಾಗಿ ವಿಧಿಸಲಾಗುತ್ತದೆ. ಈ ತೆರಿಗೆಯನ್ನು ಮೂಲತ: ಸರಕುಗಳ ಮಾರಾಟಗಾರ ಅಥವಾ ಸೇವೆಯನ್ನು ಮಾರಾಟಗಾರ ಅಥವಾ ಸೇವೆಯನ್ನು ಒದಗಿಸುವವರ ಮೇಲೆ ವಿಧಿಸಲಾಗುತ್ತದೆ. ಆದರೆ ಹೆಚ್ಚಿನ ಸಂದರ್ಭಗಳಲ್ಲಿ ಅದು ಅಂತಿಮ ಗ್ರಾಹಕರಿಗೆ ತಲುಪುತ್ತದೆ. ಆದ್ದರಿಂದ ಸಾಮಾನ್ಯವಾಗಿ ಈ ತೆರಿಗೆಯನ್ನು ಗ್ರಾಹಕರು ಪರೋಕ್ಷವಾಗಿ ಪಾವತಿಸುತ್ತಾರೆ. ಇದರಲ್ಲಿ ಸೇವಾ ತೆರಿಗೆ, ಕೇಂದ್ರ ಅಬಕಾರಿ ಮತ್ತು ಕಸ್ಟಮ್ ಸುಂಕ, ಮೌಲ್ಯವರ್ಧಿತ ತೆರಿಗೆ (ವ್ಯಾಟ್) ಮತ್ತು ಮುಖ್ಯವಾಗಿ ಜಿಎಸ್‌ಟಿ ಇದೆ.

**ಹೂಡಿಕೆ ಹಿಂಪಡೆಯುವುದು:** ಹೂಡಿಕೆ (ಡಿಸ್‌ಇನ್ವೆಸ್ಟ್‌ಮೆಂಟ್) ಎಂದರೆ ಕೇಂದ್ರ ಸರ್ಕಾರವು ತನ್ನ ಪಾಲನ್ನು ಪಿಎಸ್‌ಯುನಲ್ಲಿ ಸಂಪೂರ್ಣವಾಗಿ ಅಥವಾ ಭಾಗಶ: ಮಾರಾಟ ಮಾಡುತ್ತದೆ. ಅದನ್ನು ಷೇರು ಮಾರುಕಟ್ಟೆಯಲ್ಲಿ ಪಟ್ಟಿ ಮಾಡುತ್ತದೆ.

**ಕಂದಾಯ ಕೊರತೆ :** ನಿಜವಾದ ನಿವ್ವಳ ಆದಾಯವು ನಿರೀಕ್ಷಿತ ಅಥವಾ ಯೋಜಿತ ಆದಾಯಕ್ಕಿಂತ ಕಡಿಮೆಯಿದ್ದಾಗ ಕಂದಾಯದ ಕೊರತೆ ಉಂಟಾಗುತ್ತದೆ.

**ಕಂದಾಯ ಬಜೆಟ್ :** ಕಂದಾಯದ ಬಜೆಟ್, ಸರ್ಕಾರದ ಕಂದಾಯ ಶುಲ್ಕಗಳ ಮೂಲಕ ಭರಿಸುವ ವೆಚ್ಚವನ್ನು ಒಳಗೊಂಡಿರುತ್ತದೆ.

**ಸೇವಾ ತೆರಿಗೆ:** ಸೇವಾ ತೆರಿಗೆ ಪರೋಕ್ಷ ತೆರಿಗೆಯಾಗಿದ್ದು, ಇದನ್ನು ರೆಸ್ಟೋರೆಂಟ್, ಕ್ಯಾಬ್ ಸೇವೆ ಹೋಟೆಲ್, ಟ್ರಾವೆಲ್ ಏಜೆಂಟ್ ಮುಂತಾದ ವಿವಿಧ ಸೇವಾದಾರರು ಸರ್ಕಾರಕ್ಕೆ ಪಾವತಿಸಬೇಕು.

**ಪ್ರಾಥಮಿಕ ಕೊರತೆ:** ಪ್ರಾಥಮಿಕ ಕೊರತೆಯು ಹಣಕಾಸು ಕೊರತೆ ಮತ್ತು ಹಿಂದಿನ ವರ್ಷದ ಸಾಲಗಳ ಮೇಲಿನ ಬಡ್ಡಿ ಪಾವತಿಯ ನಡುವಿನ ವ್ಯತ್ಯಾಸವಾಗಿದೆ. ಪ್ರಾಥಮಿಕ ಕೊರತೆಯು ಬಡ್ಡಿ ಪಾವತಿಯನ್ನು ಹೊರತುಪಡಿಸಿ ಸಾಲ ಪಡೆಯುವ ಅಗತ್ಯತೆಗಳನ್ನು ತೋರಿಸುತ್ತದೆ.

**ಹೆಚ್ಚುವರಿ ಶುಲ್ಕ:** ಸರ್ಚಾರ್ಜ್ ಇದು ಹೆಚ್ಚುವರಿ ಶುಲ್ಕ, ಶುಲ್ಕ ಅಥವಾ ತೆರಿಗೆಯಾಗಿದ್ದು, ಇದನ್ನು ವಸ್ತುಗಳಿಗೆ ಅಥವಾ ಸೇವೆಗಳಿಗೆ ಗುರುತಿಸಲಾದ ಬೆಲೆಗಿಂತ ಹೆಚ್ಚಿಸಲಾಗುತ್ತದೆ.

ಆಧಾರ: ವಿಶ್ವವಾಣಿ, ದಿನಾಂಕ:01.02.2021.

## 27. ಪೆಟ್ರೋಲ್ ದರ ಈಗ ರೂ.100

ದಿನೇ ದಿನೇ ಏರುತ್ತಿರುವ ಪೆಟ್ರೋಲ್ ಬೆಲೆ ದೇಶದ ಇತಿಹಾಸದಲ್ಲಿ ಇದೇ ಮೊದಲ ಬಾರಿ ಪ್ರತಿ ಲೀಟರ್‌ಗೆ ರೂ.100 ಗಡಿ ದಾಟಿ ಸಾರ್ವಕಾಲಿಕ ದಾಖಲೆ ಬರೆದಿದೆ. ಸತತ 9ನೇ ದಿನ ಪೆಟ್ರೋಲ್ ಹಾಗೂ ಡೀಸೆಲ್ ಬೆಲೆ ಲೀಟರ್‌ಗೆ ತಲಾ 25 ಪೈಸೆ ಏರಿಕೆಯಾಗಿದ್ದು, ದೇಶದಲ್ಲೇ ಮೊದಲು ರಾಜಸ್ಥಾನದಲ್ಲಿ ಪೆಟ್ರೋಲ್ ಬೆಲೆ ರೂ.100.13 ಆಗಿದೆ. ಬೆಂಗಳೂರಿನಲ್ಲಿ ಪೆಟ್ರೋಲ್ ಬೆಲೆ ರೂ.92.54, ಡೀಸೆಲ್ ಬೆಲೆ ರೂ.84.75 ಏರಿಕೆಯಾಗಿದೆ.

**ಬ್ರ್ಯಾಂಡೆಡ್ ಪೆಟ್ರೋಲ್** ಈ ಹಿಂದೆಯೇ ವಿವಿಧ ರಾಜ್ಯಗಳಲ್ಲಿ ರೂ.100 ದಾಟಿತ್ತು. ಸಾಮಾನ್ಯ ಪೆಟ್ರೋಲ್ ದರ ಇದೇ ಮೊದಲ ಬಾರಿ ರೂ.100 ದಾಟಿದೆ. ತೆರಿಗೆ ಬದಲಾಗುವುದರಿಂದ ರಾಜ್ಯದಿಂದ ರಾಜ್ಯಕ್ಕೆ ಪೆಟ್ರೋಲ್ ಬೆಲೆ ರೂ.96 ಹಾಗೂ ಡೀಸೆಲ್ ಬೆಲೆ ರೂ.86.98 ಆಗಿದೆ. ರಾಜಸ್ಥಾನದಲ್ಲಿ ಕಳೆದ ತಿಂಗಳು ಪೆಟ್ರೋಲ್ ಹಾಗೂ ಡೀಸೆಲ್ ವ್ಯಾಟ್ ಅನ್ನು ತಲಾ ರೂ.2 ಕಡಿತ ಮಾಡಿದ ಮೇಲೂ ದೇಶದಲ್ಲೇ ಮೊದಲು ಅಲ್ಲಿ ರೂ.100 ದಾಟಿದೆ. ಮಧ್ಯಪ್ರದೇಶದಲ್ಲಿ ಪೆಟ್ರೋಲ್ ಬೆಲೆ ರೂ.99.90 ಆಗಿದ್ದು, ಇನ್ನು 10 ಪೈಸೆ ಏರಿಕೆಯಾದರೆ ರೂ.100 ಆಗಲಿದೆ.

ದೇಶಾದ್ಯಂತ ಕಳೆದ 9 ದಿನದಲ್ಲಿ ಪೆಟ್ರೋಲ್ ರೂ.2.59 ಹಾಗೂ ಡೀಸೆಲ್ ರೂ.2.82 ಏರಿಕೆಯಾಗಿದೆ. ಚಿನ್ನ 8 ತಿಂಗಳ ಕನಿಷ್ಠದತ್ತ: 10 ಗ್ರಾಂಗೆ ರೂ.46,752

**ಬೆಲೆ ಏರಿಕೆಗೆ ಕಾರಣ ಏನು:**

- ಅಕ್ಟೋಬರ್‌ನಿಂದ ಕಚ್ಚಾತೈಲ ಬೆಲೆ ದುಪ್ಪಟ್ಟಾಗಿದೆ. 2020ರ ಏಪ್ರಿಲ್‌ನಲ್ಲಿ ಒಂದು ಬ್ಯಾರೆಲ್ ಕಚ್ಚಾ ತೈಲದ ಬೆಲೆ ರೂ.2915 (40 ಡಾಲರ್) ಇತ್ತು. ಅದೀಗ ರೂ.4626 (63.49 ಡಾಲರ್)ಗೆ ಏರಿಕೆಯಾಗಿದೆ.
- ಪ್ರಮುಖ ತೈಲ ಉತ್ಪಾದಕ ರಾಷ್ಟ್ರ ಸೌದಿ ಆರೇಬಿಯಾ ನಿತ್ಯ 10 ಲಕ್ಷ ಬ್ಯಾರೆಲ್ ತೈಲ ಉತ್ಪಾದನೆಯನ್ನು ಕಡಿತಗೊಳಿಸಿದೆ.
- ಜೊತೆಗೆ ಕೇಂದ್ರ ಸರ್ಕಾರ ಪೆಟ್ರೋಲ್‌ನ ಬೆಲೆಯ ಮೇಲೆ ರೂ.32.98 ಹಾಗೂ ಡೀಸೆಲ್ ಮೇಲೆ ರೂ.31.83 ಅಬಕಾರಿ ಸುಂಕ ವಿಧಿಸುತ್ತಿದೆ.
- ರಾಜ್ಯ ಸರ್ಕಾರಗಳು ಮಾರಾಟ ತೆರಿಗೆ ವಿಧಿಸುತ್ತಿವೆ.

**ಪೆಟ್ರೋಲ್ ದರ ಏರಿಕೆಗೆ ಹಿಂದಿನ ಸರ್ಕಾರ ಕಾರಣ:** ಪೆಟ್ರೋಲ್ ದರ ದಾಖಲೆಯ ರೂ.100 ತಲುಪಿರುವಾಗಲೇ ಈಗಿನ ತೈಲ ದರ ಏರಿಕೆಗೆ ಹಿಂದಿನ ಸರ್ಕಾರದ ನೀತಿಯೇ ಕಾರಣ. ಒಂದು ವೇಳೆ ಹಿಂದಿನ (ಕಾಂಗ್ರೆಸ್) ಸರ್ಕಾರಗಳು ತೈಲ ಆಮದು ಅವಲಂಬನೆಗೆ ಕಡಿವಾಣ ಹಾಕಿದ್ದರೆ ಇಂದು ಮಧ್ಯಮ ವರ್ಗದ ಕುಟುಂಬಗಳಿಗೆ ಹೊರೆ ಆಗುತ್ತಿರಲಿಲ್ಲ. ತಮ್ಮ ಸರ್ಕಾರ ತೈಲ ಆಮದು ಕಡಿಮೆ ಮಾಡುವ ನಿಟ್ಟಿನಲ್ಲಿ ಕಾರ್ಯನಿರ್ವಹಿಸುತ್ತಿದೆ ಎಂದು ಪ್ರಧಾನಿ ನರೇಂದ್ರ ಮೋದಿ ಹೇಳಿದ್ದಾರೆ. ತಮಿಳುನಾಡಿನಲ್ಲಿ ತೈಲ ಮತ್ತು ಆಡುಗೆ ಅನಿಲಕ್ಕೆ ಸಂಬಂಧಿಸಿದ ಪ್ರಮುಖ ಯೋಜನೆಗಳಿಗೆ ಚಾಲನೆ ನೀಡಿ ಮಾತನಾಡಿದ ಮೋದಿ, ಭಾರತ 2019–20ರಲ್ಲಿ ತೈಲದ ಅಗತ್ಯತೆಯ ಶೇ:85ರಷ್ಟು ಹಾಗೂ ಅನಿಲದ ಅಗತ್ಯತೆಯ ಶೇ:53ರಷ್ಟನ್ನು ಆಮದು ಮಾಡಿಕೊಂಡಿದೆ. ನಾವು ತೈಲ ಅಮದಿನ ಮೇಲೆ ಯಾಕೆ ಇಷ್ಟೊಂದು ಆವಲಂಬಿತವಾಗಿದ್ದೇವೆ ಹಿಂದಿನ ಸರ್ಕಾರ ತೈಲ ಆಮದು ಅವಲಂಬನೆ ತಗ್ಗಿಸಿದ್ದರೆ ಇಂದು ಮಧ್ಯಮ ವರ್ಗಕ್ಕೆ ಹೊರೆ ಆಗುತ್ತಿರಲಿಲ್ಲ ಎಂದರು.

ಇದೇ ವೇಳೆ ನಮ್ಮ ಸರ್ಕಾರ ಮಧ್ಯಮ ವರ್ಗದ ಕಳವಳದ ಬಗ್ಗೆ ಸಂವೇದನೆ ಹೊಂದಿದೆ. ಪೆಟ್ರೋಲ್‌ನಲ್ಲಿ ಎಥೆನಾಲ್ ಪ್ರಮಾಣ ಹೆಚ್ಚಳಕ್ಕೆ ಆದ್ಯತೆ ನೀಡುತ್ತಿದೆ. ಮರುಬಳಕೆ ಇಂಧನದ ಬಳಕೆ ಹೆಚ್ಚಿಸುವ ನಿಟ್ಟಿನಲ್ಲಿ ಸರ್ಕಾರ ಎಲ್ಲ ಯತ್ನ ಮಾಡುತ್ತಿದೆ. 2030ರ ವೇಳೆಗೆ ಶೇ.40 ರಷ್ಟು ಇಂಧನ ದೇಶದಲ್ಲೇ ಉತ್ಪಾದನೆ ಆಗಲಿದೆ. ನಮ್ಮ ಸರ್ಕಾರ ನೈಸರ್ಗಿಕ ಅನಿಲ ಪ್ರಮಾಣವನ್ನು ಶೇ.6.3 ರಿಂದ ಶೇ.15ಕ್ಕೆ ಏರಿಸಲಿದೆ ಎಂದರು.

ಆಧಾರ: ವಿಶ್ವವಾಣಿ, ದಿನಾಂಕ:01.02.2021.

## 28. ಆರ್ಥಿಕ ಚೇತರಿಕೆ ಲಸಿಕೆ

ಕೊರೋನಾ ಲಾಕ್‌ಡೌನ್‌ನಿಂದ ಕುಸಿದಿರುವ ಆರ್ಥಿಕತೆಗೆ ಜೀವ ತುಂಬುವ ಆತ್ಮನಿರ್ಭರ ಭಾರತದ ದಿಕ್ಸೂಚಿಯಾಗುವ ಬಜೆಟ್ ಮಂಡಿಸುವ ಮೂಲಕ ವಿತ್ತ ಸಚಿವೆ ನಿರ್ಮಲಾ ಸೀತಾರಾಮನ್ ಹೊಸ ಭಾಷ್ಯ ಬರೆದಿದ್ದಾರೆ.

ಬಜೆಟ್‌ನಲ್ಲಿ ಪ್ರಮುಖವಾಗಿ ಪ್ರಧಾನಮಂತ್ರಿ ಆತ್ಮನಿರ್ಭರ ಸ್ವಾಸ್ಥ್ಯ ಭಾರತ ಯೋಜನೆ, ರಾಷ್ಟ್ರೀಯ ರೋಗ ನಿಯಂತ್ರಣ ಕೇಂದ್ರ ಬಲವರ್ಧನೆ, 7 ಜವಳಿ ಪಾರ್ಕ್‌ಗಳ ಸ್ಥಾಪನೆ. ಉಜ್ವಲ ಯೋಜನೆಯಡಿ ಒಂದು ಕೋಟಿ ಅಡುಗೆ ಅನಿಲ ವಿತರಣೆ, 100 ಸೈನಿಕ ಶಾಲೆಗಳ ನಿರ್ಮಾಣ, ಹಿರಿಯ ನಾಗರಿಕರಿಗೆ ತೆರಿಗೆ ರಿಟರ್ನ್ಸ್ ವಿನಾಯಿತಿ ಸೇರಿ ಹಲವು ಹೊಸ ಕ್ರಮಗಳನ್ನು ಘೋಷಣೆ ಮಾಡಿದ್ದಾರೆ.

ಆರೋಗ್ಯ, ಕೃಷಿ, ಕೈಗಾರಿಕೆ, ಉತ್ಪಾದನಾ ವಲಯಕ್ಕೆ ಒತ್ತು ನೀಡುವ ಸಮತೋಲನದ ಬಜೆಟ್ ಇದಾಗಿದೆ. 75 ವರ್ಷ ಮತ್ತು ಅದಕ್ಕಿಂತ ಮೇಲ್ಪಟ್ಟ ಹಿರಿಯ ನಾಗರಿಕರು ಆದಾಯ ತೆರಿಗೆ ರಿಟರ್ನ್ಸ್ ಸಲ್ಲಿಸಬೇಕಾಗಿಲ್ಲ. ಅವರು ಪಿಂಚಣಿಗೆ ತೆರಿಗೆ ಪಾವತಿಸುವ ಅಗತ್ಯವಿಲ್ಲ ಜೊತೆಗೆ ನೇರ ತೆರಿಗೆ ವ್ಯವಸ್ಥೆಯಲ್ಲಿ ಹಲವು ಬದಲಾವಣೆಗಳನ್ನು ತರಲು ಸರ್ಕಾರ ತೀರ್ಮಾನಿಸಿದೆ.

ಪ್ರಧಾನಮಂತ್ರಿ ಆತ್ಮನಿರ್ಭರ ಸ್ವಾಸ್ಥ್ಯ ಭಾರತ ಯೋಜನೆ ಆರಂಭಿಸಲಾಗುತ್ತಿದ್ದು, ಈ ಯೋಜನೆಗಳಿಗಾಗಿ ಮುಂದಿನ 6 ವರ್ಷಗಳಿಗೆ ರೂ.64,180 ಕೋಟಿ ವಿನಿಯೋಗಿಸಲಾಗುತ್ತದೆ ಎಂದು ನಿರ್ಮಲಾ ಸೀತಾರಾಮನ್ ಪ್ರಕಟಿಸಿದರು.

ಕೋವಿಡ್–19ಗೆ ಭಾರತದಲ್ಲಿ ಪ್ರಸ್ತುತ ಎರಡು ಲಸಿಕೆಗಳಿವೆ, ಇನ್ನೂ ಎರಡು ಲಸಿಕೆಗಳನ್ನು ನಿರೀಕ್ಷಿಸಲಾಗುತ್ತಿದೆ. ಭಾರತದಲ್ಲಿ ಕೋವಿಡ್ ಸಾವಿನ ಪ್ರಮಾಣ ಅತ್ಯಂತ ಕಡಿಮೆ ಮಟ್ಟ ತಲುಪಿದ್ದು, ಪ್ರತಿ 10 ಲಕ್ಷ ಜನರಿಗೆ 112 ಜನರು ಸಾವಿಗೀಡಾಗಿದ್ದರೆ, 130 ಪ್ರಕರಣಗಳು ಸಕ್ರಿಯವಾಗಿವೆ ಎಂದು ತಿಳಿಸಿದರು.

ದೇಶಾದ್ಯಂತ ಒಟ್ಟು 7 ಜವಳಿ ಪಾರ್ಕ್‌ಗಳನ್ನು ಮುಂದಿನ ಮೂರು ವರ್ಷಗಳಲ್ಲಿ ಸ್ಥಾಪಿಸಲಾಗುವುದು ಉತ್ಪಾದನಾ ಕ್ಷೇತ್ರಕ್ಕೆ 1.94 ಕೋಟಿ ರೂಪಾಯಿ ಅನುದಾನ ನೀಡುತ್ತಿದ್ದು, ಜವಳಿ ಪಾರ್ಕ್‌ಗಳು ಜಾಗತಿಕ ಮಟ್ಟದಲ್ಲಿ ಮಹತ್ವ ಪಡೆದುಕೊಳ್ಳಲಿವೆ. ಅವಳಿ ಉದ್ಯಮದಲ್ಲಿ ಚೀನಾ ಹಾಗೂ ವಿಯೆಟ್ನಾಂ ದೇಶಗಳು ಮುಂಚೂಣಿಯಲ್ಲಿದ್ದು, ಚೀನಾ ಹಾಗೂ ವಿಯೆಟ್ನಾಂ ಮಾದರಿಯಲ್ಲೇ ಈ ಜವಳಿ ಪಾರ್ಕ್‌ಗಳನ್ನು ಅಭಿವೃದ್ಧಿಪಡಿಸಲು ಜವಳಿ ಸಚಿವಾಲಯ ಪ್ರಸ್ತಾವನೆ ಸಲ್ಲಿಸಿತ್ತು. ಇದನ್ನು ಬಜೆಟ್‌ನಲ್ಲಿ ಪ್ರಕಟಿಸಿದ್ದಾರೆ.

ವಾಹನ ಉದ್ಯಮ ಕ್ಷೇತ್ರಕ್ಕೆ ಉತ್ತೇಜನ ನೀಡಲು ಹಳೆಯ ವಾಹನಗಳನ್ನು ಸ್ಕ್ರ್ಯಾಪ್ ಮಾಡುವ ಹೊಸ ನೀತಿಯನ್ನು ನಿರ್ಮಲಾ ಸೀತಾರಾಮನ್ ಘೋಷಿಸಿದ್ದಾರೆ. 20 ವರ್ಷದಷ್ಟು ಹಳೆಯದಾದ ಖಾಸಗಿ ವಾಹನಗಳು ಮತ್ತು 15 ವರ್ಷ ಹಳೆಯ ವಾಣಿಜ್ಯ ವಾಹನಗಳನ್ನು ಗುಜರಿಗೆ ಹಾಕುವ ಸಂಬಂಧ ಹೊಸ ಸ್ಕ್ರ್ಯಾಪೇಜ್ ನೀತಿ ಪ್ರಕಟಿಸಿದ್ದಾರೆ. 20 ವರ್ಷದ ಖಾಸಗಿ ಮತ್ತು 15 ವರ್ಷದ ಹಳೆಯ ವಾಣಿಜ್ಯ ವಾಹನಗಳನ್ನು ಸಾಮರ್ಥ್ಯ ಪರೀಕ್ಷೆಗೆ ಒಳಪಡಿಸಲಾಗುತ್ತದೆ ಎಂದು ಅವರು ತಿಳಿಸಿದ್ದಾರೆ.

ಒಂದು ದೇಶ, ಒಂದು ಪಡಿತರ ಚೀಟಿ ವ್ಯವಸ್ಥೆ ಪ್ರಾರಂಭಿಸಲಾಗಿದ್ದು, ಈ ಯೋಜನೆ ಮೂಲಕ ಫಲಾನುಭವಿಗಳು ತಮ್ಮ ಪಡಿತರವನ್ನು ದೇಶದ ಯಾವುದೇ ಮೂಲೆಯಲ್ಲಾದರೂ ಪಡೆಯಬಹುದು. ವಲಸೆ ಕಾರ್ಮಿಕರಿಗೆ ಈ ಯೋಜನೆಯಿಂದ ಹೆಚ್ಚಿನ ಅನುಕೂಲ ದೊರೆಯಲಿದೆ. ಈ ಯೋಜನೆಯು 32 ರಾಜ್ಯಗಳು ಮತ್ತು ಕೇಂದ್ರಾಡಳಿತ ಪ್ರದೇಶಗಳಲ್ಲಿ ಜಾರಿಗೊಳಿಸುತ್ತಿವೆ ಎಂದು ನಿರ್ಮಲಾ ಸೀತಾರಾಮನ್ ತಿಳಿಸಿದರು.

ಆಧಾರ: ವಿಶ್ವವಾಣಿ, ದಿನಾಂಕ:02.02.2021.

## 29. ನೈಋತ್ಯ ರೈಲ್ವೆಗೆ ರೂ.3,245 ಕೋಟಿ

ಕೇಂದ್ರ ಸರ್ಕಾರ ಪ್ರಸಕ್ತ ಸಾಲಿನ ಬಜೆಟ್‌ನಲ್ಲಿ ನೈಋತ್ಯ ರೈಲ್ವೆ ವಲಯಕ್ಕೆ ರೂ.3,245 ಕೋಟಿ ಅನುದಾನ ಹಂಚಿಕೆ ಮಾಡಿದ್ದು, ವಲಯ ನಿರ್ಮಾಣಗೊಂಡ ನಂತರ ಇದುವರೆಗೆ ನೀಡಿದ ಅತಿ ಹೆಚ್ಚು ಅನುದಾನವಾಗಿದೆ. ಕೇಳಿರುವುದಕ್ಕಿಂತ ಹೆಚ್ಚಿನ ಅನುದಾನ ನೀಡಿದೆ.

ನಗರದ ರೈಲ್ ಸೌಧದಲ್ಲಿ ಈ ವಿಷಯ ತಿಳಿಸಿದ ವಲಯದ ಡಿಜಿಎಂ ಹಾಗೂ ಮುಖ್ಯ ಸಾರ್ವಜನಿಕ ಸಂಪರ್ಕ ಅಧಿಕಾರಿ ಇ. ವಿಜಯ ರಾಜ್ಯ ಸರ್ಕಾರದಿಂದ ನಿರೀಕ್ಷಿಸಿರುವ ರೂ.1,233 ಕೋಟಿ ಪಾಲು ಸೇರಿ ಒಟ್ಟು ರೂ.4,468 ಕೋಟಿ ನೈಋತ್ಯ ರೈಲ್ವೆಗೆ ಲಭಿಸಿದಂತಾಗಿದೆ. ಕಳೆದ ವರ್ಷಕ್ಕಿಂತ

ರೂ.536 ಕೋಟಿ ಹೆಚ್ಚಿನ ಅನುದಾನ ದೊರೆಕಿದೆ. ಈ ಬಾರಿ ಬಜೆಟ್‌ನಲ್ಲಿ ಯಾವುದೇ ಹೊಸ ಮಾರ್ಗವನ್ನು ಮಂಜೂರು ಮಾಡಿಲ್ಲ. ಈ ಹಿಂದೆ ಮಂಜೂರಾಗಿರುವ ಹೊಸ ಮಾರ್ಗಗಳನ್ನು ಪ್ರಾರಂಭಿಸಲು ಅನುದಾನ ಮಂಜೂರು ಮಾಡಲಾಗಿದೆ ಎಂದು ತಿಳಿಸಿದರು. 2020ರ ಮಾರ್ಚ್ ಒಳಗೆ ಯಲಹಂಕ–ಪೆನುಕೊಂಡ, ಅರಸೀಕೆರೆ–ತುಮಕೂರು ಮಾರ್ಗಗಳನ್ನು ಪೂರ್ಣಗೊಳಿಸಲಾಗುತ್ತದೆ. ಬೆಂಗಳೂರು ಸಬ್ ಅರ್ಬನ್ ಯೋಜನೆಗಾಗಿ ಈ ಬಾರಿಯ ಬಜೆಟ್‌ನಲ್ಲಿ ರೂ.300 ಕೋಟಿ ಅನುದಾನ ನೀಡಿದ್ದು, ರಾಜ್ಯ ಸರ್ಕಾರದಿಂದ ಸಮಾನ ಅನುದಾನ ನಿರೀಕ್ಷಿಸಲಾಗಿದೆ ಎಂದು ಹೇಳಿದರು.

ವಲಯ ವ್ಯಾಪ್ತಿಯಲ್ಲಿ 600ಕ್ಕೂ ಹೆಚ್ಚು ಲೆವಲ್ ಕ್ರಾಸ್ಸಿಂಗ್‌ಗಳಿದ್ದು, 3 ವರ್ಷಗಳಲ್ಲಿ ಇವುಗಳ ಸಂಖ್ಯೆ ಸಂಪೂರ್ಣವಾಗಿ ಇಳಿಕೆಯಾಗಲಿದೆ. ವಲಯ ವ್ಯಾಪ್ತಿಯಲ್ಲಿ 105 ಕಿ.ಮೀ ಉದ್ದದ ಡಬ್ಲಿಂಗ್ ಕಾಮಗಾರಿ ಪೂರ್ಣಗೊಂಡಿದ್ದು, ಮಾರ್ಚ್‌ವರೆಗೆ 66 ಕಿ.ಮೀ ಕಾಮಗಾರಿ ಪೂರ್ಣಗೊಳಿಸಲಾಗುವುದು. 2021–22ರಲ್ಲಿ 203 ಕಿ.ಮೀ. ಇಲೆಕ್ಟ್ರಿಫಿಕೇಶನ್ ಕಾಮಗಾರಿ ಪೂರ್ಣಗೊಂಡಿದ್ದು ಮಾರ್ಚ್‌ವರೆಗೆ ಒಟ್ಟು 309 ಕಿ.ಮೀ. ಕಾಮಗಾರಿ ಪೂರ್ಣಗೊಳ್ಳಲಿದೆ. 2021–22ರಲ್ಲಿ 849 ಕಿ.ಮೀ ಮಾರ್ಗ ಇಲೆಕ್ಟ್ರಿಫಿಕೇಶನ್‌ಗೊಳಿಸುವ ಗುರಿ ಹೊಂದಲಾಗಿದೆ ಎಂದು ತಿಳಿಸಿದರು

ಅರಸೀಕೇರೆ–ತುಮಕೂರು ಮಧ್ಯದ ಡಬ್ಲಿಂಗ್ ಕಾಮಗಾರಿ ಬರುವ ವರ್ಷದ ಮಾರ್ಚ್‌ನಲ್ಲಿ ಹಾಗೂ ಹುಬ್ಬಳ್ಳಿ–ಚಿಕ್ಕಜಾಜೂರ ಮಧ್ಯದ ಕಾಮಗಾರಿ 2023ರಲ್ಲಿ ಪೂರ್ಣಗೊಳ್ಳುವ ನಿರೀಕ್ಷೆ ಇದೆ ಎಂದು ಹೇಳಿದರು. ಗದಗ –ವಾಡಿ ಮಾರ್ಗಕ್ಕೆ 1,598 ಹೆಕ್ಟೇರ್ ಭೂಮಿಯ ಅಗತ್ಯ ಇದ್ದು, 615 ಹೆಕ್ಟೇರ್ ಭೂಮಿಯನ್ನು ರಾಜ್ಯ ಸರ್ಕಾರ ನೀಡಿದೆ. ರೂ.2,841 ಕೋಟಿ ವೆಚ್ಚದಲ್ಲಿ ಈ ಮಾರ್ಗ ಪೂರ್ಣಗೊಳ್ಳಲಿದೆ. ತುಮಕೂರು–ದಾವಣಗೆರೆ ಮಾರ್ಗಕ್ಕೆ 2,298 ಎಕರೆ ಭೂಮಿಯ ಅವಶ್ಯಕತೆ ಇದೆ. ಬೆಳಗಾವಿ–ಧಾರವಾಡ ಮಾರ್ಗಕ್ಕೆ 335 ಹೆಕ್ಟೇರ್ ಭೂಮಿ ಬೇಕಾಗಿದೆ. ರಾಜ್ಯ ಸರ್ಕಾರ ಭೂಮಿ ವಶಪಡಿಸಿಕೊಂಡು ರೈಲ್ವೆಗೆ ಹಸ್ತಾಂತರಿಸಿದ ನಂತರ ಕಾಮಗಾರಿ ಪ್ರಾರಂಭಗೊಳ್ಳಲಿದೆ ಎಂದರು.

| **ಕಳೆದ ವರ್ಷದ ಯೋಜನೆಗಳಿಗೆ ಪ್ರಸಕ್ತ ಸಾಲಿನ ಅನುದಾನ** | | |
|---|---|---|
| **ಯೋಜನೆ** | **ಘಟಕ** | **ಅನುದಾನ (ಕೋಟಿ ರೂ.ಗಳಲ್ಲಿ)** |
| ಹೊಸ ಮಾರ್ಗ | ರಾಯದುರ್ಗ–ಕಲ್ಯಾಣದುರ್ಗ ತುಮಕೂರು (213 ಕಿ.ಮೀ) | 250 |
| ಸಿಂಗಲ್ ಲೈನ್ | ಬಾಗಲಕೋಟೆ – ಕುಡಚಿ (142 ಕಿ.ಮೀ) | 25 |
| | ತುಮಕೂರು – ಚಿತ್ರದುರ್ಗ ದಾವಣಗೆರೆ – (199ಕಿ.ಮೀ) | 100 |
| | ಗದಗ–ವಾಡಿ – (252 ಕಿ.ಮೀ) | 100 |
| | ಶಿವಮೊಗ್ಗ – ಶಿಕಾರಿಪುರ – ರಾಣಿಬೆನ್ನೂರ (103 ಕಿ.ಮೀ) | 100 |
| | ಬೆಳಗಾವಿ–ಕಿತ್ತೂರ–ಧಾರವಾಡ (73 ಕಿ.ಮೀ) | 50 |
| ಡಬ್ಲಿಂಗ್ | ಹೊಸಪೇಟೆ–ಹುಬ್ಬಳ್ಳಿ–ಲೋಂಡಾ–ತಿನೈಘಾಟ–ವಾಸ್ಕೋ | 365 |

| | | |
|---|---|---|
| | ಹೊಟಗಿ–ಕುಡಗಿ–ಗದಗ | 165 |
| | ಯಲಹಂಕ–ಪೆನುಕೊಂಡ | 160 |
| | ಹುಬ್ಬಳ್ಳಿ–ಚಿಕ್ಕಜಾಜೂರ | 336 |
| | ಅರಸೀಕೆರೆ–ತುಮಕೂರು | 47 |
| | ಯಶವಂತಪುರ–ಚನ್ನಸಂದ್ರ | 71 |
| | ಪೆಣುಕೊಂಡ–ಧರ್ಮಾವರಂ | 10 |
| | ಬೈಯಪ್ಪನಹಳ್ಳಿ–ಹೊಸೂರು | 80 |
| ಚತುಷ್ಪಥ | ಬೆಂಗಳೂರು–ವೈಟ್‌ಫೀಲ್ಡ್ | 78 |

| **ಇಲೆಕ್ಟ್ರಿಫಿಕೇಶನ್ ಕಾಮಗಾರಿಗೆ ಬಜೆಟ್‌ನಲ್ಲಿ ನೀಡಿದ ಅನುದಾನ** | |
|---|---|
| **ಘಟಕ** | **ಅನುದಾನ (ಕೋಟಿ ರೂ.ಗಳಲ್ಲಿ)** |
| ಹೊಸಪೇಟೆ–ಹುಬ್ಬಳ್ಳಿ–ವಾಸ್ಕೊ (346) ಕಿ.ಮೀ. | 85 |
| ಮಿರಜ್ ಲೋಂಡಾ (189) | 80.14 |
| ಬಿರೂರ – ತಾಳಗೊಪ್ಪ (161 ಕಿ.ಮೀ) | 43.89 |
| ಬೆಂಗಳೂರು–ಹೊಸೂರು–ಒಮಲೂರ | 20 |
| ಹೊಸಪೇಟೆ–ಸ್ವಾಮಿಹಳ್ಳಿ (59 ಕಿ.ಮೀ) | 14.72 |
| ಮೈಸೂರು – ಹಾಸನ – ಮಂಗಳೂರು (347 ಕಿ.ಮೀ) | 112.32 |
| ಅರಸಿಕೇರೆ – ಹಾಸನ ಮಾರ್ಗ ಸೇರಿ | |
| ಚಿಕ್ಕಬಾಣಾವರ – ಹಾಸನ (166 ಕಿ.ಮೀ) | 50.06 |
| ಕಡೂರು – ಚಿಕ್ಕಮಗಳೂರು (46 ಕಿ.ಮೀ) | 5.89 |
| ಚಿಕ್ಕಜಾಜೂರ – ಬಳ್ಳಾರಿ (184 ಕಿ.ಮೀ) | 30 |
| ಬಂಗಾರಪೇಟೆ – ಯಲಹಂಕ (149 ಕಿ.ಮೀ) | 32.33 |

ಆಧಾರ: ವಿಜಯವಾಣಿ, ದಿನಾಂಕ:05.02.2021.

## 30. ಇಂದು ರಾತ್ರಿಯಿಂದ ಫಾಸ್ಟ್ಯಾಗ್ ಕಡ್ಡಾಯ

ರಾಷ್ಟ್ರೀಯ ಹೆದ್ದಾರಿಗಳ ಟೋಲ್ ಪ್ಲಾಜಾ ಮೂಲಕ ಹಾದು ಹೋಗುವ ವಾಹನಗಳಿಗೆ ಎಲೆಕ್ಟ್ರಾನಿಕ್ ರೂಪದಲ್ಲಿ ಸುಂಕ ಪಾವತಿಸುವ ಫಾಸ್ಟ್ಯಾಗ್ ಮಧ್ಯರಾತ್ರಿಯಿಂದ ಕಡ್ಡಾಯವಾಗಿ ಜಾರಿಗೆ ಬರಲಿದೆ. ಫಾಸ್ಟ್ಯಾಗ್ ಇಲ್ಲದ ವಾಹನಗಳಿಗೆ ದುಪ್ಪಟ್ಟು ಸುಂಕ ವಿಧಿಸಲಾಗುತ್ತೆ ಎಂದು ಕೇಂದ್ರ ರಸ್ತೆ ಮತ್ತು ಸಾರಿಗೆ ಸಚಿವಾಲಯ ತಿಳಿಸಿದೆ.

ಫೆಬ್ರವರಿ 15–16ರ ಮಧ್ಯರಾತ್ರಿಯಿಂದ ಟೋಲ್ ಪ್ಲಾಜಾಗಳಲ್ಲಿರುವ ಎಲ್ಲಾ ಲೇನುಗಳನ್ನು ಫಾಸ್ಟ್ಯಾಗ್ ಲೇನ್ ಎಂದು ಘೋಷಿಸಲಾಗುತ್ತದೆ. 2008ರ ರಾಷ್ಟ್ರೀಯ ಹೆದ್ದಾರಿ ಶುಲ್ಕ ನಿಯಮಗಳ ಪ್ರಕಾರ ಫಾಸ್ಟ್ಯಾಗ್ ಇಲ್ಲದ ವಾಹನಗಳು ಫಾಸ್ಟ್ಯಾಗ್ ಲೇನ್ ಪ್ರವೇಶಿಸಿದರೆ ದುಪ್ಪಟ್ಟು ಸುಂಕವನ್ನು ವಸೂಲು ಮಾಡಲಾಗುತ್ತದೆ ಎಂದು ಸಾರಿಗೆ ಸಚಿವಾಲಯ ತಿಳಿಸಿದೆ. ಟೋಲ್ ನಾಕಾಗಳಲ್ಲಿ ದಟ್ಟಣೆ ತಪ್ಪಿಸಿ ಡಿಜಿಟಲ್ ಪೇಮೆಂಟ್ ಉತ್ತೇಜನಕ್ಕೆ ಈ ಕ್ರಮ ಕೈಗೊಳ್ಳಲಾಗಿದೆ ಎಂದು ಅದು ಸ್ಪಷ್ಟಪಡಿಸಿದೆ.

2016ರಲ್ಲಿ ಮೊದಲ ಬಾರಿ ಫಾಸ್ಟ್ಯಾಗ್ ಸೌಲಭ್ಯ ಜಾರಿಗೆ ಬಂದಿತು. 2021ರ ಜನವರಿ 1 ರಿಂದ ಫಾಸ್ಟ್ಯಾಗ್ ಕಡ್ಡಾಯಗೊಳಿಸುವುದಾಗಿ ಕೇಂದ್ರ ಸರ್ಕಾರ ಘೋಷಿಸಿತ್ತು. ಬಳಿಕ ಅದನ್ನು ಫೆಬ್ರವರಿ 15ಕ್ಕೆ ವಿಸ್ತರಿಸಿತ್ತು. ಸ್ಥಳದಲ್ಲೇ ಫಾಸ್ಟ್ಯಾಗ್ ಖರೀದಿಗೆ ಅನುಕೂಲ ಕಲ್ಪಿಸಲು 50 ಸಾವಿರ ಕೇಂದ್ರಗಳನ್ನು ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರ ತೆರೆದಿದೆ.

**ಮತ್ತೊಮ್ಮೆ ಗಡುವು ವಿಸ್ತರಣೆ ಇಲ್ಲ : ಗಡ್ಕರಿ** : ಫಾಸ್ಟ್ಯಾಗ್ ಕಡ್ಡಾಯ ಗಡುವನ್ನು ಈಗಾಗಲೇ 2–3 ಬಾರಿ ವಿಸ್ತರಿಸಲಾಗಿದೆ. ಅದನ್ನು ಮತ್ತೊಮ್ಮೆ ವಿಸ್ತರಣೆ ಮಾಡಲಾಗುವುದಿಲ್ಲ ವಾಹನ ಮಾಲೀಕರು ತಕ್ಷಣವೇ ಫಾಸ್ಟ್ಯಾಗ್ ಸೌಲಭ್ಯ ಅಳವಡಿಸಿಕೊಳ್ಳಬೇಕು ಎಂದು ಕೇಂದ್ರ ಸಾರಿಗೆ ಸಚಿವ ನಿತಿನ್ ಗಡ್ಕರಿ ಅವರು ತಿಳಿಸಿದ್ದಾರೆ. ಕೆಲವೊಂದು ಮಾರ್ಗಗಳಲ್ಲಿ ಶೇ.90ರಷ್ಟು ಫಾಸ್ಟ್ಯಾಗ್ ನೋಂದಣಿಯಾಗಲಿದೆ. ಶೇ.10ರಷ್ಟು ಮಂದಿ ಮಾತ್ರ ನೋಂದಣಿ ಮಾಡಿಸಿಕೊಂಡಿಲ್ಲ, ಟೋಲ್ ನಾಕಾಗಳಲ್ಲಿ ಫಾಸ್ಟ್ಯಾಗ್ ಲಭ್ಯವಿದ್ದು ಜನರು ಅದನ್ನು ಖರೀದಿಸಬೇಕು. ಸುಗಮ ಸಂಚಾರಕ್ಕೆ ಬಳಸಬೇಕು ಎಂದು ಮನವಿ ಮಾಡಿದ್ದಾರೆ.

ಆಧಾರ: ಕನ್ನಡಪ್ರಭ, ದಿನಾಂಕ:18.02.2021.

## 31. ಡಿಜಿಟಲ್ ಮಾಧ್ಯಮಗಳಿಗೆ ಕೇಂದ್ರ ಸರ್ಕಾರದ ಅಂಕುಶ

ಒಟಿಟಿ ಮಾಧ್ಯಮದಲ್ಲಿ ಪ್ರಸಾರವಾಗುವ ಕಾರ್ಯಕ್ರಮಗಳು ಹಾಗೂ ಡಿಜಿಟಲ್ ಮೀಡಿಯಾಗಳಲ್ಲಿ ಪ್ರಸಾರವಾಗುವ ಸುದ್ದಿಗಳಿಗೆ ಯಾರು ನಿಯಂತ್ರಣವು ಇಲ್ಲ ಮತ್ತು ಸಾಮಾಜಿಕ ಜಾಲತಾಣಗಳಲ್ಲಿ ಉದ್ಭವಿಸುವ ಸಮಸ್ಯೆಗಳನ್ನು ಬಗೆಹರಿಸಲು ಯಾವ ವ್ಯವಸ್ಥೆಯು ಇಲ್ಲ ಎಂಬ ಬಹುಕಾಲದ ದೂರಿಗೆ ಕೇಂದ್ರ ಸರ್ಕಾರ ಕೊನೆಗೂ ಪರಿಹಾರ ಹುಡುಕಿದ್ದು, ಇವುಗಳಿಗೆ ಅನ್ವಯಿಸುವಂತೆ ಹೊಸ ನಿಯಮಾವಳಿ ಹಾಗೂ ನೀತಿಸಂಹಿತೆ ಜಾರಿಗೊಳಿಸಿದೆ.

ಇತ್ತೀಚಿನ ರೈತ ಪ್ರತಿಭಟನೆ ವೇಳೆ ದೆಹಲಿಯಲ್ಲಿ ನಡೆದ ಹಿಂಸಾಚಾರಕ್ಕೆ ಸೋಷಿಯಲ್ ಮೀಡಿಯಾಗಳು ಕುಮ್ಮಕ್ಕು ನೀಡಿವೆ ಎನ್ನಲಾಗಿತ್ತು. ಈ ವೇಳೆ ಟ್ವೀಟರ್ ಉದ್ದಟತನ ಪ್ರದರ್ಶಿಸಿತ್ತು.

**ಒಟಿಟಿ (ಒವರ್ ದಿ ಟಾಪ್)**

- ನೆಟ್‌ಫ್ಲಿಕ್ಸ್ ಅಮೆಜಾನ್ ಪ್ರೈಮ್‌ನಂತಹ ಮನರಂಜನಾ ಆ್ಯಪ್‌ಗಳಿಗೆ ಅನ್ವಯ
- ವೆಬ್‌ಸಿರೀಸ್, ಸಿನಿಮಾ ಕಾರ್ಯಕ್ರಮಗಳಿಗೆ ಒಟಿಟಿ ಆ್ಯಪ್‌ಗಳು ವಯೋಮಾನ ಆಧಾರಿತ ರೇಟಿಂಗ್ ನೀಡಬೇಕು.
- ಯು(ಎಲ್ಲರೂ) , ಯು/ಎ7+ (ವರ್ಷ), ಯು/ಎ13+ (ವರ್ಷ, ಯು/ಎ16+ (ವರ್ಷ) ಹಾಗೂ ಎ (ಅಡಲ್ಟ್) ರೇಟಿಂಗ್
- ಚೈಲ್ಡ್ ಲಾಕ್ ವ್ಯವಸ್ಥೆ ಒದಗಿಸಬೇಕು.

**ಸಾಮಾಜಿಕ ಜಾಲತಾಣ:**

- ಫೇಸ್ ಬುಕ್, ಟ್ವಿಟರ್, ವಾಟ್ಸಾಪ್‌ನಂತಹ ಸೋಷಿಯಲ್ ಮೀಡಿಯಾ ವೆಬ್‌ಸೈಟ್‌ಗಳು ದೂರು ಪರಿಹಾರ ಅಧಿಕಾರಿ ನೇಮಿಸಬೇಕು.

- ಈ ಅಧಿಕಾರಿ ಜೊತೆ ವ್ಯವಹರಿಸಲು ಸರ್ಕಾರದಿಂದ ನಿಗಾ ಸಮಿತಿ ರಚಿಸಲಾಗುವುದು.
- ನಗ್ನ ಫೋಟೋ, ಅಕ್ಷೇಪಾರ್ಹ ಕಂಟೆಂಟ್ ಪ್ರಕಟವಾದರೆ 24 ತಾಸಿನಲ್ಲಿ ತೆಗೆಯಬೇಕು.
- ಸರ್ಕಾರ, ಕೋರ್ಟ್ ಕೇಳಿದರೆ ವಿವಾದಿತ ಪೋಸ್ಟ್‌ನ ಮೂಲದ ಮಾಹಿತಿ ನೀಡಬೇಕು.

**ಡಿಜಿಟಲ್ ಮೀಡಿಯಾ**

- ಆನ್‌ಲೈನ್ ಸುದ್ದಿ ತಾಣಗಳ ಮೇಲೆ ನಿಗಾ ವಹಿಸಲು 3 ರೀತಿಯ ವ್ಯವಸ್ಥೆಯಿರಬೇಕು.
  1. ಸ್ವಯಂ ನಿಯಂತ್ರಣ
  2. ಪ್ರಕಾಶಕರ ಸಂಘದ ಮೂಲಕ ಸ್ವಯಂ ನಿಯಂತ್ರಣ ವ್ಯವಸ್ಥೆ
  3. ಸರ್ಕಾರದ ಮೇಲ್ವಿಚಾರಣಾ ವ್ಯವಸ್ಥೆ
- ಟಿವಿ ಚಾನೆಲ್, ಪತ್ರಿಕೆಗಳಿಗೆ ಅನ್ವಯಿಸುವ ಭಾರತೀಯ ಪತ್ರಿಕಾ ಮಂಡಳಿ ಹಾಗೂ ಕೇಬಲ್ ಟಿವಿ ನೆಟ್ವರ್ಕ್ ಕಾಯ್ದೆಯ ನಿಯಮಗಳನ್ನು ಪಾಲಿಸಬೇಕು.

ಅಮೆಜಾನ್‌ನ ತಾಂಡವ್ ವೆಬ್ ಸಿರೀಸ್‌ನಲ್ಲಿ ಹಿಂದೂ ದೇವತೆಗಳಿಗೆ ಅವಮಾನ ಮಾಡಿದ ಪ್ರಕರಣಗಳು ದೇಶವ್ಯಾಪಿ ಆಕ್ರೋಶಕ್ಕೆ ತುತ್ತಾದ ಬೆನ್ನಲ್ಲೇ, ಸಾಮಾಜಿಕ ಜಾಲತಾಣಗಳು, ಒಟಿಟಿ ವೇದಿಕೆಗಳ ಮೇಲೆ ನಿಯಂತ್ರಣ ಹೇರುವ, ಅವುಗಳಿಗೂ ಹೊಣೆಗಾರಿಕೆ ವಹಿಸುವ ನಿಯಮಗಳ ಜಾರಿಗೆ ಸರ್ಕಾರ ನಿರ್ಧರಿಸಿದೆ. ಒಟಿಟಿ ಪ್ಲಾಟ್‌ಫಾರಂಗಳು ರೇಟಿಂಗ್ ಮಾತ್ರ ನೀಡಬೇಕಾಗುತ್ತದೆ. ಈ ಎಲ್ಲ ಕ್ರಮಗಳ ವೇಳೆ ಸಾಮಾಜಿಕ ಜಾಲತಾಣಗಳು ಹೊಣೆಹೊರುವಂತೆ ಮಾಡಲಿದೆ. ಈ ಮೂಲಕ ಜಾಲತಾಣಗಳ ದುರ್ಬಳಕೆಗೆ ಕಡಿವಾಣ ಹಾಕುವ ಉದ್ದೇಶ ಹೊಂದಿದೆ ಎಂದು ಕೇಂದ್ರ ಸಚಿವ ರವಿಶಂಕರ್ ಪ್ರಸಾದ್ ತಿಳಿಸಿದ್ದಾರೆ.

ಮುಖ್ಯವಾಗಿ ಈ ಮೂರು ಮಾದರಿಯ ವೇದಿಕೆಗೆ ಮೂರು ರೀತಿಯ ಪ್ರತ್ಯೇಕ ನಿಯಮ ಅಥವಾ ನೀತಿಸಂಹಿತೆಯನ್ನು ಜಾರಿಗೊಳಿಸಲಾಗಿದೆ.

ಆಧಾರ: ಕನ್ನಡಪ್ರಭ, ದಿನಾಂಕ:26.02.2021.

## 32. ಹಳೇ ವಾಹನ ಗುಜರಿ ಶೇ.5 ರಿಯಾಯಿತಿ

ಹಳೆಯ ವಾಹನವನ್ನು ಸ್ವಯಂ ಪ್ರೇರಿತವಾಗಿ ಗುಜರಿಗೆ ಹಾಕಿ, ಹೊಸ ವಾಹನಗಳನ್ನು ಕೊಳ್ಳುವ ಗ್ರಾಹಕರಿಗೆ ಶೇ.5 ರಿಯಾಯಿತಿ ಸಿಗಲಿದೆ ಎಂದು ಕೇಂದ್ರ ಸಾರಿಗೆ ಸಚಿವ ನಿತಿನ್ ಗಡ್ಕರಿ ತಿಳಿಸಿದ್ದಾರೆ. ವೈಯಕ್ತಿಕ ವಾಹನಗಳನ್ನು 20 ವರ್ಷ, ವಾಣಿಜ್ಯ ಉದ್ದೇಶದ ವಾಹನಗಳನ್ನು 15 ವರ್ಷಕ್ಕೆ ಫಿಟ್‌ನೆಸ್ ಪರೀಕ್ಷೆಗೆ ಒಳಪಡಿಸಬೇಕು. ಹೆಚ್ಚು ಮಾಲಿನ್ಯ ಹೊರಸೂಸುವ ವಾಹನಗಳನ್ನು ಕಡ್ಡಾಯವಾಗಿ ಗುಜರಿಗೆ ಹಾಕಬೇಕು. ಇಂಥ ವಾಹನಗಳನ್ನು ಓಡಿಸುವ ವ್ಯಕ್ತಿಗಳಿಗೆ ದೊಡ್ಡ ಪ್ರಮಾಣದ ದಂಡ ವಿಧಿಸಲಾಗುವುದು ಮತ್ತು ವಾಹನಗಳನ್ನು ಜಪ್ತಿ ಮಾಡಿಕೊಳ್ಳಲಾಗುವುದು ಎಂದು ಸಚಿವ ಗಡ್ಕರಿ ಮಾಹಿತಿ ನೀಡಿದ್ದಾರೆ.

ಈ ಕುರಿತು ಕಾಯ್ದೆ ಜಾರಿಗೆ ತರುವುದಾಗಿ ಕೇಂದ್ರ ಸರ್ಕಾರ ಬಜೆಟ್‌ನಲ್ಲಿ ಘೋಷಣೆ ಮಾಡಿದೆ. ಫಿಟ್‌ನೆಸ್ ಪರೀಕ್ಷೆ ಕೇಂದ್ರಗಳನ್ನು ದೇಶಾದ್ಯಂತ ಸ್ಥಾಪನೆ ಮಾಡಿದ ಬಳಿಕ ಕಾಯ್ದೆಯನ್ನು ಜಾರಿಗೆ ತರಲಾಗುವುದು. ಖಾಸಗಿ ಸಹಭಾಗಿತ್ವದಲ್ಲಿ ಈ ಕೇಂದ್ರಗಳನ್ನು ಸ್ಥಾಪನೆ ಮಾಡಲಾಗುವುದು. ವಾಹನಗಳನ್ನು ಗುಜರಿಗೆ ಹಾಕುವ ಪ್ರಕ್ರಿಯೆಯಲ್ಲೂ ಕೇಂದ್ರ ಸರ್ಕಾರ ಖಾಸಗಿ ಕ್ಷೇತ್ರಕ್ಕೆ ನೆರವು ನೀಡಲಿದೆ. ಹಳೇ ವಾಹನಗಳಿಗೆ ಹಸಿರು ಶುಲ್ಕ ವಿಧಿಸಲು ಸರ್ಕಾರ ನಿರ್ಧರಿಸಿದೆ ಎಂದು ಸಚಿವ ಗಡ್ಕರಿ ವಿವರಿಸಿದರು.

**ಉದ್ಯಮಕ್ಕೆ ಉತ್ತೇಜನ:** ಹೊಸ ವಾಹನ ನೀತಿಯಿಂದ ಆಟೋ ಕ್ಷೇತ್ರ ಹಾಗೂ ಇದನ್ನು ಅವಲಂಬಿಸಿ ಬದುಕುತ್ತಿರುವ ಲಕ್ಷಾಂತರ ಮಂದಿಗೆ ಪ್ರಯೋಜನ ಆಗಲಿದೆ. ಹಳೆಯ ವಾಹನಗಳ ಬಳಕೆ

ಕಡಿಮೆ ಆದರೆ ಪರಿಸರ ಮಾಲಿನ್ಯ ಪ್ರಮಾಣದಲ್ಲೂ ಇಳಿಕೆ ಕಂಡು ಬರಲಿದೆ. ವಾಹನಗಳ ಸರಾಸರಿ ಮೈಲೇಜ್ ಹೆಚ್ಚಾಗುವ ಕಾರಣ ತೈಲ ಬಳಕೆಯ ಪ್ರಮಾಣದಲ್ಲೂ ಇಳಿಕೆ ಕಂಡುಬರಲಿದೆ. ಪ್ರಸ್ತುತ ರೂ.4.5 ಲಕ್ಷ ಕೋಟಿ ಇರುವ ಆಟೋ ಉದ್ಯಮ ಮುಂದಿನ ದಿನಗಳಲ್ಲಿ ರೂ.10 ಲಕ್ಷ ಕೋಟಿಗೆ ಏರಿಕೆ ಆಗಲಿದೆ. ಈ ಕ್ಷೇತ್ರದಲ್ಲಿ ಲಕ್ಷಾಂತರ ಹೊಸ ಉದ್ಯೋಗಗಳು ಸೃಷ್ಟಿಯಾಗಲಿವೆ ಎಂದು ಸಚಿವ ಗಡ್ಕರಿ ಮಾಹಿತಿ ನೀಡಿದರು.

ಆಧಾರ: ವಿಜಯವಾಣಿ, ದಿನಾಂಕ: 08.03.2021

## 33. ಬಡವರಿಗೆ 50 ಸಾವಿರ ಕೋಟಿ ಉಳಿತಾಯ

ಅಗ್ಗದ ದರದಲ್ಲಿ ಚಿಕಿತ್ಸೆ ಒದಗಿಸುವ 'ಆಯುಷ್ಮಾನ್ ಭಾರತ್'ನ ಆರೋಗ್ಯ ಸೇವೆ ಯೋಜನೆಗಳು ಮತ್ತು ಅಗ್ಗದ ದರದಲ್ಲಿ ಔಷಧಗಳನ್ನು ಒದಗಿಸುವ 'ಜನೌಷಧ' ಕೇಂದ್ರಗಳಿಂದಾಗಿ ದೇಶದ ಬಡಜನರಿಗೆ ಈವರೆಗೆ ರೂ.50,000 ಕೋಟಿ ಉಳಿತಾಯವಾಗಿದೆ ಎಂದು ಪ್ರಧಾನಿ ನರೇಂದ್ರ ಮೋದಿ ಹೇಳಿದರು.

ಶಿಲ್ಲಾಂಗ್‌ನಲ್ಲಿ ದೇಶದ 7,500ನೇ ಜನೌಷಧ ಕೇಂದ್ರವನ್ನು ವರ್ಚುವಲ್ ಕಾರ್ಯಕ್ರಮದ ಮೂಲಕ ಉದ್ಘಾಟಿಸಿ ಮಾತನಾಡಿದ ಮೋದಿ, "ಮಾರ್ಚ್ 1 ರಿಂದ 7ರವರೆಗೆ ದೇಶಾದ್ಯಂತ ಜನೌಷಧ ವಾರ ಎಂದು ಆಚರಿಸಿದ್ದೇವೆ. ದೇಶದ ಉದ್ದಗಲಕ್ಕೂ ಅತ್ಯಂತ ಕಡಿಮೆ ದರದಲ್ಲಿ ಜನಸಾಮಾನ್ಯರಿಗೆ ಅಗತ್ಯ ಔಷಧಗಳನ್ನು ಜನೌಷಧ ಕೇಂದ್ರಗಳು ಪೂರೈಸುತ್ತವೆ." ಎಂದು ಹೇಳಿದರು. "ಆರು ವರ್ಷಗಳ ಹಿಂದೆ ದೇಶಾದ್ಯಂತ ಅಗ್ಗದ ಜೆನೆರಿಕ್ ಔಷಧ ದೊರೆಯುವ 100 ಮಳಿಗೆಗಳು ಕೂಡ ಇರಲಿಲ್ಲ. ನಮ್ಮ ಸರ್ಕಾರ ಜನೌಷಧ ಮಳಿಗೆ ಆರಂಭಿಸಿದ ಬಳಿಕ ಬಡವರಿಗೆ ಬಹಳ ಪ್ರಯೋಜನವಾಗಿದೆ. ದೇಶಾದ್ಯಂತ ಒಟ್ಟು 10 ಸಾವಿರ ಮಳಿಗೆಗಳನ್ನು ಸ್ಥಾಪಿಸುವುದು ನಮ್ಮ ಗುರಿ," ಎಂದು ಹೇಳಿದರು.

"ಅಗ್ಗದ ಔಷಧಗಳಿಂದಾಗಿ ಕಡುಬಡವರಿಗೆ ಆಗುತ್ತಿರುವ ಉಳಿತಾಯ ವಾರ್ಷಿಕ ರೂ.3,600 ಕೋಟಿ ನಷ್ಟಿದೆ. ಸುಮಾರು 1.5 ಕೋಟಿ ಜನರು ಈ ಮಳಿಗೆಗಳಲ್ಲಿ ಔಷಧಗಳನ್ನು ಖರೀದಿ ಮಾಡಿದ್ದಾರೆ. ಪಾರಂಪರಿಕ ಔಷಧ ಪದ್ಧತಿಗಳಿಗೂ ಜನೌಷಧಿ ಕೇಂದ್ರಗಳಲ್ಲಿ ಆದ್ಯತೆ ನೀಡಲಾಗಿದೆ. ಸುಮಾರು 75 ಆಯುಷ್ ಔಷಧಗಳು ಇಲ್ಲಿ ಲಭ್ಯವಿದೆ. ದೇಶದ ವಿವಿಧೆಡೆ 1,000 ಜನೌಷಧ ಮಳಿಗೆಗಳನ್ನು ಮಹಿಳೆಯರು ನಡೆಸುತ್ತಿರುವುದು ಆತ್ಮನಿರ್ಭರ ಭಾರತಕ್ಕೆ ಪುಷ್ಟಿ ನೀಡಿದೆ. ಜನೌಷಧ ಜನನಿ ಮಿಷನ್ ಅಡಿಯಲ್ಲಿ ಈವರೆಗೆ ಕೈಗೆಟುಕುವ ದರದಲ್ಲಿ 11 ಕೋಟಿ ಸ್ಯಾನಿಟರಿ ನ್ಯಾಪ್‌ಕಿನ್‌ಗಳನ್ನು ಮಾರಾಟ ಮಾಡಲಾಗಿದೆ." ಎಂದು ಪ್ರಧಾನಿ ವಿವರಿಸಿದರು.

"ದೇಶವು 75ನೇ ಸ್ವಾತಂತ್ರ್ಯೋತ್ಸವ ಆಚರಿಸುವ ವೇಳೆಗೆ ಅಂದರೆ 2022ರ ಆಗಸ್ಟ್ 15ರ ಒಳಗೆ 75 ಜನೌಷಧಿ ಮಳಿಗೆಗಳನ್ನು ಹೊಂದಿರುವ 75 ಜಿಲ್ಲೆಗಳನ್ನು ಗುರುತಿಸುವಂತೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಅಧಿಕಾರಿಗಳಿಗೆ ನಿರ್ದೇಶನ ನೀಡಲಾಗಿದೆ," ಎಂದು ಮೋದಿ ತಿಳಿಸಿದರು.

ಕರ್ನಾಟಕದ ಮಂಗಳೂರು, ಹಿಮಾಚಲ ಪ್ರದೇಶದ ಶಿಮ್ಲಾ, ಮಧ್ಯಪ್ರದೇಶದ ಭೋಪಾಲ್, ಗುಜರಾತ್‌ನ ಅಹಮದಾಬಾದ್ ಮತ್ತು ದಿಯುನ ಮಾರುತಿನಗರಗಳ ಆಯ್ದ ಫಲಾನುಭವಿಗಳ ಜೊತೆಗೆ ಪ್ರಧಾನಿ ಈ ಸಂದರ್ಭದಲ್ಲಿ ಸಂವಾದ ನಡೆಸಿದರು.

**ಇಸಿಜಿ ಸೇವೆ ನೀಡಿದ ಡಾ. ಕಾಮತ್‌ಗೆ ಶ್ಲಾಘನೆ:** 'ಜನೌಷಧ ಜನೋಪಯೋಗಿ' ಎನ್ನುವ ಘೋಷವಾಕ್ಯ ನೀಡಿದ ಮಂಗಳೂರಿನ ವೈದ್ಯ ಡಾ.ಪದ್ಮನಾಭ ಕಾಮತ್ ಅವರನ್ನು ಪ್ರಧಾನಿ ನರೇಂದ್ರ ಮೋದಿ ಅಭಿನಂದಿಸಿದರು.

ಬ್ರಹ್ಮಾವರದ ಜನೌಷಧ ಕೇಂದ್ರದಲ್ಲಿ ಆಯೋಜಿಸಲಾಗಿದ್ದ ವರ್ಚುವಲ್ ಸಂವಾದದಲ್ಲಿ ಬ್ರಹ್ಮಾವರದ ಜನೌಷಧ ಕೇಂದ್ರದ ಮಾಲೀಕ ಸುಂದರ ಪೂಜಾರಿ ಮೂಡುಕುಕ್ಕಡೆ, ಫಲಾನುಭವಿ ಸುಧೀರ್ ಪೂಜಾರಿ ಹಾಗೂ ಮಂಗಳೂರಿನ ವೈದ್ಯ ಡಾ. ಪದ್ಮನಾಭ ಕಾಮತ್ ಜೊತೆ ಪ್ರಧಾನಿ ಸಂವಾದ ಮಾತುಕತೆ ನಡೆಸಿದರು.

“ನಾನು ಜನೌಷಧ ಅಭಿಯಾನವನ್ನು 3–4 ವರ್ಷ ಹಿಂದೆ ‘ಜನೌಷಧ ಜನೋಪಯೋಗಿ’ ಹೆಸರಿನಲ್ಲಿ ಆರಂಭಿಸಿದೆ. ರಾತ್ರಿ ವೇಳೆ ಹಳ್ಳಿ ಪ್ರದೇಶಗಳಲ್ಲಿ ಯಾರಿಗಾದರೂ ಹೃದಯಾಘಾತ ಸಂಭವಿಸಿದರೆ, ಅವರಿಗೆ ಇಸಿಜಿ ಮಾಡುವುದಕ್ಕೆ ಸಮಸ್ಯೆಯಾಗುತ್ತಿತ್ತು. ಅದಕ್ಕಾಗಿ ಜನೌಷಧ ಕೇಂದ್ರದಲ್ಲಿ ಇಸಿಜಿ ಯಂತ್ರಗಳನ್ನು ಅಳವಡಿಸಿದೆ. ಇದಕ್ಕೆ ಬಹಳಷ್ಟು ನಿಂದನೆಗಳನ್ನು ಎದುರಿಸಿದೆ. ಬಹಳಷ್ಟು ಜನರು ವೈದ್ಯರಾಗಿ ಜನೌಷಧ ಕೇಂದ್ರದೊಂದಿಗೆ ಯಾಕೆ ಸೇರಿದ್ದೀರಿ ಎಂದು ಅಪಹಾಸ್ಯ ಮಾಡಿದರು. ಆದರೆ ನನಗೆ ಜನರ ಕಷ್ಟ ಗೊತ್ತಿದೆ. ಅದಕ್ಕಾಗಿ ಈ ಕೆಲಸವನ್ನು ಮಾಡಿದ್ದೇನೆ. ಈಗ 6 ಜಿಲ್ಲೆಗಳಲ್ಲಿ 21 ಇಸಿಜಿ ಯಂತ್ರಗಳನ್ನು ಜನೌಷಧ ಕೇಂದ್ರದಲ್ಲಿ ಅಳವಡಿಸಿದ್ದೇನೆ. ಇದರ ಫಲಾನುಭವಿಗಳು ಬಹಳ ಮಂದಿ ಇದ್ದಾರೆ. ಇದರಿಂದಾಗಿ ನೂರಕ್ಕೂ ಅಧಿಕ ಹೃದಯಾಘಾತ ಪ್ರಕರಣಗಳನ್ನು ಪತ್ತೆ ಹಚ್ಚಿದ್ದೇವೆ,” ಎಂದು ಡಾ.ಪದ್ಮನಾಭ ಕಾಮತ್ ಪ್ರಧಾನಮಂತ್ರಿ ನರೇಂದ್ರ ಮೋದಿಯವರಿಗೆ ವಿವರಿಸಿದರು.

ಬಳಿಕ ಡಾ.ಕಾಮತ್ ಅವರನ್ನು ಅಭಿನಂದಿಸಿದ ಪ್ರಧಾನಿ ಮೋದಿ, “ನೀವು ಕನ್ನಡ ಮಾತನಾಡುವವರು. ಆದರೆ ಹಿಂದಿಯಲ್ಲಿ ಉತ್ತಮ ಘೋಷವಾಕ್ಯವನ್ನು ನೀಡಿದ್ದಿರಿ. ಜನೌಷಧ ಕೇಂದ್ರಗಳನ್ನು ಇಸಿಜಿ ಕೇಂದ್ರಗಳನ್ನಾಗಿ ಮಾಡಿರುವುದು ಇಲ್ಲಿ ಈ ಕಾರ್ಯಕ್ರಮ ನೋಡುತ್ತಿರುವ ಹಲವಾರು ಜನೌಷಧ ಕೇಂದ್ರಗಳ ಮಾಲೀಕರಿಗೆ ಹೊಸ ಆಲೋಚನೆ ಸೃಷ್ಟಿಸುವುದಕ್ಕೆ ಪ್ರೇರಣೆಯಾಗಲಿದೆ. ಇದರ ಪ್ರೇರಣೆಯಿಂದ ಹಲವಾರು ವೈದ್ಯರ ಸಹಕಾರದೊಂದಿಗೆ ಜನೌಷಧ ಕೇಂದ್ರವನ್ನು ಜನೋಪಯೋಗಿ ಕೇಂದ್ರವನ್ನಾಗಿ ಮಾಡಲಿದ್ದಾರೆ,” ಎಂದರು.

ಡಾ. ಪದ್ಮನಾಭ ಕಾಮತ್ ಅವರಿಗೆ ಜನೌಷಧ ಚಿಕಿತ್ಸಕ ಪ್ರಶಸ್ತಿ, ಜನೌಷಧ ಸಾರಥಿ ಪ್ರಶಸ್ತಿಯನ್ನು ಬೆಂಗಳೂರಿನ ಗೌತಮ್ ಕುಮಾರ್ ಜೈನ್, ಮಹಿಳಾ ಉದ್ಯಮಿಗಳು ನಡೆಸುವ ಕೇಂದ್ರಗಳಿಗೆ ನೀಡುವ ಜನೌಷಧ ಜ್ಯೋತಿ ಪುರಸ್ಕಾರವನ್ನು ಉತ್ತರಪ್ರದೇಶದ ಮುರ್ದಾಬಾದ್ ಜನೌಷಧ ಕೇಂದ್ರದ ಮಾಲಕಿ ವಿನೀತಾ ಜೈನ್ ಅವರಿಗೆ ನೀಡಲಾಯಿತು. ತಮಿಳುನಾಡು ತಿರುವನಂತಪುರದ ಜನೌಷಧ ಕೇಂದ್ರದ ಬಾಲಮುರಳಿ ಅವರಿಗೆ ದೇಶದಲ್ಲೇ ಅತಿಹೆಚ್ಚು ವಹಿವಾಟು ನಡೆಸಿದ ಕೇಂದ್ರ ಎಂದು ಗುರುತಿಸಲಾಯಿತು. ದೇಶದ 7500ನೇ ಪ್ರಧಾನಮಂತ್ರಿ ಜನೌಷಧ ಕೇಂದ್ರವನ್ನು ವರ್ಚುವಲ್ ವೇದಿಕೆ ಮೂಲಕ ಪ್ರಧಾನಿ ಉದ್ಘಾಟಿಸಿದರು.

ಪ್ರಧಾನಿ ವಿಡಿಯೋ ಕಾನ್ಫರೆನ್ಸ್‌ಗೆ ಮುನ್ನ ಕೇಂದ್ರ ಸಚಿವ ಡಿ.ವಿ. ಸದಾನಂದಗೌಡ ಅವರು ಕಾರ್ಯಕ್ರಮ ಉದ್ಘಾಟಿಸಿದರು. ಸಚಿವ ಕೋಟ ಶ್ರೀನಿವಾಸ ಪೂಜಾರಿ, ಸಂಸದೆ ಶೋಭಾ ಕರಂದ್ಲಾಜೆ, ಶಾಸಕ ರಘುಪತಿ ಭಟ್, ರಾಜ್ಯ ಹಿಂದುಳಿದ ವರ್ಗಗಳ ಆಯೋಗದ ಅಧ್ಯಕ್ಷ ಕೆ. ಜಯಪ್ರಕಾಶ್ ಹೆಗ್ಡೆ ಜಿಪಂ ಅಧ್ಯಕ್ಷ ದಿನಕರ ಬಾಬು, ಉಪಾಧ್ಯಕ್ಷ ಶೀಲಾ ಕೆ. ಶೆಟ್ಟಿ ಅಪರ ಜಿಲ್ಲಾಧಿಕಾರಿ ಸದಾಶಿವ ಪ್ರಭು, ಬ್ರಹ್ಮಾವರ ತಹಸೀಲ್ದಾರ್ ಕಿರಣ್ ಗೌರಯ್ಯ, ಉಡುಪಿ ಜನೌಷಧ ಕೇಂದ್ರಗಳ ನೋಡಲ್ ಅಧಿಕಾರಿ ಅನಿಲ್ ಉಪಸ್ಥಿತರಿದ್ದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ: 08.03.2021

## 34. ಸ್ವಾತಂತ್ರ್ಯದ ಅಮೃತ ಮಹೋತ್ಸವ

ಸ್ವಾತಂತ್ರ್ಯೋತ್ಸವದ ಅಮೃತ ಮಹೋತ್ಸವ (75 ವರ್ಷ) ಆಚರಣೆಗೆ ಪ್ರಧಾನಿ ನರೇಂದ್ರ ಮೋದಿ ಮಾರ್ಚ್ 12 ಚಾಲನೆ ನೀಡಲಿದ್ದಾರೆ.

ಈ ಕುರಿತು ಮಾಹಿತಿ ನೀಡಿದ ಕೇಂದ್ರದ ಸಂಸ್ಕೃತಿ ಮತ್ತು ಪ್ರವಾಸೋದ್ಯಮ ಸಚಿವ ಪ್ರಹ್ಲಾದ್ ಸಿಂಗ್ ಪಟೇಲ್, “ದೇಶಾದ್ಯಂತ ವರ್ಷವಿಡೀ ‘ಆಜಾದಿ ಕಾ ಅಮೃತ್ ಮಹೋತ್ಸವ’ ಹೆಸರಿನಲ್ಲಿ ಕಾರ್ಯಕ್ರಮಗಳು ನಡೆಯಲಿವೆ. ಸರಬಮತಿ ಆಶ್ರಮದಿಂದ ಅಹಮದಾಬಾದ್‌ನ ದಂಡಿವರೆಗೆ ಆಯೋಜಿಸಿರುವ 387 ಕಿ.ಮೀ ಪಾದಯಾತ್ರೆಗೆ ಹಸಿರು ನಿಶಾನೆ ತೋರುವ ಮೂಲಕ ನರೇಂದ್ರ ಮೋದಿ ಅವರು ಈ ಬೃಹತ್ ಕಾರ್ಯಕ್ರಮಗಳಿಗೆ ಚಾಲನೆ ನೀಡಲಿದ್ದಾರೆ,” ಎಂದು ತಿಳಿಸಿದರು.

"ಸಬರಮತಿಯಿಂದ ಆರಂಭವಾಗುವ ಪಾದಯಾತ್ರೆಯು 25 ದಿನಗಳ ಕಾಲ ಸಾಗಲಿದೆ. ಇದು 1930ರಲ್ಲಿ ಮಹಾತ್ಮ ಗಾಂಧೀಜಿ ಉಪ್ಪಿನ ಮೇಲಿನ ತೆರಿಗೆ ವಿರೋಧಿಸಿ ನಡೆಸಿದ ದಂಡಿ ಸತ್ಯಾಗ್ರಹವನ್ನು ನೆನಪಿಸಲಿದೆ. ಅಂದು ಗಾಂಧಿ ಜೊತೆ 81 ಹೋರಾಟಗಾರರು ಪಾದಯಾತ್ರೆ ಮಾಡಿದ್ದು, ಅಂತೆಯೇ ಈ ಬಾರಿಯೂ 81 ಮಂದಿ ಯಾತ್ರೆಯಲ್ಲಿ ಪಾಲ್ಗೊಳ್ಳಲಿದ್ದಾರೆ," ಎಂದು ಅವರು ತಿಳಿಸಿದರು.

"ಅಮೃತ ಮಹೋತ್ಸವದ ಸರಣಿ 2021ರ ಮಾರ್ಚ್ 12 ರಿಂದ ಆರಂಭಗೊಂಡು 2022ರ ಆಗಸ್ಟ್ 15ರವರೆಗೆ ನಡೆಯಲಿದೆ. ಈ ನಡುವಿನ 75 ವಾರಗಳ ಕಾಲ ವಿಭಿನ್ನ ಕಾರ್ಯಕ್ರಮಗಳನ್ನು ಆಯೋಜಿಸಲಾಗಿದೆ. ಸಂಸ್ಕೃತಿ ಸಚಿವಾಲಯದ ಅಡಿಯಲ್ಲಿ ಪ್ರತಿ ವಾರ ಕಾರ್ಯಕ್ರಮ ಆಯೋಜಿಸಲಾಗಿದ್ದು, ದೇಶದ ಪ್ರತಿ ನಾಗರಿಕನು ಪಾಲ್ಗೊಳ್ಳುವಂತೆ ರೂಪಿಸಲಾಗಿದೆ," ಎಂದು ಹೇಳಿದರು.

**ರಾಜ್ಯದ ಮೂರು ಕಡೆ ಉದ್ಘಾಟನೆ:** ಕರ್ನಾಟಕದ ವಿಧುರಾಶ್ವತ್ಥ, ಶಿವಪುರ, ಕಿತ್ತೂರುಗಳಲ್ಲಿಯೂ ಸ್ವಾತಂತ್ರ್ಯೋತ್ಸವದ ಅಮೃತ ಮಹೋತ್ಸವದ ಉದ್ಘಾಟನಾ ಕಾರ್ಯಕ್ರಮಗಳು ನಡೆಯಲಿವೆ. ಚಿಕ್ಕಬಳ್ಳಾಪುರ ಜಿಲ್ಲೆಯ ವಿಧುರಾಶ್ವತ್ಥದಲ್ಲಿ ನಡೆಯುವ ಕಾರ್ಯಕ್ರಮದಲ್ಲಿ ರಾಜ್ಯಪಾಲ ವಜುಭಾಯಿ ವಾಲಾ ಹಾಗೂ ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ ಭಾಗವಹಿಸಲಿದ್ದಾರೆ. ಮಂಡ್ಯ ಜಿಲ್ಲೆಯ ಮದ್ದೂರು ತಾಲ್ಲೂಕಿನ ಶಿವಪುರದ ಧ್ವಜ ಸತ್ಯಾಗ್ರಹ ಸೌಧದಲ್ಲಿ ನಿರಂತರ 75 ವಾರಗಳ ಕಾಲ ಕಾರ್ಯಕ್ರಮಗಳನ್ನು ನಿರ್ಧರಿಸಲಾಗಿದೆ. ಸ್ವಾತಂತ್ರ್ಯ ಹೋರಾಟದ ಘಟನೆಗಳ ಕುರಿತು ಜಿಲ್ಲೆಯಾದ್ಯಂತ ಕಾರ್ಯಕ್ರಮ ಹಮ್ಮಿಕೊಳ್ಳಲು ನಡೆಸಲು ಬೆಳಗಾವಿ ಜಿಲ್ಲಾಡಳಿತ ತೀರ್ಮಾನಿಸಿದೆ.

ಆಧಾರ: ವಿಜಯ ಕರ್ನಾಟಕ, ದಿನಾಂಕ: 12.03.2021

## 35. ಎಲ್ಲ ಬ್ಯಾಂಕ್ ಖಾಸಗೀಕರಣ ಇಲ್ಲ

ಬ್ಯಾಂಕಿಂಗ್ ಖಾಸಗೀಕರಣ ವಿರೋಧಿಸಿ ನಾನಾ ಕಡೆಗಳಲ್ಲಿ ಪ್ರತಿಭಟನೆಗಳು ನಡೆದಿರುವ ಬೆನ್ನಲ್ಲೇ, ಎಲ್ಲ ಸಾರ್ವಜನಿಕ ಬ್ಯಾಂಕ್‌ಗಳನ್ನೂ ಖಾಸಗೀಕರಣಗೊಳಿಸುವ ಪ್ರಸ್ತಾಪ ಇಲ್ಲ ಎಂದು ಹಣಕಾಸು ಸಚಿವೆ ನಿರ್ಮಲಾ ಸೀತಾರಾಮನ್ ಸ್ಪಷ್ಟಪಡಿಸಿದ್ದಾರೆ.

"ಎಲ್ಲ ಬ್ಯಾಂಕ್‌ಗಳನ್ನು ಖಾಸಗೀಕರಣಗೊಳಿಸಲಾಗುವುದಿಲ್ಲ. ಉದ್ಯೋಗಿಗಳ ಸಂಬಳ, ಪಿಂಚಣಿ ಸಹಿತ ಅವರ ಹಿತ ರಕ್ಷಿಸಲಾಗುವುದು" ಎಂದು ಹಣಕಾಸು ಸಚಿವೆ ತಿಳಿಸಿದರು.

ಸುದ್ದಿಗೋಷ್ಠಿಯಲ್ಲಿ ಮಾತನಾಡಿದ ಅವರು "ಬ್ಯಾಂಕ್ ಉದ್ಯೋಗಿಗಳು ಯಾವುದೇ ಆತಂಕ ಪಡುವ ಅಗತ್ಯ ಇಲ್ಲ. ಎಲ್ಲ ಸಾರ್ವಜನಿಕ ಬ್ಯಾಂಕ್‌ಗಳು ಖಾಸಗೀಕರಣವಾಗಲಿವೆ ಎನ್ನುವುದು ಸರಿಯಲ್ಲ, ಸಮಗ್ರವಾಗಿ ಪರಾಮರ್ಶೆ ನಡೆಸಿದ ನಂತರವಷ್ಟೇ ಬ್ಯಾಂಕ್‌ಗಳ ಖಾಸಗೀಕರಣ ನಿರ್ಧಾರವನ್ನು ಕೈಗೊಳ್ಳಲಾಗಿದೆ. ದೇಶದ ಪ್ರಗತಿ ಮತ್ತು ಉದ್ಯೋಗಿಗಳ ಹಿತಾಸಕ್ತಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ಈ ತೀರ್ಮಾನಕ್ಕೆ ಬರಲಾಗಿದೆ. ಸಾರ್ವಜನಿಕ ಬ್ಯಾಂಕ್‌ಗಳನ್ನು ಬಲಪಡಿಸಲು, ಅವುಗಳ ದಕ್ಷತೆಯನ್ನು ಹೆಚ್ಚಿಸಲು ಖಾಸಗೀಕರಣಗೊಳಿಸಲಾಗುತ್ತಿದೆ," ಎಂದು ವಿವರಿಸಿದರು.

ಬ್ಯಾಂಕ್ ನೌಕರರ ಒಕ್ಕೂಟಗಳು ಸಾರ್ವಜನಿಕ ಬ್ಯಾಂಕ್‌ಗಳ ಖಾಸಗೀಕರಣವನ್ನು ವಿರೋಧಿಸಿ ಎರಡು ದಿನಗಳ ಮುಷ್ಕರ ನಡೆಸಿದ್ದು, ಕೇಂದ್ರದ ನಡೆಯನ್ನು ತೀವ್ರವಾಗಿ ಖಂಡಿಸಿವೆ.

ಕಾಂಗ್ರೆಸ್ ನಾಯಕ ರಾಹುಲ್ ಗಾಂಧಿ, "ಸರ್ಕಾರ ಲಾಭದಲ್ಲಿರುವ ಸಾರ್ವಜನಿಕ ಉದ್ದಿಮೆಗಳನ್ನು ಖಾಸಗೀಕರಣಗೊಳಿಸುತ್ತಿದ್ದು, ದೇಶದ ಹಣಕಾಸು ಭದ್ರತೆಯೊಂದಿಗೆ ರಾಜಿ ಮಾಡಿಕೊಳ್ಳುತ್ತಿದೆ. ನಾನು ಮುಷ್ಕರ ನಿರತ ಬ್ಯಾಂಕ್ ಉದ್ಯೋಗಿಗಳ ಪರ ನಿಲ್ಲುತ್ತೇನೆ." ಎಂದು ಟ್ವೀಟ್ ಮಾಡಿದ್ದರು. ಇದಕ್ಕೆ ಪ್ರತಿಕ್ರಿಯಿಸಿದ ಸಚಿವೆ, "ಕಾಂಗ್ರೆಸ್ ನಾಯಕರು ಬಹುಶಃ ತಮ್ಮ ಹೇಳಿಕೆಗಳನ್ನೂ ಹೊರಗಿನವರಿಗೆ ಹೊರಗುತ್ತಿಗೆ ನೀಡಿರಬೇಕು. ಇಂಥ ಎರಡು ಸಾಲುಗಳ ಹೇಳಿಕೆಗಳಿಂದ ಪ್ರಯೋಜನವಿಲ್ಲ. ರಾಹುಲ್ ಗಾಂಧಿ ಅವರು ಮೊದಲು ಅಧ್ಯಯನ ಮಾಡಿ, ವಿಷಯವನ್ನು ತಿಳಿದುಕೊಂಡು ನಂತರ ಗಂಭೀರ ಚರ್ಚೆಯಲ್ಲಿ ತೊಡಗಿಸಿಕೊಳ್ಳಬೇಕು" ಎಂದು ತಿರುಗೇಟು ನೀಡಿದರು.

"ರಾಹುಲ್ ಗಾಂಧಿ ಅವರು ಈಗೇಕೆ ಲಾಭ–ನಷ್ಟದ ಬಗ್ಗೆ ಮಾತನಾಡುತ್ತಾರೆ. 'ಉಗಿದು ಓಡುವ' ತಂತ್ರವನ್ನು ಏಕೆ ಅನುಸರಿಸುತ್ತಿದ್ದಾರೆ. ರಾಹುಲ್ ಗಾಂಧಿ ಅವರ ಅಜ್ಜಿ ಬ್ಯಾಂಕ್‌ಗಳನ್ನು ರಾಷ್ಟ್ರೀಕರಣಗೊಳಿಸಿರಬಹುದು. ಆದರೆ ಬ್ಯಾಂಕ್‌ಗಳ ನಷ್ಟವನ್ನು ರಾಷ್ಟ್ರೀಕರಣ ಮಾಡಿದ್ದು ಯುಪಿಎ ಅವಧಿಯಲ್ಲಿ ಭ್ರಷ್ಟಾಚಾರದ ರಾಷ್ಟ್ರೀಕರಣವೂ ಆಗ ನಡೆಯಿತು," ಎಂದು ಸಚಿವೆ ತರಾಟೆಗೆ ತೆಗೆದುಕೊಂಡರು.

ಆಧಾರ: ವಿಜಯ ಕರ್ನಾಟಕ, ದಿನಾಂಕ: 17.03.2021

## 36. ಒಂದು ದೇಶ, ಒಂದು ಎಲೆಕ್ಷನ್ ಮತ್ತಷ್ಟು ಬಲ

ಸಂವಿಧಾನಕ್ಕೆ ಕೆಲವೊಂದು ತಿದ್ದುಪಡಿಗಳನ್ನು ತರುವ ಮೂಲಕ ಲೋಕಸಭೆ ಮತ್ತು ರಾಜ್ಯ ವಿಧಾನ ಸಭೆಗಳಿಗೆ ದೇಶಾದ್ಯಂತ ಒಂದೇ ಹಂತದಲ್ಲಿ ಚುನಾವಣೆ ನಡೆಸುವುದು ಸೂಕ್ತ ಎಂದು ಸಂಸದೀಯ ಸಮಿತಿಯೊಂದು ಶಿಫಾರಸ್ಸು ಮಾಡಿದೆ.

ಬಿಜೆಪಿ ನೇತೃತ್ವದ ಎನ್‌ಡಿಎ ಸರ್ಕಾರ 'ಒಂದು ದೇಶ, ಒಂದು ಚುನಾವಣೆ'ಯ ಪರವಾಗಿ ಮಾತನಾಡುತ್ತಿರುವ ಹಂತದಲ್ಲೇ ಸಲ್ಲಿಕೆಯಾಗಿ, ಸಂಸತ್ತಿನ ಉಭಯ ಸದನಗಳಲ್ಲಿ ಮಂಡಿಸಲ್ಪಟ್ಟಿರುವ ವರದಿಯು ಸರ್ಕಾರದ ಕನಸಿಗೆ ನೀರೆರೆದಿದೆ.

**ಲಾಭ ಏನು:**

- ಸರ್ಕಾರಗಳಿಗೆ ಚುನಾವಣಾ ವೆಚ್ಚ ಭಾರಿ ತಗ್ಗುತ್ತದೆ
- ಪದೇ ಪದೇ ನೀತಿ ಸಂಹಿತೆ ತಾಪತ್ರಯ ಇಲ್ಲ
- ಪಕ್ಷಗಳ ಚುನಾವಣಾ ವೆಚ್ಚವೂ ಭಾರೀ ಇಳಿಕೆ
- ಮಾನವ ಸಂಪನ್ಮೂಲ ವ್ಯರ್ಥ ತಡೆಯಬಹುದು
- ಜನರಲ್ಲಿ ಚುನಾವಣೆ ಬಗ್ಗೆ ಆಸಕ್ತಿ ಮೂಡಬಹುದು

ಜೊತೆಗೆ, ಏಕಕಾಲಕ್ಕೆ ಚುನಾವಣೆ ನಡೆಸುವುದರಿಂದ ಆಗುವ ಹಲವು ಲಾಭಗಳ ಕುರಿತು ಸಮಿತಿ ವಿವರವಾಗಿ ಮಾಹಿತಿ ನೀಡಿದೆ.

ನಮ್ಮ ದೇಶ ಒಂದಲ್ಲಾ ಒಂದು ಚುನಾವಣೆ ಮೂಲಕ ವರ್ಷವಿಡೀ ಚುನಾವಣೆಯ ಗುಂಗಿನಲ್ಲೇ ಇರುತ್ತದೆ. ಇದು ಅಭಿವೃದ್ಧಿ ಕಾರ್ಯಗಳಿಗೆ ನಾನಾ ರೀತಿಯಲ್ಲಿ ಅಡ್ಡಿ ಮಾಡುತ್ತದೆ. ಇದನ್ನು ಗಮನದಲ್ಲಿಟ್ಟುಕೊಂಡು, ಸಂವಿಧಾನಕ್ಕೆ ಕೆಲವೊಂದು ಬದಲಾವಣೆ ತರುವ ಮೂಲಕ ಏಕಕಾಲಕ್ಕೆ ಚುನಾವಣೆ ನಡೆಸಬಹುದು. ಹಾಗೆಂದು ಈ ಪರಿಕಲ್ಪನೆ ಭಾರತಕ್ಕೆ ಹೊಸದೇನಲ್ಲ, 1952, 1957, 1962ರಲ್ಲಿ ಏಕಕಾಲಕ್ಕೆ ಲೋಕಸಭೆ ಮತ್ತು ವಿಧಾನಸಭೆಗೆ ಚುನಾವಣೆ ನಡೆದಿದ್ದವು. ಆದರೆ, 1968, 1969ರಲ್ಲಿ ಕೆಲವೊಂದು ರಾಜ್ಯಗಳಲ್ಲಿ ವಿಧಾನ ಸಭೆ ಅವಧಿ ಪೂರ್ವ ವಿಸರ್ಜನೆಯಾದ ಕಾರಣ, ನಂತರದ ದಿನಗಳಲ್ಲಿ ಏಕಕಾಲಕ್ಕೆ ಚುನಾವಣೆ ಸಾಧ್ಯವಾಗಲಿಲ್ಲ ಎಂದು ವರದಿ ಹೇಳಿದೆ.

**ಬದಲಾವಣೆ ಅಗತ್ಯ:** ಲೋಕಸಭೆ, ವಿಧಾನಸಭೆ ಮತ್ತು ಸ್ಥಳೀಯ ಸಂಸ್ಥೆಗಳಿಗೆ ನಿಗದಿತ ಅವಧಿ ವ್ಯವಸ್ಥೆ ಜಾರಿಗೆ ಸಂವಿಧಾನಕ್ಕೆ ಕೆಲವೊಂದು ಬದಲಾವಣೆ ತರಬೇಕಾಗಿ ಬರಬಹುದು. ಜೊತೆಗೆ ಲೋಕಸಭೆ ಮತ್ತು ವಿಧಾನ ಸಭೆ ಅವಧಿಯನ್ನು ಹೊಂದಾಣಿಕೆ ಮಾಡಲು ಕೆಲವೊಂದು ವಿಧಾನ ಸಭೆಯ ಅವಧಿ ಕಡಿತ ಅಥವಾ ಕೆಲವೊಂದು ವಿಧಾನ ಸಭೆಯ ಅವಧಿ ಹೆಚ್ಚಳ ಮಾಡಬೇಕಾಗಿ ಬರಬಹುದು. ಇದನ್ನು ರಾಜಕೀಯ ಪಕ್ಷಗಳ ಸಹಮತದೊಂದಿಗೆ ಜಾರಿಗೆ ತರಬಹುದು ಎಂದು ಶಿಫಾರಸ್ಸಿನಲ್ಲಿ ಹೇಳಲಾಗಿದೆ.

ಲೋಕಸಭೆ, ವಿಧಾನಸಭೆ ಮತ್ತು ಸ್ಥಳೀಯ ಸಂಸ್ಥೆಗಳಿಗೆ ಏಕಕಾಲಕ್ಕೆ ಚುನಾವಣೆ ನಡೆಸುವುದರಿಂದ, ಚುನಾವಣೆ ನಡೆಸಲು ಸರ್ಕಾರಗಳು ಮಾಡಬೇಕಾದ ಭಾರೀ ವೆಚ್ಚ ಉಳಿಸಬಹುದು.

ರಾಜಕೀಯ ಪಕ್ಷಗಳು ಕೂಡ ಚುನಾವಣಾ ವೆಚ್ಚದ ಹೊರೆಯಿಂದ ಪಾರಾಗಬಹುದು. ಚುನಾವಣೆಗೆ ಬಳಕೆಯಾಗುವ ಭಾರೀ ಮಾನವ ಸಂಪನ್ಮೂಲವನ್ನು ಬೇರೆ ಉದ್ದೇಶಗಳಿಗೆ ಸದ್ಬಳಕೆ ಮಾಡಬಹುದು. ಜೊತೆಗೆ ಪದೇ ಪದೇ ಚುನಾವಣೆಗಳಿಂದಾಗಿ ನೀತಿ ಸಂಹಿತೆ ಜಾರಿಯಾಗಿ ಈ ಅವಧಿಯಲ್ಲಿ ಅಭಿವೃದ್ಧಿ ಕಾರ್ಯ ಕುಂಠಿತಗೊಳ್ಳುತ್ತದೆ. ದೇಶದ ಜನರು ಚುನಾವಣೆ ಬಗ್ಗೆ ತಾತ್ಸಾರ ಮನೋಭಾವನೆ ಹೊಂದುವಂತಾಗಿದೆ. 5 ವರ್ಷಕ್ಕೊಮ್ಮೆ ಚುನಾವಣೆ ನಡೆದರೆ, ಜನರಲ್ಲಿ ಮರಳಿ ಚುನಾವಣೆ ಕುರಿತು ಆಸಕ್ತಿ ಮೂಡಬಹುದು ಮತ್ತು ಹೆಚ್ಚಿನ ಸಂಖ್ಯೆಯಲ್ಲಿ ಅವರ ಪಾಲ್ಗೊಳ್ಳುವಿಕೆಯನ್ನು ನಿರೀಕ್ಷಿಸಬಹುದು ಎಂದು ವರದಿಯಲ್ಲಿ ಹೇಳಲಾಗಿದೆ.

**ಹಲವು ಶಿಫಾರಸ್ಸು:** 1999ರಲ್ಲಿ ಅಂದಿನ ಕಾನೂನು ಆಯೋಗದ ಮುಖ್ಯಸ್ಥ ಬಿ.ಪಿ.ಜೀವನ್ ರೆಡ್ಡಿ ನೇತೃತ್ವದ ಸಮಿತಿ ಮತ್ತು ಕೆಲ ವರ್ಷಗಳ ಹಿಂದೆ ನ್ಯಾ. ಬಿ.ಎಸ್. ಚೌಹಾಣ್ ನೇತೃತ್ವದ ಕಾನೂನು ಆಯೋಗಗಳು ಒಂದು ದೇಶ, ಒಂದು ಚುನಾವಣೆಯ ಕುರಿತು ಸರ್ಕಾರಕ್ಕೆ ಶಿಫಾರಸ್ಸು ಮಾಡಿದ್ದವು.

ಆಧಾರ: ಕನ್ನಡಪ್ರಭ, ದಿನಾಂಕ: 17.03.2021

## 37. ಹಳೆ ಕಾರು ಕೊಟ್ಟರೆ ಡಿಸ್ಕೌಂಟ್

ನೂತನ ಸ್ವಯಂಪ್ರೇರಿತ ವಾಹನ ಗುಜರಿ ನೀತಿಯನ್ನು ರಾಜ್ಯಸಭೆಯಲ್ಲಿ ಕೇಂದ್ರ ಸಾರಿಗೆ ಸಚಿವ ನಿತಿನ್ ಗಡ್ಕರಿ ಅವರು ಅನಾವರಣಗೊಳಿಸಿದ್ದು, ಇದರ ಅಡಿಯಲ್ಲಿ ಹಳೆಯ ವಾಹನಗಳನ್ನು ಕೊಡುವವರಿಗೆ ಹೊಸ ವಾಹನ ಖರೀದಿಸುವಾಗ ಶೇ.5ರಷ್ಟು ಡಿಸ್ಕೌಂಟ್ ದರ ಸೇರಿದಂತೆ ಹಲವು ಅನುಕೂಲಗಳನ್ನು ಕಲ್ಪಿಸಲಾಗಿದೆ. ಆದರೆ ಹಳೆ ವಾಹನಗಳ ಕುರಿತ ನಿಯಮಾವಳಿಗಳನ್ನು ಉಲ್ಲಂಘಿಸಿದರೆ ದಂಡ ಮತ್ತು ವಿಳಂಬ ಶುಲ್ಕವನ್ನು ತೆರಬೇಕಾಗುತ್ತದೆ.

ಕರಡು ಅಧಿಸೂಚನೆಯ ಪ್ರಕಾರ, ಮುಂಬರುವ ಅಕ್ಟೋಬರ್‌ನಿಂದ 15 ವರ್ಷಕ್ಕೂ ಹಳೆಯ ಕಾರಿನ ನೋಂದಣಿ ನವೀಕರಿಸುವಾಗ ರೂ.5,000 ಶುಲ್ಕ ಪಾವತಿಸಬೇಕು. ಅಂದರೆ ಈಗಿನ ಶುಲ್ಕಕ್ಕಿಂತ 8 ಪಟ್ಟು ಹೆಚ್ಚು. ಹಳೆಯ ಬೈಕ್‌ಗೆ ನೋಂದಣಿ ನವೀಕರಣ ಶುಲ್ಕವು ಈಗಿನ ರೂ.300 ಗಳಿಂದ ರೂ.1,000ಗೆ ಹಾಗೂ 15 ವರ್ಷ ಹಳೆಯ ಬಸ್‌ನ ಫಿಟ್ನೆಸ್ ನವೀಕರಣ ಶುಲ್ಕ ರೂ.12,500 ಗೆ ಹೆಚ್ಚಳವಾಗುವ ಸಾಧ್ಯತೆ ಇದೆ. ಖಾಸಗಿ ವಾಹನ ನೋಂದಣಿ ವಿಳಂಬಕ್ಕೆ ಮಾಸಿಕ ರೂ. 300–500 ದಂಡದ ಪ್ರಸ್ತಾಪವು ಇದೆ. ವಾಣಿಜ್ಯೋದ್ದೇಶದ ವಾಹನಗಳಿಗೆ ಸಂಬಂಧಿಸಿ ಫಿಟ್ನೆಸ್ ಸರ್ಟಿಫಿಕೇಟ್ ಪಡೆಯುವುದರಲ್ಲೂ ವಿಳಂಬಿಸಿದರೆ ದಿನಕ್ಕೆ ರೂ.50ಗಳಂತೆ ದಂಡ ಕಟ್ಟಬೇಕಾಗುತ್ತದೆ. ಈ ಸಂಬಂಧ ಕರಡು ಅಧಿಸೂಚನೆಯನ್ನು ಸಾರಿಗೆ ಸಚಿವಾಲಯ ಬಿಡುಗಡೆಗೊಳಿಸಿದೆ.

ಈ ನೀತಿಯಿಂದ ಜನತೆಗೆ ಹೊಸ ವಾಹನ ಖರೀದಿಯಲ್ಲಿ ದರ ಕಡಿತದ ಅನುಕೂಲ ಸಿಕ್ಕಿದರೆ, ಪರಿಸರ ಮಾಲಿನ್ಯ ನಿಯಂತ್ರಣ ದೃಷ್ಟಿಯಿಂದಲೂ ವರದಾನವಾಗಲಿದೆ. ಆಟೋಮೊಬೈಲ್ ವಲಯಕ್ಕೂ ಪುಷ್ಟಿ ನೀಡಲಿದ್ದು, ಉದ್ಯೋಗ ಸೃಷ್ಟಿಗೂ ಕಾರಣವಾಗಲಿದೆ ಎಂದು ರಾಜ್ಯಸಭೆಗೆ ತಿಳಿಸಿದರು.

ರಾಜ್ಯ ಸರ್ಕಾರಗಳಿಗೂ ವಾಹನ ಗುಜರಿ ನೀತಿಯಡಿಯಲ್ಲಿ ಹಳೆ ವಾಹನ ಕೊಟ್ಟು ಹೊಸ ವೈಯಕ್ತಿಕ ವಾಹನ ಕೊಡುವವರಿಗೆ ರಸ್ತೆ ತೆರಿಗೆಯಲ್ಲಿ ಶೇ.25ರಷ್ಟು ಹಾಗೂ ವಾಣಿಜ್ಯ ವಾಹನಗಳಿಗೆ ಶೇ.15ರಷ್ಟು ರಿಬೇಟ್ ನೀಡಲು ಸಲಹೆ ನೀಡಲಾಗಿದೆ ಎಂದರು.

2021–22ರ ಕೇಂದ್ರ ಬಜೆಟ್‌ನಲ್ಲಿ ಸ್ವಯಂ ಪ್ರೇರಿತ ವಾಹನ ಗುಜರಿ ನೀತಿಯನ್ನು ಘೋಷಿಸಲಾಗಿತ್ತು. ಇದರ ಪ್ರಕಾರ ವೈಯಕ್ತಿಕ ವಾಹನಗಳಿಗೆ 20 ವರ್ಷ ಆದಾಗ ಮತ್ತು ವಾಣಿಜ್ಯ ವಾಹನಗಳಿಗೆ 15 ವರ್ಷ ಆದಾಗ ಭರ್ತಿಯಾದಾಗ ಫಿಟ್ನೆಸ್ ಟೆಸ್ಟ್ ಅಗತ್ಯ. ಸ್ಕ್ರ್ಯಾಪಿಂಗ್ ಸರ್ಟಿಫಿಕೇಟ್ ಹೊಂದಿರುವವರಿಗೆ ಶೇ.5ರ ಡಿಸ್ಕೌಂಟ್ ನೀಡಲು ವಾಹನ ಉತ್ಪಾದಕರಿಗೆ ಸಲಹೆ ಮಾಡಲಾಗಿದೆ ಎಂದು ಸಚಿವ ಗಡ್ಕರಿ ತಿಳಿಸಿದರು.

**ಬರಲಿವೆ ಅಧಿಕೃತ ವಾಹನ ಗುಜರಿ ಕೇಂದ್ರ:** ರಸ್ತೆ ಸಾರಿಗೆ ಮತ್ತು ಹೆದ್ದಾರಿ ಇಲಾಖೆಯು ದೇಶಾದ್ಯಂತ ನೋಂದಾಯಿತ ವಾಹನ ಗುಜರಿ ಕೇಂದ್ರಗಳನ್ನು (ಆರ್‌ವಿಎಸ್‌ಎಫ್) ತೆರೆಯಲಿದೆ.

ಸಾರ್ವಜನಿಕ ಮತ್ತು ಖಾಸಗಿ ವಲಯಗಳು ಇಂಥ ಕೇಂದ್ರಗಳನ್ನು ತೆರೆಯಲಿ, ಸಾರಿಗೆ ಇಲಾಖೆ ಉತ್ತೇಜನ ನೀಡಲಿದೆ. ವಾಹನ ಗುಜರಿ ನೀತಿಯ ಪರಿಣಾಮ ಜಿಎಸ್‌ಟಿ ಸಂಗ್ರಹದಲ್ಲಿ ಸುಮಾರು ರೂ. 40,000 ಕೋಟಿ ಏರಿಕೆಯಾಗುವ ಸಾಧ್ಯತೆ ಇದೆ. ಗುಜರಾತ್‌ನ ಅಲಂಗ್ ಸೇರಿದಂತೆ ಹಲವೆಡೆಗಳಲ್ಲಿ ಸಮಗ್ರ ವಾಹನ ಗುಜರಿ ಕೇಂದ್ರಗಳ ಸ್ಥಾಪನೆಗೂ ಯತ್ನಿಸಲಾಗುತ್ತಿದೆ. ಅದೇ ರೀತಿ ಪಿಪಿಪಿ ಮಾದರಿಯಲ್ಲಿ ಫಿಟ್ನೆಸ್ ಸೆಂಟರ್‌ಗಳನ್ನು ತೆರೆಯಲಾಗುವುದು. ಈ ವ್ಯವಸ್ಥೆಗಳಿಗೆ ರೂ.10,000 ಕೋಟಿ ಹೂಡಿಕೆ ನಿರೀಕ್ಷಿಸಲಾಗಿದ್ದು, 35,000 ಉದ್ಯೋಗ ಸೃಷ್ಟಿಯಾಗಲಿದೆ ಎಂದರು.

**ವೈಯಕ್ತಿಕ ವಾಹನಗಳ ಉದ್ದೇಶಿತ ನೋಂದಣಿ ಹಾಗೂ ನವೀಕರಣ ಶುಲ್ಕ**

| ವಾಹನ | ನೋಂದಣಿ ಶುಲ್ಕ (ರೂ.) | ನವೀಕರಣ ಶುಲ್ಕ (ರೂ.) |
|---|---|---|
| ಮೋಟಾರ್ ಸೈಕಲ್ | 300 | 1,000 |
| ತ್ರಿಚಕ್ರ ವಾಹನ | 600 | 2,500 |
| ಎಲ್‌ಎಂವಿ (ಕಾರು/ಜೀಪ್) | 600 | 5,000 |

**ಫಿಟ್ನೆಸ್ ಸರ್ಟಿಫಿಕೇಟ್‌ಗೆ ಉದ್ದೇಶಿತ ಶುಲ್ಕ ಮತ್ತು ನವೀಕರಣ ಶುಲ್ಕ**

| ವಾಹನ | ನೋಂದಣಿ ಶುಲ್ಕ (ರೂ.) | ನವೀಕರಣ ಶುಲ್ಕ (ರೂ.) |
|---|---|---|
| ಮೋಟಾರ್ ವಾಹನ | 500 | 1,000 |
| ತ್ರಿಚಕ್ರ ವಾಹನ | 1,000 | 3,500 |
| ಟ್ಯಾಕ್ಸಿ ಕ್ಯಾಬ್ | 1,000 | 7,000 |
| ಮಧ್ಯಮ ಪ್ರಯಾಣಿಕರ ವಾಹನ | 1,300 | 10,000 |
| ಭಾರಿ ಸರಕು, ಪ್ರಯಾಣಿಕರ ವಾಹನ | 1,500 | 12,500 |

ಆಧಾರ: ವಿಜಯ ಕರ್ನಾಟಕ, ದಿನಾಂಕ: 19.03.2021

## 38. ದೇಶದ ಮೊದಲ ಅಂತರರಾಜ್ಯ ನದಿ ಜೋಡಣೆಗೆ ಒಪ್ಪಂದ

ದೇಶದ ಮೊದಲ ಅಂತರರಾಜ್ಯ ನದಿ ಜೋಡಣೆ ಯೋಜನೆ ಕೆನ್–ಬೇಟ್ವಾಗೆ ಕೇಂದ್ರ ಜಲಶಕ್ತಿ ಸಚಿವಾಲಯ ಹಾಗೂ ಉತ್ತರಪ್ರದೇಶ–ಮಧ್ಯಪ್ರದೇಶ ಸರ್ಕಾರಗಳ ನಡುವೆ ಒಪ್ಪಂದವೇರ್ಪಟ್ಟಿದೆ.

ಜಲಶಕ್ತಿ ಸಚಿವ ಗಜೇಂದ್ರ ಸಿಂಗ್ ಶೆಖಾವತ್, ಉತ್ತರ ಪ್ರದೇಶ ಮುಖ್ಯಮಂತ್ರಿ ಯೋಗಿ ಆದಿತ್ಯನಾಥ ಹಾಗೂ ಮಧ್ಯಪ್ರದೇಶ ಮುಖ್ಯಮಂತ್ರಿ ಶಿವರಾಜ ಸಿಂಗ್ ಚೌಹಾಣ್ ಅವರು ನದಿ ಜೋಡಣೆ ಯೋಜನೆಗೆ ಅಂಕಿತ ಹಾಕಿದರು. ಹೆಚ್ಚುವರಿ ನೀರು ಹೊಂದಿರುವ ನದಿಗಳಿಂದ ನೀರಿನ ಕೊರತೆ ಇರುವ ಪ್ರದೇಶಗಳಲ್ಲಿರುವ ನದಿಗಳಿಗೆ ನೀರು ಹರಿಸುವ ಸಲುವಾಗಿ ನದಿ ಜೋಡಣೆ ಮಾಡಬೇಕು ಎಂದು ಅಟಲ್ ಬಿಹಾರಿ ವಾಜಪೇಯಿ ಅವರು ಪ್ರಧಾನಿಯಾಗಿದ್ದಾಗ ಕನಸು ಕಂಡಿದ್ದರು. ಆಗ ರೂಪುಗೊಂಡ ಯೋಜನೆಗಳಲ್ಲಿ ಕೆನ್–ಬೇಟ್ವಾ ಜೋಡಣೆ ಕೂಡ ಒಂದು.

**ಯೋಜನೆ ಏನು:** ಮಧ್ಯಪ್ರದೇಶದಲ್ಲಿ ಕೆನ್ ಹಾಗೂ ಬೇಟ್ವಾ ನದಿ ಹರಿಯುತ್ತವೆ. ಈ ಪೈಕಿ ಕೆನ್ ನದಿಯಲ್ಲಿ ನೀರಿನ ಹರಿವು ಚೆನ್ನಾಗಿದೆ. ಅದನ್ನು ನೀರಿನ ಕೊರತೆ ಹೊಂದಿರುವ ಬೇಟ್ವಾ ನದಿಗೆ 230

ಕಿ.ಮೀ ಕಾಂಕ್ರೀಟ್ ನಾಲೆ ಹಾಗೂ ಧೌಧನ್ ಅಣೆಕಟ್ಟೆ ನಿರ್ಮಿಸಿ ಹರಿಸಲಾಗುತ್ತದೆ. ಇದರಿಂದ 10.62 ಲಕ್ಷ ಹೆಕ್ಟೇರ್ ಜಮೀನಿಗೆ ನೀರು 62 ಲಕ್ಷ ಮಂದಿಗೆ ಕುಡಿವ ನೀರು, 103 ಮೆ.ವ್ಯಾ ಜಲ ವಿದ್ಯುತ್ ಸಿಗಲಿದೆ.

**ಪ್ರಯೋಜನಗಳು:–**

- 10.62 ಲಕ್ಷ ಹೆಕ್ಟೇರ್ ಬೇಟ್ವಾ–ಕೆನ್ ಜೋಡಣೆಯಿಂದ ಇಷ್ಟು ಜಮೀನಿಗೆ ನೀರಾವರಿ ಸೌಲಭ್ಯ
- 62 ಲಕ್ಷ ಜನ ನದಿ ಜೋಡಣೆಯಿಂದ 62 ಲಕ್ಷ ಜನರಿಗೆ ಕುಡಿಯುವ ನೀರು ಸೌಲಭ್ಯ
- 103 ಮೆ.ವ್ಯಾ. ಯೋಜನೆಯಡಿ 10.3 ಮೆ.ವ್ಯಾ. ಜಲ ವಿದ್ಯುತ್ ಉತ್ಪಾದನೆ
- 230 ಕಿ.ಮೀ ಕಾಂಕ್ರೀಟ್ ನಾಲೆ ನಿರ್ಮಾಣ
- 8 ಜಿಲ್ಲೆ ಮಧ್ಯಪ್ರದೇಶದ 8 ಜಿಲ್ಲೆಗಳಿಗೆ ಕುಡಿಯುವ ನೀರು
- 4 ಜಿಲ್ಲೆ ಉತ್ತರ ಪ್ರದೇಶದ 4 ಜಿಲ್ಲೆಗಳಿಗೆ ಕುಡಿಯುವ ನೀರು.

**'ಮಳೆನೀರು ಹಿಡಿದಿಡಿ'** ಅಭಿಯಾನಕ್ಕೆ ಚಾಲನೆ

ಮುಂಗಾರು ಸುರಿಸುವ ಮಳೆ ನೀರನ್ನು ಕೆರೆಗಳ ಮೂಲಕ ಹಿಡಿದಿಟ್ಟುಕೊಳ್ಳುವ 'ಜಲ ಶಕ್ತಿ ಅಭಿಯಾನ: ಮಳೆ ನೀರು ಹಿಡಿದಿಡಿ' ಅಭಿಯಾನಕ್ಕೆ ಪ್ರಧಾನಿ ನರೇಂದ್ರ ಮೋದಿ ಚಾಲನೆ ನೀಡಿದರು. ವರ್ಚುವಲ್ ಆಗಿ ನಡೆದ ಕಾರ್ಯಕ್ರಮ ಉದ್ದೇಶಿಸಿ ಮಾತನಾಡಿದ ಮೋದಿ, ಮುಂಗಾರು ಆರಂಭವಾಗುವವವರೆಗೂ ಮಹಾತ್ಮ ಗಾಂಧಿ ಗ್ರಾಮೀಣ ಉದ್ಯೋಗ ಖಾತ್ರಿ (ನರೇಗಾ) ಯೋಜನೆಯ ಪ್ರತಿ ಪೈಸೆ ಹಣವನ್ನೂ ಇದೇ ಅಭಿಯಾನಕ್ಕೆ ಬಳಸುವಂತೆ ಕರೆ ನೀಡಿದರು. ಮಳೆ ನೀರು ಹಿಡಿದಿಡಿ ಅಭಿಯಾನವನ್ನು ಮಾರ್ಚ್ 22 ರಿಂದ ನವೆಂಬರ್ 30ರವರೆಗೆ ದೇಶವ್ಯಾಪಿ ಕೆರೆಗಳ ಹೂಳು ತೆಗೆದು, ಅದರಲ್ಲಿ ಮಳೆ ನೀರು ಸಂಗ್ರಹಿಸುವ ಮೂಲಕ ನಡೆಸಲು ಉದ್ದೇಶಿಸಲಾಗಿದೆ.

ಆಧಾರ: ಕನ್ನಡಪ್ರಭ, ದಿನಾಂಕ: 23.03.2021

## 39. 45 ವರ್ಷ ಮೇಲ್ಪಟ್ಟವರಿಗೆ ಏ.1 ರಿಂದ ಲಸಿಕೆ

45 ವರ್ಷ ಮೇಲ್ಪಟ್ಟ ವಯಸ್ಸಿನ ಎಲ್ಲರಿಗೂ ಏಪ್ರಿಲ್ 1 ರಿಂದ ಕೋವಿಡ್–19ರ ಲಸಿಕೆ ನೀಡಲು ಕೇಂದ್ರ ಸರ್ಕಾರ ನಿರ್ಧರಿಸಿದೆ. ದೇಶದ 17 ರಾಜ್ಯಗಳಲ್ಲಿ ಕೋವಿಡ್–19 ಎರಡನೇ ಅಲೆ ವ್ಯಾಪಕವಾಗುತ್ತಿರುವ ಹಿನ್ನೆಲೆಯಲ್ಲಿ ಕೇಂದ್ರ ಸಚಿವ ಸಂಪುಟ ಈ ನಿರ್ಧಾರ ಕೈಗೊಂಡಿದೆ.

ಸಚಿವ ಸಂಪುಟ ಸಭೆಯ ಬಳಿಕ ಈ ವಿಷಯ ತಿಳಿಸಿದ ಸಚಿವ ಪ್ರಕಾಶ್ ಜಾವಡೇಕರ್, '45 ವರ್ಷ ಮೇಲ್ಪಟ್ಟ ಎಲ್ಲ ಅರ್ಹರು ಕೂಡಲೇ ನೋಂದಾಯಿಸಿಕೊಂಡು, ಲಸಿಕೆ ಪಡೆಯಬೇಕು' ಎಂದರು.

ಆಧಾರ: ಉದಯವಾಣಿ, ದಿನಾಂಕ: 24.03.2021

## 40. ಮಿತಿ ರದ್ಧತಿ ಕೇಂದ್ರ ಸಮ್ಮತಿ

ಮೀಸಲಾತಿಗಾಗಿ ಒತ್ತಾಯಿಸುತ್ತಿರುವ ಜಾತಿಗಳ ಪಾಲಿಗೆ ಕೇಂದ್ರ ಸರ್ಕಾರ ಶುಭ ಸುದ್ದಿ ಕೊಟ್ಟಿದೆ. ಸಂವಿಧಾನದ 102ನೇ ತಿದ್ದುಪಡಿಯು ರಾಜ್ಯಗಳ ಮೀಸಲಾತಿ ಘೋಷಣೆ ಅಧಿಕಾರವನ್ನು ನಿರಾಕರಿಸಿಲ್ಲ ಎಂದು ಅದು ಸುಪ್ರೀಂಕೋರ್ಟ್‌ನಲ್ಲಿ ವಾದ ಮಂಡಿಸಿದೆ. ಅಂದರೆ, ರಾಜ್ಯ ಸರ್ಕಾರಗಳು ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದ ಸಮುದಾಯಗಳಿಗೆ ಮೀಸಲಾತಿಯನ್ನು ಘೋಷಿಸಬಹುದು ಎಂದು ಹೇಳಿದೆ.

ಕರ್ನಾಟಕದ ಪರ ವಾದ ಮಂಡಿಸಿದ ಹಿರಿಯ ವಕೀಲ ಮುಕುಲ್ ರೋಹಟಗಿ ಅವರು, ಮೀಸಲಾತಿ ಮಿತಿಯನ್ನು ತೆಗೆಯುವುದು ಸೂಕ್ತ ಎಂದು ಹೇಳಿದ್ದಾರೆ.

ಮಹಾರಾಷ್ಟ್ರದ ಮರಾಠಾ ಮೀಸಲಾತಿ ವಿಚಾರಕ್ಕೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರದ ಪರ ವಾದ ಮಂಡಿಸಿದ ಹೆಚ್ಚುವರಿ ಸಾಲಿಸಿಟರ್ ಜನರಲ್ ತುಷಾರ್ ಮೆಹ್ತಾ ಅವರು ಶೇ.16ರಷ್ಟು ಮೀಸಲಾತಿ ನೀಡಿರುವ ಅಲ್ಲಿನ ರಾಜ್ಯ ಸರ್ಕಾರದ ಕ್ರಮ ಸಾಂವಿಧಾನಿಕವಾದದ್ದು ಎಂದಿದ್ದಾರೆ. ಜೊತೆಗೆ, ಈಗಾಗಲೇ ಅಟಾರ್ನಿ ಜನರಲ್ ಅವರು ಹೇಳಿರುವ ಹಾಗೆ ಸಂವಿಧಾನದ 102ನೇ ತಿದ್ದುಪಡಿಯು ರಾಜ್ಯಗಳ ಮೀಸಲು ಘೋಷಣೆ ಅಧಿಕಾರವನ್ನು ಕಿತ್ತುಕೊಂಡಿಲ್ಲ ಎಂದು ಹೇಳಿದ್ದಾರೆ.

**ರಾಜ್ಯಗಳ ಒಕ್ಕೊರಲ ಆಗ್ರಹ:** ಮರಾಠಾ ಮೀಸಲಾತಿ ಸಂಬಂಧ ಸದ್ಯ ಸುಪ್ರೀಂ ಕೋರ್ಟ್‌ನ ಐವರು ನ್ಯಾಯಮೂರ್ತಿಗಳ ಸಾಂವಿಧಾನಿಕ ಪೀಠ ವಿಚಾರಣೆ ನಡೆಸುತ್ತಿದೆ. ವಿಶೇಷವೆಂದರೆ, ಮೀಸಲಾತಿ ಮಿತಿ ತೆಗೆಯುವ ವಿಚಾರದಲ್ಲಿ, ಹೆಚ್ಚುಕಡಿಮೆ ಬಹುತೇಕ ರಾಜ್ಯಗಳು ಒಂದೇ ಅಭಿಪ್ರಾಯ ವ್ಯಕ್ತಪಡಿಸಿವೆ.

ಕೆಲವು ರಾಜ್ಯಗಳು ಮೀಸಲಾತಿ ಅಧಿಕಾರ ರಾಜ್ಯಗಳ ಪಾಲಿಗೆ ಇರಬೇಕು. ಜೊತೆಗೆ ಶೇ.50ರ ಮಿತಿ ಇರಬಾರದು. ಇದಕ್ಕೆ ಸಂವಿಧಾನದ ಮನ್ನಣೆ ಇಲ್ಲ ಎಂದು ವಾದಿಸಿದ್ದವು.

**ಶೇ.50ರ ಮಿತಿ ಸಲ್ಲದು:** ಕರ್ನಾಟಕ ಪರ ವಾದ ಮಂಡಿಸಿದ ಹಿರಿಯ ವಕೀಲ ಮುಕುಲ್ ರೋಹಟಗಿ ಅವರು ಶೇ.50ರ ಮಿತಿ ಸಲ್ಲದು ಎಂದು ಹೇಳಿದರು. ಈ ಸಂದರ್ಭದಲ್ಲಿ ಪರಿಚ್ಛೇದ 371(ಜೆ) ಅಡಿಯಲ್ಲಿ ಹೈದರಾಬಾದ್ ಕರ್ನಾಟಕಕ್ಕೆ ನೀಡಲಾಗಿರುವ ಮೀಸಲಾತಿಯನ್ನು ಗಮನಕ್ಕೆ ತಂದರು. ಶೇ.50ರ ಮಿತಿ ಬೇಕೋ ಅಥವಾ ಬೇಡವೇ ಎಂಬುದನ್ನು ಮರುವಿಮರ್ಶೆ ಮಾಡಲು 371(ಜೆ) ಕೂಡಾ ಅತ್ಯಂತ ಪ್ರಮುಖವಾದದ್ದು ಎಂದರು.

ಎಂದೆಂದಿಗೂ ಶೇ.50ರ ಮಿತಿಯನ್ನು ದೇಶ ಮೀರುವುದಿಲ್ಲ ಎಂದು ಹೇಳಲು ಆಗುವುದಿಲ್ಲ. ಹೀಗಂತ ಸಂವಿಧಾನವೂ ಹೇಳಿಲ್ಲ. ಜನರ ಆಶೋತ್ತರಗಳು, ಜನಸಂಖ್ಯೆ ಬದಲಾಗುತ್ತಿದ್ದು, ಇಡೀ ದೇಶವನ್ನು ಸಮಗ್ರವಾಗಿ ನೋಡಬೇಕಾಗುತ್ತದೆ. ಈ ಕಾರಣದಿಂದಾಗಿ ಇಂದಿರಾ ಸಹಾನಿ ತೀರ್ಪನ್ನು ನಾವು ಮರುಪರಿಶೀಲಿಸಬೇಕಾಗಿದೆ ಎಂದು ರೋಹಟಗಿ ವಾದ ಮಂಡಿಸಿದರು.

**ಮಿತಿ ಬೇಡವೆಂದ ರಾಜ್ಯಗಳು**

1. ಜಾರ್ಖಂಡ್
2. ರಾಜಸ್ಥಾನ
3. ಆಂಧ್ರ ಪ್ರದೇಶ
4. ತಮಿಳುನಾಡು
5. ಛತ್ತೀಸ್‌ಗಡ
6. ಕರ್ನಾಟಕ
7. ಕೇರಳ
8. ಉತ್ತರಾಖಂಡ
9. ಹರಿಯಾಣ
10. ಮೇಘಾಲಯ

ಆಧಾರ: ಉದಯವಾಣಿ, ದಿನಾಂಕ: 25.03.2021

## 41. 15 ನಿಮಿಷದಲ್ಲಿ ಆಂಬ್ಯುಲೆನ್ಸ್ ಸ್ಥಳಕ್ಕೆ

ರಾಷ್ಟ್ರೀಯ ಹೆದ್ದಾರಿಗಳಲ್ಲಿ ಅಪಘಾತವಾದಾಗ ಸಕಾಲದಲ್ಲಿ ಆಂಬ್ಯುಲೆನ್ಸ್ ಸಿಗದೆ ಪ್ರಾಣಹಾನಿ ಆಗುತ್ತಿರುವುದನ್ನು ತಪ್ಪಿಸಲು ಕೇಂದ್ರ ಸರ್ಕಾರ ಕ್ರಮ ತೆಗೆದುಕೊಂಡಿದೆ. ಇನ್ನು ಮುಂದೆ ಹೆದ್ದಾರಿಗಳಲ್ಲಿ ಅಪಘಾತ ಸಂಭವಿಸಿದಾಗ 15 ನಿಮಿಷಗಳ ಒಳಗೆ ಘಟನಾಸ್ಥಳಕ್ಕೆ ಅಂಬ್ಯುಲೆನ್ಸ್ ತಲುಪುವಂತೆ ನಿಯಮ

ರೂಪಿಸಲಾಗಿದ್ದು, ತಪ್ಪಿದಲ್ಲಿ ಹೆದ್ದಾರಿ ನಿರ್ಮಾಣ–ನಿರ್ವಹಣೆ ಹೊಣೆ ಹೊತ್ತ ಗುತ್ತಿಗೆದಾರರನಿಗೆ ದುಬಾರಿ ದಂಡ ಬೀಳಲಿದೆ. ಕೇಂದ್ರ ರಸ್ತೆ ಸಾರಿಗೆ ಮತ್ತು ಹೆದ್ದಾರಿ ಸಚಿವಾಲಯ ಈ ಸಂಬಂಧ ಆದೇಶ ಹೊರಡಿಸಿದೆ. ಅದರ ಪ್ರಕಾರ 60 ಕಿ.ಮೀಗೆ ಒಂದರಂತೆ ದಿನದ 24 ಗಂಟೆ 3 ಪಾಳಿಯಲ್ಲಿ ಆಂಬ್ಯುಲೆನ್ಸ್ ಸೇವೆ ಲಭ್ಯವಿರಲಿದೆ. ಭಾರತದಲ್ಲಿ ನಿತ್ಯ ಸರಾಸರಿ 414 ಮಂದಿ ಹಾಗೂ ಗಂಟೆಗೆ 17 ಜನ ಅಪಘಾತಗಳಲ್ಲಿ ಮೃತಪಡುತ್ತಿದ್ದಾರೆ. ಕೇಂದ್ರದ ವರದಿ ಪ್ರಕಾರ 2019ರಲ್ಲಿ ದೇಶಾದ್ಯಂತ 4,80,652 ರಸ್ತೆ ಅಪಘಾತ ಸಂಭವಿಸಿದ್ದು, 1,51,113 ಮಂದಿ ಪ್ರಾಣ ಕಳೆದುಕೊಂಡಿದ್ದಾರೆ. ಗೋಲ್ಡನ್ ಅವರ್‌ನಲ್ಲಿ ವೈದ್ಯಕೀಯ ಚಿಕಿತ್ಸೆ ಸಿಗದೆ ಬಹುತೇಕ ಗಾಯಾಳುಗಳ ಜೀವ ಹೋಗಿದೆ.

ಅಪಘಾತಗಳಲ್ಲಿ ಗಾಯಗೊಂಡವರ ಪ್ರಾಣ ರಕ್ಷಣೆ ಪ್ರಯಾಣಿಕರ ಸುರಕ್ಷತೆ, ಸುಗಮ ಸಂಚಾರ ವ್ಯವಸ್ಥೆಗಾಗಿ ಕೇಂದ್ರ ಸರ್ಕಾರ ಇನ್ಸಿಡೆಂಟ್ ಮ್ಯಾನೇಜ್‌ಮೆಂಟ್ ಸರ್ವೀಸಸ್ (ಐಎಂಎಸ್) ಎಂಬ ಹೊಸ ನೀತಿ ಜಾರಿಗೆ ತಂದಿದೆ. ಹೆದ್ದಾರಿಗಳಲ್ಲಿ ಕಡ್ಡಾಯವಾಗಿ ಆಂಬ್ಯುಲೆನ್ಸ್ ಸೇವೆ, ಗಸ್ತು ವಾಹನ, ಕ್ರೇನ್‌ಗಳ ಸೇವೆ ಒದಗಿಸಲು ಆದೇಶಿಸಿದೆ. ಹೆದ್ದಾರಿ ನಿರ್ಮಾಣದ 3 ವರ್ಷ ಅಥವಾ ಅದಕ್ಕಿಂತ ಹೆಚ್ಚಿನ ಗುತ್ತಿಗೆ ಅವಧಿಯಲ್ಲಿ ಹೊಸ ನೀತಿ ಅಳವಡಿಸಿಕೊಳ್ಳುವಂತೆ ಎಲ್ಲ ರಾಜ್ಯಗಳಿಗೆ ತಿಳಿಸಿದೆ.

**ನೀತಿಯಲ್ಲಿ ಏನೇನಿದೆ? ಹೈವೇ ಆಂಬ್ಯುಲೆನ್ಸ್**

- ಅತ್ಯಾಧುನಿಕ ವೈದ್ಯಕೀಯ ಸಲಕರಣೆ, ಔಷಧ ಲಭ್ಯವಿರುವ ಆ್ಯಂಬುಲೆನ್ಸ್ ಕೊಡಬೇಕು
- 60 ಕಿ.ಮೀಗೆ (ಈ ಕಡೆ 30, ಆ ಕಡೆ 30 ಕಿ.ಮೀ.) ಒಂದು ಆಂಬ್ಯುಲೆನ್ಸ್ ವ್ಯವಸ್ಥೆ ಮಾಡಬೇಕು.
- 24 ಗಂಟೆ 3 ಪಾಳಿಯಲ್ಲಿ (8 ಗಂಟೆಗೆ ಒಂದು ಪಾಳಿ) ಆಂಬ್ಯುಲೆನ್ಸ್ ಸಿಬ್ಬಂದಿ ಕೆಲಸ ಮಾಡಬೇಕು.
- ಅಪಘಾತ ಆಗದಿದ್ದರೂ ಸಹ ಪ್ರತಿನಿತ್ಯ ಕನಿಷ್ಠ 5 ಕಿ.ಮೀ ಖಾಲಿಯಾಗಿಯಾದರೂ ಓಡಾಡಬೇಕು.
- ಸ್ಥಳೀಯ ಕಮಾಂಡ್ ಸೆಂಟರ್ ಅಥವಾ 1033ಕ್ಕೆ ಕರೆ ಮಾಡಿ ಅಪಘಾತದ ಮಾಹಿತಿ ಕೊಡಬೇಕು.

**ಹೈವೇ ಗಸ್ತು ವಾಹನ**

- ಹೆದ್ದಾರಿಗಳಲ್ಲಿ ದಿನದ 24 ಗಂಟೆ ಗಸ್ತು ವಾಹನ ತಿರುಗುವ ವ್ಯವಸ್ಥೆ ಕಡ್ಡಾಯ
- ಪ್ರಯಾಣಿಕರಿಗೆ ರಸ್ತೆ ಮಾಹಿತಿ, ಪ್ರತಿಕ್ರಿಯೆ ಹಾಗೂ ಅಪಘಾತ ಪ್ರಕರಣ ನಿರ್ವಹಣೆ
- ಟ್ರಾಫಿಕ್ ನಿರ್ವಹಣೆ ಕುರಿತು ಗಸ್ತುವಾಹನ ಸಿಬ್ಬಂದಿಗೆ ತರಬೇತಿ ಕೊಟ್ಟಿರಬೇಕು
- ವಾಹನ ಕೆಟ್ಟು ನಿಂತರೆ ರಿಪೇರಿ ಮಾಡಿಕೊಡುವಷ್ಟು ಪ್ರಾಥಮಿಕ ತರಬೇತಿ ಇರಬೇಕು.
- ವಾಹನಗಳ ಓಡಾಟಕ್ಕೆ ಅಡಚಣೆಯಾಗುವ ಘಟನೆಗಳಾಗದಂತೆ ನೋಡಿಕೊಳ್ಳಬೇಕು.
- ಅಪಘಾತ, ಪ್ರವಾಹದ ಪುನರಾವರ್ತಿತ ಪ್ರಕರಣಗಳನ್ನು ಗಮನಿಸಿ ವರದಿ ಮಾಡಬೇಕು.
- ಅಪಘಾತ ಸಂಭವಿಸಿದಾಗ ಪೊಲೀಸರು, ಆಂಬ್ಯುಲೆನ್ಸ್ ಗೆ ಮೊದಲು ತಿಳಿಸಬೇಕು.

**ಹೈವೇ ಟೋವಿಂಗ್ ಕ್ರೇನ್**

- ಆಧುನಿಕ ತಂತ್ರಜ್ಞಾನವಿರುವ 20 ಎಂಟಿ ಸಾಮರ್ಥ್ಯದ ಟೋವಿಂಗ್ ಕ್ರೇನ್ ಕೊಡಬೇಕು
- ಅಪಘಾತದ ಸ್ಥಳಕ್ಕೆ ಕರೆ ಬಂದ 30 ನಿಮಿಷದಲ್ಲಿ ತಲುಪಿ, ಅವಶೇಷ ತೆರವುಗೊಳಿಸಬೇಕು
- ವಾಹನ ಉತ್ತಮ ಸ್ಥಿತಿಯಲ್ಲಿರಬೇಕು ಹಾಗೂ 2 ವರ್ಷಕ್ಕಿಂತ ಹಳೆಯದಾಗಿರಬಾರದು
- ವಾಹನಕ್ಕೆ ಜಿಪಿಎಸ್ ಅಳವಡಿಸಿರಬೇಕು. ಒಬ್ಬ ಚಾಲಕ ಮತ್ತು ಒಬ್ಬ ಕ್ಲೀನರ್ ಇರಬೇಕು
- ಹೆದ್ದಾರಿ ಪ್ರಾಧಿಕಾರದ ನಾಮಫಲಕ ಹಾಗೂ ಸರ್ಕಾರಿ ಅಧಿಕೃತ ಬಣ್ಣ ಅಳವಡಿಸಬೇಕು.

**ಕಂಟ್ರಾಕ್ಟ್ ಹೊಣೆ**

- ನಿಗದಿತ ಸಮಯಕ್ಕೆ ಆಂಬ್ಯುಲೆನ್ಸ್ ಬರದಿದ್ದರೆ ಗುತ್ತಿಗೆದಾರನಿಗೆ ರೂ.10 ಸಾವಿರ ದಂಡ
- ತಿಂಗಳಿಗೆ 2 ಕರೆಗೆ ತಾಂತ್ರಿಕ ಕಾರಣಕ್ಕೆ ನಿಗದಿತ ಸಮಯಕ್ಕಿಂತ ವಿಳಂಬವಾಗಿ ತಲುಪಬಹುದು.
- ಸತ್ತ ಪ್ರಾಣಿ/ಪಕ್ಷಿ ಹೆದ್ದಾರಿಯಿಂದ ತೆರವುಗೊಳಿಸಿ ನಿಯಮದಂತೆ ಸೂಕ್ತ ಸ್ಥಳದಲ್ಲಿ ಹೂಳಬೇಕು.
- ಪ್ರಾಣಿ/ಪಕ್ಷಿ 2 ಗಂಟೆ ಹಾಗೂ ಅಪಘಾತ ವಾಹನಗಳನ್ನು 4 ಗಂಟೆಯಲ್ಲಿ ತೆರವುಗೊಳಿಸಬೇಕು.

ಆಧಾರ: ವಿಜಯವಾಣಿ, ದಿನಾಂಕ: 29.03.2021

## 42. ಬದಲಾವಣೆಯ ಪರ್ವ

ಕೇಂದ್ರ ವಿತ್ತ ಸಚಿವೆ ನಿರ್ಮಲಾ ಸೀತಾರಾಮನ್ ಕಳೆದ ಮುಂಗಡಪತ್ರದಲ್ಲಿ ಘೋಷಿಸಿದ್ದ ಹಲವು ಅಂಶಗಳು ಹೊಸ ಆರ್ಥಿಕ ವರ್ಷದ (2021–22) ಮೊದಲ ದಿನವಾದ ಏಪ್ರಿಲ್ 1ರಂದು ಜಾರಿಗೆ ಬರುತ್ತಿವೆ. ದೇಶವಾಸಿಗಳ ಬದುಕಿನ ಮೇಲೆ ನೇರ ಪರಿಣಾಮ ಬೀರುವ ಆದಾಯ ತೆರಿಗೆ ನಿಯಮದಿಂದ ಹಿಡಿದು ಬ್ಯಾಂಕ್ ಶಾಖೆಗಳ ಐಎಫ್ಎಸ್‌ಸಿ ಕೋಡ್‌ಗಳ ತನಕ ಮಹತ್ವದ ಬದಲಾವಣೆ ಆಗಲಿದೆ. ಈ ಪ್ರಮುಖ ಬದಲಾವಣೆಗಳ ಕಿರು ಮಾಹಿತಿ ಇಲ್ಲಿದೆ.

**ಪ್ಯಾನ್ –ಆಧಾರ್ ಲಿಂಕ್:** ಪ್ಯಾನ್ ಮತ್ತು ಆಧಾರ್ ಜೋಡಣೆಯ ವಿಸ್ತರಿತ ಗಡುವು ಮುಕ್ತಾಯವಾಗುತ್ತಿದೆ. ಏಪ್ರಿಲ್ 1 ರಿಂದ ಆಧಾರ್ ಜೋಡಣೆ ಆಗದ ಪ್ಯಾನ್ ಕೆಲಸ ಮಾಡುವುದಿಲ್ಲ. ಆಧಾರ್ ಜೋಡಿಸದೇ ಇರುವುದಕ್ಕೆ ಆದಾಯ ತೆರಿಗೆ ಕಾಯ್ದೆ ಸೆಕ್ಷನ್ 272ಬಿ ಪ್ರಕಾರ ರೂ.10,000 ದಂಡ ವಿಧಿಸಲು ಅವಕಾಶವಿದೆ.

**ಪರಿಷ್ಕೃತ ಐಟಿಆರ್ ಸಲ್ಲಿಕೆ:** ಈಗಾಗಲೇ ಸಲ್ಲಿಸಿರುವ ಆದಾಯ ತೆರಿಗೆ ರಿಟರ್ನ್ಸ್‌ನಲ್ಲಿ ದೋಷ ಇದ್ದು, ಅದನ್ನು ಪರಿಷ್ಕರಿಸಿ ಸಲ್ಲಿಸುವುದಕ್ಕೆ ಮಾರ್ಚ್ 31ರ ಗಡುವಿತ್ತು. 2019–20ರ ಐಟಿ ರಿಟರ್ನ್ ಸಲ್ಲಿಸುವುದಕ್ಕೂ ಕೊನೆಯ ದಿನ. ತಡವಾಗಿ ರಿಟರ್ನ್ ಸಲ್ಲಿಸುವುದಾದರೆ ರೂ.5 ಲಕ್ಷ ಒಳಗಿನ ಆದಾಯದವರಾದರೆ ರೂ.1,000 ಮತ್ತು ಮೇಲ್ಪಟ್ಟವರಾದರೆ ರೂ.10,000 ತನಕ ದಂಡ ಪಾವತಿಸಬೇಕು.

**ವಿಮಾನ ಟಿಕೆಟ್ ದುಬಾರಿ:** ಏರ್ ಸೆಕ್ಯೂರಿಟಿ ಫೀ (ಎಎಸ್ಎಫ್) ಹೆಚ್ಚಳಕ್ಕೆ ನಾಗರಿಕ ವಿಮಾನಯಾನ ನಿರ್ದೇಶನಾಲಯ ಸೂಚಿಸಿದ್ದು, ಏಪ್ರಿಲ್ 1 ರಿಂದ ಇದು ಚಾಲ್ತಿಗೆ ಬರಲಿದೆ. ಇದರಂತೆ, ಪ್ರಾದೇಶಿಕ ವಿಮಾನಯಾನದಲ್ಲಿ ಪ್ರಯಾಣಿಕರ ಟಿಕೆಟ್ ಮೇಲೆ ರೂ.40 ಹೆಚ್ಚಳವಾಗಿ ರೂ.200 ಮತ್ತು ಅಂತರರಾಷ್ಟ್ರೀಯ ಪ್ರಯಾಣಿಕರ ಒಂದು ಟಿಕೆಟ್ ಮೇಲೆ ರೂ.114.38 ಹೆಚ್ಚಾಗಿ ರೂ.874 ಆಗಲಿದೆ.

**ಎಲ್‌ಟಿಸಿ ಬಿಲ್ ಸಲ್ಲಿಕೆ:** ಸರ್ಕಾರಿ ನೌಕರರು ತಮ್ಮ ಲೀವ್ ಟ್ರಾವೆಲ್ ಕನ್ಸೆಷನ್ ಕ್ಯಾಷ್ ವೋಚರ್ (ಎಲ್‌ಟಿಸಿ) ಸಲ್ಲಿಸಿ ತೆರಿಗೆ ವಿನಾಯಿತಿ ಪ್ರಯೋಜನ ಪಡೆಯುವುದಕ್ಕೆ ಮಾರ್ಚ್ 31 ಕೊನೇ ದಿನ. ಸರಿಯಾದ ಫಾರ್ಮ್ಯಾಟ್‌ನಲ್ಲೇ ಇದನ್ನು ಸಲ್ಲಿಸುವುದು ಕಡ್ಡಾಯ. ಕೇಂದ್ರ ಸರ್ಕಾರ 2020ರ ಅಕ್ಟೋಬರ್‌ನಲ್ಲಿ ಘೋಷಿಸಿದ ಯೋಜನೆ ಇದು.

**ವೇತನ ವಿನ್ಯಾಸ ಬದಲು:** ಹೊಸ ವೇತನ ನೀತಿ ಮಸೂದೆ ಕಳೆದ ವರ್ಷವೇ ಸಂಸತ್ತಿನಲ್ಲಿ ಅಂಗೀಕಾರವಾಗಿದೆ. ಇದು ಜಾರಿಗೆ ಬಂದರೆ ಉದ್ಯೋಗಿಯ ವೇತನ ವಿನ್ಯಾಸ ಬದಲಾಗಲಿದೆ. ಇದರಂತೆ, ಮೂಲ ವೇತನವು ನಿವ್ವಳ ಸಿಟಿಸಿಯ ಶೇಕಡ 50 ಇರಲಿದೆ. ಉಳಿದಂತೆ ಭತ್ಯೆಗಳು ಕಡಿಮೆಯಾಗಿ, ಪಿಎಫ್ ದೇಣಿಗೆ ಮತ್ತು ಗ್ರಾಚ್ಯುಟಿ ದೇಣಿಗೆ ಹೆಚ್ಚಾಗಲಿದೆ. ನಿವೃತ್ತಿ ನಂತರದ ಬದುಕಿಗೆ ಇದು ನೆರವಾಗಲಿದೆ. ದಿನದ ಕೆಲಸ ಅವಧಿ ಈಗಿರುವ 9 ಗಂಟೆ ಬದಲಾಗಿ 12 ಗಂಟೆಗೆ ಏರಿಸಿ ವಾರಕ್ಕೆ ನಾಲ್ಕೇ ದಿನ ಕೆಲಸ ಮಾಡುವುದಕ್ಕೆ ಕಂಪನಿಗಳು ನಿರ್ಣಯ ತೆಗೆದುಕೊಳ್ಳಬಹುದು.

**ವೇತನ ವಿವರ ನೀಡಿಕೆ:** ಉದ್ಯೋಗಿಯೊಬ್ಬ ಹಣಕಾಸು ವರ್ಷದ ನಡುವೆ ಹೊಸ ಕೆಲಸಕ್ಕೆ ಸೇರಿದರೆ ಹಳೆಯ ಉದ್ಯೋಗದಾತ ಕಂಪನಿ ನೀಡುತ್ತಿದ್ದ ವೇತನದ ವಿವರವನ್ನು ಹೊಸ ಉದ್ಯೋಗದಾತ ಕಂಪನಿಗೆ ನೀಡಬೇಕಾದ್ದು ಕಡ್ಡಾಯ. ಸರಿಯಾಗಿ ತೆರಿಗೆ ಕಡಿತಗೊಳಿಸುವುದಕ್ಕೆ ಇದು ಸಹಕಾರಿ.

**ಪಿಪಿಎಫ್, ಎನ್‌ಪಿಎಸ್ ದೇಣಿಗೆ:** ಪಿಪಿಎಫ್ ಮತ್ತು ಎನ್‌ಪಿಎಸ್ ಖಾತೆಗೆ ವರ್ಷಕ್ಕೆ ಕನಿಷ್ಠ ರೂ.500 ಜಮೆ ಮಾಡದೇ ಇದ್ದರೆ ಖಾತೆ ನಿಷ್ಕ್ರಿಯವಾಗಲಿದೆ. ಇದನ್ನು ತಪ್ಪಿಸುವುದಕ್ಕೆ ಮಾರ್ಚ್ 31 ಅಂತಿಮ ದಿನ.

**ದೀರ್ಘಾವಧಿ ಕ್ಯಾಪಿಟಲ್ ಗೇನ್:** ಈಕ್ವಿಟಿ ಷೇರುಗಳ ಮೇಲೆ ದೀರ್ಘಾವಧಿ ಕ್ಯಾಪಿಟಲ್ ಗೇನ್ (ಲಾಭಾಂಶ) ರೂ. 1 ಲಕ್ಷ ತನಕ ತೆರಿಗೆ ವಿನಾಯಿತಿ ಸಿಗಲಿದೆ. ಬಾಕಿ ಉಳಿದ ಮೊತ್ತದ ಮೇಲೆ ಶೇಕಡ 10 ತೆರಿಗೆ ಪಾವತಿಸಿದ್ದರೆ ಪುನಃ ಏನೂ ಬೇಕಾಗಿಲ್ಲ.

**ವಿವಾದ್ ವಿಶ್ವಾಸ್ ಸ್ಕೀಮ್:** ವಿವಾದ್ ಸೇ ವಿಶ್ವಾಸ್ ಸ್ಕೀಮ್ ಪ್ರಕಾರ ತೆರಿಗೆ ರಿಟರ್ನ್ಸ್ ಫೈಲ್ ಮಾಡಲು ಮಾರ್ಚ್ 31 ಅಂತಿಮ ದಿನ. ಹೆಚ್ಚುವರಿ ಬಡ್ಡಿ ಇಲ್ಲದೇ ತೆರಿಗೆ ಪಾವತಿಗೆ ಏ.30 ಕೊನೇ ದಿನ.

**ಪ್ರಾವಿಡೆಂಟ್ ಫಂಡ್ ತೆರಿಗೆ ನಿಯಮ:** ಪಿಎಫ್ ಗೆ ವಾರ್ಷಿಕ ರೂ. 2.50 ಲಕ್ಷಕ್ಕಿಂತ ಹೆಚ್ಚು ಹಣ ಜಮೆ ಮಾಡುವ ಉದ್ಯೋಗಿಗಳು ಪಿಎಫ್ ಜಮೆಗೆ ಗುರುವಾರದಿಂದಲೇ ತೆರಿಗೆ ಪಾವತಿಸಬೇಕಾಗುತ್ತಿದೆ.

**ಟಿಡಿಎಸ್ ನಿಯಮ ಬದಲು:** ಐಟಿಆರ್ ಫೈಲ್ ಮಾಡದೇ ಇರುವವರಿಂದ ಹೆಚ್ಚು ಟಿಡಿಎಸ್ (ಮೂಲದಲ್ಲೇ ತೆರಿಗೆ ಕಡಿತ) ಅಥವಾ ಟಿಸಿಎಸ್ (ಮೂಲದಲ್ಲೇ ತೆರಿಗೆ ಸಂಗ್ರಹ) ವಸೂಲಿ, 2021ರ ಕೇಂದ್ರ ಮುಂಗಡಪತ್ರದಲ್ಲಿ ಘೋಷಿತ ಅಂಶ ಇದಾಗಿದ್ದು, ಏಪ್ರಿಲ್ 1 ರಿಂದ ಜಾರಿಗೆ ಬರಲಿದೆ.

**ಹಿರಿಯರಿಗೆ ಐಟಿಆರ್ ಚಿಂತೆಯಿಲ್ಲ:** ಪಿಂಚಣಿ ಆದಾಯ ಮತ್ತು ಠೇವಣಿ ಮೇಲೆ ಬಡ್ಡಿ ಪಡೆಯುತ್ತಿರುವ 75 ವರ್ಷ ಮೇಲ್ಪಟ್ಟ ಹಿರಿಯ ನಾಗರಿಕರು ಶುರುವಾಗುವ ಹೊಸ ಹಣಕಾಸು ವರ್ಷದಲ್ಲಿ ಆದಾಯ ತೆರಿಗೆ ರಿಟರ್ನ್ಸ್ ಸಲ್ಲಿಸಬೇಕಾಗಿಲ್ಲ.

**ಆಟೋ ಪೇಮೆಂಟ್‌ಗೆ ತಡೆ:** ಎಲ್ಲ ರೀತಿಯ ಪುನರಾವರ್ತಿತ ವಹಿವಾಟುಗಳಲ್ಲಿ (ರಿಕರಿಂಗ್ ಟ್ರಾನ್ಸಾಕ್ಷನ್)ಸ್ವಯಂ ಪಾವತಿಗೆ (ಆಟೋ ಪೇಮೆಂಟ್) ನಾಳೆಯಿಂದ ಬ್ಯಾಂಕುಗಳು ತಡೆಯೊಡ್ಡಲಿವೆ. ಆರ್‌ಬಿಐ 2020ರ ಡಿಸೆಂಬರ್‌ನಲ್ಲಿ ಪ್ರಕಟಿಸಿದ ಸುತ್ತೋಲೆ ಪ್ರಕಾರ ಬ್ಯಾಂಕುಗಳು ಈ ಕ್ರಮ ಜರುಗಿಸುತ್ತಿವೆ. ರೂ. 5,000 ಮೇಲ್ಪಟ್ಟ ವಹಿವಾಟಿಗೆ ಹೆಚ್ಚುವರಿ ಒಟಿಪಿ ಅಗತ್ಯ.

**ಐಎಫ್‌ಎಸ್‌ಸಿ ಬದಲು:**ಬ್ಯಾಂಕುಗಳ ವಿಲೀನ ಪ್ರಕ್ರಿಯೆ ನಂತರದಲ್ಲಿ ವಿಲೀನಗೊಂಡ ಬ್ಯಾಂಕುಗಳ ಐಎಫ್‌ಎಸ್‌ಸಿ (ಇಂಡಿಯನ್ ಫೈನಾನ್ಸಿಯಲ್ ಸಿಸ್ಟಮ್ ಕೋಡ್) ಬದಲಾವಣೆಗೆ ಒಳಗಾಗಿವೆ. ಈ ಪೈಕಿ ಬ್ಯಾಂಕ್ ಆಫ್ ಬರೋಡಾ ಜೊತೆಗೆ ವಿಲೀನವಾಗಿರುವ ವಿಜಯಾ ಬ್ಯಾಂಕ್, ದೇನಾ ಬ್ಯಾಂಕ್‌ಗಳ ಐಎಫ್‌ಎಸ್‌ಸಿ ಮಾರ್ಚ್ 1 ರಿಂದಲೇ ಬದಲಾಗಿದೆ. ಪಂಜಾಬ್ ನ್ಯಾಷನಲ್ ಬ್ಯಾಂಕ್ ಜೊತೆಗೆ ವಿಲೀನವಾಗಿರುವ ಓರಿಯಂಟಲ್ ಬ್ಯಾಂಕ್ ಆಫ್ ಕಾಮರ್ಸ್, ಯುನೈಟೆಡ್ ಬ್ಯಾಂಕ್ ಆಫ್

ಇಂಡಿಯಾದ ಐಎಫ್ಎಸ್‌ಸಿ ಏಪ್ರಿಲ್ 1 ರಿಂದ ಬದಲಾಗಲಿದೆ. ಇದೇ ರೀತಿ ಯೂನಿಯನ್ ಬ್ಯಾಂಕ್‌ನಲ್ಲಿ ವಿಲೀನವಾಗಿರುವ ಆಂಧ್ರ ಬ್ಯಾಂಕ್, ಕಾರ್ಪೊರೇಷನ್ ಬ್ಯಾಂಕುಗಳ ಐಎಫ್ಎಸ್‌ಸಿ ನಾಳೆಯಿಂದ ಬದಲಾಗಲಿದೆ. ಇಂಡಿಯನ್ ಬ್ಯಾಂಕ್‌ನಲ್ಲಿ ವಿಲೀನವಾಗಿರುವ ಅಲಹಾಬಾದ್ ಬ್ಯಾಂಕ್‌ನ ಐಎಫ್ಎಸ್‌ಸಿ ಮೇ 1ರಿಂದ, ಕೆನರಾ ಬ್ಯಾಂಕ್ ಜೊತೆಗೆ ವಿಲೀನವಾದ ಸಿಂಡಿಕೇಟ್ ಬ್ಯಾಂಕ್ ಐಎಫ್ಎಸ್‌ಸಿ ಜುಲೈ.1 ರಿಂದ ಬದಲಾಗಲಿದೆ.

ಆಧಾರ: ವಿಜಯವಾಣಿ, ದಿನಾಂಕ: 31.03.2021

# ಭಾಗ–4

# ರಾಜ್ಯ ಸರ್ಕಾರದ ಸುದ್ದಿಗಳು

## 1. ರಾಜ್ಯ ತಲುಪಿದ 'ಕೋವ್ಯಾಕ್ಸಿನ್'

ಜನವರಿ 16ರಿಂದ ಕೋವಿಡ್ ಲಸಿಕೆ ವಿತರಣೆ ಆರಂಭವಾಗಲಿದ್ದು, ರಾಜ್ಯಕ್ಕೆ ಮೊದಲ ಹಂತದಲ್ಲಿ 20 ಸಾವಿರ ಡೋಸ್ 'ಕೋವ್ಯಾಕ್ಸಿನ್' ಲಸಿಕೆ ಹೈದರಾಬಾದ್‌ನಿಂದ ಬಂದಿದೆ. ಈಗಾಗಲೇ ಕೇಂದ್ರ ಸರ್ಕಾರವು 'ಕೋವಿಶೀಲ್ಡ್' ಬೆಂಗಳೂರಿಗೆ 6.48 ಲಕ್ಷ ಡೋಸ್ ಕಳುಹಿಸಿದೆ. ಈ ಲಸಿಕೆಯನ್ನು ಪ್ರಾದೇಶಿಕ ದಾಸ್ತಾನು ಕೇಂದ್ರಗಳಿಗೆ ಸಾಗಿಸಿ, ಅಲ್ಲಿಂದ ಜಿಲ್ಲಾ ದಾಸ್ತಾನು ಕೇಂದ್ರಗಳಿಗೆ ರವಾನಿಸಲಾಗಿದೆ. ದೇಶದಲ್ಲಿ 'ಕೋವಿಶೀಲ್ಡ್' ಮತ್ತು 'ಕೋವ್ಯಾಕ್ಸಿನ್' ಲಸಿಕೆ ವಿತರಣೆಗೆ ಅನುಮತಿ ದೊರತಿದೆ.

ಹೈದರಾಬಾದ್‌ನ ಭಾರತ್ ಬಯೋಟೆಕ್ ಕಂಪನಿಯು 'ಕೋವ್ಯಾಕ್ಸಿನ್' ಲಸಿಕೆಯನ್ನು ಅಭಿವೃದ್ಧಿಪಡಿಸಿದೆ. ಕೇಂದ್ರ ಸರ್ಕಾರದ ಸೂಚನೆ ಅನುಸಾರ ಕಂಪನಿಯು ಸ್ಪೈಸ್ ಬಜೆಟ್ ವಿಮಾನದಲ್ಲಿ ಲಸಿಕೆಯ ಒಂದು ಸಾವಿರ ಬಾಟಲಿಗಳನ್ನು ಕಳುಹಿಸಿದೆ. ಪ್ರತಿ ಬಾಟಲಿಯಲ್ಲಿ 20 ಡೋಸ್ ಲಸಿಕೆ ಇದೆ. ಮೂರು ಬಾಕ್ಸ್‌ಗಳಲ್ಲಿ ಲಸಿಕೆಯ ಬಾಟಲಿಗಳನ್ನು ಪ್ರಾಯಕಿಂಗ್ ಮಾಡಿ ತರಲಾಗಿದೆ. ಈ ಬಾಕ್ಸ್‌ಗಳು ಒಟ್ಟು 90 ಕೆ.ಜಿ ತೂಕವಿದ್ದು, ಅವನ್ನು ಆನಂದರಾವ್ ವೃತ್ತದಲ್ಲಿರುವ ರಾಜ್ಯಮಟ್ಟದ ದಾಸ್ತಾನು ಕೇಂದ್ರದಲ್ಲಿ ಇಡಲಾಗಿದೆ.

ಈ ಲಸಿಕೆಗಳು ಕಳೆದ ಡಿಸೆಂಬರ್‌ನಲ್ಲಿ ಸಿದ್ಧಗೊಂಡಿದ್ದು, ಮುಂಬರುವ ಮೇ ತಿಂಗಳವರೆಗೆ ಬಳಕೆಗೆ ಯೋಗ್ಯವಾಗಿದೆ. ಲಸಿಕೆಗಳ ಬಾಕ್ಸ್ ಹಾಗೂ ಬಾಟಲಿಗಳ ಮೇಲೆ ಇದು ಮಾರಾಟಕ್ಕಲ್ಲ ಎಂದು ನಮೂದಿಸಲಾಗಿದೆ. ರಾಜ್ಯಕ್ಕೆ ಒಟ್ಟು 40 ಸಾವಿರ ಡೋಸ್ 'ಕೋವ್ಯಾಕ್ಸಿನ್' ಲಸಿಕೆ ಹಂಚಿಕೆಯಾಗಬೇಕಿದೆ. ಅದರಲ್ಲಿ ಈಗ ಅರ್ಧದಷ್ಟು ತಲುಪಿದೆ ಎಂದು ಆರೋಗ್ಯ ಇಲಾಖೆಯ ಮೂಲಗಳು ತಿಳಿಸಿವೆ.

ಪ್ರತಿ ವ್ಯಕ್ತಿಗೆ ಈಗ 0.5 ಎಂಎಲ್‌ನ ಒಂದು ಡೋಸ್ ನೀಡಲಾಗುತ್ತದೆ. 28 ದಿನಗಳ ಬಳಿಕ ಎರಡನೇ ಡೋಸ್ ನೀಡಲಾಗುತ್ತದೆ. ಪ್ರತಿ ಕೇಂದ್ರದಲ್ಲಿ ದಿನಕ್ಕೆ 100 ಮಂದಿಗೆ ಲಸಿಕೆ ವಿತರಣೆ ನಡೆಸಲು ಯೋಜನೆ ರೂಪಿಸಲಾಗಿದೆ. ಲಸಿಕೆ ಕೇಂದ್ರಗಳು ಬೆಳಿಗ್ಗೆ 9 ಗಂಟೆಯಿಂದ ಸಂಜೆ 5 ಗಂಟೆಯವರೆಗೆ ಕಾರ್ಯನಿರ್ವಹಿಸಲಿವೆ ಎಂದು ಇಲಾಖೆಯ ಅಧಿಕಾರಿಗಳು ತಿಳಿಸಿದ್ದಾರೆ.

ಆಧಾರ: ಪ್ರಜಾವಾಣಿ, ದಿನಾಂಕ:15.01.2021

## 2. ವಿಶ್ವದ ಮೊದಲ ಹೈಬ್ರಿಡ್ ಏರ್ ಶೋ

ವಿಶ್ವದ ಮೊದಲ ಹೈಬ್ರಿಡ್ ವೈಮಾನಿಕ ಪ್ರದರ್ಶನಕ್ಕೆ ಬೆಂಗಳೂರು ವೇದಿಕೆಯಾಗುತ್ತಿದ್ದು, ಇದೇ ಮೊದಲ ಬಾರಿಗೆ 'ಏರೋ ಇಂಡಿಯಾ–2021' ವೈಮಾನಿಕ ಪ್ರದರ್ಶನ ಸಿದ್ಧತೆಗಳ ಬಗ್ಗೆ ಕೇಂದ್ರ ರಕ್ಷಣಾ ಸಚಿವ ರಾಜನಾಥ್‌ಸಿಂಗ್ ವಿಧಾನಸೌಧದಲ್ಲಿ ಅಪೆಕ್ಸ್ ಸಮಿತಿ ಜೊತೆ ಪ್ರಗತಿ ಪರಿಶೀಲನೆ ಸಭೆ ನಡೆಸಿದರು.

ಈ ವೇಳೆ ಸಭೆಯಲ್ಲಿ ಮಾಹಿತಿ ನೀಡಿದ ಕೇಂದ್ರದ ರಕ್ಷಣಾ ಇಲಾಖೆ ಅಧಿಕಾರಿಗಳು, ಏರೋ ಇಂಡಿಯಾ–2021 ವಿಶ್ವದ ಮೊದಲ ಹೈಬ್ರಿಡ್ ವೈಮಾನಿಕ ಪ್ರದರ್ಶನವಾಗಿದ್ದು. ಪ್ರತ್ಯಕ್ಷ ಹಾಗೂ ವರ್ಚುವಲ್ ಎರಡೂ ರೀತಿಯಲ್ಲೂ ನಡೆಯಲಿದೆ. ಈ ಬಗ್ಗೆ ಎಲ್ಲಾ ರೀತಿಯ ಸಿದ್ಧತೆಯನ್ನು ಮಾಡಿಕೊಂಡಿದ್ದೇವೆ. ಅತ್ಯಾಧುನಿಕ ತಂತ್ರಜ್ಞಾನದೊಂದಿಗೆ ವೆಬ್‌ಸೈಟ್ ಹಾಗೂ ವೈಮಾನಿಕ ಪ್ರದರ್ಶನದಲ್ಲಿ ಭಾಗವಹಿಸುವವರಿಗೆ ನೆರವಾಲು ಪ್ರತ್ಯೇಕ ಮೊಬೈಲ್ ಆ್ಯಪ್ ಸಹ ಸಿದ್ಧಪಡಿಸಲಾಗಿದೆ ಎಂದು ಹೇಳಿದರು.

ಈ ವೇಳೆ ಮಾತನಾಡಿದ ರಾಜನಾಥ್ ಸಿಂಗ್, ಸುರಕ್ಷಿತವಾಗಿ ಹಾಗೂ ವಿಶ್ವದ ವೈಮಾನಿಕ, ರಕ್ಷಣಾ ಕ್ಷೇತ್ರವನ್ನು ಸೆಳೆಯುವಂತೆ ಆಯೋಜನೆ ಮಾಡಬೇಕು. ಹೈಬ್ರಿಡ್ ಪ್ರದರ್ಶನ ಯಶಸ್ವಿಯಾಗಿ ನಡೆಸುವ ಮೂಲಕ ಕೊರೋನಾದಂತಹ ಸಂಕಷ್ಟದ ವೇಳೆಯಲ್ಲಿ ದೊಡ್ಡ ಮಟ್ಟದ ಪ್ರದರ್ಶನ ಮಾಡುವುದು ಹೇಗೆ ಎಂಬುದಕ್ಕೆ ಇಡೀ ವಿಶ್ವಕ್ಕೆ ಮಾದರಿಯಾಗಬೇಕು ಎಂದು ಸಲಹೆ ನೀಡಿದರು.

ಇನ್ನು 'ರನ್‌ವೇಟು ಬಿಲಿಯನ್ ಆಪರ್ಚುನಿಟೀಸ್' ಎಂಬುದು ಏರ್‌ಶೋನ ಧ್ಯೇಯವಾಕ್ಯ ಆಗಿದ್ದು, ಪ್ರಧಾನಮಂತ್ರಿಗಳ ಆತ್ಮನಿರ್ಭರ ಭಾರತ್ ಪರಿಕಲ್ಪನೆಯನ್ನು ಸಾಕಾರಗೊಳಿಸಬೇಕು ಎಂದರು.

**ಅದ್ದೂರಿ ಏರ್ ಶೋ ಯಶಸ್ವಿ– ರಾಜನಾಥ್ ವಿಶ್ವಾಸ:** ಸಭೆಯ ಬಳಿಕ ಸುದ್ದಿಗಾರರೊಂದಿಗೆ ಮಾತನಾಡಿದ ಅವರು, ಬೆಂಗಳೂರಿನಲ್ಲಿ ನಡೆಯಲಿರುವ ಪ್ರಸಕ್ತ ಸಾಲಿನ 'ಏರೋ ಇಂಡಿಯಾ–2021' ವೈಮಾನಿಕ ಪ್ರದರ್ಶನ ಅದ್ದೂರಿ ಹಾಗೂ ಯಶಸ್ವಿಯಾಗಿ ನಡೆಯುವ ಸಂಪೂರ್ಣ ವಿಶ್ವಾಸವಿದೆ. ವಿಶ್ವದ ವೈಮಾನಿಕ ಹಾಗೂ ರಕ್ಷಣಾ ಕ್ಷೇತ್ರವನ್ನು ತನ್ನತ್ತ ಸೆಳೆಯಲಿದೆ ಎಂದು ಹೇಳಿದರು.

ಬೆಂಗಳೂರಿನಲ್ಲಿ ಫೆಬ್ರವರಿ 3ರಿಂದ ಆರಂಭಗೊಳ್ಳಲಿರುವ ಏರೋ ಇಂಡಿಯಾ ಶೋ ಕುರಿತು ಎಲ್ಲ ರೀತಿಯ ಮುಂಜಾಗ್ರತಾ ಕ್ರಮಗಳನ್ನು ಕೈಗೊಳ್ಳುವ ಬಗ್ಗೆ ಚರ್ಚೆ ನಡೆಸಲಾಗಿದೆ. ಏರ್ ಶೋಗಳನ್ನು ಯಶಸ್ವಿಯಾಗಿ ನಡೆಸುವುದರಲ್ಲಿ ಬೆಂಗಳೂರಿಗೆ ಸಾಕಷ್ಟು ಅನುಭವ ಇದೆ. ಈ ವಿಷಯದಲ್ಲಿ ಬೆಂಗಳೂರಿಗೆ ಇರುವ ಅನುಭವ ದೇಶದ ಯಾವ ನಗರಕ್ಕೂ ಇಲ್ಲ. ಈ ಬಾರಿಯೂ ಏರ್ ಶೋ ಯಶಸ್ವಿಯಾಗಿ ನಡೆಸಲು ಎಲ್ಲ ಸಿದ್ಧತೆ ಕೈಗೊಳ್ಳಲಾಗಿದೆ ಎಂದು ಮಾಹಿತಿ ನೀಡಿದರು.

**ರಾಜ್ಯ ಎಲ್ಲಾ ಸಿದ್ಧತೆ ಮಾಡಿಕೊಂಡಿದೆ ಸಿಎಂ:** ಇದಕ್ಕೂ ಮೊದಲು ಸಭೆಯಲ್ಲಿ ಮಾತನಾಡಿದ ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ, ಏರ್‌ಶೋ ವೇಳೆ ರಸ್ತೆ, ಸುರಕ್ಷತೆ, ಆರೋಗ್ಯ ಮತ್ತಿತರ ಸಿದ್ಧತೆಗಳಿಗಾಗಿ ಕೇಂದ್ರ ಸರ್ಕಾರ ರೂ. 30 ಕೋಟಿ ಹಣ ಬಿಡುಗಡೆ ಮಾಡಿದೆ. ಏರೋ ಇಂಡಿಯಾ–2021 ಯಶಸ್ವಿಯಾಗುತ್ತದೆ ಎಂದು ನಾನು ಭರವಸೆ ನೀಡುತ್ತೇನೆ ಎಂದು ಹೇಳಿರುವುದಾಗಿ ತಿಳಿದುಬಂದಿದೆ.

ಆಧಾರ: ಕನ್ನಡಪ್ರಭ, ದಿನಾಂಕ:16.01.2021

## 3. ಉಕ ಹೆದ್ದಾರಿಗೆ 21 ಸಾವಿರ ಕೋಟಿ

ಉತ್ತರ ಕರ್ನಾಟಕ ಭಾಗದಲ್ಲಿ 21 ಸಾವಿರ ಕೋಟಿ ರೂ. ವೆಚ್ಚದಲ್ಲಿ 847 ಕಿ.ಮೀ. ಉದ್ದದ ಹೆದ್ದಾರಿ ನಿರ್ಮಾಣದ 13 ಯೋಜನೆಗಳಿಗೆ ಅನುಮೋದನೆ ನೀಡಲಾಗಿದೆ ಎಂದು ಕೇಂದ್ರ ಸಾರಿಗೆ ಮತ್ತು ಹೆದ್ದಾರಿ ಸಚಿವ ನಿತಿನ್ ಗಡ್ಕರಿ ಘೋಷಿಸಿದರು.

ರೂ.323 ಕೋಟಿ ವೆಚ್ಚದಲ್ಲಿ ಕೈಗೆತ್ತಿಕೊಳ್ಳಲಾಗುತ್ತಿರುವ ಹುಬ್ಬಳ್ಳಿಯ ರಾಣಿ ಚೆನ್ನಮ್ಮ ವೃತ್ತದ ಎಲಿವೇಟೆಡ್ ಕಾರಿಡಾರ್ ಹಾಗೂ ಕಲಘಟಗಿ ತಾಲ್ಲೂಕು ದಾಸ್ತಿಕೊಪ್ಪ ಗ್ರಾಮದಲ್ಲಿ ಬೇಡ್ತಿ ನಾಲೆಗೆ ಸೇತುವೆ ನಿರ್ಮಾಣಕ್ಕೆ, ಹುಬ್ಬಳ್ಳಿಯ ಡೆನಿಸನ್ಸ್ ಹೋಟೆಲ್‌ನಲ್ಲಿ ಆಯೋಜಿಸಿದ್ದ ವರ್ಚುವಲ್ ಕಾರ್ಯಕ್ರಮದಲ್ಲಿ ಶಂಕುಸ್ಥಾಪನೆ ನೆರವೇರಿಸಿ ಮಾತನಾಡಿದರು.

"ಕೇಂದ್ರ ಸರ್ಕಾರವು ಕರ್ನಾಟಕ ರಾಜ್ಯದಲ್ಲಿನ ಹೆದ್ದಾರಿಗಳ ಅಭಿವೃದ್ಧಿಗೆ ಬದ್ಧವಾಗಿದೆ. ಈ ನಿಟ್ಟಿನಲ್ಲಿ ಹುಬ್ಬಳ್ಳಿ–ಧಾರವಾಡ ಬೈಪಾಸ್ ಚತುಷ್ಪಥ ರಸ್ತೆ ನಿರ್ಮಾಣ, ಬೆಳಗಾವಿ ಚತುಷ್ಪಥ ವರ್ತುಲ ರಸ್ತೆ ಸೇರಿದಂತೆ ಒಟ್ಟು 13 ಹೊಸ ಯೋಜನೆಗಳನ್ನು ಕೈಗೆತ್ತಿಕೊಳ್ಳಲಾಗುವುದು. ಅದೇ ರೀತಿ, ಹುಬ್ಬಳ್ಳಿ–ಹೊಸಪೇಟೆ ಹೆದ್ದಾರಿ ಸೇರಿದಂತೆ ಉತ್ತರ ಕರ್ನಾಟಕದ ಪ್ರಗತಿಯಲ್ಲಿರುವ ಯೋಜನೆಗಳನ್ನು ಸಹ ಶೀಘ್ರವೇ ಪೂರ್ಣಗೊಳಿಸಲಾಗುವುದು," ಎಂಧು ಭರವಸೆ ನೀಡಿದರು.

"ಕರ್ನಾಟಕ ಪ್ರಗತಿಯಲ್ಲಿ ಮುಂಚೂಣಿ ರಾಜ್ಯವಾಗಿದ್ದು, ಸಂಪರ್ಕ ಕ್ರಾಂತಿಯಿಂದ ಬೆಳವಣಿಗೆ ಸಾಧ್ಯ. ಕಳೆದ 3 ವರ್ಷಗಳಲ್ಲಿ ಮಹಾರಾಷ್ಟ್ರ–ಗೋವಾ ರಾಜ್ಯ ಸಂಪರ್ಕ ಸಾಧಿಸುವ ಕರ್ನಾಟಕದ 626 ಕಿ.ಮೀ ರಾಷ್ಟ್ರೀಯ ಹೆದ್ದಾರಿ ನಿರ್ಮಿಸಲಾಗಿದೆ," ಎಂದರು.

"ರಾಜ್ಯದಲ್ಲಿ ಕಬ್ಬು ಬೆಳೆ ಅತ್ಯಧಿಕವಿದ್ದು, ಇಥೆನಾಲ್ ಉತ್ಪಾದನೆಗೂ ಮೊದಲ ಆದ್ಯತೆ ನೀಡಬೇಕು. ಮುಂದಿನ ದಿನಗಳಲ್ಲಿ ದೇಶದಲ್ಲಿ ಇಥೆನಾಲ್ ಅನ್ನು ಪ್ರಮುಖ ಇಂಧನವಾಗಿ ಬಳಸಲಾಗುತ್ತಿದೆ" ಎಂದು ಹೇಳಿದರು. "ಮಲೇಷಿಯಾದಿಂದ ಪ್ರತಿ ವರ್ಷ ರೂ. 90 ಸಾವಿರ ಕೋಟಿ ಮೊತ್ತದ ಪಾಮ್ ಆಯಿಲ್ ಅನ್ನು ಆಮದು ಮಾಡಿಕೊಳ್ಳುತ್ತಿದ್ದೇವೆ. ಇದನ್ನು ಕಡಿತಗೊಳಿಸಲು ಕರ್ನಾಟಕ ಸರ್ಕಾರ ಎಣ್ಣೆ ಬೀಜ ಉತ್ಪಾದನೆಗೆ ವಿಶೇಷ ಒತ್ತು ನೀಡಬೇಕು," ಎಂದು ಸಲಹೆ ನೀಡಿದರು.

**ಬೆಂಗಳೂರು ದಟ್ಟಣೆ ನಿಯಂತ್ರಣಕ್ಕೆ ಕ್ರಮ:** "ಬೆಂಗಳೂರಿನಲ್ಲಿ ವಾಹನ ದಟ್ಟಣೆ ತಗ್ಗಿಸಲು ಕ್ರಮ ಕೈಗೊಳ್ಳಬೇಕು. ಈ ನಿಟ್ಟಿನಲ್ಲಿ ರಾಜ್ಯ ಸರ್ಕಾರ ವಿಶೇಷ ಸಭೆ ಕರೆದು ಚರ್ಚಿಸಿ ರೂಪುರೇಷೆ ಸಿದ್ಧಪಡಿಸಬೇಕು. ಅದಕ್ಕೆ ಕೇಂದ್ರ ಸರ್ಕಾರ ಬೆಂಬಲ ನೀಡಲಿದೆ," ಎಂದು ಭರವಸೆ ನೀಡಿದರು.

"ಕೇಂದ್ರ ರಸ್ತೆ ನಿಧಿ (ಸಿಆರ್‌ಎಫ್) ಅಡಿ ರಾಜ್ಯದ ರಸ್ತೆಗಳ ಕಾಮಗಾರಿಗೆ ಪ್ರಸ್ತಾವನೆ ಸಲ್ಲಿಸಿದರೆ ಕೇಂದ್ರ ಸರ್ಕಾರ ಅನುದಾನ ಬಿಡುಗಡೆ ಮಾಡಲಿದೆ. ರಸ್ತೆಗಳ ಅಭಿವೃದ್ಧಿಗೆ ಭೂ ಸ್ವಾಧೀನ ಪ್ರಕ್ರಿಯೆ ತ್ವರಿತಗೊಳಿಸಬೇಕು ಎಂದು ರಾಜ್ಯ ಸರ್ಕಾರಕ್ಕೆ ಮನವಿ ಮಾಡಿದರು.

ಕೇಂದ್ರ ಸಚಿವರಾದ ಪ್ರಹ್ಲಾದ ಜೋಶಿ, ಡಿ.ವಿ.ಸದಾನಂದಗೌಡ, ಡಿಸಿಎಂ ಗೋವಿಂದ ಎಂ.ಕಾರಜೋಳ, ಸಚಿವ ಜಗದೀಶ್ ಶೆಟ್ಟರ್ ಮತ್ತಿತರರು ಪಾಲ್ಗೊಂಡಿದ್ದರು.

**ಕೇಂದ್ರದ ಕ್ರಮಕ್ಕೆ ಸಿಎಂ ಮೆಚ್ಚುಗೆ:** ಅಧ್ಯಕ್ಷತೆ ವಹಿಸಿದ್ದ ಮುಖ್ಯಮಂತ್ರಿ ಅವರು ಮಾತನಾಡಿ, ಒಂದು ತಿಂಗಳ ಅವಧಿಯಲ್ಲಿ ರಾಜ್ಯದಲ್ಲಿ ಎರಡನೇ ಬಾರಿಗೆ ರಾಷ್ಟ್ರೀಯ ಹೆದ್ದಾರಿ ಯೋಜನೆಗಳ ಶಂಕುಸ್ಥಾಪನೆ ನಡೆಸುತ್ತಿರುವುದಕ್ಕೆ ಹರ್ಷ ವ್ಯಕ್ತಪಡಿಸಿದರು. ರಾಜ್ಯದ ಎಲ್ಲ ಹೆದ್ದಾರಿ ಯೋಜನೆಗಳು ಕಾಲಬದ್ಧವಾಗಿ ಪೂರ್ಣಗೊಳ್ಳಲು ಅಗತ್ಯ ಸಹಕಾರ ನೀಡುವುದಾಗಿ ತಿಳಿಸಿದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:16.01.2021

## 4. ಏರೋ ಇಂಡಿಯಾ ಸುರಕ್ಷಿತ ಯಶಸ್ವಿ

ಈ ಬಾರಿಯ ಏರೋ ಇಂಡಿಯಾ ವೈಮಾನಿಕ ಪ್ರದರ್ಶನವು 'ಅದ್ಧೂರಿಯಾಗಿ ಯಶಸ್ಸು ಕಾಣುವ ವಿಶ್ವಾಸವಿದೆ. ಕೋವಿಡ್ ನಿಯಂತ್ರಣ ಮುನ್ನೆಚ್ಚರಿಕೆ ಕ್ರಮದ ಜೊತೆಗೆ ಯಾವುದೇ ಅವಘಡ ಸಂಭವಿಸದ ರೀತಿಯಲ್ಲಿ ಅಗತ್ಯ ಮುಂಜಾಗರೂಕತಾ ಕ್ರಮ ಕೈಗೊಳ್ಳಲಾಗುವುದು ಎಂದು ಕೇಂದ್ರ ರಕ್ಷಣಾ ಸಚಿವ ರಾಜನಾಥ ಸಿಂಗ್ ಹೇಳಿದರು.

'ಏರೋ ಇಂಡಿಯಾ–2021' ವೈಮಾನಿಕ ಪ್ರದರ್ಶನದ ಹಿನ್ನೆಲೆಯಲ್ಲಿ ವಿಧಾನಸೌಧದ ಸಮ್ಮೇಳನ ಸಭಾಂಗಣದಲ್ಲಿ ನಡೆದ ಅಪೆಕ್ಸ್ ಸಮಿತಿ ಸಭೆಯಲ್ಲಿ ಪಾಲ್ಗೊಂಡ ಬಳಿಕ ಅವರು ಸುದ್ದಿಗಾರರೊಂದಿಗೆ ಮಾತನಾಡಿದರು.

ಫೆಬ್ರವರಿ 3ರಿಂದ ಬೆಂಗಳೂರಿನಲ್ಲಿ ನಡೆಯಲಿರುವ ಏರೋ ಇಂಡಿಯಾ ವೈಮಾನಿಕ ಪ್ರದರ್ಶನದ ಹಿನ್ನೆಲೆಯಲ್ಲಿ ಸಿದ್ಧತಾ ಕಾರ್ಯದ ಬಗ್ಗೆ ಪ್ರಗತಿ ಪರಿಶೀಲನೆ ನಡೆಸಲಾಯಿತು. ನಿರೀಕ್ಷಿತ ಮಟ್ಟದಲ್ಲಿ ಈವರೆಗಿನ ಸಿದ್ಧತಾ ಕಾರ್ಯ ತೃಪ್ತಿಕರವಾಗಿದ್ದು, ವೈಮಾನಿಕ ಪ್ರದರ್ಶನವನ್ನು ಯಶಸ್ವಿಯಾಗಿ ನಡೆಸಲು ಅಗತ್ಯವಿರುವ ಎಲ್ಲ ಸಿದ್ಧತೆಯನ್ನು ವ್ಯವಸ್ಥಿತವಾಗಿ ಕೈಗೊಳ್ಳಲಾಗುವುದು ಎಂದು ತಿಳಿಸಿದರು.

ಬೆಂಗಳೂರಿನಲ್ಲೇ ಹಲವು ವರ್ಷಗಳಿಂದ ವೈಮಾನಿಕ ಪ್ರದರ್ಶನ ನಡೆಸಿಕೊಂಡು ಬರಲಾಗಿದೆ. ಏರ್ ಶೋ ನಡೆಸಲು ಬೆಂಗಳೂರಿನಲ್ಲಿರುವಷ್ಟು ಸೌಕರ್ಯ, ಪೂರಕ ವ್ಯವಸ್ಥೆಗಳು ಬೇರೆ ಯಾವುದೇ ನಗರದಲ್ಲಿಯೂ ಇಲ್ಲ. ವೈಮಾನಿಕ ಕ್ಷೇತ್ರಕ್ಕೆ ಸಂಬಂಧಪಟ್ಟ ಪ್ರಮುಖ ಕೈಗಾರಿಕೆಗಳು, ಉದ್ಯಮಗಳು ಬೆಂಗಳೂರು ಸೇರಿದಂತೆ ಕರ್ನಾಟಕದಲ್ಲಿ ಕೇಂದ್ರೀಕೃತವಾಗಿದೆ. ಆ ಮೂಲಕ ವೈಮಾನಿಕ ಕ್ಷೇತ್ರಕ್ಕೆ ಕರ್ನಾಟಕದ ಕೊಡುಗೆ ಮಹತ್ತರವಾಗಿದೆ ಎಂದು ಮೆಚ್ಚುಗೆ ವ್ಯಕ್ತಪಡಿಸಿದರು.

ಕಳೆದ ಬಾರಿ ಏರ್ ಶೋ ವೇಳೆ ಬೆಂಕಿ ಅವಘಡ ಸಂಭವಿಸಿದ್ದ ಬಗ್ಗೆ ಕೇಳಿದ ಪ್ರಶ್ನೆಗೆ ಉತ್ತರಿಸಿದ ಅವರು, ಕಳೆಯ ಬಾರಿಯ ಘಟನೆ ಸೇರಿದಂತೆ ಯಾವುದೇ ರೀತಿಯ ಅವಘಡ ಸಂಭವಿಸದಂತೆ ಅಗತ್ಯ ಮುನ್ನೆಚ್ಚರಿಕೆ ವಹಿಸಲಾಗುವುದು. ಜೊತೆಗೆ ಕೋವಿಡ್–19ಕ್ಕೆ ಸಂಬಂಧಪಟ್ಟಂತೆ ಮಾರ್ಗ ಸೂಚಿಗಳನ್ನು ಕಟ್ಟುನಿಟ್ಟಾಗಿ ಪಾಲಿಸುವ ಜೊತೆಗೆ ಎಲ್ಲ ರೀತಿಯ ಸುರಕ್ಷತಾ ಕ್ರಮ ಕೈಗೊಳ್ಳಲಾಗುವುದು ಎಂದು ಹೇಳಿದರು.

ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ ಮಾತನಾಡಿ, 13ನೇ ಆವೃತ್ತಿಯ ದ್ವೈವಾರ್ಷಿಕ ಏರೋ ಇಂಡಿಯಾ ವೈಮಾನಿಕ ಪ್ರದರ್ಶನವನ್ನು ಬೆಂಗಳೂರಿನಲ್ಲಿ ಆಯೋಜಿಸುತ್ತಿರುವುದು ಹೆಮ್ಮೆ ಮತ್ತು

ಸಂತಸದ ಸಂಗತಿ. 1996ರಿಂದ ನಿರಂತರವಾಗಿ ಬೆಂಗಳೂರಿನಲ್ಲೇ ಪ್ರದರ್ಶನ ಆಯೋಜಿಸಲು ಅವಕಾಶ ನೀಡುತ್ತಾ ಬಂದಿರುವ ಕೇಂದ್ರ ಸರ್ಕಾರಕ್ಕೆ ಅಭಿನಂದನೆ ಸಲ್ಲಿಸುವ ಜೊತೆಗೆ ಕೋವಿಡ್ ಸಂದರ್ಭದಲ್ಲೂ ಯಶಸ್ವಿಯಾಗಿ ನಡೆಸಲು ರಾಜ್ಯ ಸರ್ಕಾರದಿಂದ ಅಗತ್ಯ ಸಹಕಾರ ನೀಡಲಾಗುವುದು ಎಂದು ತಿಳಿಸಿದರು.

ಕರ್ನಾಟಕವು ವೈಮಾನಿಕ ಕ್ಷೇತ್ರದಲ್ಲಿ ಮುಂಚೂಣಿಯಲ್ಲಿದ್ದು, ರಕ್ಷಣಾ ಹಾಗೂ ವೈಮಾನಿಕ ಕ್ಷೇತ್ರದ ಕೈಗಾರಿಕೆಗಳಿಗೆ ಪೂರಕ ವಾತಾರವಣ ಹೊಂದಿದೆ. ವಿಮಾನ ತಯಾರಿಕೆ ಹಾಗೂ ಬಾಹ್ಯಾಕಾಶ ಉಪಕರಣ ತಯಾರಿಕಾ ಹಲವು ಕೈಗಾರಿಕೆಗಳು ರಾಜ್ಯದಲ್ಲಿವೆ. ಸಂಕಷ್ಟದ ಸಂದರ್ಭದಲ್ಲಿ ರಾಜ್ಯ ಸರ್ಕಾರ ಈ ಕೈಗಾರಿಕೆಗಳಿಗೆ ಉತ್ತೇಜನ ನೀಡುತ್ತಿದೆ ಎಂದು ತಿಳಿಸಿದರು.

ಸದ್ಯ ಜಾಗತಿಕ ಸವಾಲಾಗಿರುವ ಕೋವಿಡ್–19 ವೈರಾಣು ಹಾವಳಿ ಸಂದರ್ಭದಲ್ಲಿ ನಡೆಯುತ್ತಿರುವ ವೈಮಾನಿಕ ಪ್ರದರ್ಶವನ್ನು ಸುರಕ್ಷಿತವಾಗಿ ನಡೆಸಲು ಸಾಕಷ್ಟು ಮುನ್ನೆಚ್ಚರಿಕೆ ವಹಿಸಲಾಗಿದೆ. ಏರ್ ಶೋನಲ್ಲಿ ಪಾಲ್ಗೊಳ್ಳಲು ಆಗಮಿಸುವ ಅಂತರರಾಷ್ಟ್ರೀಯ ಪ್ರತಿನಿಧಿಗಳು, ಭಾಗಿದಾರರು ವಾಸ್ತವ್ಯ ಹೂಡುವ ಕಡೆ ಕೋವಿಡ್–19 ಸಂಬಂಧ ಶಿಷ್ಟಾಚಾರ, ಮಾರ್ಗಸೂಚಿಗಳ ಕಟ್ಟುನಿಟ್ಟಿನ ಪಾಲನೆಗೆ ಕ್ರಮ ವಹಿಸಲಾಗುವುದು ಎಂದು ಹೇಳಿದರು.

ಕೆಂಪೇಗೌಡ ಅಂತರರಾಷ್ಟ್ರೀಯ ವಿಮಾನ ನಿಲ್ದಾಣದಲ್ಲಿ ವಿಮಾನಯಾನ ಇಲಾಖೆ ಹೊರಡಿಸಿರುವ ಮಾರ್ಗಸೂಚಿಗಳ ಪಾಲನೆಗೂ ವ್ಯವಸ್ಥೆ ಮಾಡಲಾಗುವುದು. ಕೋವಿಡ್ ಹಿನ್ನೆಲೆಯಲ್ಲಿ ಹೊರಡಿಸಿರುವ ನಿರ್ದಿಷ್ಟ ಕಾರ್ಯಾಚರಣಾ ವಿಧಾನ(ಎಸ್‌ಒಪಿ)ಗಳನ್ನು ವಿದೇಶಿ ಪ್ರಯಾಣಿಕರು ಕಟ್ಟುನಿಟ್ಟಾಗಿ ಪಾಲಿಸುವಂತೆ ಆಯೋಜಕರು ಕ್ರಮ ವಹಿಸಬೇಕು ಎಂದು ತಿಳಿಸಿದರು.

ರಕ್ಷಣಾ ವಸ್ತು ಪ್ರದರ್ಶನ ಸಂಸ್ಥೆಯ ನಿರ್ದೇಶಕ ಅಚಲ್ ಮಲ್ಹೋತ್ರಾ, ರಾಜ್ಯ ಸರ್ಕಾರದ ಮುಖ್ಯ ಕಾರ್ಯದರ್ಶಿ ಪಿ.ರವಿಕುಮಾರ್, ರಾಜ್ಯ ಪೊಲೀಸ್ ಮಹಾನಿರ್ದೇಶಕ ಪ್ರವೀಣ್ ಸೂದ್ ಇದ್ದರು.

ಆಧಾರ: ಉದಯವಾಣಿ, ದಿನಾಂಕ:16.01.2021

## 5. ಏರ್‌ಶೋಗೆ ಬೆಂಗಳೂರು ಸಜ್ಜು

ಮತ್ತೊಂದು ಅಂತರರಾಷ್ಟ್ರೀಯ ವೈಮಾನಿಕ ಪ್ರದರ್ಶನಕ್ಕೆ (ಏರ್‌ಶೋ) ಬೆಂಗಳೂರು ಸಜ್ಜಾಗುತ್ತಿದೆ. ಯಲಹಂಕದಲ್ಲಿರುವ ವಾಯುಪಡೆ ನೆಲೆಯಲ್ಲಿ ಫೆಬ್ರವರಿ 3ಕ್ಕೆ ನಿಗದಿಯಾಗಿರುವ ಏರ್‌ಶೋ ಸಿದ್ಧತೆಗಳ ಬಗ್ಗೆ ರಕ್ಷಣಾ ಸಚಿವ ರಾಜನಾಥ್ ಸಿಂಗ್ ನೇತೃತ್ವದಲ್ಲಿ ಉನ್ನತ ಮಟ್ಟದ ಸಭೆ ನಡೆಯಿತು.

ವಿಧಾನ ಸೌಧದಲ್ಲಿ ನಡೆದ ಸಭೆಯಲ್ಲಿ ಮುಖ್ಯ ಮಂತ್ರಿಯವರು ಡಿಸಿಎಂ ಗೋವಿಂದ ಕಾರಜೋಳ, ಮುಖ್ಯ ಕಾರ್ಯದರ್ಶಿ ಪಿ.ರವಿಕುಮಾರ್ ಹಾಗೂ ವಿವಿಧ ಇಲಾಖೆಗಳ ಉನ್ನತಮಟ್ಟದ ಅಧಿಕಾರಿಗಳು ಭಾಗವಹಿಸಿ ವೈಮಾನಿಕ ಪ್ರದರ್ಶನಕ್ಕೆ ನಡೆದಿರುವ ಸಿದ್ಧತೆಗಳ ಪರಾಮರ್ಶೆ ನಡೆಸಿದರು. ಜೊತೆಗೆ ಕೊರೋನಾ ಹಿನ್ನೆಲೆಯಲ್ಲಿ ಕೈಗೊಳ್ಳಬೇಕಿರುವ ಮುನ್ನೆಚ್ಚರಿಕೆ ಕ್ರಮಗಳ ಬಗ್ಗೆಯೂ ವ್ಯಾಪಕವಾಗಿ ಸಮಾಲೋಚಿಸಿದರು. ಕೊರೋನಾದಿಂದಾಗಿ ವೈಮಾನಿಕ ಪ್ರದರ್ಶನವನ್ನು ರೂಪಾಂತರಗೊಳಿಸುವ ಬಗ್ಗೆ ಅಧಿಕಾರಿಗಳು ಸಭೆಯ ಗಮನಕ್ಕೆ ತಂದು ಇದು ವಿಶ್ವದ ಮೊದಲ ಹೈಬ್ರಿಡ್ ಏರ್‌ಶೋ ಆಗಲಿದೆ ಎಂದು ವಿವರಿಸಿದರು. ಕಳೆದ ಸಲಕ್ಕೆ ಹೋಲಿಸಿದರೆ ಈ ಸಲ ಶೇ.40ರಷ್ಟು ಚಟುವಟಿಕೆಗಳು ಕಡಿತಗೊಳ್ಳಲಿವೆ. ಪ್ರದರ್ಶನ ಮಳಿಗೆಗಳು ಸಹ ಕಡಿಮೆಯಾಗಲಿವೆ.

ಆಧಾರ: ವಿಜಯ ಕರ್ನಾಟಕ, ದಿನಾಂಕ:16.01.2021

## 6. ಜನ–ಸರ್ಕಾರಕ್ಕೆ ಮೈಗವ್ ಸಂಪರ್ಕ ಸೇತು

ತಂತ್ರಜ್ಞಾನದ ಮೂಲಕ ಜನ ಸಂಪರ್ಕಕ್ಕೆ ಇನ್ನೂ ಹೆಚ್ಚಿನ ಒತ್ತು ನೀಡಲು ನಿರ್ಧರಿಸಿರುವ ರಾಜ್ಯ ಸರ್ಕಾರ, ಇದಕ್ಕೆ ಮೋದಿ ಸರ್ಕಾರದ ಹೆಜ್ಜೆಯನ್ನು ಅನುಸರಿಸಲು ಮುಂದಾಗಿದೆ.

ರಾಜ್ಯದ ಆಡಳಿತ ಮತ್ತು ಅಭಿವೃದ್ಧಿಯಲ್ಲಿ ಜನ ಸಕ್ರಿಯವಾಗಿ ಭಾಗವಹಿಸುವುದನ್ನು ಉತ್ತೇಜಿಸುವ ಸಂಪರ್ಕ ಸೇತುವೆಯಾಗಿ ನಾಗರಿಕ ಸಹಭಾಗಿತ್ವದ ಡಿಜಿಟಲ್ ವೇದಿಕೆ ಸದ್ಯದಲ್ಲೇ ಅನಾವರಣವಾಗಲಿದೆ.

ಕೇಂದ್ರ ಸರ್ಕಾರದ ಮಹತ್ವಾಕಾಂಕ್ಷೆಯ 'ಮೈಗವ್' ಮಾದರಿಯಲ್ಲಿ 'ಮೈಗವ್ ಕರ್ನಾಟಕ' ಯೋಜನೆಯನ್ನು ಜಾರಿಗೊಳಿಸಲು ರಾಜ್ಯ ಸರ್ಕಾರ ನಿರ್ಧರಿಸಿದೆ.

ಕೇಂದ್ರದ ಮೈಗವ್ (**My Gov.in**) ಜಾಲ ತಾಣದ ರಾಜ್ಯ ಅವತರಣಿಕೆ ಇಂಗ್ಲೀಷ್ ಭಾಷೆಯಲ್ಲಿ ಈಗಾಗಲೇ ಸಿದ್ಧವಾಗಿದೆ. ಕನ್ನಡದಲ್ಲೂ ಈ ಜಾಲತಾಣ ಸಕ್ರಿಯವಾಗಲಿದ್ದು, ಈಗಾಗಲೇ ಭಾಷಾಂತರ ಪ್ರಕ್ರಿಯೆ ನಡೆದಿದೆ. ಈ ಬಗ್ಗೆ ಎರಡು ವಾರಗಳಲ್ಲಿ ಭಾಷಾಂತರ ಕಾರ್ಯವನ್ನು ಪೂರೈಸಲಾಗುವುದು ಎಂದು ಇ–ಆಡಳಿತ ಇಲಾಖೆ ಮೂಲಗಳು ತಿಳಿಸಿವೆ.

ಮೈಗವ್ ಕರ್ನಾಟಕ ತಂಡದಲ್ಲಿ ಮಾಹಿತಿಗಳ ಶೋಧಕರು, ಭಾಷಾಂತರಕಾರರು, ಸಾರಾಂಶ ಬರೆಯುವವರು, ಇಲಾಖೆಗಳ ಪ್ರಕಟಣೆಗಳಿಗನುಗುಣವಾಗಿ ಭಿತ್ತಿಪತ್ರ, ಚಿತ್ರಗಳ ವಿನ್ಯಾಸಕಾರರು, ಆಡಳಿತಾತ್ಮಕ ಹಾಗೂ ಮಾಹಿತಿ ಮನರಂಜನೆ ವಿಡಿಯೋಗಳನ್ನು ಸೃಜಿಸುವವರು, ಸಾಮಾಜಿಕ ಜಾಲತಾಣಗಳನ್ನು ಬಳಸಿಕೊಂಡು ಮೈಗವ್ ವೇದಿಕೆಯ ಮಾಹಿತಿಗಳನ್ನು ಪ್ರಚುರ ಪಡಿಸುವವರು ಇರುತ್ತಾರೆ.

ಇಲಾಖಾ ಮಟ್ಟದ ಮಾಹಿತಿ ಕುರಿತಂತೆ ವಿವಿಧ ಸ್ಪರ್ಧೆಗಳನ್ನು ನಡೆಸುವುದು, ಈ ಮೂಲಕ ಸಾರ್ವಜನಿಕರಿಗೆ ಅರಿವು ಮೂಡಿಸುವ ಉದ್ದೇಶವನ್ನು ಇ ಮೈಗವ್ ಕರ್ನಾಟಕ ಮೂಲಕ ಹೊಂದಲಾಗಿದೆ.

ಆಧಾರ: ಉದಯವಾಣಿ, ದಿನಾಂಕ:17.01.2021

## 7. ಕ್ಷಿಪ್ರ ಕಾರ್ಯ ಪಡೆ ಘಟಕ ನಿರ್ಮಾಣ

ಕೇಂದ್ರ ಗೃಹ ಸಚಿವ ಅಮಿತ್ ಶಾ ಅವರು ಭದ್ರಾವತಿ ಡಿಎಆರ್ ಮೈದಾನದಲ್ಲಿ ಕ್ಷಿಪ್ರ ಕಾರ್ಯಪಡೆ (ಆರ್‌ಎಫ್) 97 ಬೆಟಾಲಿಯನ್ ಸ್ಥಾಪನೆಗೆ ಶಂಕುಸ್ಥಾಪನೆ ನೆರವೇರಿಸಿದರು.

ಘಟಕ್ಕೆ ಶಿಲಾನ್ಯಾಸ ನೆರವೇರಿಸಿ ಬಳಿಕ ಮಾತನಾಡಿ, ನಾನು ಗೃಹ ಸಚಿವನಾಗಿ ಅಧಿಕಾರ ಸ್ವೀಕರಿಸಿದ ಬಳಿಕ ಆರ್‌ಎಫ್ ಸ್ಥಾಪನೆಗೆ ಒಪ್ಪಿಗೆ ನೀಡಿದರೆ ನಾವು ರಾಜ್ಯ ಸರ್ಕಾರದಿಂದ ಜಾಗ ನೀಡುವುದಾಗಿ ತಿಳಿಸಿದರು.

**ಉತ್ತಮವಾಗಿ ಕೊರೋನಾ ನಿಭಾಯಿಸಿದ್ದೇವೆ:** ಪ್ರಧಾನಿ ಮೋದಿ ದೂರ ದೃಷ್ಟಿಯಿಂದ ಕೊರೋನಾ ವಿರುದ್ಧ ಸಮರ್ಥವಾಗಿ ಹೋರಾಡಿದ್ದೇವೆ. ವಿಶ್ವದಲ್ಲಿ ನಾವು ಉತ್ತಮವಾಗಿ ಕೊರೋನಾ ನಿಭಾಯಿಸಿದ್ದೇವೆ. ಮೋದಿ ದಿವ್ಯ ದೃಷ್ಟಿ ಕಾರಣದಿಂದ ಯಶಸ್ಸು ಕಂಡಿದ್ದೇವೆ ಎಂದು ಹೇಳಿದರು.

**ವ್ಯಾಕ್ಸಿನ್ ವಿಚಾರದಲ್ಲಿ ರಾಜಕೀಯ ಸಹಿಸಲ್ಲ:** ದೇಶಾದ್ಯಂತ ಕೊರೋನಾ ಲಸಿಕೆ ಅಭಿಯಾನಕ್ಕೆ ಚಾಲನೆ ನೀಡಲಾಗಿದೆ. ಕೊರೋನಾ ಲಸಿಕೆ ವಿಚಾರದಲ್ಲಿ ರಾಜಕೀಯ ನಡೆಯುತ್ತಿದೆ. ಪ್ರತಿಪಕ್ಷಗಳು ರಾಜಕೀಯ ಮಾಡುತ್ತಿವೆ. ಈ ರೀತಿ ರಾಜಕೀಯ ಮಾಡಿದರೆ ನಾವು ಸಹಿಸಲ್ಲ. ದೇಶದ ಜನರಿಗೆ ಪ್ರಧಾನಿ ಮೋದಿ ನಾಯಕತ್ವದ ಬಗ್ಗೆ ಗೊತ್ತಿದೆ ಎಂದರು.

**ಸಿಆರ್‌ಪಿಎಫ್ ತಮ್ಮ ಶಕ್ತಿ:** ಸಿಆರ್‌ಪಿಎಫ್ ನಮ್ಮ ಶಕ್ತಿಯಾಗಿದೆ. ದೇಶದ ಮೂಲೆ ಮೂಲೆಗೆ ಸಿಆರ್‌ಪಿಎಫ್ ಹೋಗುತ್ತದೆ. ಯಾವುದೇ ಅಹಿತಕರ ಘಟನೆ ನಡೆದರು ಮೊದಲು ಆ ಜಾಗಕ್ಕೆ ಸಿಆರ್‌ಪಿಎಫ್ ಹೋಗುತ್ತದೆ ಎಂದು ಹೇಳಿದರು.

**ದೆಹಲಿಗೆ ರಾಷ್ಟ್ರೀಯ ಪೊಲೀಸ್ ಸ್ಮಾರಕಕ್ಕೆ ಭೇಟಿ ನೀಡಿ:** ಪ್ರತಿಯೊಬ್ಬರು ದೆಹಲಿಗೆ ಹೋದಾಗ ತಪ್ಪದೇ ರಾಷ್ಟ್ರೀಯ ಪೊಲೀಸ್ ಸ್ಮಾರಕಕ್ಕೆ ಭೇಟಿ ನೀಡಿ 5 ನಿಮಿಷ ಹುತಾತ್ಮ ಪೊಲೀಸರಿಗೆ ಶ್ರದ್ಧಾಂಜಲಿ ಸಲ್ಲಿಸಿ ಎಂದು ಕರ್ನಾಟಕ ಜನತೆಗೆ ಮನವಿ ಮಾಡಿದರು.

**ಪೊಲೀಸ್ ಕೆಲಸ ಕಠಿಣ ಕೆಲಸ:** ಸರ್ಕಾರಿ ಕೆಲಸಗಳ ಪೈಕಿ ಪೊಲೀಸ್ ಕೆಲಸ ಅತ್ಯಂತ ಕಠಿಣ ಕೆಲಸವಾಗಿದೆ. ಪೊಲೀಸರನ್ನು ನಾವು ಬೇರೆ ದೃಷ್ಟಿಯಿಂದ ನೋಡುತ್ತೇವೆ. ಅವರಿಗೆ ಸಮಯದ ಮಿತಿಯಿಲ್ಲ. ಅವರು ಕಠಿಣ ಪರಿಶ್ರಮ ವಹಿಸಿ ಕಾರ್ಯನಿರ್ವಹಿಸುತ್ತಾರೆ. ಅವರನ್ನು ನೋಡುವ

ದೃಷ್ಟಿಕೋನ ಬದಲಾಗಬೇಕು ಎಂದರು. ಇನ್ನು ಮುಂದೆ ಕೇಂದ್ರಿಯ ಪೊಲೀಸ್ ಕಲ್ಯಾಣ ಭಂಡಾರದಲ್ಲಿ ಸ್ವದೇಶಿ ವಸ್ತುಗಳು ಮಾತ್ರ ಸಿಗುತ್ತವೆ. ಲೋಕಲ್ ಫಾರ್ ವೋಕಲ್ ಎಂದು ಮೋದಿ ಕರೆ ನೀಡಿದ್ದಾರೆ. ಒಂದು ವೇಳೆ ಭಾರತೀಯರೆಲ್ಲರೂ ಹೊಸ ಇತಿಹಾಸ ಬರೆಯುತ್ತದೆ. ನಾವೆಲ್ಲರೂ ಸ್ವದೇಶಿ ವಸ್ತುಗಳಿಗೆ ಹೆಚ್ಚಾಗಿ ಪ್ರಾಮುಖ್ಯತೆ ನೀಡಬೇಕು ಎಂದು ಕರೆ ನೀಡಿದರು.

**ರಕ್ಷಣಾ ವಿವಿ ಸ್ಥಾಪನೆ:** ರಾಷ್ಟ್ರೀಯ ಪೋರೆನ್ಸಿಕ್ ವಿಶ್ವವಿದ್ಯಾಲಯ ಸ್ಥಾಪನೆಗೆ ಒಪ್ಪಿಗೆ ದೊರೆತಿದೆ. ರಕ್ಷಣಾ ವಿವಿ ಸ್ಥಾಪನೆಗೂ ಒಪ್ಪಿಗೆ ಸಿಕ್ಕಿದೆ. ಈ ಎರಡೂ ವಿವಿಗಳ ಜೊತೆ ಕರ್ನಾಟಕ ಸಂಯೋಜನೆ ಮಾಡಿಕೊಳ್ಳಲಿ ಎಂದರು.

**ಹುತಾತ್ಮ ಆರ್‌ಎಎಫ್ ಯೋಧರಿಗೆ ಪರಿಹಾರ:** ಆರ್‌ಎಎಫ್ ಯೋಧರು ಹುತಾತ್ಮರಾದರೆ ಅವರ ಕುಟುಂಬಕ್ಕೆ ರೂ. 50 ಲಕ್ಷ ಪರಿಹಾರ ನೀಡಲಾಗುವುದು ಎಂದು ಹೇಳಿದರು.

ಆಧಾರ: ವಿಶ್ವವಾಣಿ, ದಿನಾಂಕ:17.01.2021

## 8. ಚಾಲುಕ್ಯರ ನಾಡಲ್ಲಿ ಚಾಣಕ್ಯನ ಮೆರಗು

ದೇಶದಲ್ಲಿ ಅತಿ ಹೆಚ್ಚು ಎಥೆನಾಲ್ ಉತ್ಪಾದನೆಗೆ ಮುಂದಾಗಿರುವ ಬಾಗಲಕೋಟೆ ಜಿಲ್ಲೆಯ ನಿರಾಣಿ ಉದ್ಯಮ ಸಮೂಹ ಸಂಸ್ಥೆಯ ನೂತನ ಘಟಕಕ್ಕೆ ಅಮಿತ್ ಷಾ ಭೂಮಿ ಪೂಜೆ ನೆರವೇರಿಸಿದರು. ನಿರಾಣಿ ಸಂಸ್ಥೆ ಜಿಲ್ಲೆಯ ಬಾದಾಮಿ ತಾಲ್ಲೂಕಿನ ಕೆರಕಲಮಟ್ಟಿ ಗ್ರಾಮದ ಬಳಿ ಹೊಸದಾಗಿ ಖರೀದಿ ಮಾಡಿರುವ ಕೇದಾರನಾಥ ಸಕ್ಕರೆ ಕಾರ್ಖಾನೆ ಹಾಗೂ ಬಾದಾಮಿ ಶುಗರ್ಸ್ ಉದ್ಘಾಟನೆ ಹಾಗೂ ನಿರಾಣಿ ಉದ್ಯಮದಿಂದ ಪ್ರತಿದಿನ 26 ಲಕ್ಷ ಲೀಟರ್ ಎಥೆನಾಲ್ ಉತ್ಪಾದನೆ ವಿಸ್ತರಣೆ  ಘಟಕ ಹಾಗೂ ವಿವಿಧ ವಿಸ್ತರಣಾ ಕಾರ್ಯಗಳಿಗೆ ಅಮಿತ್ ಷಾ ಚಾಲನೆ ನೀಡಿದರು. ಮುಖ್ಯಮಂತ್ರಿರೊಂದಿಗೆ ಬೆಳಗಾವಿಯಿಂದ ಹೆಲಿಕಾಪ್ಟರ್‌ನಲ್ಲಿ ಆಗಮಿಸಿದ ಅಮಿತ್ ಷಾ ಅವರು ವೇದಿಕೆ ಹತ್ತುವ ಮೊದಲು 11 ಗೋಮಾತೆಗಳಿಗೆ ಪೂಜೆ ಸಲ್ಲಿಸಿದರು. ಬಳಿಕೆ ನಿರಾಣಿ ಗ್ರೂಪ್‌ನ ವಿವಿಧ ಯೋಜನೆಗಳ ಉದ್ಘಾಟನೆ ಹಾಗೂ ಭೂಮಿ ಪೂಜೆ ನೆರವೇರಿಸಿದರು. ಅಮಿತ್ ಷಾ ಅವರಿಗೆ ನಿರಾಣಿ ಕುಟುಂಬದಿಂದ ಬೆಳ್ಳಿ ಗದೆ ಕೊಟ್ಟು ಗೌರವಿಸಲಾಯಿತು. ಕಾರ್ಯಕ್ರಮದಲ್ಲಿ ಮಾತನಾಡಿದ ಅಮಿತ್ ಷಾ ನಿರಾಣಿ ಅವರು ಔದ್ಯೋಗಿಕವಾಗಿ ಬೆಳೆದು ಅನೇಕ ನಿರುದ್ಯೋಗಿಗಳಿಗೆ ಉದ್ಯೋಗ ನೀಡುತ್ತಿರುವುದು, ಮುಖ್ಯವಾಗಿ ಇವತ್ತು ದೇಶದಲ್ಲಿ ಅತಿ ದೊಡ್ಡ ಎಥೆನಾಲ್ ಘಟಕ ಆರಂಭಿಸಲು ಮುಂದಾಗಿರುವ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದರು.

**ಸಕ್ಕರೆ ರೈತರಿಗೆ ಅಕ್ಕರೆ ನಮನ:** ಅಮಿತ್ ಷಾ ಅವರು ಬಾಗಲಕೋಟೆ ರೈತರಿಗೆ ವಿಶೇಷವಾಗಿ ಅಭಿನಂದನೆ ಸಲ್ಲಿಸಿದರು. ಕೃಷ್ಣಾ, ಘಟಪ್ರಭಾ ನದಿಯಿಂದ 12 ತಿಂಗಳು ನೀರು ಪಡೆದು ರೈತರು ದೇಶದ ಕೃಷಿ ಕ್ಷೇತ್ರದ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರ ವಹಿಸಿದ್ದಾರೆ. ದೇಶದ ಪ್ರಗತಿಯಲ್ಲಿ ನಿಮ್ಮ ಪಾಲು ದೊಡ್ಡದು ಎಂದು ಕೊಂಡಾಡಿದರು.

2014 ಮತ್ತು 2019ರ ಲೋಕಸಭಾ ಚುನಾವಣೆಯಲ್ಲಿ ದೇಶದಲ್ಲಿ ಬಿಜೆಪಿ ಸ್ವತಂತ್ರವಾಗಿ ಅಧಿಕಾರ ಹಿಡಿಯುವಲ್ಲಿ ಕರ್ನಾಟಕದ ಕೊಡುಗೆ ದೊಡ್ಡದಿದೆ. ಕರ್ನಾಟಕದ ಬಗ್ಗೆ ಪ್ರಧಾನಿ ನರೇಂದ್ರ ಮೋದಿ ಅವರಿಗೆ ವಿಶೇಷವಾಗಿ ಅಭಿಮಾನ ಇದೆ. ಇಲ್ಲಿನ ಎಲ್ಲ ಚುನಾವಣೆಗಳಲ್ಲೂ ಮುಂಬೈ ಕರ್ನಾಟಕ ಬಿಜೆಪಿಗೆ ಬೆಂಬಲ ನೀಡುತ್ತಾ ಬಂದಿದೆ.

ಆಧಾರ: ವಿಜಯವಾಣಿ, ದಿನಾಂಕ:18.01.2021

## 9. ಏರೋ ಇಂಡಿಯಾ ಪ್ರದರ್ಶನ ವಾಯುನೆಲೆ ಸಜ್ಜು

ಯಲಹಂಕ ವಾಯುನೆಲೆಯಲ್ಲಿ ಫೆಬ್ರವರಿ 3 ರಿಂದ 5ರವರೆಗೆ ನಡೆಯಲಿರುವ ಏರೋ ಇಂಡಿಯಾ–2021 ವೈಮಾನಿಕ ಪ್ರದರ್ಶನಕ್ಕೆ ಸಿದ್ಧತೆ ಭರದಿಂದ ಸಾಗಿದೆ.

ಭಾರತೀಯ ಸೇನೆಯ ಪ್ರಮುಖ ಅಸ್ತ್ರಗಳಾಗಿರುವ ರಫೇಲ್ ಯುದ್ಧ ವಿಮಾನ ಎರಡು ರೋಟರ್‌ಗಳಿರುವ ಹೆವಿ ಲಿಫ್ಟ್ ಹೆಲಿಕಾಪ್ಟರ್ ಚಿನೂಕ್, ಆಟ್ಯಾಕ್ ಹೆಲಿಕಾಪ್ಟರ್, ಅಪಾಚೆ ಏರೋಬ್ಯಾಟಿಕ್

ವಿಮಾನಗಳಾದ 'ಸೂರ್ಯಕಿರಣ್ ಮತ್ತು ಸಾರಂಗ್ ಹೆಲಿಕಾಪ್ಟರ್‌ಗಳ ಜಂಟಿ ಕಸರತ್ತು ಈ ಬಾರಿಯ ಪ್ರದರ್ಶನದ ಪ್ರಮುಖ ಆಕರ್ಷಣೆಯಾಗಲಿದೆ. ಸೂರ್ಯಕಿರಣ್ ಮತ್ತು ಸಾರಂಗ್ ಹೆಲಿಕಾಪ್ಟರ್ ತಂಡಗಳು ಈ ಮೊದಲು ಹಲವು ಬಾರಿ ಪ್ರತ್ಯೇಕವಾಗಿ ಪ್ರದರ್ಶನ ನೀಡಿವೆ. ಎರಡು ಕೂಡ ಒಟ್ಟಾಗಿ ಪ್ರದರ್ಶನ ನೀಡುತ್ತಿರುವುದು ಇದೇ ಮೊದಲು. ಕೋವಿಡ್–19 ಆತಂಕದ ನಡುವೆಯೂ ಸಾವಿರಾರು ಸಂಖ್ಯೆಯಲ್ಲಿ ಜನ ಸೇರುವ ಅತಿದೊಡ್ಡ ವೈಮಾನಿಕ ಪ್ರದರ್ಶನದ ಸಿದ್ಧತೆಗಳ ಕುರಿತು ಯಲಹಂಕ ವಾಯುನೆಲೆಯ ಏರ್ ಆಫೀಸರ್ ಕಮಾಂಡಿಂಗ್ (ಎಒಸಿ) ಶೈಲೇಂದ್ರ ಸೂದ್ ಸುದ್ದಿಗೋಷ್ಠಿಯಲ್ಲಿ ವಿವರ ನೀಡಿದರು.

ಈ ಬಾರಿಯ ವೈಮಾನಿಕ ಪ್ರದರ್ಶನದಲ್ಲಿ ಬಹುತೇಕ ಭಾರತೀಯ ಸೇನೆಯ ವಿಮಾನ ಹೆಲಿಕಾಪ್ಟರ್‌ಗಳು ಭಾಗವಹಿಸುತ್ತಿವೆ. ಪ್ರಮುಖವಾಗಿ ಎಂ.ಐ–17 ವಿ5 ಹೆಲಿಕಾಪ್ಟರ್, ಯುದ್ಧ ವಿಮಾನಗಳಾದ ಜಾಗ್ವಾರ್, ಹಾಕ್, ಎಸ್‌ಯು–30 ಎಲ್‌ಸಿಎ ತೇಜಸ್, ರಫೇಲ್, ಸರಕು ಮತ್ತು ಗುಪ್ತಚರ ವಿಮಾನ ಡಾರ್ನಿಯರ್ ಹೆಲಿಕಾಪ್ಟರ್‌ಗಳಾದ ಎಎಲ್‌ಎಚ್‌ಎಲ್, ಸಿಎಚ್, ಎಲ್‌ಯುಎಚ್, ಸಿ–17 ಮತ್ತು ಸೇನೆಯ ಸರಕು ವಿಮಾನ ಎಎನ್–32, ಎಂಬ್ರಿಯರ್ ಸೇರಿ ಒಟ್ಟು 41 ಮಾದರಿಯ ಹೆಲಿಕಾಪ್ಟರ್‌ಗಳು ಭಾಗವಹಿಸುತ್ತಿವೆ.

ವಿದೇಶಿ ಕಂಪನಿಗಳು ಆಸಕ್ತಿ ತೋರಿಸಿ ನೋಂದಣಿ ಮಾಡಿದ್ದವು. ಕೋವಿಡ್ ಹಿನ್ನೆಲೆಯಲ್ಲಿ ವಿಮಾನಗಳು ಆಗಮಿಸುವುದನ್ನು ಈಗಲೇ ಖಚಿತವಾಗಿ ಹೇಳಲಾಗದು ಆದರೆ, ವರ್ಚುವಲ್ ಪ್ರದರ್ಶನ ಮತ್ತು ಪ್ರತಿನಿಧಿಗಳು ಭಾಗವಹಿಸುವ ಸಾಧ್ಯತೆ ಇದೆ ಎಂದು ಶೈಲೇಂದ್ರ ಸೂದ್ ತಿಳಿಸಿದರು.

**ದಿನಕ್ಕೆ 15 ಸಾವಿರ ಜನರಿಗೆ ಮಾತ್ರ ಅವಕಾಶ:** ಉದ್ಘಾಟನೆ ದಿನ ಹೊರತುಪಡಿಸಿ ಪ್ರತಿವರ್ಷ ವೈಮಾನಿಕ ಪ್ರದರ್ಶನದಲ್ಲಿ ದಿನಕ್ಕೆ ಸುಮಾರು ಒಂದು ಲಕ್ಷ ಜನ ಭಾಗವಹಿಸುತ್ತಿದ್ದರು. ಕೋವಿಡ್ ಕಾರಣದಿಂದ ಸೀಮಿತ ಸಂಖ್ಯೆಯ ಜನರಿಗೆ ಅವಕಾಶ ಮಾಡಿಕೊಡಲಾಗಿದೆ. ಪ್ರತಿದಿನ 15 ಸಾವಿರ ಜನರಿಗೆ ಮಾತ್ರ ವಿಮಾನ ಹಾರಾಟ ಪ್ರದರ್ಶನ ವೀಕ್ಷಣೆ ಮತ್ತು ಮಳಿಗೆಗಳ ಭೇಟಿಗೆ ಟೀಕೆಟ್ ನೀಡಲಾಗುತ್ತದೆ. ಪ್ರದರ್ಶನ ಮಳಿಗೆಗಳಿಗೆ ಕೇವಲ ಬಿಸಿನೆಸ್ ವಿಸಿಟರ್‌ಗಳಿಗೆ ಅವಕಾಶವಿದೆ. ವೈಮಾನಿಕ ಪ್ರದರ್ಶನ ವೀಕ್ಷಣೆಗೆ ಮಾತ್ರ ಸಾರ್ವಜನಿಕರಿಗೆ ಅವಕಾಶವಿರುತ್ತದೆ. ಪ್ರದರ್ಶನಕ್ಕೆ ಬರುವವರು ಕಡ್ಡಾಯವಾಗಿ ಮಾಸ್ಕ್ ಧರಿಸಬೇಕು. ತಪಾಸಣೆ ವೇಳೆ ಆರೋಗ್ಯ ಸಮಸ್ಯೆ ಕಂಡು ಬಂದರೆ ಅವರನ್ನು ಕ್ವಾರಂಟೈನ್ ಮಾಡಲು ವ್ಯವಸ್ಥೆ ಮಾಡಲಾಗಿದೆ.

**ವೈದ್ಯಕೀಯ ಸನ್ನದ್ಧತೆ**: ಆವರಣದಲ್ಲಿ 26 ವೈದ್ಯರು, ಐದು ಆಂಬ್ಯುಲೆನ್ಸ್ ತುರ್ತು ಪರಿಸ್ಥಿತಿ ಎದುರಿಸಲು 14 ಸರ್ಕಾರಿ ಆಸ್ಪತ್ರೆ, 48 ಖಾಸಗಿ ಆಸ್ಪತ್ರೆ ಸೇರಿ 2500 ಬೆಡ್ ಮೀಸಲಿಡಲಾಗಿದೆ.

**ಆ್ಯಪ್ ವೆಬ್‌ಸೈಟ್‌ನಲ್ಲಿ ವೀಕ್ಷಿಸಿ:** ಕೋವಿಡ್ ಕಾರಣ ವೈಮಾನಿಕ ಪ್ರದರ್ಶನವನ್ನು ಆ್ಯಪ್ ಮತ್ತು ಆನ್‌ಲೈನ್ ಮೂಲಕ ವೀಕ್ಷಣೆಗೆ ವ್ಯವಸ್ಥೆ ಮಾಡಲಾಗುತ್ತಿದೆ. ವರ್ಚುವಲ್ ಸೆಮಿನಾರ್‌ಗಳಲ್ಲಿ ಸಾರ್ವಜನಿಕರು ಕೂಡ ಭಾಗವಹಿಸಬಹುದು.

**14 ದೇಶಗಳು ಭಾಗಿ:** ಅಮೇರಿಕ, ಯುಕೆ, ದೇಶಗಳು ತಮ್ಮ ಪ್ರತಿನಿಧಿಗಳನ್ನು ಕಳುಹಿಸಲಿವೆ. ರಕ್ಷಣಾ ವಲಯಕ್ಕೆ ಸಂಬಂಧಿಸಿದ 78 ವಿದೇಶಿ ಕಂಪನಿಗಳು ಸೇರಿದಂತೆ 540 ಪ್ರದರ್ಶಕರು ವೈಮಾನಿಕ ಪ್ರದರ್ಶನದಲ್ಲಿ ಭಾಗವಹಿಸುತ್ತಿದ್ದಾರೆ. ಇದರಲ್ಲಿ 143 ಪ್ರದರ್ಶನಗಳು ವರ್ಚುವಲ್ ಇರಲಿವೆ.

**ಬೆಂಕಿ ನಂದಿಸಲು ಹೆಲಿಕಾಪ್ಟರ್‌ಗಳ ಬಳಕೆ:** ಕಳೆದ ಬಾರಿ ಪಾರ್ಕಿಂಗ್ ಜಾಗದಲ್ಲಿ ಬೆಂಕಿ ಅನಾಹುತ ಸಂಭವಿಸಿರುವ ಘಟನೆಯನ್ನು ಗಂಭೀರವಾಗಿ ಪರಿಗಣಿಸಿ ಈ ಬಾರಿ ಬೆಂಕಿ ನಂದಿಸಲು ಎರಡು ಹೆಲಿಕಾಪ್ಟರ್‌ಗಳನ್ನು ವಿಶೇಷವಾಗಿ ನಿಯೋಜನೆ ಮಾಡಲಾಗುತ್ತಿದೆ. ಬೆಂಕಿ ಕಾಣಿಸಿಕೊಂಡ ತಕ್ಷಣ ಕ್ಷಿಪ್ರವಾಗಿ ನೀರು ಹಾಕಿ ನಂದಿಸಲು ಹೆಲಿಕಾಪ್ಟರ್ ಬಕೆಟ್ ಬಳಕೆ ಮಾಡಲಾಗುತ್ತದೆ. ಇನ್ನು ಬೆಂಕಿ ಸಾಧ್ಯತೆಗಳನ್ನು ತಡೆಯಲು ಎಲ್ಲೆಡೆ ಒಣ ಹುಲ್ಲುಗಳನ್ನು ತೆರವುಗೊಳಿಸಲಾಗಿದೆ. ವಾಹನಗಳ ಪಾರ್ಕಿಂಗ್‌ಗೆ ಕಡ್ಡಾಯವಾಗಿ ಮಾರ್ಕಿಂಗ್ ಮಾಡಲಾಗುತ್ತಿದೆ. ಎಲ್ಲ ಕಡೆ ಸಿಸಿ ಕ್ಯಾಮೆರಾ ಅಳವಡಿಸಿ, ಎಲ್ಲ ಸ್ಥಳಗಳಲ್ಲಿ ಅಗ್ನಿಶಾಮಕ ವಾಹನಗಳನ್ನು ನಿಯೋಜಿಸಲಾಗುತ್ತದೆ.

**ಕೋವಿಡ್ ನೆಗೆಟಿವ್ ಪ್ರಮಾಣ ಪತ್ರ ಕಡ್ಡಾಯ:** ವೈಮಾನಿಕ ಪ್ರದರ್ಶನಕ್ಕೆ ಆಗಮಿಸುವ ಪ್ರತಿಯೊಬ್ಬರು ಕೋವಿಡ್ ನೆಗೆಟಿವ್ (ಆರ್‌ಟಿ-ಪಿಸಿಆರ್ ಪರೀಕ್ಷೆ) ಪ್ರಮಾಣ ಪತ್ರ ಹೊಂದಿರಬೇಕು. ಪ್ರದರ್ಶನಕ್ಕೆ 72 ತಾಸು ಮೊದಲು ಕೋವಿಡ್ ಪರೀಕ್ಷೆ ಮಾಡಿಸಿಕೊಂಡಿರಬೇಕು. ಆದರೆ, ವರದಿ ವಿಳಂಬವಾದರೆ ಏನು ಮಾಡಬೇಕೆಂಬ ಪ್ರಶ್ನೆಗಳು ಎದುರಾಗಿವೆ. ಈ ಕುರಿತು ಅಂತಿಮ ನಿರ್ಧಾರವನ್ನು ರಾಜ್ಯ ಸರ್ಕಾರಕ್ಕೆ ಬಿಟ್ಟಿದ್ದೇವೆ ಎಂದು ವಾಯುಸೇನೆ ಅಧಿಕಾರಿಗಳು ತಿಳಿಸಿದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:23.01.2021

## 10. ಪೆಟ್ರೋಲ್, ಡೀಸೆಲ್ ಈಗ ಮತ್ತಷ್ಟು ದುಬಾರಿ

ಪೆಟ್ರೋಲ್ ಹಾಗೂ ಡೀಸೆಲ್ ದರಗಳ ಏರುಗತಿ ಮುಂದುವರಿದಿದೆ. ಪ್ರತಿ ಲೀಟರ್‌ಗೆ ಕ್ರಮವಾಗಿ 25 ಹಾಗೂ 26 ಪೈಸೆ ಏರಿಕೆ ಆಗಿವೆ. ದಿಲ್ಲಿಯಲ್ಲಿ ಡೀಸೆಲ್ ಸಾರ್ವಕಾಲಿಕ ದಾಖಲೆ ಸ್ಥಾಪಿಸಿದ್ದು, ಬೆಂಗಳೂರಿನಲ್ಲೂ 80ರ ಗಡಿ ದಾಟಿದೆ.

ಮಹಾನಗರಗಳ ಪೈಕಿ ಮುಂಬೈನಲ್ಲಿ ಲೀಟರ್ ಪೆಟ್ರೋಲ್ ದರ 82.40 ರೂ. ಆಗಿದೆ. ಅದೇ ರೀತಿ ದೆಹಲಿಯಲ್ಲಿ ಪೆಟ್ರೋಲ್ ರೂ.85.45 ಹಾಗೂ ಡೀಸೆಲ್ ರೂ.75.63 ಗೆ ಏರಿದ್ದು, ಡೀಸೆಲ್ ಸಾರ್ವಕಾಲಿಕ ಏರಿಕೆಯಲ್ಲಿಯೇ ಮುಂದುವರಿದಿದೆ. ಈ ಮುನ್ನ ಜನವರಿ 18 ಹಾಗೂ ಜನವರಿ 19 ರಂದು ಪೆಟ್ರೋಲ್ ಮತ್ತು ಡೀಸೆಲ್ 25 ಪೈಸೆ ಏರಿಕೆ ಆಗಿತ್ತು. ಸೌದಿ ಅರೇಬಿಯಾ ತನ್ನ ತೈಲ ಉತ್ಪಾದನೆಯನ್ನು ಕಡಿತಗೊಳಿಸಿದ್ದರ ಪರಿಣಾಮವಾಗಿ ತೈಲ ದರ ಏರಿಕೆ ಕಾಣುತ್ತಿವೆ ಎಂದು ಕೇಂದ್ರ ಸರ್ಕಾರ ತಿಳಿಸಿದೆ.

ಆಧಾರ: ಕನ್ನಡಪ್ರಭ ದಿನಾಂಕ:23.01.2021

## 11. ರಕ್ಷಣಾ ವಲಯದಲ್ಲಿ ಭಾರತ ಅವಕಾಶಗಳ ಆಗರ

ಆರು ವರ್ಷಗಳಲ್ಲಿ ತಂದಿರುವ ಸುಧಾರಣೆ ಕ್ರಮಗಳಿಂದ ಏರೋಸ್ಪೇಸ್ ವಲಯದಲ್ಲಿ ಭಾರತ ಸ್ವಾವಲಂಬನೆಯತ್ತ ಹೆಜ್ಜೆ ಇಡುತ್ತಿದೆ ಎಂದು ರಾಷ್ಟ್ರಪತಿ ರಾಮನಾಥ್ ಕೋವಿಂದ್ ಹೇಳಿದರು.

'ಏರೋ ಇಂಡಿಯಾ' ಸಮಾರೋಪ ಸಮಾರಂಭದಲ್ಲಿ ಅವರು ಮಾತನಾಡಿದರು. ರಕ್ಷಣಾ ಸಚಿವ ರಾಜನಾಥ್ ಸಿಂಗ್, ರಾಷ್ಟ್ರಪತಿ ರಾಮನಾಥ ಕೋವಿಂದ್ ಪತ್ನಿ ಸವಿತಾ ಕೋವಿಂದ್, ಮುಖ್ಯಮಂತ್ರಿ ಬಿ.ಎಸ್ ಯಡಿಯೂರಪ್ಪ, ಸೇನಾಪಡೆಗಳ ಮುಖ್ಯಸ್ಥ ಬಿಪಿನ್ ರಾವತ್, ರಕ್ಷಣಾ ಇಲಾಖೆ ಕಾರ್ಯದರ್ಶಿ ರವಿಕುಮಾರ್ ಉಪಸ್ಥಿತರಿದ್ದರು.

ಆಧಾರ: ಕನ್ನಡಪ್ರಭ ದಿನಾಂಕ:24.01.2021

## 12. ವಿಶೇಷಚೇತನರಿಗೆ ವರ್ಕ್‌ಫ್ರಮ್ ಹೋಮ್

ಸಚಿವಾಲಯ ಹಾಗೂ ನಾನಾ ಇಲಾಖೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ದೃಷ್ಟಿದೋಷ ಹಾಗೂ ಇತರೆ ವಿಶೇಷಚೇತನ ಅಧಿಕಾರಿ/ನೌಕರರು ಮನೆಯಿಂದಲೇ ಕಾರ್ಯನಿರ್ವಹಿಸಬಹುದಾಗಿದೆ ಎಂದು ಸರ್ಕಾರ ಸುತ್ತೋಲೆ ಹೊರಡಿಸಿದೆ.

ಈ ಸಂಬಂಧ ಮುಖ್ಯ ಕಾರ್ಯದರ್ಶಿ ಪಿ. ರವಿಕುಮಾರ್ ಸುತ್ತೋಲೆ ಹೊರಡಿಸಿದ್ದಾರೆ. "ದೃಷ್ಟಿದೋಷ ಹಾಗೂ ಇತರೆ ವಿಶೇಷಚೇತನ ಅಧಿಕಾರಿ, ನೌಕರರು ಕಚೇರಿಗೆ ಹಾಜರಾಗಿ ಕರ್ತವ್ಯ ನಿರ್ವಹಿಸುವುದು ಕಷ್ಟಸಾಧ್ಯವೆಂದು ತಿಳಿದಿದೆ. ಎಲ್ಲ ಸರ್ಕಾರಿ, ಅರೆ ಸರ್ಕಾರಿ, ಸ್ವಾಯತ್ತ ಸಂಸ್ಥೆ, ನಿಗಮ, ಮಂಡಳಿಗಳಲ್ಲಿ ಕಾರ್ಯನಿರ್ವಹಿಸುತ್ತಿರುವವರು ಮನೆಯಿಂದಲೇ ಕೆಲಸ ಮಾಡಬಹುದಾಗಿದೆ.," ಎಂದು ತಿಳಿಸಿದ್ದಾರೆ. ಇದರಿಂದ 10 ಸಾವಿರಕ್ಕೂ ಹೆಚ್ಚಿನ ವಿಕಲಚೇತನ ನೌಕರರಿಗೆ ಅನುಕೂಲವಾಗಲಿದೆ.

ಬಸ್‌ಗಳಲ್ಲಿ ಕಚೇರಿಗಳಿಗೆ ಬಂದು ಹೋಗಲು ತೊಂದರೆಯಾಗಲಿದೆ ಎಂಬ ಕಾರಣಕ್ಕೆ ಈ ವಿನಾಯಿತಿ ನೀಡಲಾಗಿದೆ. ಸರ್ಕಾರಿ ಕಚೇರಿ, ನಿಗಮ-ಮಂಡಳಿಗಳಲ್ಲಿ ಕೆಲಸ ಮಾಡುತ್ತಿರುವ ವಿಕಲಚೇತನರಿಗೆ ಅನ್ವಯವಾಗಲಿದೆ.

ದೃಷ್ಟಿ ವಿಕಲಚೇತನರಿಗೆ ಮನೆಯಿಂದ ಕೆಲಸ ಮಾಡುವುದು ಕಷ್ಟ. ಇವರಲ್ಲಿ ಕೆಲವರು ಉಪನ್ಯಾಸಕರು, ಶಿಕ್ಷಕರು, ಸಂಗೀತ ಶಿಕ್ಷಕರಾಗಿ ಕೆಲಸ ಮಾಡುತ್ತಿದ್ದಾರೆ. ಇವರು ಆನ್‌ಲೈನ್‌ನಲ್ಲಿ ಪಾಠ ಮಾಡಬಹುದು. ಆದರೆ ಸ್ವಾಗತಕಾರರಾಗಿ ಕೆಲಸ ಮಾಡುತ್ತಿರುವ ಟೆಲಿಫೋನ್ ಆಪರೇಟರ್‌ಗಳು ಮನೆಯಿಂದಲೇ ಆನ್‌ಲೈನ್‌ನಲ್ಲಿ ಕಡತ ವಿಲೇವಾರಿ ಮಾಡಲು ವ್ಯವಸ್ಥೆ ಮಾಡಲಾಗುತ್ತಿದೆ. ಕಡತಗಳನ್ನು ಮನೆಗೆ ತಲುಪಿಸಿ ವಿಕಲಚೇತನ ನೌಕರರಿಂದ ಕೆಲಸ ಮಾಡಿಸಲು ಕೆಲವು ಇಲಾಖೆಗಳು ನಿರ್ಧರಿಸಿವೆ. ಕೋವಿಡ್ ಲಾಕ್‌ಡೌನ್ ಅವಧಿಯಿಂದಲೇ ಈ ವ್ಯವಸ್ಥೆ ಕೆಲವು ಇಲಾಖೆಗಳಲ್ಲಿ ಜಾರಿಗೆ ಬಂದಿದೆ. ಈಗ ಸರ್ಕಾರ ಅಧಿಕೃತವಾಗಿ ಜಾರಿಗೆ ತಂದಿದೆ.

ಆಧಾರ: ವಿಜಯ ಕರ್ನಾಟಕ, ದಿನಾಂಕ:06.02.2021

## 13. ಜನರಲ್ ತಿಮ್ಮಯ್ಯ ರಾಷ್ಟ್ರದ ಹೆಮ್ಮೆ

ಮಡಿಕೇರಿಯಲ್ಲಿ ಅಭಿವೃದ್ಧಿ ಪಡಿಸಿರುವ 'ಜನರಲ್ ತಿಮ್ಮಯ್ಯ ವಸ್ತು ಸಂಗ್ರಹಾಲಯ' ವನ್ನು ರಾಷ್ಟ್ರಪತಿ ರಾಮನಾಥ ಕೋವಿಂದ್ ಉದ್ಘಾಟಿಸಿದರು. ನಂತರ ಜನರಲ್ ಕೆ.ಎಸ್.ತಿಮ್ಮಯ್ಯ ಅವರ ಬಾಲ್ಯದಿಂದ ಸೇನಾ ಬದುಕಿನವರೆಗೆ ಅನೇಕ ಘಟನೆಗಳು, ಭಾರತೀಯ ಸೇನಾಪಡೆಯ ಮಹತ್ವ ಹಾಗೂ ಯುದ್ಧ ಸ್ಮಾರಕಗಳನ್ನು ವೀಕ್ಷಿಸಿದರು. ತಿಮ್ಮಯ್ಯ ಅವರ ಸೇನಾ ಸಮವಸ್ತ್ರ, ತಾತನೊಂದಿಗೆ ಅವರು ತಮ್ಮ ನಿವಾಸ 'ಸನ್ನಿಸೈಡ್'ನಲ್ಲಿ ಮಲಗುತ್ತಿದ್ದ ಗತ ಕಾಲದ ನೆನಪು ತರುವ ಹಾಸಿಗೆ, ಮಿನಿ ರಾಕೆಟ್ ಲಾಂಚರ್, ಯುದ್ಧದಲ್ಲಿ ಬಳಸಲಾಗುತ್ತಿದ್ದ ಬಂದೂಕುಗಳು ಮುಂತಾದವನ್ನು ಕಣ್ತುಂಬಿಕೊಂಡರು. ವಸ್ತುಸಂಗ್ರಹಾಲಯ ಆವರಣದಲ್ಲಿರುವ ಯುದ್ಧ ಸ್ಮಾರಕಕ್ಕೆ ಗೌರವ ನಮನ ಸಲ್ಲಿಸಿದರು. ಯುದ್ಧ ಟ್ಯಾಂಕರ್, ಯುದ್ಧ ವಿಮಾನ ಅವಲೋಕಿಸಿದರು.

ಎಲ್ಲವನ್ನು ವೀಕ್ಷಿಸಿ ನಂತರ ಸಂದರ್ಶಕರ ಪುಸ್ತಕದಲ್ಲಿ ಕೋವಿಂದ್ ಅವರು "ಸ್ಮಾರಕವಾಗಿ ರೂಪುಗೊಂಡಿರುವ ಜ.ತಿಮ್ಮಯ್ಯ ಮನೆ 'ಸನ್ನಸೈಡ್' ತಿಮ್ಮಯ್ಯ ಅವರ ಪರಂಪರೆ ಮುಂದುವರೆಸಲು ಯುವಕರಿಗೆ ಪ್ರೇರಣೆ ಆಗಲಿದೆ. ಜ.ತಿಮ್ಮಯ್ಯ, ಕಾರ್ಯಪ್ಪ ಅವರಂತಹ ವೀರ ಸೇನಾನಿಗಳನ್ನು ದೇಶಕ್ಕೆ ನೀಡಿದ ಹೆಮ್ಮೆ ಕೊಡಗು ಜಿಲ್ಲೆಯದ್ದಾಗಿದೆ. ಇವರು ದೇಶದ ಹೆಮ್ಮೆ" ಎಂದು ಬರೆದರು.

ತಲಕಾವೇರಿಯಲ್ಲಿ ಪೂಜೆ: ಇದಕ್ಕೂ ಮೊದಲು ರಾಷ್ಟ್ರಪತಿ ರಾಮನಾಥ ಕೋವಿಂದ್ ಜೀವನದಿ ಕಾವೇರಿ ಉಗಮಸ್ಥಾನ ತಲಕಾವೇರಿಯಲ್ಲಿ ವಿಶೇಷ ಪೂಜೆ ಸಲ್ಲಿಸಿದರು. ಪತ್ನಿ ಸವಿತಾ ಕೋವಿಂದ್, ಪುತ್ರಿ ಜೊತೆಯಲ್ಲಿದ್ದರು. ದೇವಾಲಯ ಪ್ರವೇಶಕ್ಕೂ ಮೊದಲು ಅರ್ಚಕರು ಪೂರ್ಣಕುಂಭದೊಂದಿಗೆ ರಾಷ್ಟ್ರಪತಿ ಅವರನ್ನು ಸ್ವಾಗತಿಸಿದರು. ಶ್ರೀ ಮಹಾಗಣಪತಿ ಹಾಗೂ ಅಗಸ್ತ್ಯೇಶ್ವರ ಸನ್ನಿಧಿಗೂ ಭೇಟಿ ನೀಡಿದ್ದರು. ಸಂಜೆ 4.30ರ ಸುಮಾರಿಗೆ ಸೇನಾ ವಿಶೇಷ ಹೆಲಿಕಾಪ್ಟರ್‌ನಲ್ಲಿ ಬೆಂಗಳೂರಿಗೆ ಮರಳಿದರು.

ಕೊಡಗು ಶೈಲಿ ಊಟಕ್ಕೆ ಮೆಚ್ಚುಗೆ: ಗಾಳಿಬೀಡು ರಸ್ತೆಯ ಐಷಾರಾಮಿ ಖಾಸಗಿ ರೆಸಾರ್ಟ್‌ನಲ್ಲಿ ಊಟ ಮತ್ತು ವಿಶ್ರಾಂತಿಯ ವ್ಯವಸ್ಥೆ ಮಾಡಲಾಗಿತ್ತು. ರೆಸಾರ್ಟ್‌ನ ಬಾಣಸಿಗರು ಕೊಡಗು ಶೈಲಿಯ ಸಸ್ಯಾಹಾರಿ ಅಡುಗೆ ಮಾಡಿದ್ದರು. ಕಣಿಲೆ ಸಾರು, ಕಡುಂಬುಟ್ಟು, ನೂಪುಟ್ಟು ಸೇರಿದಂತೆ ಕೊಡಗಿನ ವಿಶೇಷ ಸಸ್ಯಾಹಾರಿ ಖಾದ್ಯಗಳನ್ನು ರಾಷ್ಟ್ರಪತಿ ದಂಪತಿ ಸವಿದರು. ಇಲ್ಲಿನ ಅಡುಗೆ ರುಚಿಗೆ ಮೆಚ್ಚುಗೆ ಸೂಚಿಸಿದ ಅವರು, ಹಸಿರು ಪರಿಸರಕ್ಕೂ ಮನಸೋತು ಶ್ಲಾಘಿಸಿದರು.

**ಅಂಗಡಿ ಮುಂಗಟ್ಟು ಬಂದ್:** ದೇಶದ ಪ್ರಥಮ ಪ್ರಜೆ ಬರುವ ಸಂಭ್ರಮ, ಹೆಮ್ಮೆಯ ಸೇನಾನಿ ನೆನಪಿನಲ್ಲಿ ಸ್ಮಾರಕ ಆರಂಭವಾಗುತ್ತಿರುವ ಖುಷಿ, ಶಿಷ್ಟಾಚಾರ ಪಾಲನೆ ಮತ್ತು ಅತಿಯಾದ ಭದ್ರತೆಯ ನೆರಳಲ್ಲಿ ಕರಗಿಹೋಗಿಬಿಟ್ಟಿತ್ತು. ವಾಹನಗಳ ಸಾಲಿನ ಧೂಳನ್ನು ಮುಚ್ಚಿದ ಮನೆ ಬಾಗಿಲುಗಳ ಸಂದಿಯಿಂದ ಭಾಗಮಂಡಲ ಜನತೆ ಕಣ್ತುಂಬಿಕೊಂಡರೆ, ಮಡಿಕೇರಿಯಲ್ಲಿ ಅಘೋಷಿತ ಕರ್ಫ್ಯೂ ಮಾದರಿಯ ವಾತಾವರಣ ಇತ್ತು.

ರಾಷ್ಟ್ರಪತಿ ಸಂಚರಿಸುವ ಮಾರ್ಗದಲ್ಲಿ ಬೆಳಗ್ಗೆಯಿಂದಲೇ ವಾಹನ ಸಂಚಾರವನ್ನು ನಿರ್ಬಂಧಿಸಲಾಗಿತ್ತು. ಅಂಗಡಿ ಮುಂಗಟ್ಟುಗಳನ್ನು ಕೂಡ ಮುಚ್ಚುವಂತೆ ಸೂಚಿಸಲಾಗಿತ್ತು. ಈ ಬಗ್ಗೆ

ಒಂದು ವಾರ ಹಿಂದೆಯೇ ಜಿಲ್ಲಾಡಳಿತ ಪ್ರಕಟಣೆ ನೀಡಿದ್ದ ಕಾರಣ ವ್ಯಾಪಕ ಪ್ರಚಾರ ಪಡೆದುಕೊಂಡು ಜನಸಾಮಾನ್ಯರು ಕೂಡ ಪಟ್ಟಣದ ಕಡೆ ಸುಳಿಯದಂತಾಗಿತ್ತು. ಭಾಗಮಂಡಲದಲ್ಲೂ ಸ್ಥಿತಿ ಇದಕ್ಕಿಂತ ಭಿನ್ನವಾಗಿರಲಿಲ್ಲ.

ಜಾನುವಾರುಗಳ ಪರಿತಾಪ: ರಾಷ್ಟ್ರಪತಿ ಕಾರ್ಯಕ್ರಮ ಹಿನ್ನೆಲೆಯಲ್ಲಿ ಮಡಿಕೇರಿಯಲ್ಲಿ ಅಡ್ಡಾಡುತ್ತಿದ್ದ ಬಿಡಾಡಿ ದನಗಳನ್ನು ನಗರಸಭೆ ಸಿಬ್ಬಂದಿ ರಾತ್ರೋರಾತ್ರಿ, ಹಿಡಿದು ಮಾರುಕಟ್ಟೆಯ ನೆಲಮಹಡಿಗೆ ತೆಗೆದುಕೊಂಡು ಹೋಗಿ ಬಿಟ್ಟಿದ್ದಾರೆ. ಆದರೆ ಅಲ್ಲಿ ಜಾನುವಾರುಗಳಿಗೆ ಆಹಾರ, ನೀರಿನ ವ್ಯವಸ್ಥೆಯನ್ನೇ ಮಾಡಲಿಲ್ಲ. ಸಂತೆಯಲ್ಲಿ ಉಳಿದಿದ್ದ ಒಂದಿಷ್ಟು ತರಕಾರಿ ಸೇವಿಸಿದ ದನಗಳು ನಂತರ ಹಸಿವು, ಬಾಯಾರಿಕೆಯಿಂದ ಕಣ್ಣರಳಿಸುತ್ತಿದ್ದ ದೃಶ್ಯ ದಯನೀಯವಾಗಿತ್ತು.

ಆಧಾರ: ವಿಜಯ ಕರ್ನಾಟಕ, ದಿನಾಂಕ:07.02.2021

## 14. ಉದಯವಾಯಿತು 31ನೇ ಜಿಲ್ಲೆ ವಿಜಯನಗರ

ಸ್ಥಳೀಯ ಜನಪ್ರತಿನಿಧಿಗಳ ವ್ಯಾಪಕ ವಿರೋಧದ ನಡುವೆಯೂ ಬಳ್ಳಾರಿ ಜಿಲ್ಲೆಯನ್ನು ವಿಭಜಿಸಿ ಹೊಸಪೇಟೆ ಕೇಂದ್ರ ಕಾರ್ಯಸ್ಥಾನವಾಗಿಟ್ಟುಕೊಂಡು ಹೊಸದಾಗಿ ವಿಜಯನಗರ ಜಿಲ್ಲೆಯನ್ನು ರಚಿಸಿ ರಾಜ್ಯ ಸರ್ಕಾರ ಆದೇಶ ಹೊರಡಿಸಿದೆ. ಇದರೊಂದಿಗೆ ಅಧಿಕೃತವಾಗಿ ರಾಜ್ಯದಲ್ಲಿ 31ನೇ ಜಿಲ್ಲೆ ಉದಯವಾದಂತೆ ಆಗಿದೆ.

ಹೊಸದಾಗಿ ರಚನೆಯಾಗಿರುವ ವಿಜಯನಗರ ಜಿಲ್ಲೆಗೆ 6 ತಾಲ್ಲೂಕುಗಳನ್ನು ಸೇರ್ಪಡೆಗೊಳಿಸಲಾಗಿದ್ದು, ಹೊಸಪೇಟೆ ಜಿಲ್ಲಾ ಕೇಂದ್ರವಾಗಿದೆ. ಹಳೆಯ ಬಳ್ಳಾರಿಯನ್ನು ಜಿಲ್ಲಾ ಕೇಂದ್ರವನ್ನಾಗಿ ಮುಂದುವರೆಸಲಾಗಿದೆ. ಜೊತೆಗೆ ಎರಡು ಜಿಲ್ಲೆಗಳ ತಾಲ್ಲೂಕುಗಳು ಹಾಗು ಸರಹದ್ದು ನಿಗದಿಪಡಿಸಿ ರಾಜ್ಯ ಸರ್ಕಾರ ಗೆಜೆಟ್ ಅಧಿಸೂಚನೆ ಹೊರಡಿಸಿದೆ.

ಹೊಸಪೇಟೆ ಶಾಸಕರೂ ಆಗಿರುವ ಸಚಿವ ಆನಂದ್‌ಸಿಂಗ್ ವಿಜಯನಗರ ಜಿಲ್ಲೆ ರಚನೆಯಾಗಬೇಕೆಂದು ಪಟ್ಟು ಹಿಡಿದಿದ್ದರು. ಸಮಾಜ ಕಲ್ಯಾಣ ಸಚಿವ ಬಿ. ಶ್ರೀರಾಮುಲು, ಶಾಸಕರಾದ ಸೋಮಶೇಖರ ರೆಡ್ಡಿ, ನಾಗೇಂದ್ರ, ಗಣೇಶ್ ಮತ್ತಿತರ ಶಾಸಕರು ಬಳ್ಳಾರಿ ಜಿಲ್ಲೆ ವಿಭಜನೆಯಾಗಬಾರದೆಂದು ವಿರೋಧಿಸಿದ್ದರು. ಆದರೂ, ಶಾಸಕ ಸ್ಥಾನಕ್ಕೆ ರಾಜೀನಾಮೆ ನೀಡುವ ಸಂದರ್ಭದಲ್ಲಿ ವಾಗ್ದಾನ ನೀಡಿದಂತೆ ವಿಜಯನಗರ ಜಿಲ್ಲೆ ರಚನೆಯಾಗಬೇಕೆಂದು ಆನಂದ್ ಸಿಂಗ್ ಪಟ್ಟು ಹಿಡಿದು ಮುಖ್ಯಮಂತ್ರಿಯವರ ಮೇಲೆ ಒತ್ತಡ ಹೇರಿದ್ದರು. ನಂತರ ಸಚಿವ ಸಂಪುಟದಲ್ಲಿ ಚರ್ಚೆಯಾಗಿ ಸಮ್ಮತಿ ನೀಡಲಾಗಿತ್ತು. ಕೊನೆಗೂ ಹೊಸ ಜಿಲ್ಲೆ ಘೋಷಣೆ ಮಾಡಿಸುವಲ್ಲಿ ಯಶಸ್ವಿಯಾಗಿದ್ದಾರೆ.

ಬಳ್ಳಾರಿ ಜಿಲ್ಲೆಯ ಸರಹದ್ದುಗಳನ್ನು ಮಾರ್ಪಡಿಸಿ ವಿಜಯನಗರ ಜಿಲ್ಲೆ ರಚಿಸುವ ಸಂಬಂಧ ಡಿಸೆಂಬರ್ 14ರಂದು ಗೆಜೆಟ್‌ನಲ್ಲಿ ಕರಡು ಅಧಿಸೂಚನೆ ಹೊರಡಿಸಿ ಆಕ್ಷೇಪಣೆ ಹಾಗೂ ಸಲಹೆಗಳನ್ನು ಆಹ್ವಾನಿಸಿತ್ತು. ಆಕ್ಷೇಪಣೆ ಹಾಗೂ ಸಲಹೆಗಳನ್ನು ಪರಿಗಣಿಸಿರುವ ರಾಜ್ಯ ಸರ್ಕಾರ ಬಳ್ಳಾರಿ ಜಿಲ್ಲೆಯನ್ನು ವಿಭಜಿಸಿ ಹೊಸದಾಗಿ ವಿಜಯನಗರ ಜಿಲ್ಲೆ ರಚಿಸಿ ಗೆಜೆಟ್ ಹೊರಡಿಸಿದೆ.

ಇತ್ತೀಚಿನ ಸಚಿವ ಸಂಪುಟ ವಿಸ್ತರಣೆಯಲ್ಲಿ ಆನಂದ್ ಸಿಂಗ್ ಬಳಿ ಇದ್ದ ಅರಣ್ಯ ಖಾತೆ ಕಸಿದುಕೊಂಡು ಅವರಿಗೆ ಪ್ರವಾಸೋದ್ಯಮ ಖಾತೆ ನೀಡಿದ್ದರಿಂದ ಆನಂದ್ ಸಿಂಗ್ ಅಸಮಾಧಾನಗೊಂಡು ಸಚಿವ ಸ್ಥಾನಕ್ಕೆ ರಾಜೀನಾಮೆಗೂ ಮುಂದಾಗಿದ್ದರು. ನಂತರ ಅವರನ್ನು ಹಿರಿಯ ಸಚಿವರು ಮನವೊಲಿಸಿ ಮಾರ್ಚ್ ನಂತರ ನಡೆಯುವ ಸಚಿವ ಸಂಪುಟ ಪುನಾರಾಚನೆಯಲ್ಲಿ ಇನ್ನೂ ಉತ್ತಮ ಖಾತೆ ಕೊಡುವುದಾಗಿ ಭರವಸೆ ನೀಡಿದ್ದರಿಂದ ರಾಜೀನಾಮೆಯಿಂದ ಹಿಂದೆ ಸರಿದಿದ್ದರು. ಈಗ ಅವರನ್ನು ಸಮಾಧಾನಪಡಿಸುವ ತಂತ್ರಗಾರಿಕೆ ಭಾಗವಾಗಿ ಆನಂದ್ ಸಿಂಗ್ ಅವರ ಬೇಡಿಕೆಯಂತೆ ವಿಜಯನಗರ ಜಿಲ್ಲೆ ರಚನೆಯಾಗಿದೆ.

**ಹೋರಾಟದ ಇತಿಹಾಸ**

1802ರಲ್ಲಿ ಮದ್ರಾಸ್ ಪ್ರೆಸಿಡೆನ್ಸಿ ಅವಧಿಯಲ್ಲಿ ಬಳ್ಳಾರಿ, ಈಗಿನ ಆಂಧ್ರಪ್ರದೇಶದ ಅನಂತಪುರ ಸೇರಿ ಒಟ್ಟು 20 ತಾಲ್ಲೂಕುಗಳನ್ನು ಒಳಗೊಂಡ ಅತೀ ದೊಡ್ಡ ಜಿಲ್ಲೆಯಾಗಿತ್ತು. ಪಿ.ಸಿ.ಗದ್ದಿಗೌಡರ ನೇತೃತ್ವದ ಜಿಲ್ಲಾ ಪುನರ್ ವಿಂಗಡಾ ಸಮಿತಿಯ ಶಿಫಾರಸ್ಸಿನಂತೆ 1997ರಲ್ಲಿ ಕೊಪ್ಪಳ, ಗದಗ, ಹಾವೇರಿ, ದಾವಣಗೆರೆ ಮುಂತಾದ ಹೊಸ ಜಿಲ್ಲೆಗಳು ಅಸ್ತಿತ್ವದಲ್ಲಿ ಬಂದ ಸಂದರ್ಭದಲ್ಲಿ ವಿಜಯನಗರ ಜಿಲ್ಲೆ ರಚನೆಯ ಧ್ವನಿ ಕೇಳಿ ಬಂದಿತ್ತು. 2006–2007ರಲ್ಲಿ ಮಾಜಿ ಶಾಸಕ ರತನ್ ಸಿಂಗ್ ಅವರು ಜಿಲ್ಲೆ ಹೋರಾಟಕ್ಕೆ ಚಾಲನೆ ನೀಡಿದ್ದರು. 2007 ಆಗಸ್ಟ್‌ನಲ್ಲಿ ನಾನಾ ಪಕ್ಷಗಳ ಮುಖಂಡರು, ಸಂಘ ಸಂಸ್ಥೆಗಳ 150ಕ್ಕೂ ಹೆಚ್ಚು ಜನರ ನಿಯೋಗವು ಆಗ ಶಾಸಕರಾಗಿದ್ದ ಎಚ್.ಆರ್. ಗವಿಯಪ್ಪ ನೇತೃತ್ವದಲ್ಲಿ ಅಂದಿನ ಜಿಲ್ಲಾ ಉಸ್ತುವಾರಿ ಸಚಿವ ಎಂ.ಪಿ.ಪ್ರಕಾಶ್, ಸಿಎಂ. ಹೆಚ್.ಡಿ.ಕುಮಾರ್‌ಸ್ವಾಮಿ ಹಾಗೂ ಡಿಸಿಎಂ ಬಿ.ಎಸ್.ಯಡಿಯೂರಪ್ಪ ಅವರಿಗೆ ಮನವಿ ಸಲ್ಲಿಸಿತ್ತು. 2007–2008ರಲ್ಲಿ ವಿಜಯನಗರ ಜಿಲ್ಲೆ ಹೋರಾಟ ತೀವ್ರ ಸ್ವರೂಪ ಪಡೆದರೂ ಸ್ಥಳೀಯವಾಗಿ ರಾಜಕೀಯ ಇಚ್ಛಾಶಕ್ತಿ ಕೊರತೆಯಿಂದ ಯಶಸ್ವಿಯಾಗಲಿಲ್ಲ. 2008ರಲ್ಲಿ ಶಾಸಕ ಆನಂದ್ ಸಿಂಗ್ ನೇತೃತ್ವದಲ್ಲಿ ಅಂದಿನ ಸಿಎಂ ಬಿ.ಎಸ್.ಯಡಿಯೂರಪ್ಪನವರನ್ನು ಭೇಟಿಮಾಡಿ ಜಿಲ್ಲಾ ರಚನೆಗೆ ಮನವಿ ಸಲ್ಲಿಸಲಾಯಿತು. ನಂತರ 2 ಬಾರಿ ಹೊಸಪೇಟೆ ನಗರದಲ್ಲಿ ಬಂದ್ ಆಚರಿಸಲಾಯಿತು. 2012ರಲ್ಲಿ ಬಳ್ಳಾರಿ ಜಿಲ್ಲೆಯ ವಿವಿಧ ತಾಲ್ಲೂಕುಗಳ ಮಠಾಧೀಶರ ನಿಯೋಗವು ಸಚಿವ ಆನಂದ್‌ಸಿಂಗ್ ಅವರನ್ನು ಭೇಟಿಯಾಗಿ ವಿಜಯನಗರ ಜಿಲ್ಲಾ ರಚನೆಗೆ ಆಗ್ರಹಿಸಿತು. 2012–13ರಲ್ಲಿ ಮುಖ್ಯಮಂತ್ರಿಯಾಗಿದ್ದ ಸದಾನಂದ ಗೌಡರಿಗೂ ಮನವಿ ಸಲ್ಲಿಸಿ ಒತ್ತಾಯಿಸಲಾಯಿತು. ಜಿಲ್ಲಾ ರಚನೆಗಾಗಿ 2019 ಸೆಪ್ಟೆಂಬರ್‌ನಲ್ಲಿ ಉಜ್ಜಯನಿ ಪೀಠದ ಶ್ರೀ ಸಿದ್ದಲಿಂಗ ರಾಜದೇಶಿ ಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳ ನೇತೃತ್ವದ ನಿಯೋಗ ಸಿಎಂ ಬಿ.ಎಸ್.ಯಡಿಯೂರಪ್ಪ ಅವರಿಗೆ ಮನವಿ ಸಲ್ಲಿಸಿತು.

ಆಧಾರ: ವಿಜಯ ಕರ್ನಾಟಕ, ದಿನಾಂಕ:09.02.2021

## 15. ವಿಜಯಪುರ ವಿಮಾನನಿಲ್ದಾಣ ಕಾಮಗಾರಿಗೆ ಸಿಎಂ ಚಾಲನೆ

ವಿಜಯಪುರ ವಿಮಾನ ನಿಲ್ದಾಣ ಅಭಿವೃದ್ಧಿ ಹಾಗೂ ಕಾರ್ಯಾಚರಣೆಯನ್ನು ಭಾರತೀಯ ವಿಮಾನಯಾನ ಪ್ರಾಧಿಕಾರದ ಉಡಾನ್ ಯೋಜನೆಯಡಿ ಸೇರ್ಪಡೆ ಮಾಡುವ ನಿಟ್ಟಿನಲ್ಲಿ ಅಗತ್ಯ ಕ್ರಮ ಕೈಗೊಳ್ಳಲಾಗುವುದು ಎಂದು ಮುಖ್ಯಮಂತ್ರಿ ಭರವಸೆ ನೀಡಿದರು.

ವಿಜಯಪುರದಲ್ಲಿ ರೂ.220 ಕೋಟಿ ವೆಚ್ಚದಲ್ಲಿ ನಿರ್ಮಿಸಲಾಗುತ್ತಿರುವ ನೂತನ ವಿಮಾನ ನಿಲ್ದಾಣ ಕಾಮಗಾರಿಗೆ ಶಿವಮೊಗ್ಗದಲ್ಲಿ ಆಯೋಜಿಸಲಾಗಿದ್ದ ವರ್ಚುವಲ್ ಕಾರ್ಯಕ್ರಮ ಮೂಲಕ ಶಂಕುಸ್ಥಾಪನೆ ನೆರವೇರಿಸಿ ಸಂದೇಶ ನೀಡಿದ ಅವರು, ಮುಂದಿನ ದಿನಗಳಲ್ಲಿ ವಿಜಯಪುರ ವಿಮಾನ ನಿಲ್ದಾಣದಲ್ಲಿಯೂ ಏರ್‌ಬಸ್–320ಗಳ ಹಾರಾಟಕ್ಕಾಗಿ ವಿಸ್ತರಿಸಲು ಅನುಕೂಲವಾಗುವಂತೆ ಈಗಾಗಲೇ ಕಲ್ಯಾಣ ಕರ್ನಾಟಕ ಭಾಗದ ಕಲಬುರ್ಗಿ, ಬೀದರ್ ವಿಮಾನ ನಿಲ್ದಾಣಗಳ ಕಾರ್ಯಾಚರಣೆಯನ್ನು ಪ್ರಾರಂಭಿಸಲಾಗಿದೆ. ಶಿವಮೊಗ್ಗ ವಿಮಾನ ನಿಲ್ದಾಣದ ಕಾಮಗಾರಿಗಳು ಶೀಘ್ರಗತಿಯಲ್ಲಿ ನಡೆಯುತ್ತಿದ್ದು, ಅದೇ ರೀತಿ ವಿಜಯಪುರ ವಿಮಾನ ನಿಲ್ದಾಣದ ಕಾಮಗಾರಿ ಸಹ ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸಲಾಗುವುದು ಎಂದರು.

ಶೀಘ್ರವಾಗಿ ಬೆಳೆಯುತ್ತಿರುವ ಆರ್ಥಿಕ ಮತ್ತು ಪ್ರವಾಸೋದ್ಯಮದ ಪ್ರಾಮುಖ್ಯತೆಯನ್ನು ಗಮನದಲ್ಲಿರಿಸಿಕೊಂಡು 727 ಎಕರೆ ಜಮೀನಿನಲ್ಲಿ ಸಾರ್ವಜನಿಕ ಖಾಸಗಿ ಸಹಭಾಗಿತ್ವ ಮಾದರಿಯಲ್ಲಿ ವಿಮಾನ ನಿಲ್ದಾಣ ಅಭಿವೃದ್ಧಿಪಡಿಸಲಾಗುತ್ತಿದೆ. ಜಿಲ್ಲೆಯಲ್ಲಿ ಉತ್ಕೃಷ್ಟ ಗುಣಮಟ್ಟದ ದ್ರಾಕ್ಷಿ, ದಾಳಿಂಬೆ ಹಾಗೂ ನಿಂಬೆ ಹಣ್ಣನ್ನು ಬೆಳೆಯಾಗುತ್ತಿದೆ. ಈ ಎಲ್ಲ ಹಣ್ಣುಗಳನ್ನು ರಫ್ತು ಮಾಡುವ ನಿಟ್ಟಿನಲ್ಲಿಯೂ ಹೆಚ್ಚಿನ ಸೇವೆ ವಿಸ್ತರಿಸಲಾಗುವುದು ಎಂದರು.

ಸಂಸದ ಬಿ.ವೈ. ರಾಘವೇಂದ್ರ, ವಿಧಾನ ಪರಿಷತ್ ಸದಸ್ಯ ರುದ್ರೇಗೌಡ, ಶಾಸಕ ಅರಗ ಜ್ಞಾನೇಂದ್ರ, ಮೂಲಸೌಕರ್ಯ ಅಭಿವೃದ್ಧಿ ಇಲಾಖೆ ಮುಖ್ಯ ಕಾರ್ಯದರ್ಶಿ ಕಪಿಲ್ ಮೋಹನ್, ಮುಖ್ಯಮಂತ್ರಿಗಳ ಕಾರ್ಯದರ್ಶಿ ಎಸ್.ಸೆಲ್ವಕುಮಾರ್, ಜಿಲ್ಲಾಧಿಕಾರಿ ಕೆ.ಬಿ.ಶಿವಕುಮಾರ್ ವಿಜಯಪುರದಲ್ಲಿ ನಡೆದ

ಸಮಾರಂಭದಲ್ಲಿ ಉಪ ಮುಖ್ಯಮಂತ್ರಿ ಗೋವಿಂದ ಕಾರಜೋಳ, ಸಂಸದ ರಮೇಶ ಜಿಗಜಿಣಗಿ, ಶಾಸಕ ಡಾ.ದೇವಾನಂದ ಚವ್ಹಾಣ ಮೊದಲಾದವರು ಪಾಲ್ಗೊಂಡಿದ್ದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:09.02.2021

## 16. ತಾ.ಪಂ. ರದ್ಧತಿ ಬಗ್ಗೆ ಅಧಿವೇಶನದಲ್ಲಿ ಚರ್ಚೆ: ಈಶ್ವರಪ್ಪ

ಅವಧಿ ಮುಗಿದಿರುವ ತಾಲ್ಲೂಕು ಪಂಚಾಯಿತಿ ಚುನಾವಣೆಯ ನಿರೀಕ್ಷೆಯಲ್ಲಿರುವ ಆಕಾಂಕ್ಷಿಗಳಿಗೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವ ಕೆ.ಎಸ್.ಈಶ್ವರಪ್ಪ ಶಾಕ್ ನೀಡಿದ್ದಾರೆ. ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಗ್ರಾಮ ಪಂಚಾಯಿತಿ ಹಾಗೂ ಜಿಲ್ಲಾ ಪಂಚಾಯಿತಿ ಸಾಕು ಎನ್ನುವ ಅಭಿಪ್ರಾಯಗಳು ಕೇಳಿಬಂದಿದೆ. ತಾಲ್ಲೂಕು ಪಂಚಾಯಿತಿಯ ಅಗತ್ಯವಿಲ್ಲ ಎನ್ನುವ ಮಾತುಗಳು ಇತ್ತೀಚೆಗೆ ಕೇಳಿಬಂದಿದೆ. ಆದ್ದರಿಂದ ತಾಲ್ಲೂಕು ಪಂಚಾಯಿತಿ ಇರಬೇಕೋ ಬೇಡವೋ ಎನ್ನುವ ಬಗ್ಗೆ ಅಧಿವೇಶನದಲ್ಲಿ ಸುದೀರ್ಘವಾಗಿ ಚರ್ಚಿಸಿ ನಿರ್ಣಯಿಸಲಾಗುವುದು ಎಂದರು.

ಗ್ರಾಮ ಪಂಚಾಯಿತಿಗೆ ನೂತನವಾಗಿ ಆಯ್ಕೆಯಾಗಿರುವ ಸದಸ್ಯರಿಗೆ ಆಯೋಜಿಸಿದ್ದ 'ಸಾಮರ್ಥ್ಯಾಭಿವೃದ್ಧಿ ಕಾರ್ಯಕ್ರಮ'ವನ್ನು ವಿಡಿಯೋ ಕಾನ್ಫರೆನ್ಸ್ ಮೂಲಕ ಉದ್ಘಾಟಿಸಿ ಮಾತನಾಡಿದ ಅವರು, ತಾಲ್ಲೂಕು ಪಂಚಾಯಿತಿ ರದ್ಧತಿ ಬಗ್ಗೆ ಮುಂದಿನ ಅಧಿವೇಶನದಲ್ಲಿ ಚರ್ಚೆ ಮಾಡಿ ನಿರ್ಣಯ ಕೈಗೊಳ್ಳಲಾಗುವುದು. ತಾಲ್ಲೂಕು ಪಂಚಾಯಿತಿ ಉಪಯೋಗವಿಲ್ಲ ಎಂಬ ಅಭಿಪ್ರಾಯ ಎಲ್ಲರಲ್ಲೂ ವ್ಯಕ್ತವಾಗುತ್ತಿದೆ. ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಗ್ರಾ.ಪಂ. ಮತ್ತು ಜಿ.ಪಂ ಎರಡೇ ಸಾಕು ಎಂಬ ಅಭಿಪ್ರಾಯವಿದೆ. ಆದರೆ ಅಭಿಪ್ರಾಯ ಬಂದ ಕೂಡಲೇ ರದ್ದು ಮಾಡುವುದಕ್ಕೆ ಸಾಧ್ಯವಿಲ್ಲ. ಇದು ಜಾರಿಯಾಗಲು ಸಾಂವಿಧಾನಿಕ ತಿದ್ದುಪಡಿಯಾಗಬೇಕು ಎಂದರು.

ತಾಲ್ಲೂಕು ಪಂಚಾಯಿತಿಗಳನ್ನು ರದ್ದುಪಡಿಸುವ ವಿಷಯಕ್ಕೆ ಸಂಬಂಧಿಸಿದಂತೆ ವಿಧಾನಮಂಡಲ ಅಧಿವೇಶನದಲ್ಲಿ ಚರ್ಚಿಸಿ, ನಿರ್ಣಯ ಕೈಗೊಳ್ಳಬೇಕು. ಬಳಿಕ ಅದನ್ನು ಕೇಂದ್ರ ಸರ್ಕಾರಕ್ಕೆ ಎಲ್ಲ ರಾಜ್ಯಗಳ ಅಭಿಪ್ರಾಯ ಪಡೆದು ಅಂತಿಮ ನಿರ್ಧಾರ ಕೈಗೊಳ್ಳುತ್ತದೆ ಎಂದು ಹೇಳಿದರು.

**ದೂರದೃಷ್ಟಿ ಯೋಜನೆಗೆ ಕ್ರಮ:** ಇನ್ನು ರಾಜ್ಯದಲ್ಲಿ ಪಂಚಾಯಿತಿಗಳಲ್ಲಿ ಜನರ ಯೋಜನೆ ಎಂಬ ಹೆಸರಿನಲ್ಲಿ ದೂರದೃಷ್ಟಿ ಯೋಜನೆಗಳನ್ನು ತಯಾರಿಸಲು ಸರ್ಕಾರ ಮುಂದಾಗಿದೆ. ಪಂಚಾಯತ್ ಗ್ರಂಥಾಲಯಗಳಲ್ಲಿ ಜ್ಞಾನಾರ್ಜನೆಗೆ ಓದುವ ಬೆಳಕು ಕಾರ್ಯಕ್ರಮದ ಜೊತೆಗೆ ಮಾಹಿತಿ ಕೇಂದ್ರಗಳನ್ನು ತೆರೆಯಲು ಉದ್ದೇಶಿಸಲಾಗಿದೆ ಎಂದರು.

ಮಹಾತ್ಮ ಗಾಂಧೀಜಿ ಅವರು ಪ್ರತಿಪಾದಿಸಿದ ಗ್ರಾಮ ಸ್ವರಾಜ್ ಕಲ್ಪನೆಯಿಂದ ಈ ವ್ಯವಸ್ಥೆಗೆ ಹೆಚ್ಚಿನ ಮಹತ್ವ ಸಿಕ್ಕಿದೆ. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಗ್ರಾಮ ಸ್ವರಾಜ್ ವ್ಯವಸ್ಥೆಯಲ್ಲಿ ನಂಬಿಕೆ ಇರಿಸಿಕೊಂಡು ನಿರಂತರವಾಗಿ ಈ ವ್ಯವಸ್ಥೆಗೆ ಸಾಂಸ್ಥಿಕ ಬಲ ನೀಡುತ್ತ ಬಂದಿವೆ ಎಂದರು.

**ಚುನಾವಣೆ ಆಗೇ ಆಗುತ್ತೆ:** ತಾಲ್ಲೂಕು ಪಂಚಾಯಿತಿ ಇರಬೇಕೇ ಬೇಡವೇ ಎನ್ನುವ ಬಗ್ಗೆ ಚರ್ಚೆಯಾಗಿ ಬಳಿಕ ಇದು ನಿರ್ಧಾರವಾಗಲಿದೆ. ಆದರೆ ಈಗ ಅವಧಿ ಮುಗಿದಿರುವ ತಾಪಂ ಹಾಗೂ ಜಿಪಂಗಳಿಗೆ ಚುನಾವಣೆ ಆಗೇ ಆಗುತ್ತದೆ. ಆದ್ದರಿಂದ ಅವಧಿ ಮುಗಿದಿರುವ ತಾಲ್ಲೂಕು ಪಂಚಾಯಿತಿ, ಜಿಲ್ಲಾ ಪಂಚಾಯಿತಿಗಳಿಗೆ ಏಪ್ರಿಲ್‌ನಲ್ಲಿ ಚುನಾವಣೆ ಆಗಬಹುದು. ತಾಲ್ಲೂಕು ಪಂಚಾಯಿತಿ ರದ್ಧತಿಗೂ ಚುನಾವಣೆಗೂ ಸಂಬಂಧವಿಲ್ಲ ಎಂದು ಈಶ್ವರಪ್ಪ ಸ್ಪಷ್ಟಪಡಿಸಿದರು.

ರಾಜ್ಯ 6,600 ಗ್ರಾ.ಪಂ.ಗಳಲ್ಲಿ ಎಲ್ಲ ಸದಸ್ಯರು ಹಾಗೂ ಅಧ್ಯಕ್ಷ ಉಪಾಧ್ಯಕ್ಷ ಸ್ಥಾನಗಳಲ್ಲಿ ಅರ್ಧದಷ್ಟು ಸಂಖ್ಯೆಯಲ್ಲಿ ಮಹಿಳೆಯರು ಪ್ರಾತಿನಿಧ್ಯ ಪಡೆದಿರುವುದು ವಿಶೇಷವಾಗಿದೆ. ಮಹಿಳೆಯರು ಆಡಳಿತ ವ್ಯವಸ್ಥೆಯಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಪಂಚಾಯತ್ ರಾಜ್ ವ್ಯವಸ್ಥೆಗೆ ಹೆಚ್ಚಿನ ಅರ್ಥ ತುಂಬಲಿ ಎಂದು ಅವರು ಹೇಳಿದರು. ಗ್ರಾಮೀಣಾಭಿವೃದ್ಧಿ ಹಾಗೂ ಗ್ರಾಮ ಪಂಚಾಯತ್‌ರಾಜ್ ಇಲಾಖೆ ಪ್ರಧಾನ ಕಾರ್ಯದರ್ಶಿ ಎಲ್.ಕೆ.ಅತೀಕ್, ಉಮಾ ಮಹಾದೇವನ್, ಇಲಾಖೆಯ ಹಿರಿಯ ಅಧಿಕಾರಿ ಶಿಲ್ಪಾ ನಾಯಕ್, ನರೇಗಾ ಆಯುಕ್ತ ಅನಿರುದ್ಧ ಶ್ರವಣ ಉಪಸ್ಥಿತರಿದ್ದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:09.02.2021

## 17. ನಾಳೆಯಿಂದ ಫಾಸ್ಟ್ಯಾಗ್ ಕಡ್ಡಾಯ; ಜಾರಿ ಪಕ್ಕಾ

ನಿಮ್ಮ ವಾಹನಗಳಲ್ಲಿ ಇನ್ನೂ ಫಾಸ್ಟ್ಯಾಗ್ ಅಳವಡಿಸಿಕೊಂಡಿಲ್ಲವೇ. ಹಾಗಿದ್ದರೆ ನೀವು ಟೋಲ್ ಮೊತ್ತದ ಎರಡರ ಶುಲ್ಕ ಪಾವತಿಸಬೇಕಾಗುತ್ತದೆ. ಕೇಂದ್ರ ರಸ್ತೆ ಮತ್ತು ಸಾರಿಗೆ ಸಚಿವಾಲಯ ಹೊರಡಿಸಿರುವ ಆದೇಶದಲ್ಲಿ ಈ ಕುರಿತು ಉಲ್ಲೇಖಿಸಲಾಗಿದೆ. ರಾಷ್ಟ್ರೀಯ ಹೆದ್ದಾರಿಗಳಲ್ಲಿ ಬರುವ ಟೋಲ್ ಪ್ಲಾಜಾಗಳಲ್ಲಿ ಫೆಬ್ರವರಿ 16ರಿಂದ ಕಡ್ಡಾಯವಾಗಿ ಫಾಸ್ಟ್ಯಾಗ್ ಮೂಲಕವೇ ಶುಲ್ಕ ಪಾವತಿ ಮಾಡಬೇಕು. ಮಧ್ಯರಾತ್ರಿಯಿಂದಲೇ ಹೊಸ ನಿಯಮ ಜಾರಿಗೆ ಬರಲಿದೆ' ಎಂದು ಅದರಲ್ಲಿ ಉಲ್ಲೇಖಿಸಲಾಗಿದೆ.

ಕೇಂದ್ರ ಸರ್ಕಾರ ಈ ಹಿಂದೆ ಹೊರಡಿಸಿದ್ದ ಆದೇಶದ ಪ್ರಕಾರ ಜನವರಿ 1ರಿಂದ ಎಲ್ಲಾ ವಾಹನಗಳಿಗೆ ಫಾಸ್ಟ್ಯಾಗ್ ಕಡ್ಡಾಯ ಮಾಡಲಾಗಿತ್ತು. ನಂತರ, ಜನರ ಅನುಕೂಲಕ್ಕಾಗಿ ಆ ಗಡುವನ್ನು ಫೆಬ್ರವರಿ 15ರ ವರೆಗೆ ವಿಸ್ತರಿಸಲಾಗಿತ್ತು. ಈಗ ಫಾಸ್ಟ್ಯಾಗ್ ದೇಶಾದ್ಯಂತ ಜಾರಿಗೆ ಬರುತ್ತಿದ್ದು, ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರ ಈಗಾಗಲೇ 40 ಸಾವಿರ ಪಾಯಿಂಟ್ ಆಫ್ ಸೇಲ್ಸ್ ಮೆಷಿನ್‌ಗಳನ್ನು ಫಾಸ್ಟ್ಯಾಗ್ ನೀಡಿಕೆಗೆ ವ್ಯವಸ್ಥೆ ಮಾಡಿದೆ.

ಎಲ್ಲ ಕಡೆ ಲಭ್ಯವಿದೆ: ಕೆಲವೊಂದು ರೂಟ್‌ಗಳಲ್ಲಿ ಫಾಸ್ಟ್ಯಾಗ್ ನೋಂದಣಿ ಶೇ.90 ಮೀರಿದೆ. ಕೇವಲ ಶೇ.10ರಷ್ಟು ಮಂದಿ ಮಾತ್ರವೇ ಫಾಸ್ಟ್ಯಾಗ್ ಹಾಕಿಸಿಕೊಂಡಿಲ್ಲ. ಈಗ ಫಾಸ್ಟ್ಯಾಗ್ ಎಲ್ಲೆಡೆಯೂ ಲಭ್ಯವಿದೆ. ಟೋಲ್‌ಗಳ ಸಮೀಪದಲ್ಲೂ ಫಾಸ್ಟ್ಯಾಗ್ ಲಭ್ಯವಿದ್ದು, ಅಲ್ಲೇ ಅದನ್ನು ಖರೀದಿಸಬಹುದು ಎಂದು ಸಚಿವ ನಿತಿನ್ ಗಡ್ಕರಿ ಹೇಳಿದ್ದಾರೆ.

ಆಧಾರ: ಉದಯವಾಣಿ, ದಿನಾಂಕ:15.02.2021

## 18. ಕೃಷಿ ಪೂರಕ ಉದ್ಯಮಕ್ಕೆ ಬಡ್ಡಿ ನೆರವು

ಆತ್ಮನಿರ್ಭರ ಭಾರತ ಯೋಜನೆಯಡಿ ಕೃಷಿ, ತೋಟಗಾರಿಕೆ ಕ್ಷೇತ್ರದಲ್ಲಿ ಮೂಲ ಸೌಕರ್ಯ ಅಭಿವೃದ್ಧಿ ಪಡಿಸಲು ಅನುದಾನ ಒದಗಿಸಲಾಗಿದ್ದು, ಸ್ತ್ರೀ ಶಕ್ತಿ ಸಂಘಗಳು ಸೇರಿ ಕೃಷಿ ಸಹಕಾರಿ ಸಂಘಗಳು ಕೂಡ ಕೃಷಿ ಉದ್ದಿಮೆ ಸ್ಥಾಪಿಸಬಹುದಾಗಿದೆ.

ಆತ್ಮ ನಿರ್ಭರ ಭಾರತ ಯೋಜನೆಯಡಿ ಕೃಷಿ ಮೂಲ ಸೌಕರ್ಯ ನಿಧಿ ಸ್ಥಾಪಿಸಿ ಅನುದಾನ ಒದಗಿಸಲಾಗಿದೆ. ತೋಟಗಾರಿಕಾ ವಲಯದಲ್ಲಿ ಮೂಲ ಸೌಲಭ್ಯ ಕಲ್ಪಿಸುವುದರ ಜೊತೆ ಗ್ರಾಮೀಣ ಪ್ರದೇಶದಲ್ಲಿ ರೈತರ ಅನುಕೂಲಕ್ಕೆ ಕೋಲ್ಡ್ ಸ್ಟೋರೇಜ್, ಸಂಗ್ರಹ ಕೇಂದ್ರ, ಗೋದಾಮು, ಸಂಸ್ಕರಣಾ ಘಟಕ, ಲಾಜಿಸ್ಟಿಕ್, ಬಯೋ ಫರ್ಟಿಲೈಸರ್ಸ್ ಇನ್ನಿತರ ಕೃಷಿಪೂರಕ ವ್ಯವಸ್ಥೆ ಉದ್ದಿಮೆಗಳನ್ನು ಸ್ಥಾಪಿಸಲು ಈ ನಿಧಿಯಡಿ ಅವಕಾಶ ನೀಡಲಾಗಿದೆ.

ಹೋಬಳಿಗೊಂದು ಕೋಲ್ಡ್ ಸ್ಟೋರೇಜ್ ಮತ್ತು ಗೋದಾಮು ಸ್ಥಾಪನೆ ಹಲವು ವರ್ಷಗಳ ಬೇಡಿಕೆಯಾಗಿದ್ದು, ಇದನ್ನು ಈಡೇರಿಸಿಕೊಳ್ಳಲು ಆತ್ಮ ನಿರ್ಭರ ನೆರವಾಗಲಿದೆ. ಬೆಲೆ ಪಾತಾಳಕ್ಕೆ ಕುಸಿದರೆ ಬೆಳೆ ಶೇಖರಿಸಿ ಬೆಲೆ ಬಂದಾಗ ರೈತರು ಮಾರಾಟ ಮಾಡಲು ಅನುಕೂಲ ಆಗಲಿದೆ.

**ರಾಜ್ಯಕ್ಕೆ 4525 ಕೋಟಿ ಅನುದಾನ:** ಇದಕ್ಕಾಗಿ ಕೇಂದ್ರ ಸರ್ಕಾರ ಒಂದು ಲಕ್ಷ ಕೋಟಿ ರೂ. ಸಾಲದ ಯೋಜನೆ ರೂಪಿಸಿದ್ದು, ಸಾಲ ನೀಡುವ ಹಲವು ಹಣಕಾಸು ಸಂಸ್ಥೆಗಳ ಜೊತೆಗೆ ಸರ್ಕಾರ ಒಪ್ಪಂದ ಮಾಡಿಕೊಂಡಿದೆ. ಇದರಲ್ಲಿ ಕರ್ನಾಟಕಕ್ಕೆ ರೂ. 4525 ಕೋಟಿ ಅನುದಾನ ಒದಗಿಸಲಾಗಿದೆ. ರೈತರ ಉತ್ಪನ್ನಗಳನ್ನು ಉಪ ಉತ್ಪನ್ನಗಳಾಗಿ ಮಾಡಿ ಮೌಲ್ಯ ವರ್ಧನೆ ಮಾಡುವುದರಿಂದ ರೈತರಿಗೆ ಹೆಚ್ಚಿನ ಬೆಲೆ ಸಿಗಲಿದೆ ಎಂದು ಸರ್ಕಾರ ಪ್ರತಿಪಾದಿಸಿದೆ.

ಕೃಷಿ ವಲಯದಲ್ಲಿ ಮೂಲ ಸೌಕರ್ಯ ಕಲ್ಪಿಸುವ ಉದ್ದಿಮೆ ಆರಂಭಿಸಲು ರೂ. 2 ಕೋಟಿವರೆಗೂ ಸಾಲ ದೊರೆಯಲಿದೆ. ಬ್ಯಾಂಕ್ ಶೇ.9ರ ಬಡ್ಡಿ ವಿಧಿಸಿದರೆ ಇದರಲ್ಲಿ ಶೇ.3ರ ಬಡ್ಡಿಯನ್ನು ಕೇಂದ್ರ ಸರ್ಕಾರವೇ ಭರಿಸಲಿದೆ. ಆಸಕ್ತರು **agriinfa.dac.gov.in** ಈ ಆನ್‌ಲೈನ್‌ನಲ್ಲಿ ನೋಂದಣಿ ಮಾಡಬೇಕು.

ಆಧಾರ: ವಿಜಯ ಕರ್ನಾಟಕ, ದಿನಾಂಕ:18.02.2021

## 19. ಡಿ.ಜೆ.ಹಳ್ಳಿ ಗಲಭೆ: ಆಸ್ತಿ ನಷ್ಟ ಆದವರು ಅರ್ಜಿ ಸಲ್ಲಿಸಿ

ನಗರದ ಕೆ.ಜೆ.ಹಳ್ಳಿ ಮತ್ತು ಡಿ.ಜೆ.ಹಳ್ಳಿಯಲ್ಲಿ ಕಳೆದ ವರ್ಷ ನಡೆದ ಗಲಭೆಯಲ್ಲಿ ಆಸ್ತಿ ನಷ್ಟ ಅನುಭವಿಸುವವರು ತಮಗೆ ಆದ ನಷ್ಟದ ವಿವರದೊಂದಿಗೆ ಪರಿಹಾರ ಕೋರಿ ಅರ್ಜಿ ಸಲ್ಲಿಸುವಂತೆ ಪ್ರಕರಣ ಸಂಬಂಧ ನೇಮಕವಾಗಿರುವ ಕ್ಲೈಮ್ ಕಮೀಷನರ್ ನ್ಯಾಯಮೂರ್ತಿ ಎಚ್.ಎಸ್.ಕೆಂಪಣ್ಣ ಮನವಿ ಮಾಡಿದ್ದಾರೆ.

ನಗರದಲ್ಲಿ ಪತ್ರಿಕಾ ಗೋಷ್ಠಿಯಲ್ಲಿ ಮಾತನಾಡಿದ ಅವರು, ಆಸ್ತಿ ನಷ್ಟವನ್ನು ತಪ್ಪಿತಸ್ಥ ವ್ಯಕ್ತಿಗಳು ಹಾಗೂ ಸಂಸ್ಥೆಗಳಿಂದ ವಸೂಲಿ ಮಾಡಿ ಭರಿಸಿಕೊಡಲು ಹೈಕೋರ್ಟ್ ಕ್ಲೈಮ್ ಕಮೀಷನರ್ ನೇಮಕ ಮಾಡಿದೆ. ನಷ್ಟಕ್ಕೆ ಒಳಗಾಗಿರುವವರು ಪರಿಹಾರ ಕೋರಿ ಅರ್ಜಿ ಸಲ್ಲಿಸಿದಲ್ಲಿ ಪರಿಶೀಲಿಸಿ ನ್ಯಾಯಾಲಯದ ಮೂಲಕ ಪರಿಹಾರ ಒದಗಿಸಲಾಗುವುದು ಎಂದರು.

ಘಟನೆಗೆ ಸಂಬಂಧಿಸಿದಂತೆ ಎರಡು ಪೊಲೀಸ್ ಠಾಣೆಗಳಲ್ಲಿ ಸುಮಾರು 50 ಜನ ದೂರು ದಾಖಲಿಸಿದ್ದಾರೆ. ಆದರೆ, ನಷ್ಟ ಭರಿಸಿಕೊಡುವಂತೆ ಈವರೆಗೂ ಕೇವಲ ಮೂರು ಅರ್ಜಿಗಳು ಮಾತ್ರ ಬಂದಿವೆ. ಫೆಬ್ರವರಿ 28 ಅರ್ಜಿ ಸಲ್ಲಿಸಲು ಕೊನೆ ದಿನವಾಗಿದೆ, ಆದರೆ, ಸಾರ್ವಜನಿಕರಿಗೆ ಅನುಕೂಲವಾಗಬೇಕೆಂಬ ಕಾರಣದಿಂದ ಅವಧಿ ಮುಗಿದ ಬಳಿಕ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದು ಎಂದು ಕೆಂಪಣ್ಣ ವಿವರಿಸಿದರು.

ಕ್ಲೈಮ್ ಕಮೀಷನ್ ರಚನೆ ಸಂಬಂಧ ಈಗಾಗಲೇ ಕನ್ನಡ, ಆಂಗ್ಲ ಮತ್ತು ಉರ್ದು ಪತ್ರಿಕೆಗಳಲ್ಲಿ ಜಾಹೀರಾತು ನೀಡಲಾಗಿದೆ. ಗಲಭೆ ನಡೆದ ಭಾಗಗಳಲ್ಲಿ ಭಿತ್ತಿ ಪತ್ರಗಳನ್ನು ಹಂಚಲಾಗಿದೆ. ಈಗಾಗಲೇ ಪೊಲೀಸ್ ಅಧಿಕಾರಿಗಳ ಜೊತೆಯಲ್ಲಿ ಸ್ಥಳ ಪರಿಶೀಲನೆ ಮಾಡಲಾಗಿದೆ. ಅರ್ಜಿಗಳು ಬಂದ ಬಳಿಕ ಮತ್ತೊಮ್ಮೆ ಸ್ಥಳ ಪರಿಶೀಲನೆ ನಡೆಸಿ ನಷ್ಟದ ಮೌಲ್ಯ ಮಾಪನ ಮಾಡಲಾಗುವುದು ಎಂದರು.

ಪರಿಹಾರ ಕೊಡಿಸುವ ಸಂಬಂಧ ಶಾಸಕ ಅಖಂಡ ಶ್ರೀನಿವಾಸಮೂರ್ತಿ ಭೇಟಿ ಮಾಡಿದ್ದು, ನಷ್ಟ ಪರಿಹಾರಕ್ಕೆ ಅರ್ಜಿ ಸಲ್ಲಿಸುವುದಾಗಿ ಹೇಳಿದ್ದಾರೆ. ಅದೇ ರೀತಿ ಡಿ.ಜೆ.ಹಳ್ಳಿ ಪೊಲೀಸ್ ಠಾಣೆಗೆ ದೊಡ್ಡ ಮಟ್ಟದ ನಷ್ಟವಾಗಿದ್ದು, ಈ ಸಂಬಂಧ ಅರ್ಜಿ ಸಲ್ಲಿಸುವುದಾಗಿ ಅಧಿಕಾರಿಗಳು ತಿಳಿಸಿದ್ದಾರೆ ಎಂದರು.

ತೆಲಂಗಾಣ ಪ್ರತ್ಯೇಕ ರಾಜ್ಯ ರಚನೆಗಾಗಿ ನಡೆದ ಗಲಭೆಯಲ್ಲಿ ಅಪಾರ ಪ್ರಮಾಣದ ಆಸ್ತಿ ನಷ್ಟವಾದ ಪ್ರಕರಣ ಸಂಬಂಧ ಸುಪ್ರೀಂಕೋರ್ಟ್ ನಿವೃತ್ತ ನ್ಯಾಯಮೂರ್ತಿ ಕೆ.ಟಿ.ಕಾಮತ್ ಮತ್ತು ಹಿರಿಯ ವಕೀಲ ಪಾಲಿ ಎಸ್.ನಾರಿಮನ್ ಅವರ ನೇತೃತ್ವದ 2 ಸಮಿತಿಗಳ ವರದಿ ಆಧರಿಸಿ ಸುಪ್ರೀಂಕೋರ್ಟ್ ಹೊರಡಿಸಿರುವ 10 ಮಾರ್ಗಸೂಚಿ ಪ್ರಕಾರ ನಷ್ಟ ಪರಿಹಾರ ಕೊಡಿಸಲಾಗುವುದು ಎಂದು ಅವರು ತಿಳಿಸಿದರು.

ಅರ್ಜಿಸಲ್ಲಿಸುವವರು ತಮ್ಮ ಹೆಸರು, ವಿಳಾಸ, ದೂರವಾಣಿ ಸಂಖ್ಯೆ, ಇ–ಮೇಲ್ ಐಡಿ, ಆಡಿಯೋ, ವಿಡಿಯೋ ದಾಖಲೆಗಳಿದ್ದಲ್ಲಿ ಅದನ್ನು ದೃಢಪಡಿಸುವ ಹೇಳಿಕೆಯೊಂದಿಗೆ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಹೇಳಿದರು.

ಆಧಾರ: ಕನ್ನಡಪ್ರಭ, ದಿನಾಂಕ:20.02.2021

## 20. ಇಂದು ರಾಜ್ಯದಾದ್ಯಂತ 'ಡಿಸಿಗಳ ನಡೆ ಹಳ್ಳಿಗಳ ಕಡೆ'

ಪಿಂಚಣಿ ಸೇರಿದಂತೆ ಕಂದಾಯ ಇಲಾಖೆಯ ವ್ಯಾಪ್ತಿಗೆ ಸಂಬಂಧಿಸಿದ ಗ್ರಾಮೀಣ ಜನರ ಸಮಸ್ಯೆಗಳನ್ನು ಬಗೆಹರಿಸುವ ನಿಟ್ಟಿನಲ್ಲಿ 'ಜಿಲ್ಲಾಧಿಕಾರಿಗಳ ನಡೆ ಹಳ್ಳಿಗಳ ಕಡೆ' ಎಂಬ ವಿನೂತನ ಕಾರ್ಯಕ್ರಮ ರಾಜ್ಯದ್ಯಂತ ನಡೆಯಲಿದೆ.

ಕಂದಾಯ ಸಚಿವರು ಸೇರಿದಂತೆ ಆಯಾ ಜಿಲ್ಲೆಗಳ ಜಿಲ್ಲಾಧಿಕಾರಿಗಳು ನಿಗದಿಪಡಿಸಿರುವ ಗ್ರಾಮಗಳಲ್ಲಿ ಜನರ ಸಮಸ್ಯೆ ಆಲಿಸಿ ಪರಿಹರಿಸಿ ರಾತ್ರಿ ಅಲ್ಲಿಯೇ ವಾಸ್ತವ್ಯ ಮಾಡಲಿದ್ದಾರೆ. ರಾಜ್ಯದ 227 ಗ್ರಾಮ ಪಂಚಾಯಿತಿಗಳಲ್ಲಿ ಕ್ಲರ್ಕ್‌ಗಳನ್ನು ಹೊರತುಪಡಿಸಿ ಎಲ್ಲಾ ಹಂತದ ಅಧಿಕಾರಿಗಳು ಗ್ರಾಮಗಳಿಗೆ ತೆರಳಿದ್ದಾರೆ. ಜಿಲ್ಲಾಧಿಕಾರಿಗಳು, ತಹಶೀಲ್ದಾರ್‌ಗಳು ಸೇರಿದಂತೆ ಇತರೆ ಅಧಿಕಾರಿಗಳು ಗ್ರಾಮಗಳಲ್ಲಿ ದಿನವಿಡಿ ಅಲ್ಲಿಯೇ ಇದ್ದು ಗ್ರಾಮಸ್ಥರ ಸಮಸ್ಯೆಗಳನ್ನು ಆಲಿಸಿ ಬಗೆಹರಿಸಲಿದ್ದಾರೆ.

ಪುರುಷ ಜಿಲ್ಲಾಧಿಕಾರಿಗಳು ವಸತಿ ನಿಲಯ, ವಸತಿ ಶಾಲೆಯಲ್ಲಿ ತಂಗಲಿದ್ದು, ಮಹಿಳಾ ಜಿಲ್ಲಾಧಿಕಾರಿಗಳು ಗ್ರಾಮದವರ ನಿವಾಸದಲ್ಲಿ ವಾಸ್ತವ್ಯ ಹೂಡಲಿದ್ದಾರೆ. ಬೆಳಗ್ಗೆ 10 ಗಂಟೆಗೆ ಪಿಂಚಣಿ ಸೌಲಭ್ಯಗಳ ಸಮಸ್ಯೆಗಳ ಕುರಿತು ಆಲಿಸಲಾಗುವುದು. ಪ್ರವಾಹ ಪೀಡಿತ ಸಮಸ್ಯೆಗಳಿಗೂ ಸ್ಪಂದಿಸಲಾಗುವುದು. ಸಂಜೆ 4 ಗಂಟೆಯಿಂದ 5 ಗಂಟೆಯವರಿಗೆ ಸ್ಥಳೀಯ ಜನಪ್ರತಿನಿಧಿಗಳಿಗೆ ಸಂಪೂರ್ಣವಾಗಿ ಮಾಹಿತಿ ನೀಡಲಾಗುವುದು.

**ಹೊಸ ಹಳ್ಳಿಯಲ್ಲಿ ಸಚಿವ ಅಶೋಕ್ ವಾಸ್ತವ್ಯ**

ಜಿಲ್ಲಾಧಿಕಾರಿಗಳ ನಡೆ ಹಳ್ಳಿಗಳ ಕಡೆ ಕಾರ್ಯಕ್ರಮ ಅಂಗವಾಗಿ ಕಂದಾಯ ಸಚಿವ ಆರ್.ಅಶೋಕ್ ಅವರು ತಾವು ಉಸ್ತುವಾರಿ ಹೊಂದಿರುವ ಬೆಂಗಳೂರು ಗ್ರಾಮಾಂತರ ಜಿಲ್ಲೆ ದೊಡ್ಡಬಳ್ಳಾಪುರ ತಾಲ್ಲೂಕಿನ ಹೊಸಹಳ್ಳಿ ಗ್ರಾಮ ಪಂಚಾಯಿತಿಗೆ ಭೇಟಿ ನೀಡಿ ದಿನವಿಡೀ ಅಲ್ಲಿಯೇ ಇದ್ದು, ಖುದ್ದು ಸಮಸ್ಯೆಗಳನ್ನು ಆಲಿಸಿದ್ದಾರೆ.

ದಿನಾಂಕ:20.02.2021ರಂದು ಹೊಸಹಳ್ಳಿ ಗ್ರಾಮಕ್ಕೆ ತೆರಳಿ ದಲಿತರ ಕಾಲೋನಿಗೆ ಭೇಟಿ ನೀಡಿ ಒಂದು ತಾಸು ಅವರೊಂದಿಗೆ ಇದ್ದು ಸಮಸ್ಯೆಗಳನ್ನು ಆಲಿಸಿ ಪರಿಹಾರ ನೀಡುವ ಪ್ರಯತ್ನ ಮಾಡಲಿದ್ದಾರೆ. ಮಧ್ಯಾಹ್ನ 12.30 ಸುಮಾರಿಗೆ ಹಳ್ಳಿಕಟ್ಟೆಯಲ್ಲಿ ಕುಳಿತು ಸಮಾಲೋಚನೆ ನಡೆಸಿ ಇತರರ ಸಮಸ್ಯೆಗಳನ್ನು ಆಲಿಸಲಿದ್ದಾರೆ. ಮಧ್ಯಾಹ್ನ 3 ಗಂಟೆಗೆ ಆರೋಗ್ಯ ಶಿಬಿರ ನಡೆಸಲಾಗುವುದು.

ಸಂಜೆ 4 ರಿಂದ 5 ಗಂಟೆಯವರೆಗೆ ಸ್ಥಳೀಯ ಶಾಸಕರೊಂದಿಗೆ ಇದ್ದು, ಗ್ರಾಮಸ್ಥರಿಗೆ ಪರಿಹಾರ ವಿತರಣಾ ಕಾರ್ಯಕ್ರಮ ನಡೆಸಲಾಗುವುದು. ರಾತ್ರಿ 7 ಗಂಟೆಗೆ ಸ್ಥಳಿಯ ಕಲಾವಿದರ ಜೊತೆ ಚರ್ಚೆ ನಡೆಸಲಿದ್ದಾರೆ. ರಾತ್ರಿ ಹಿಂದುಳಿದ ವರ್ಗಗಳ ವಸತಿ ನಿಲಯದಲ್ಲಿ ವಾಸ್ತವ್ಯ ಮಾಡಲಿದ್ದಾರೆ. ಮರುದಿನ ಬೆಂಗಳೂರಿಗೆ ಆಗಮಿಸಲಿದ್ದಾರೆ.

ಆಧಾರ: ಕನ್ನಡಪ್ರಭ, ದಿನಾಂಕ:20.02.2021

## 21. ಎಲ್ಲ ಸಿಬ್ಬಂದಿಯೂ ತಪ್ಪದೇ ಲಸಿಕೆ ಪಡೆಯಿರಿ

ಕೋವಿಡ್ ಲಸಿಕೆಯನ್ನು ಎಲ್ಲ ಸಿಬ್ಬಂದಿ ತಪ್ಪದೇ ಪಡೆಯಬೇಕು ಎಂದು ಆರೋಗ್ಯ ಸಚಿವ ಡಾ.ಕೆ. ಸುಧಾಕರ್ ಮನವಿ ಮಾಡಿದರು. ಲಸಿಕೆ 2ನೇ ಅಲೆ ಬಾರದಂತೆ ತಡೆಗಟ್ಟಲು ನೆರವಾಗಲಿದ್ದು, ಉದಾಸೀನ ಮಾಡಬಾರದು. ಎಲ್ಲ ಇಲಾಖೆಗಳ ಅಧಿಕಾರಿ, ಸಿಬ್ಬಂದಿ ಕೋವಿಡ್ ಲಸಿಕೆ ಪಡೆಯಬೇಕು. ಈ ಬಗ್ಗೆ ಸಿಎಂ ಕೂಡ ವಿಡಿಯೋ ಸಂವಾದ ನಡೆಸಿ ಸೂಚನೆ ನೀಡಲಿದ್ದಾರೆ ಎಂದು ಸುದ್ದಿಗೋಷ್ಠಿಯಲ್ಲಿ ತಿಳಿಸಿದರು.

ಲಸಿಕೆ ಪಡೆದ ಬಳಿಕ ಸೋಂಕಿನ ತೀವ್ರತೆ ಕಡಿಮೆಯಾಗುತ್ತದೆ. ಅದರಿಂದ ಸಾವು ಉಂಟಾಗುವುದಿಲ್ಲ. ಸಾರ್ವಜನಿಕರು ಇನ್ನು ಮುಂದೆಯೂ ಕೋವಿಡ್ ಸುರಕ್ಷತಾ ಕ್ರಮಗಳನ್ನು ಕಡ್ಡಾಯವಾಗಿ ಪಾಲಿಸಬೇಕು. ಮದುವೆ ಮೊದಲಾದ ಸಮಾರಂಭ, ಸಭೆಗಳು ಹೆಚ್ಚುತ್ತಿದೆ. ಇದಕ್ಕೆ ಕಡಿವಾಣ ಹಾಕಿಕೊಳ್ಳಬೇಕು ಎಂದರು. ಕೇರಳ ಮತ್ತು ಮಹಾರಾಷ್ಟ್ರದಿಂದ ಬರುವವರು ಕೊರೋನಾ ನೆಗೆಟಿವ್ ವರದಿ ಹೊಂದಿರಬೇಕು ಎಂದು ಸೂಚಿಸಲಾಗಿದೆ. ಆಯಾ ಜಿಲ್ಲಾಡಳಿತ, ಪೊಲೀಸ್ ಸಿಬ್ಬಂದಿ ನೆರವಿನಲ್ಲಿ ಕ್ರಮ ಕೈಗೊಳ್ಳಲಾಗುತ್ತಿದೆ. ಮುಂದಿನ ದಿನಗಳಲ್ಲಿ ಎರಡನೇ ಅಲೆ ಬರುವುದನ್ನು ತಡೆಗಟ್ಟಲು ಸಫಲವಾದರೆ ಲಾಕ್‌ಡೌನ್ ಮೊದಲಾದ ಕ್ರಮಗಳ ಪ್ರಶ್ನೆಯೇ ಬರುವುದಿಲ್ಲ ಎಂದರು.

**ತಪಾಸಣೆ ಬಿಗಿಗೊಳಿಸಲು ಪತ್ರ:** ರಾಜ್ಯದ ಗಡಿಗೆ ಹೊಂದಿಕೊಂಡಿರುವ ಮಹಾರಾಷ್ಟ್ರ, ಗೋವಾ, ಕೇರಳದಲ್ಲಿ ಕೊರೋನಾ ಉಲ್ಬಣವಾಗುತ್ತಿದ್ದು, ಇದರಿಂದ ಚೆಕ್‌ಪೋಸ್ಟ್‌ಗಳಲ್ಲಿ ತಪಾಸಣೆ ಕಾರ್ಯ ಕಟ್ಟುನಿಟ್ಟಾಗಿ ಪಾಲಿಸಲು ಸಂಬಂಧಪಟ್ಟವರಿಗೆ ಸೂಚನೆ ನೀಡಿ ಎಂದು ಸಚಿವ ಡಾ.ಕೆ.ಸುಧಾಕರ್ ಅವರಿಗೆ ಡಿಸಿಎಂ ಗೋವಿಂದ ಕಾರಜೋಳ ಪತ್ರ ಬರೆದು ಕೋರಿದ್ದಾರೆ.

ಆಧಾರ: ವಿಜಯವಾಣಿ, ದಿನಾಂಕ:21.02.2021

## 22. ಶೀಘ್ರ ಉಭಯ ಸದನಗಳ ನಾಯಕರ ಸಭೆ: ರಮೇಶ್

ಅಂತರರಾಜ್ಯ ಜಲ ವಿವಾದಗಳಾದ ಕೃಷ್ಣಾ, ಕಾವೇರಿ, ಮಹದಾಯಿ ನೀರಾವರಿ ಯೋಜನೆಗಳ ಬಗ್ಗೆ ಸರ್ವೋಚ್ಚ ನ್ಯಾಯಾಲಯ ಮತ್ತು ನ್ಯಾಯಾಧಿಕರಣಗಳ ಮುಂದೆ ಇತ್ಯರ್ಥವಾಗಬೇಕಾಗಿರುವ ದಾವೆಗಳ ಬಗ್ಗೆ ಜಲಸಂಪನ್ಮೂಲ ಸಚಿವರಾದ ರಮೇಶ್ ಜಾರಕಿಹೊಳಿ ಅವರು ಕಾನೂನು ಮತ್ತು ತಾಂತ್ರಿಕ ತಂಡದೊಂದಿಗೆ ನವದೆಹಲಿಯಲ್ಲಿ ಪರಾಮರ್ಶೆ ನಡೆಸಿದರು.

ಕೃಷ್ಣಾ ನ್ಯಾಯಾಧಿಕರಣದ ತೀರ್ಪಿನ ಗೆಜೆಟ್ ಪ್ರಕಟಣೆ ಕುರಿತಂತೆ ರಾಜ್ಯವು ಸರ್ವೋಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿರುವ ಮಧ್ಯಂತರ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಬೇಕಾದ ಕ್ರಮಗಳ ಕುರಿತು. ಮದ್ರಾಸ್ ಉಚ್ಚ ನ್ಯಾಯಾಲಯದ ಮಧುರೈ ಪೀಠದಲ್ಲಿ ತಮಿಳುನಾಡು ರೈತರು ಸಲ್ಲಿಸಿರುವ ಪಿಐಎಲ್ ಕುರಿತು ರಾಜ್ಯವು ತೆಗೆದುಕೊಳ್ಳಬೇಕಾದ ನಿಲುವಿನ ಬಗ್ಗೆ ಹಾಗೂ ಮಹದಾಯಿ ವಿವಾಹದಲ್ಲಿ ಸರ್ವೋಚ್ಚ ನ್ಯಾಯಾಲಯದಲ್ಲಿ ಕಣಿವೆ ರಾಜ್ಯಗಳು ಸಲ್ಲಿಸಿರುವ ಎಸ್.ಎಲ್.ಪಿ.ಗಳ ವಿಚಾರಣೆಯು ಬರುವ ಸಾಧ್ಯತೆ ಇದ್ದು, ಈ ವಿಷಯದಲ್ಲಿ ರಾಜ್ಯದ ಹಿತಾಸಕ್ತಿ ಕಾಪಾಡಲು ತೆಗೆದುಕೊಳ್ಳಬೇಕಾದ ಕ್ರಮಗಳ ಬಗ್ಗೆ ಈ ಉನ್ನತ ಮಟ್ಟದ ಸಭೆಯಲ್ಲಿ ಚರ್ಚಿಸಲಾಯಿತು. ತಮಿಳುನಾಡು ಸರ್ಕಾರವು ಕಾವೇರಿ ಕಣಿವೆಯಲ್ಲಿ ಹೆಚ್ಚುವರಿ ನೀರನ್ನು ಬಳಸಿಕೊಳ್ಳಲು ಯೋಜಿಸಿರುವ ನದಿ ಜೋಡಣೆ ಯೋಜನೆಯ ಸಾಧಕ ಬಾಧಕಗಳ ಬಗ್ಗೆ ಮತ್ತು ರಾಜ್ಯದ ಹಿತಾಸಕ್ತಿಗಳ ಮೇಲೆ ಆಗುವ ಪರಿಣಾಮಗಳ ಕುರಿತು ಚರ್ಚಿಸಲಾಯಿತು.

ಹೆಚ್ಚುವರಿ ನೀರನ್ನು ಏಕಪಕ್ಷೀಯವಾಗಿ ತಮಿಳುನಾಡು ರಾಜ್ಯವು ಬಳಸಿಕೊಳ್ಳಲು ಪ್ರಯತ್ನಿಸುತ್ತಿರುವುದರಿಂದ ರಾಜ್ಯದ ಹಿತಾಸಕ್ತಿಗೆ ಧಕ್ಕೆಯಾಗಲಿದ್ದು, ತಮಿಳುನಾಡು ರಾಜ್ಯಕ್ಕೆ ನಿಗದಿಪಡಿಸಿರುವ 177.25 ಟಿಎಂಸಿ ನೀರನ್ನು ರಾಜ್ಯವು ಪೂರೈಸಿದ ನಂತರ ಕರ್ನಾಟಕದಲ್ಲಿ ಉತ್ಪತ್ತಿಯಾಗುವ ಹೆಚ್ಚುವರಿ ನೀರನ್ನು ಕರ್ನಾಟಕವೇ ಬಳಸಿಕೊಳ್ಳುವುದು ರಾಜ್ಯದ ಹಕ್ಕಾಗಿದೆಯೆಂಬುದು ರಾಜ್ಯದ ನಿಲುವಾಗಿರುತ್ತದೆ. ಈ ಯೋಜನೆಯಿಂದ ರಾಜ್ಯದ ಹಿತಾಸಕ್ತಿಗೆ ಧಕ್ಕೆಯಾಗುವುದರಿಂದ ಈ ಕುರಿತು ರಾಜ್ಯವು ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ವಿಧಾನ ಮಂಡಲದ ಉಭಯ ಸದನಗಳ ಎಲ್ಲಾ ಪಕ್ಷಗಳ ಸಭಾನಾಯಕರೊಂದಿಗೆ ಸಮಾಲೋಚಿಸಿ, ರಾಜ್ಯದ ಹಿತಾಸಕ್ತಿ ಕಾಪಾಡಲು ರಾಜ್ಯವು ತೆಗೆದುಕೊಳ್ಳಬೇಕಾದ ಕ್ರಮಗಳ ಬಗ್ಗೆ ಚರ್ಚಿಸಿ, ನಿರ್ಣಯ ತೆಗೆದುಕೊಳ್ಳಲಾಗುವುದು ಎಂದು ರಮೇಶ್ ಜಾರಕಿಹೊಳಿ ತಿಳಿಸಿದರು.

ಆಧಾರ: ಉದಯವಾಣಿ, ದಿನಾಂಕ:22.02.2021

## 23. ಮಂಗಳೂರು ಐಟಿ ಕ್ಲಸ್ಟರ್

ಬೆಂಗಳೂರಿನಿಂದ ಹೊರಗೆ ಮಾಹಿತಿ ತಂತ್ರಜ್ಞಾನ ಉದ್ಯಮ ವಿಸ್ತರಿಸಲು ಪ್ರಯತ್ನ ಮಾಡಲಾಗುತ್ತಿದೆ. ಮಂಗಳೂರು ನಗರವನ್ನು ಅತ್ಯಂತ ಪ್ರಮುಖ ಕ್ಲಸ್ಟರ್ ಆಗಿ ಗುರುತಿಸಲಾಗಿದೆ ಎಂದು ಐಟಿ–ಬಿಟಿ ಸಚಿವರೂ ಆಗಿರುವ ಉಪ ಮುಖ್ಯಮಂತ್ರಿ ಡಾ. ಸಿ.ಎನ್.ಅಶ್ವತ್ಥನಾರಾಯಣ ಹೇಳಿದ್ದಾರೆ.

ಮಂಗಳೂರು ಅವಿಷ್ಕಾರ ಸಮಾವೇಶ ಉದ್ಘಾಟಿಸಿ ಮಾತನಾಡಿದರು. ಬೆಂಗಳೂರು, ನಗರ ಗ್ರಾಮಾಂತರದಲ್ಲಿ ಪ್ರಸ್ತುತ ಹೊಸ ಕೈಗಾರಿಕೆಗಳಿಗೆ ರಿಯಾಯಿತಿ ಇಲ್ಲ. ಹೊರಜಿಲ್ಲೆಗಳಿಗೆ ಹೋಗುವ ಉದ್ಯಮಿಗಳಿಗೆ ಹಲವು ರಿಯಾಯಿತಿ ನೀಡಲಾಗುತ್ತಿದೆ. ಮುಂದಿನ ದಿನಗಳಲ್ಲಿ ಐಟಿ ಉದ್ಯಮಗಳ ನೆಲೆಯಾಗುವುದರ ಜೊತೆಗೆ, ನವೋದ್ಯಮಗಳ ತಾಣವಾಗಿಯೂ ಮಂಗಳೂರು ಹೊರಹೊಮ್ಮಲಿದೆ. ಉತ್ತಮ ಪರಿಸರ, ಪ್ರವಾಸೋದ್ಯಮ, ಅತ್ಯುತ್ತಮ ಶೈಕ್ಷಣಿಕ ವ್ಯವಸ್ಥೆ ಮುಂತಾದ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಮಂಗಳೂರು ನಗರವನ್ನು ಅವಿಷ್ಕಾರ ಹಾಗೂ ತಂತ್ರಜ್ಞಾನದ ಜಾಗತೀಕ ಕೇಂದ್ರವಾಗಿ ರೂಪಿಸಲಾಗುವುದು ಎಂದರು.

ಐಟಿ ಉದ್ಯಮದ ಜೊತೆಗೆ ಎಲೆಕ್ಟ್ರಾನಿಕ್ ಸಿಸ್ಟಮ್ಸ್ ಮತ್ತು ಅಭಿವೃದ್ಧಿ ನಿರ್ವಹಣೆ ಕ್ಷೇತ್ರದಲ್ಲೂ ಮಂಗಳೂರು ನಗರವನ್ನು ಪ್ರಮುಖ ಕ್ಲಸ್ಟರ್ ಆಗಿ ಪರಿಗಣಿಸಿದ್ದೇವೆ. ರಾಜ್ಯದ ಎಲೆಕ್ಟ್ರಾನಿಕ್ಸ್, ಐಟಿ–ಬಿಟಿ,

ವಿಜ್ಞಾನ–ತಂತ್ರಜ್ಞಾನ ಇಲಾಖೆಗಳು ರಾಜ್ಯಾದ್ಯಂತ ಅವಿಷ್ಕಾರ ಹಬ್‌ಗಳನ್ನು ಸ್ಥಾಪಿಸುತ್ತಿವೆ. ಈ ಪಟ್ಟಿಯಲ್ಲಿ ಮಂಗಳೂರು ಸೇರಿ ಶಿವಮೊಗ್ಗ, ಬೆಳಗಾವಿ, ಮೈಸೂರು ಹಾಗೂ ಬೆಂಗಳೂರು ನಗರಗಳೂ ಇವೆ ಎಂದರು.

ರಾಜ್ಯ ಬಿಜೆಪಿ ಅಧ್ಯಕ್ಷ ನಳಿನ್ ಕುಮಾರ್ ಕಟೀಲ್ ಅಧ್ಯಕ್ಷತೆ ವಹಿಸಿದ್ದರು. ಕಿಯಾನಿಕ್ಸ್ ಅಧ್ಯಕ್ಷ ಹರಿಕೃಷ್ಣ ಬಂಟ್ವಾಳ್, ವ್ಯವಸ್ಥಾಪಕ ನಿರ್ದೇಶಕ ಸಿದ್ದರಾಮಪ್ಪ, ಐಟಿಬಿಟಿ ಇಲಾಖೆ ಹೆಚ್ಚುವರಿ ಮುಖ್ಯ ಕಾರ್ಯದರ್ಶಿ ರಮಣ ರೆಡ್ಡಿ ಇದ್ದರು.

ಆಧಾರ: ವಿಜಯವಾಣಿ, ದಿನಾಂಕ:25.02.2021

## 24. ಕರ್ನಾಟಕ ಉಪಸಮರ ಕುತೂಹಲ

ಕರ್ನಾಟಕ 3 ವಿಧಾನಸಭಾ ಕ್ಷೇತ್ರ ಮತ್ತು ಒಂದು ಲೋಕಸಭಾ ಕ್ಷೇತ್ರಕ್ಕೆ ನಡೆಯಬೇಕಿರುವ ಉಪ ಚುನಾವಣೆ ಆಯೋಗ ಕುತೂಹಲ ಬಾಕಿ ಉಳಿಸಿದೆ. ಕರ್ನಾಟಕದ ಮಸ್ಕಿ, ಬಸವಕಲ್ಯಾಣ, ಸಿಂಧಗಿ ವಿಧಾನ ಸಭಾ ಹಾಗೂ ಬೆಳಗಾವಿ ಲೋಕಸಭೆ ಕ್ಷೇತ್ರಗಳ ಉಪ ಚುನಾವಣೆ ದಿನಾಂಕ ಘೋಷಣೆ ಆಗಬಹುದೆಂದು ನಿರೀಕ್ಷಿಸಲಾಗಿತ್ತು. ಸಾಮಾನ್ಯವಾಗಿ ಸಾರ್ವತ್ರಿಕ ಚುನಾವಣೆ ನಡೆಯುವ ಸಂದರ್ಭದಲ್ಲೇ ಇತರ ರಾಜ್ಯಗಳ ಉಪ ಚುನಾವಣೆ ನಡೆಸುವುದು ವಾಡಿಕೆ. ರಾಜ್ಯದಲ್ಲಿ ರಾಜಕೀಯ ಪಕ್ಷಗಳು ದಿನಾಂಕದ ಬಗ್ಗೆ ಕುತೂಹಲದಿಂದ ಕಾಯ್ದಿದ್ದವು. ಏಪ್ರಿಲ್ 6ರಂದು ರಾಜ್ಯದಲ್ಲಿ ಮತದಾನ ನಡೆಯಬಹುದೆಂಬ ಅಂದಾಜಿನಲ್ಲಿ ರಾಜ್ಯ ಚುನಾವಣಾಧಿಕಾರಿ ಕಚೇರಿ ಸಿಬ್ಬಂದಿ ಕೂಡ ಇದ್ದರು.

ಆಧಾರ: ವಿಜಯವಾಣಿ, ದಿನಾಂಕ:27.02.2021

## 25. ಆಡಳಿತಾತ್ಮಕ ವಿವಾದ ಪರಿಹಾರಕ್ಕೆ ರಾಜ್ಯ ಸರ್ಕಾರದ ನೂತನ ನೀತಿ

ಆಡಳಿತಾತ್ಮಕ ಕಾರ್ಯನಿರ್ವಹಣೆ ಮತ್ತು ವ್ಯವಹಾರ ನಿರ್ವಹಣೆಯಲ್ಲಿ ಉಂಟಾಗುವ ವಿವಾದಗಳಲ್ಲಿ ಪರಿಹಾರಕ್ಕೆ ಸರ್ಕಾರ ವಿವಾದ ನಿರ್ಣಯ ನೀತಿ–2021ನ್ನು ಜಾರಿಗೆ ತಂದಿದೆ. ಈ ಕುರಿತ ಪುಸ್ತಕವನ್ನು ಸಿಎಂ ಬಿ.ಎಸ್.ಯಡಿಯೂರಪ್ಪ ಬಿಡುಗಡೆ ಮಾಡಿದರು.

ನೀತಿ ಏಕೆ ಬೇಕು? ಸರ್ಕಾರಿ ವ್ಯಾಜ್ಯಗಳ ವ್ಯವಹಾರ ಪ್ರಕ್ರಿಯೆಯಲ್ಲಿ ಸಮರ್ಥ ಮತ್ತು ಜವಾಬ್ದಾರಿಯುತ ಎಂಬ ಪರಿಕಲ್ಪನೆ ಕಾಣೆಯಾಗಿದೆ. ಸಾಕಷ್ಟು ತರಬೇತಿ ಕಾರ್ಯಕ್ರಮಗಳಿಲ್ಲದ ಕಾರಣ ರಾಜ್ಯ ವ್ಯಾಜ್ಯ ನೀತಿಯ ಬಗ್ಗೆ ಎಷ್ಟೋ ಸರ್ಕಾರಿ ವಕೀಲರಿಗೆ ಅರಿವಿನ ಕೊರತೆಯಿದೆ. ವ್ಯಾಜ್ಯ ನೀತಿಯ ಮೇಲೆ ಹಿತಾಸಕ್ತಿದಾರರನ್ನು ಪರಿಶೀಲಿಸುವ, ತರಬೇತುಗಳಿಸುವ ಮತ್ತು ಮಾರ್ಗದರ್ಶನ ನೀಡುವ ಅಥವಾ ಅರಿವು ಮೂಡಿಸುವ ಯಾವುದೇ ವ್ಯವಸ್ಥೆ ಇಲ್ಲ. ಹಾಗಾಗಿ ರಾಜ್ಯದಲ್ಲಿ ವ್ಯಾಜ್ಯ ನೀತಿಯನ್ನು ನಿರ್ವಹಿಸುವ ಅಥವಾ ಸರ್ಕಾರಿ ವ್ಯಾಜ್ಯಗಳನ್ನು ತಗ್ಗಿಸುವ ನಿಟ್ಟಿನಲ್ಲಿ ಗಮನಾರ್ಹ ಪ್ರಗತಿ ಇಲ್ಲವೆಂದು ಅಧ್ಯಯನದಿಂದ ತಿಳಿದು ಬಂದಿದೆ. ಆದ್ದರಿಂದ ಮೂಲ ನೀತಿಯ ಗುರಿಗಳನ್ನು ಹಾಗೂ ಸರ್ಕಾರಿ ವಿವಾದಗಳಿಗೆ ಸಂಬಂಧಿಸಿದ ಅನುಷ್ಠಾನದ ಮಾನದಂಡಗಳನ್ನು ಪುನರ್ ಪರಿಶೀಲಿಸುವುದು ಹಾಗೂ ಪುನರ್ ರಚಿಸುವುದು ಅನಿವಾರ್ಯವಾಗಿದೆ. ಆದ್ದರಿಂದ ಕರ್ನಾಟಕ ರಾಜ್ಯ ವಿವಾದ ನಿರ್ಣಯ ನೀತಿ–2021ನ್ನು ರೂಪಿಸಲಾಗಿದೆ.

### ದತ್ತಾಂಶ ನಿರ್ವಹಣೆಗೆ ಐಟಿ ಘಟಕ

ಸರ್ಕಾರಿ ದತ್ತಾಂಶ ನಿರ್ವಹಣೆಗೆ ಐಟಿ ಘಟಕ ಹಾಗೂ ಪ್ರತಿ ಇಲಾಖೆ ವ್ಯಾಪ್ತಿಯಲ್ಲಿ ವ್ಯಾಜ್ಯ ಪರಿಹಾರ ಮಂಡಳಿ ಸ್ಥಾಪಿಸಲಾಗುವುದು ಎಂದು ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ ಹೇಳಿದರು. ಕಾನೂನು ಇಲಾಖೆ ಹೊರ ತಂದಿರುವ ಕರ್ನಾಟಕ ರಾಜ್ಯ ವಿವಾದ ನಿರ್ಣಯ ನೀತಿ–2021 ಹಾಗೂ ಕಾಫಿ ಟೇಬಲ್ ಪುಸ್ತಕ 'ಧಿ ಲೀಡರ್ ಆಫ್ ದಿ ಬಾರ್' ಬಿಡುಗಡೆ ಮಾಡಿ ಮಾತನಾಡಿದರು. ವ್ಯಾಜ್ಯ ನಿರ್ವಹಣೆಯಲ್ಲಿ ದತ್ತಾಂಶ ನಿರ್ವಹಣೆ ಬಹುಮುಖ್ಯ ಪಾತ್ರ ವಹಿಸುತ್ತದೆ. ಸಮಸ್ಯೆಗಳಿಗೆ ಶೀಘ್ರ ಪರಿಹಾರ ಕಂಡುಹಿಡಿಯಲು ದತ್ತಾಂಶ ಅವಶ್ಯ ಎಂದು ಹೇಳಿದರು. ರಾಜ್ಯ ಗಡಿ, ನೆಲ, ಜಲ ವಿವಾದಗಳನ್ನು

ಸೌಹಾರ್ದಯುತವಾಗಿ ಬಗೆಹರಿಸಲು ಸರ್ಕಾರ ಬದ್ಧವಾಗಿದೆ ಎಂದು ತಿಳಿಸಿದರು. ಶಾಸಕ ರಿಜ್ವಾನ್ ಅರ್ಷದ್ ಉಪಸ್ಥಿತರಿದ್ದರು.

ಆಧಾರ: ವಿಜಯವಾಣಿ, ದಿನಾಂಕ:28.02.2021

## 26. ಗ್ರಾಮಗಳಿಗೂ ಆರೋಗ್ಯ ಭಾಗ್ಯ ವಿಸ್ತರಣೆ

ಗ್ರಾಮೀಣ ಪ್ರದೇಶದಲ್ಲಿ ವೈದ್ಯರ ಕೊರತೆಯಿದ್ದು, ಅದನ್ನು ನಿವಾರಿಸಲು 2,180 ವೈದ್ಯರನ್ನು ನೇರ ನೇಮಕಾತಿ ಮಾಡಲು ಕ್ರಮವಹಿಸಲಾಗಿದೆ. ಕೆಲ ವೈದ್ಯರು ಸರ್ಕಾರದ ಕ್ರಮದ ವಿರುದ್ಧ ಕೋರ್ಟ್ ಮೆಟ್ಟಿಲೇರಿದ್ದು, ಅದನ್ನು ನಿವಾರಿಸಿಕೊಂಡು ಖಾಲಿ ಇರುವ ಹುದ್ದೆ ತುಂಬುವ ಕಾರ್ಯ ಮಾಡಲಾಗುವುದು ಎಂದು ಆರೋಗ್ಯ ಸಚಿವ ಡಾ:ಕೆ. ಸುಧಾಕರ್ ಹೇಳಿದರು. ನಗರದಲ್ಲಿ ಕೋವಿಡ್ 3ನೇ ಹಂತದ ಲಸಿಕಾ ಕಾರ್ಯಕ್ರಮಕ್ಕೆ ಚಾಲನೆ ನೀಡಿ ಮಾತನಾಡಿದರು. ಗ್ರಾಮೀಣ ಭಾಗದಲ್ಲಿ ಕೆಲಸ ಮಾಡಲು ಮುಂದಾಗುವ ವೈದ್ಯರಿಗೆ ವಿಶೇಷ ಭತ್ಯೆ ಹಾಗೂ ಶೀಘ್ರ ಬಡ್ತಿ ನೀಡುವ ಕ್ರಮಕ್ಕೆ ಚಿಂತಿಸಲಾಗಿದೆ. ಆ ಮೂಲಕ ಗ್ರಾಮಗಳಿಗೂ ಆರೋಗ್ಯ ಭಾಗ್ಯ ವಿಸ್ತರಿಸಲು ರಾಜ್ಯ ಸರ್ಕಾರ ಕ್ರಮ ವಹಿಸಲಿದೆ ಎಂದರು. 3ನೇ ಹಂತದಲ್ಲಿ 60 ವರ್ಷ ಮೇಲ್ಪಟ್ಟವರು 50 ಲಕ್ಷ ಹಾಗೂ 45 ವರ್ಷ ಮೇಲ್ಪಟ್ಟು ವಿವಿಧ ರೋಗಗಳಿಂದ ಬಳಲುತ್ತಿರುವ 16 ಲಕ್ಷ ಜನರಿದ್ದು, ಎಲ್ಲರಿಗೂ ಲಸಿಕೆ ನೀಡಲು ಕ್ರಮ ವಹಿಸಲಾಗಿದೆ.

**ರಾಜ್ಯದಲ್ಲಿ ಮತ್ತೆ ಲಾಕ್‌ಡೌನ್ ಇಲ್ಲ:** ರಾಜ್ಯದಲ್ಲಿ ಮತ್ತೆ ಲಾಕ್‌ಡೌನ್ ಮಾಡುವ ಪರಿಸ್ಥಿತಿಯಿಲ್ಲ. ಸಾರ್ವಜನಿಕರು ಕೋವಿಡ್ ನಿಯಮ ಪಾಲಿಸದಿದ್ದರೆ ಆ ಪರಿಸ್ಥಿತಿ ದೂರವಿಲ್ಲ ಎಂದು ಡಾ: ಕೆ. ಸುಧಾಕರ್ ತಿಳಿಸಿದರು. ಕೊರೋನಾ 2ನೇ ಅಲೆ ಕೆಲ ರಾಜ್ಯಗಳಲ್ಲಿ ಶುರುವಾಗಿದೆ. ಲಾಕ್‌ಡೌನ್ ಮಾಡುವ ಸನ್ನಿವೇಶವಿಲ್ಲ. ಅಂತರರಾಜ್ಯ ಗಡಿಭಾಗದಲ್ಲಿ ಬಿಗಿಕ್ರಮ ಕೈಗೊಳ್ಳಲು ಸೂಚಿಸಲಾಗಿದೆ. ಅವರು ಸಾಮಾಜಿಕ ಅಂತರ ಕಾಯ್ದುಕೊಂಡು ಸಹಕಾರ ನೀಡಿದರೆ ಲಾಕ್‌ಡೌನ್‌ನಿಂದ ಪಾರಾಗಬಹುದು ಎಂದರು.

ಆಧಾರ:ವಿಜಯವಾಣಿ, ದಿನಾಂಕ:02.03.2021.

## 27. ಮೀಸಲಾತಿ ಅಧ್ಯಯನಕ್ಕೆ ಉನ್ನತ ಸಮಿತಿ

ಪಂಚಮಸಾಲಿ, ಕುರುಬ, ವಾಲ್ಮೀಕಿ, ಒಕ್ಕಲಿಗ, ವೀರಶೈವ ಲಿಂಗಾಯತ ಸೇರಿದಂತೆ ಮೀಸಲಾತಿ ಕೋರಿರುವ ಎಲ್ಲ ಸಮುದಾಯಗಳ ಬೇಡಿಕೆಗಳ ಅಧ್ಯಯನಕ್ಕಾಗಿ ಹೈಕೋರ್ಟ್‌ನ ನಿವೃತ್ತ ನ್ಯಾಯಮೂರ್ತಿ ನೇತೃತ್ವದಲ್ಲಿ ಮೂವರು ಸದಸ್ಯರ ಉನ್ನತ ಮಟ್ಟದ ಸಮಿತಿ ರಚಿಸಲು ಸಚಿವ ಸಂಪುಟ ಸಭೆ ತೀರ್ಮಾನಿಸಿದೆ. ಆದರೆ, ವರದಿ ಸಲ್ಲಿಸಲು ಯಾವುದೇ ಕಾಲಮಿತಿ ನಿಗದಿಪಡಿಸಿಲ್ಲ.

ಸಚಿವ ಸಂಪುಟ ಸಭೆ ನಡೆದ ಬಳಿಕ ಸುದ್ದಿಗೋಷ್ಠಿಯಲ್ಲಿ ಈ ವಿಷಯ ತಿಳಿಸಿದ ಗೃಹ, ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವ ಬಸವರಾಜ ಬೊಮ್ಮಾಯಿ ಅವರು, ಸುಪ್ರೀಂಕೋರ್ಟ್ ಮೀಸಲಾತಿ ಪ್ರಮಾಣ ಶೇ.50 ಮೀರಬಾರದು ಎಂದಿದೆ. ಕೆಲ ರಾಜ್ಯಗಳು ಈ ಪ್ರಮಾಣ ಮೀರಿ ಮೀಸಲಾತಿ ನೀಡಿದ್ದನ್ನು ರದ್ದುಪಡಿಸಿ, ಕೆಲವಕ್ಕೆ ತಡೆ ನೀಡಿದೆ. ಈಗ ರಾಜ್ಯದಲ್ಲೂ ವಿವಿಧ ಸಮುದಾಯಗಳ ಮೀಸಲಾತಿ ಬೇಡಿಕೆಗಳನ್ನೆಲ್ಲಾ ಪರಿಗಣಿಸಿದರೆ ಮೀಸಲಾತಿ ಪ್ರಮಾಣ ಶೇ.50ನ್ನು ಮೀರುತ್ತದೆ. ಕಾನೂನು ಮತ್ತು ಸಂವಿಧಾನದ ಚೌಕಟ್ಟಿನಲ್ಲಿ ಈ ಸಮುದಾಯಗಳ ಮೀಸಲಾತಿ ಬೇಡಿಕೆ ಈಡೇರಿಸಲು ಮಾರ್ಗೋಪಾಯಗಳೇನು ಎಂದು ಅಧ್ಯಯನ ನಡೆಸಿ ವರದಿ ನೀಡಲು ಉನ್ನತ ಮಟ್ಟದ ಸಮಿತಿ ರಚಿಸಲು ತೀರ್ಮಾನಿಸಲಾಗಿದೆ ಎಂದು ವಿವರಿಸಿದರು.

ನಿವೃತ್ತ ನ್ಯಾಯಮೂರ್ತಿ ಸಮಿತಿಯ ಅಧ್ಯಕ್ಷರಾಗಿರುತ್ತಾರೆ. ಸದಸ್ಯರಾಗಿ ಸರ್ಕಾರದ ಒಬ್ಬರು ನಿವೃತ್ತ ಆಡಳಿತಾಧಿಕಾರಿ ಮತ್ತು ಒಬ್ಬರು ಸಾಮಾಜಿಕ ವಿಜ್ಞಾನಿಯನ್ನು ನೇಮಿಸಲಾಗುತ್ತದೆ. ಮೂವರು ಸದಸ್ಯರ ನೇಮಕದ ಅಧಿಕಾರವನ್ನು ಮುಖ್ಯಮಂತ್ರಿ ಅವರಿಗೆ ಸಚಿವ ಸಂಪುಟ ಸಭೆ ನೀಡಿದೆ ಎಂದರು.

2ಎ ಮೀಸಲಾತಿ ನೀಡುವಂತೆ ಪಂಚಮಸಾಲಿ ಸಮುದಾಯದ ಬೇಡಿಕೆ ಬಗ್ಗೆ ವರದಿ ನೀಡಲು ಸರ್ಕಾರ ಈಗಾಗಲೇ ರಾಜ್ಯ ಹಿಂದುಳಿದ ವರ್ಗಗಳ ಆಯೋಗಕ್ಕೆ ಸೂಚಿಸಿದೆ. ಕುರುಬ ಸಮುದಾಯ

ಪರಿಶಿಷ್ಟ ಪಂಗಡಕ್ಕೆ ಸೇರಿಸಲು ಮನವಿ ಮಾಡಿದ್ದು, ಈ ಬಗ್ಗೆ ಕುಲಶಾಸ್ತ್ರ ಅಧ್ಯಯನಕ್ಕೆ ಸೂಚಿಸಲಾಗಿದೆ. ವಾಲ್ಮೀಕಿ ಸಮುದಾಯ ತಮ್ಮ ಮೀಸಲಾತಿ ಪ್ರಮಾಣ ಹೆಚ್ಚಿಸಲು ಕೋರಿದೆ. ಒಕ್ಕಲಿಗ ಮತ್ತು ವೀರಶೈವ ಲಿಂಗಾಯತ ಸಮುದಾಯದವರು ತಮ್ಮ ಎಲ್ಲ ಉಪ ಪಂಗಡಗಳನ್ನು ಕೇಂದ್ರದ ಹಿಂದುಳಿದ ವರ್ಗಗಳ ಪಟ್ಟಿಗೆ ಸೇರಿಸಲು ಮನವಿ ಮಾಡಿವೆ. ಹೀಗೆ ಮೀಸಲಾತಿ ವಿಚಾರದಲ್ಲಿ ಬೇರೆ ಬೇರೆ ರೀತಿಯ ಮನವಿಗಳು ಬಂದಿವೆ. ಈ ಮಧ್ಯೆ, ನ್ಯಾ. ನಾಗಮೋಹನ ದಾಸ್ ಸಮಿತಿ ಪರಿಶಿಷ್ಟ ಜಾತಿ ಮತ್ತು ಪ.ಪಂಗಡದ ಮೀಸಲಾತಿ ಪ್ರಮಾಣ ಹೆಚ್ಚಿಸಲು ವರದಿ ನೀಡಿದೆ. ಈ ವರದಿ ಪರಾಮರ್ಶೆಗೆ ಸಂಪುಟ ಉಪ ಸಮಿತಿ ರಚಿಸಲಾಗಿದೆ. ಒಂದೊಂದು ಸಮುದಾಯದ ಬೇಡಿಕೆಗಳ ವಿಚಾರ ಬೇರೆ ಬೇರೆ ಹಂತದಲ್ಲಿದೆ. ಈ ಎಲ್ಲವನ್ನೂ ಗಮನದಲ್ಲಿಟ್ಟುಕೊಂಡು ಈ ಉನ್ನತ ಸಮಿತಿ ಅಧ್ಯಯನ ನಡೆಸಿ ವರದಿ ನೀಡಬೇಕಿದೆ. ಈ ಸಮಿತಿಗೆ ಕಾಲಮಿತಿ ನಿಗದಿಪಡಿಸಿಲ್ಲ. ಸಮಿತಿಯೇ ಕಾಲಮಿತಿ ನಿಗದಿಪಡಿಸಿಕೊಂಡು ವರದಿ ನೀಡಲಿದೆ ಎಂದರು ಸುದ್ದಿಗೋಷ್ಠಿಯಲ್ಲಿ ಗಣಿ ಮತ್ತು ಭೂ ವಿಜ್ಞಾನ ಸಚಿವ ಮುರುಗೇಶ ನಿರಾಣಿ ಉಪಸ್ಥಿತರಿದ್ದರು.

ಸಮಿತಿ ಏಕೆ: ಪಂಚಮಸಾಲಿ, ವೀರಶೈವ, ಲಿಂಗಾಯತ, ಕುರುಬ, ಒಕ್ಕಲಿಗ, ವಾಲ್ಮೀಕಿ ಸೇರಿದಂತೆ ವಿವಿಧ ಸಮುದಾಯಗಳಿಂದ ಮೀಸಲಾತಿಗೆ ಬೇಡಿಕೆ ಇದೆ. ಆ ಬೇಡಿಕೆಗಳ ಕುರಿತು ಅಧ್ಯಯನ ನಡೆಸಿ, ಕಾನೂನು–ಸಂವಿಧಾನದ ಚೌಕಟ್ಟಿನಲ್ಲಿ ಬೇಡಿಕೆ ಈಡೇರಿಸಲು ಮಾರ್ಗೋಪಾಯ ಸೂಚಿಸುವ ಸಲುವಾಗಿ ಸಮಿತಿ ರಚನೆ.

ಆಧಾರ: ಕನ್ನಡಪ್ರಭ, ದಿನಾಂಕ:04.03.2021

## 28. ವಿಧಾನ ಸಭೆಯಲ್ಲಿ ಒಡೆಯರ್ ಭಾವಚಿತ್ರ ಅಳವಡಿಸಿ

ವಿಧಾನ ಸಭೆಯಲ್ಲಿ ಹತ್ತನೇ ಚಾಮರಾಜ ಒಡೆಯರ್ ಮತ್ತು ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಭಾವಚಿತ್ರ ಅಳವಡಿಸಬೇಕು ಹಾಗೂ ಮೈಸೂರು ವಿಮಾನ ನಿಲ್ದಾಣಕ್ಕ ಚಾಮರಾಜ ಒಡೆಯರ್ ಹೆಸರಿಡಬೇಕು ಎಂದು ಕೋರಿ ಮೈಸೂರು ಜಿಲ್ಲಾ ಉಸ್ತುವಾರಿ ಸಚಿವ ಎಸ್.ಟಿ.ಸೋಮಶೇಖರ್ ಅವರು ಮುಖ್ಯಮಂತ್ರಿ ಹಾಗೂ ವಿಧಾನಸಭಾ ಸಭಾಧ್ಯಕ್ಷರವರಿಗೆ ಪತ್ರ ಬರೆದಿದ್ದಾರೆ.

ರಾಜಪರಂಪರೆಯ ಕಾಲದಲ್ಲಿಯೇ ಪ್ರಜಾಪ್ರಭುತ್ವದ ಪರಿಕಲ್ಪನೆ ಹೊಂದಿ ಅದನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಿದ್ದವರು ಚಾಮರಾಜ ಒಡೆಯರ್ ಮತ್ತು ನಾಲ್ವಡಿ ಕೃಷ್ಣರಾಜ ಒಡೆಯರ್, ರಾಜ್ಯಕ್ಕೆ ಉತ್ತಮ ಹೆಸರು ತಂದು ಕೊಡುವಲ್ಲಿ ಅಂದಿನ ಮೈಸೂರು ಮಹಾಸಂಸ್ಥಾನದ ಮಹಾರಾಜರ ಕೊಡುಗೆಗಳು ಸಾಕಷ್ಟಿವೆ' ಎಂದು ಪತ್ರದಲ್ಲಿ ತಿಳಿಸಿದ್ದಾರೆ.

'ಕರ್ನಾಟಕ ಇಂದು ದೇಶ–ವಿದೇಶದಲ್ಲಿ ಹೆಸರು ಗಳಿಸಲು ಮೈಸೂರು ಹಾಗೂ ಮಹಾರಾಜರ ಕೊಡುಗೆ ಅಪಾರವಾಗಿದೆ. ಜೊತೆಗೆ ಸ್ವತಃ ರಾಜಮಾತೆಯವರೇ ಪತ್ರ ಬರೆದು ಕೋರಿದ್ದು, ಅವರಿಗೆ ಗೌರವ ಸೂಚಿಸುವುದು ನಮ್ಮ ಕರ್ತವ್ಯವಾಗಿದೆ' ಎಂದೂ ಅವರು ಹೇಳಿದ್ದಾರೆ.

**ಪ್ರಶಂಸೆ:** 'ಮುಖ್ಯಮಂತ್ರಿ ಮತ್ತು ಸಭಾಧ್ಯಕ್ಷರಿಗೆ ಪತ್ರ ಬರೆದು ಇಂತಹ ಕಾರ್ಯಕ್ಕೆ ಮುಂದಾಳತ್ವ ವಹಿಸಿರುವ ಎಸ್.ಟಿ.ಸೋಮಶೇಖರ ನಡೆ ಪ್ರಶಂಸನಾರ್ಹ' ಎಂದು ರಾಜಮಾತೆ ಪ್ರಮೋದಾ ದೇವಿ ಒಡೆಯರ್ ಪ್ರಶಂಸೆ ವ್ಯಕ್ತಪಡಿಸಿದ್ದಾರೆ.

ಆಧಾರ: ಪ್ರಜಾವಾಣಿ, ದಿನಾಂಕ:04.03.2021

## 29. ಸಿಡಿ, ಗಣಿ ಸ್ಫೋಟಗಳೇ ಪ್ರತಿಪಕ್ಷಗಳಿಗೆ ಬ್ರಹ್ಮಾಸ್ತ್ರ

ವಿಧಾನಮಂಡಲ ಅಧಿವೇಶನದಲ್ಲಿ ಗಣಿ ಸ್ಫೋಟಕ್ಕೆ ಮುನ್ನವೇ ಸಿಡಿ ಸ್ಫೋಟ ಮುನ್ನೆಲೆಗೆ ಬಂದಿದ್ದು, ಸರ್ಕಾರವನ್ನು ಇಕ್ಕಟ್ಟಿಗೆ ಸಿಲುಕಿಸಲು ವಿರೋಧ ಪಕ್ಷಗಳು ತಾಲೀಮು ನಡೆಸಿವೆ.

ಬಜೆಟ್ ಅಧಿವೇಶನವನ್ನು ಸುಸೂತ್ರವಾಗಿ ನಡೆಸಲು ಬೇಕಾದ ಸಿದ್ಧತೆ ಮಾಡಿಕೊಂಡಿದ್ದ ಸರ್ಕಾರಕ್ಕೆ ಸಚಿವ ರಮೇಶ್ ಜಾರಕಿಹೊಳಿ ಅವರ ಕಾಮಕಾಂಡ ಪ್ರಕರಣದ ಸಿಡಿ ನುಂಗಲಾರದ ತುತ್ತಾಗಿ ಪರಿಣಮಿಸಿದೆ. ಅಧಿವೇಶನದಲ್ಲಿ ಮುಖಭಂಗ ತಪ್ಪಿಸಿಕೊಳ್ಳಲು ಹರಸಾಹಸ ಮಾಡಿದ ಮುಖ್ಯಮಂತ್ರಿ

ಬಿ.ಎಸ.ಯಡಿಯೂರಪ್ಪ, ಪರಿಸ್ಥಿತಿ ಅನಿವಾರ್ಯತೆಯನ್ನು ಒತ್ತಿ ಹೇಳಿ ಜಾರಕಿಹೊಳಿ ಮನವೊಲಿಸಿ ರಾಜೀನಾಮೆ ಪಡೆದು ಪ್ರಕರಣದ ಬಿಸಿ ತಗ್ಗಿಸುವ ಪ್ರಯತ್ನ ಮಾಡಿದ್ದಾರೆ. ಆದರೂ ಈಗಿನ ಪ್ರಕರಣವನ್ನು ನೆಪವಾಗಿಸಿಕೊಂಡು, ಹಿಂದೆ ನೀಲಿಚಿತ್ರ ವೀಕ್ಷಣೆ, ರಾಸಲೀಲೆ ಪ್ರಕರಣದಲ್ಲಿ ರಾಜೀನಾಮೆ ನೀಡಿರುವ ಪ್ರಕರಣವನ್ನು ಪ್ರಸ್ತಾಪಿಸಿ ಬಿಜೆಪಿಗೆ ಮಸಿ ಬಳಿಯಲು ಎಲ್ಲ ಅಸ್ತ್ರಗಳನ್ನು ವಿರೋಧ ಪಕ್ಷ ಪ್ರಯೋಗಿಸಲಿದೆ.

ಮುಂಬರಲಿರುವ ಉಪ ಚುನಾವಣೆಗೆ ಈಗಲೇ ವೇದಿಕೆ ಸಿದ್ಧಪಡಿಸಿಕೊಳ್ಳಲು ಸಜ್ಜಾಗಿರುವ ವಿರೋಧ ಪಕ್ಷಗಳು, ಸಭ್ಯರ ಪಕ್ಷ ಎನ್ನುವ ಬಿಜೆಪಿಯ ಮಡಿವಂತಿಕೆಯನ್ನು ಬೆತ್ತಲು ಮಾಡುವ ನಿಟ್ಟಿನಲ್ಲಿ ಹಲವು ಬಾಣಗಳನ್ನು ಬಿಡಲು ತಯಾರಿ ನಡೆಸಿದೆ. ಮುಖ್ಯಮಂತ್ರಿಗಳ ತವರು ಶಿವಮೊಗ್ಗ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಯಲ್ಲಿ ನಡೆದ ಗಣಿ ಸ್ಫೋಟ ಪ್ರಕರಣ ವಿರೋಧ ಪಕ್ಷಗಳಿಗೆ ಬ್ರಹ್ಮಾಸ್ತ್ರವಾಗಿದೆ. ಈ ಪ್ರಕರಣವನ್ನು ಮುಂದಿಟ್ಟುಕೊಂಡು ರಾಜ್ಯದಲ್ಲಿ ಸರ್ಕಾರ ನಿಷ್ಕ್ರಿಯವಾಗಿದ್ದು, ಆಡಳಿತ ಮತ್ತು ಕಾನೂನು ಸುವ್ಯವಸ್ಥೆ ಕುಸಿದಿದೆ ಎಂದು ಆರೋಪಿಸಿ ರಾಜೀನಾಮೆಗೆ ಪಟ್ಟು ಹಿಡಿಯುವ ಸಾಧ್ಯತೆ ಇದೆ.

ಕೋವಿಡ್ ಸಂದರ್ಭದಲ್ಲಿ ನಡೆದಿದೆ ಎನ್ನಲಾದ ಹಲವು ಹಗರಣಗಳನ್ನು ಪ್ರಸ್ತಾಪ ಮಾಡಲು ಎಲ್ಲ ದಾಖಲಾತಿಗಳನ್ನು ಪಡೆದುಕೊಂಡಿದ್ದು, ಸದನದಲ್ಲಿ ಸಾಕ್ಷಿಸಹಿತ ವಿಷಯ ಪ್ರಸ್ತಾಪಿಸಲು ಮುಂದಾಗಿವೆ. ಆಡಳಿತದಲ್ಲಿ ಭ್ರಷ್ಟಾಚಾರ ತಾಂಡವವಾಡುತ್ತಿದೆ. ಸಚಿವರು ಸರಿಯಾಗಿ ಜಿಲ್ಲಾ ಪ್ರವಾಸ ಮಾಡುತ್ತಿಲ್ಲ. ಅವರ ಜಿಲ್ಲೆಗಷ್ಟೇ ಸೀಮಿತವಾಗಿದ್ದಾರೆ. ಅವರು ರಾಜ್ಯದ ಮಂತ್ರಿ ಎನ್ನುವುದನ್ನು ಮರೆತಿದ್ದಾರೆ. ಮುಖ್ಯಮಂತ್ರಿಗಳಿಗೆ ಆಡಳಿತದಲ್ಲಿ ಬಿಗಿ ತಪ್ಪಿದೆ ಎಂಬ ವಾಗ್ದಾಳಿ ನಡೆಸಲು ವಿರೋಧ ಪಕ್ಷಗಳು ಸಜ್ಜಾಗಿವೆ.

**ರಕ್ಷಣಾತ್ಮಕ ಆಟ:** ವಿರೋಧ ಪಕ್ಷಗಳ ದಾಳಿಯನ್ನು ತಪ್ಪಿಸಿಕೊಳ್ಳಲು ಬಿಜೆಪಿ ರಕ್ಷಣಾತ್ಮಕ ಆಟಕ್ಕೆ ಮುಂದಾಗಿದೆ. ಗಣಿ ಸ್ಫೋಟ ಪ್ರಕರಣದ ಬಗ್ಗೆ ಸದನದಲ್ಲಿ ಹೆಚ್ಚು ಪ್ರಸ್ತಾಪವಾಗಬಹುದು ಎನ್ನುವ ನಿಟ್ಟಿನಲ್ಲಿ ಅದಕ್ಕಾಗಿ ಸಿದ್ಧತೆ ಮಾಡಿಕೊಂಡಿದ್ದ ಬಿಜೆಪಿಗೆ ಈಗ ಸೆಕ್ಸ್ ಸಿಡಿ ಸ್ಫೋಟವಾಗಿದ್ದು, ಎಲ್ಲ ಲೆಕ್ಕಾಚಾರಗಳನ್ನು ತಲೆಕೆಳಗು ಮಾಡಿದೆ. ಯಾರೂ ಈ ಬಗ್ಗೆ ಬಹಿರಂಗ ಹೇಳಿಕೆ ನೀಡಬಾರದು ಎಂದು ಬಿಜೆಪಿ ವರಿಷ್ಠರು ಕಟ್ಟಪ್ಪಣೆ ವಿಧಿಸಿ ಒಂದಷ್ಟು ಡ್ಯಾಮೇಜ್ ಕಂಟ್ರೋಲ್‌ಗೆ ಯತ್ನಿಸಿದ್ದಾರೆ. ಹಗ್ಗದ ಮೇಲಿನ ನಡಿಗೆಯಂತೆ ಆಡಳಿತ ನಡೆಸುತ್ತಿರುವ ಬಿಎಸ್‌ವೈ, ಸಿಡಿ ಪ್ರಕರಣದಲ್ಲಿ ರಕ್ಷಣಾತ್ಮಕ ಬ್ಯಾಟಿಂಗ್ ಮಾಡುತ್ತಿದ್ದಾರೆ.

ಆಧಾರ: ವಿಜಯವಾಣಿ, ದಿನಾಂಕ:04.03.2021

## 30. ಹಳಿ ತಪ್ಪಿಸಿದ್ದೇ ಕಾಂಗ್ರೆಸ್

‘ದೇಶದಲ್ಲಿ 1967ರವರೆಗೆ ಒಂದು ರಾಷ್ಟ್ರ, ಒಂದು ಚುನಾವಣೆ ಪದ್ಧತಿ ಚಾಲ್ತಿಯಲ್ಲಿತ್ತು. ಕಾಂಗ್ರೆಸ್ ಪಕ್ಷವೇ ಅದನ್ನು ಹಳಿ ತಪ್ಪಿಸಿತು’ ಎಂದು ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವ ಬಸವರಾಜ ಬೊಮ್ಮಾಯಿ ಹೇಳಿದರು. ವಿಧಾನಸಭೆಯಲ್ಲಿ ‘ಒಂದು ರಾಷ್ಟ್ರ, ಒಂದು ಚುನಾವಣೆ’ ವಿಷಯ ಪ್ರಸ್ತಾಪಿಸಿದ ಅವರು, ‘ಅಂದಿನ ರಾಷ್ಟ್ರಪತಿ ಮೂಲಕ 7 ರಾಜ್ಯಗಳ ಸರ್ಕಾರಗಳನ್ನು ಕೇಂದ್ರದಲ್ಲಿದ್ದ ಕಾಂಗ್ರೆಸ್ ಸರ್ಕಾರದ ನೇತಾರರು ವಿಸರ್ಜಿಸಿದರು. ರಾಷ್ಟ್ರಪತಿ ಆಡಳಿತವನ್ನು ಹೇರಿ, ದೇಶದ ದಾರಿ ತಪ್ಪಿಸಿದರು. ಇದರಿಂದಾಗಿ ಸಂಸತ್ ಮತ್ತು ವಿಧಾನಸಭೆಗಳಿಗೆ ಬೇರೆ ಬೇರೆ ಕಾಲದಲ್ಲಿ ಚುನಾವಣೆ ನಡೆಯಲು ಆರಂಭವಾಯಿತು’ ಎಂದು ಹೇಳಿದರು.

ಈ ಪದ್ಧತಿ ಮತ್ತು ಜಾರಿ ಬಂದರೆ ಚುನಾವಣೆಯಲ್ಲಿ ಕಡಿವಾಣ ಹಾಕಬಹುದು. ಸಮಯ ಮತ್ತು ಹಣವನ್ನೂ ಉಳಿಸಬಹುದು. ಆದರೆ ಭ್ರಷ್ಟ ಮತ್ತು ಸ್ವಾರ್ಥಪರ ರಾಜಕಾರಣಿಗಳಿಗೆ ಈ ಪದ್ಧತಿ ಮತ್ತೆ ಬರುವುದು ಬೇಕಿಲ್ಲ ಎಂದು ಬೊಮ್ಮಾಯಿ ಕಿಡಿ ಕಾರಿದರು. ಇದೇ ಕಾಂಗ್ರೆಸ್‌ನವರು ತುರ್ತು ಪರಿಸ್ಥಿತಿ ಹೇರಿ ದೇಶದ ಜನರ ಎಲ್ಲ ಹಕ್ಕುಗಳನ್ನು ಮೊಟಕುಗೊಳಿಸಿದರು. ಮಾಧ್ಯಮ ಸ್ವಾತಂತ್ರ್ಯ ಮತ್ತು ವಾಕ್ ಸ್ವಾತಂತ್ರ್ಯಕ್ಕೆ ಕಡಿವಾಣ ಹಾಕಿದ್ದರು. ಇಂತಹ ಸ್ಥಿತಿಯ ವಿರುದ್ಧ ಹೋರಾಡಿ ಪ್ರಜಾತಂತ್ರವನ್ನು ಉಳಿಸಿಕೊಂಡಿದ್ದು, ಈ ದೇಶದ ಜನರು, ಕಾಂಗ್ರೆಸ್ ತನ್ನ ಅಧಿಕಾರ ಉಳಿಸಿಕೊಳ್ಳಲು ಸಾಕಷ್ಟು ಕಸರತ್ತು ನಡೆಸಿತ್ತು ಎಂದು ಅವರು ಹೇಳಿದರು.

ದೇಶದಲ್ಲಿ ಸಮ್ಮಿಶ್ರ ಸರ್ಕಾರದ ಯುಗ ಆರಂಭವಾಯಿತು. ಆ ಬಳಿಕ ಪ್ರತಿ ತಿಂಗಳು ಒಂದಲ್ಲ ಒಂದು ಚುನಾವಣೆ ನಡೆಯುವ ಪರಿಪಾಠ ಆರಂಭವಾಯಿತು. ಇದು ದೇಶದ ಅಭಿವೃದ್ಧಿಗೆ ಅಡ್ಡಿ ಆಗಿದೆ ಎಂದು ಹೇಳಿದರು.

ಆಧಾರ: ಪ್ರಜಾವಾಣಿ, ದಿನಾಂಕ:06.03.2021

## 31. ಕಾಲಮಿತಿ ವೇತನ ಬಡ್ತಿಗೆ ಅವಕಾಶವಿಲ್ಲ

ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ವ್ಯಾಪ್ತಿಗೆ ಬರುವ ಮೊರಾರ್ಜಿ ದೇಶಾಯಿ ವಸತಿ ಶಾಲೆ, ಮಾದರಿ ವಸತಿ ಶಾಲೆ ಮತ್ತು ಅಲ್ಪಸಂಖ್ಯಾತ ವಸತಿ ಶಾಲೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ಬೋಧಕ ಮತ್ತು ಬೋಧಕೇತರ ಸಿಬ್ಬಂದಿ 10 ವರ್ಷಗಳ ಸೇವೆಯನ್ನು ಪೂರೈಸದಿರುವುದರಿಂದ ಅವರಿಗೆ ಕಾಲಮಿತಿ ವೇತನ ಬಡ್ತಿ ನೀಡಲು ಅವಕಾಶವಿಲ್ಲ ಎಂದು ಅಲ್ಪಸಂಖ್ಯಾತರ ಕಲ್ಯಾಣ ಸಚಿವ ಶ್ರೀಮಂತ ಪಾಟೀಲ ತಿಳಿಸಿದ್ದಾರೆ.

ಪ್ರಶ್ನೋತ್ತರ ವೇಳೆ ಜೆಡಿಎಸ್‌ನ ಮರಿತಿಬ್ಬೇಗೌಡರ ಪ್ರಶ್ನೆಗೆ ಉತ್ತರಿಸಿ, ಈ ಶಾಲೆಗಳಲ್ಲಿ ಸಿಬ್ಬಂದಿಗಳು 2016–17ನೇ ಸಾಲಿನಲ್ಲಿ ನೇರ ನೇಮಕಾತಿ ಮೂಲಕ ನೇಮಕಾತಿ ಹೊಂದಿರುವುದರಿಂದ ಕರ್ನಾಟದ ನಾಗರಿಕ ಸೇವಾ (ಕಾಲಮಿತಿ ಬಡ್ತಿ) ನಿಯಮ–1983ರನ್ವಯ ಈ ನೌಕರರು ನೇಮಕಗೊಂಡ ಹುದ್ದೆಯಲ್ಲಿ ಯಾವುದೇ ಮುಂಬಡ್ತಿ ಹೊಂದದೆ 10 ವರ್ಷ ಸೇವೆ ಪೂರೈಸಿದ್ದಲ್ಲಿ ಅವರಿಗೆ ಕಾಲಮಿತಿ ವೇತನ ಬಡ್ತಿ ನೀಡಬೇಕಾಗಿರುತ್ತದೆ. ಈ ನೌಕರರು 10 ವರ್ಷಗಳ ಸೇವೆಯನ್ನು ಪೂರೈಸದೇ ಇರುವುದರಿಂದ ಕಾಲಮಿತಿ ವೇತನ ಬಡ್ತಿಗೆ ಅರ್ಹತೆ ಹೊಂದಿರುವುದಿಲ್ಲ ಎಂದರು.

ಶಿಕ್ಷಣ ಇಲಾಖೆಯಿಂದ 2018ರಲ್ಲಿ ವರ್ಗಾವಣೆಗೊಂಡು 5 ಅಲ್ಪಸಂಖ್ಯಾತ ವಸತಿ ಶಾಲೆಗಳಲ್ಲಿನ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳು ಹೊರಗುತ್ತಿಗೆ ಆಧಾರದಲ್ಲಿ ನೇಮಕವಾಗಿದ್ದಾರೆ. ಖಾಯಂ ನೇಮಕಾತಿ ವಿಲೀನಗೊಳಿಸಲಾಗಿಲ್ಲ ಎಂದು ಸಚಿವರು ಮಾಹಿತಿ ನೀಡಿದರು.

ಆಧಾರ: ಉದಯವಾಣಿ, ದಿನಾಂಕ:06.03.2021

## 32. ಸಂಕಷ್ಟ ಕಾಲದ ಉತ್ಕೃಷ್ಟ ಬಜೆಟ್

ಕೊರೋನಾ ತಂದ ಸಂಕಷ್ಟದಿಂದ ಒಂದೆಡೆ ತೆರಿಗೆ ಸಂಗ್ರಹ ಕುಸಿತ, ಇನ್ನೊಂದೆಡೆ ವಿಪರೀತ ಖರ್ಚು. ಈ ನಡುವೆಯೇ ರಾಜ್ಯವನ್ನು ಮುನ್ನಡೆಸಿಕೊಂಡು ಹೋಗಬೇಕಾದ ಅನಿವಾರ್ಯತೆ ಸಿಎಂ ಯಡಿಯೂರಪ್ಪ ಅವರಿಗೆ ಎದುರಾಗಿದ್ದು ಸುಳ್ಳಲ್ಲ. ಈ ನಡುವೆ ಅವರು 2021–22ನೇ ರಾಜ್ಯ ಬಜೆಟ್ ಮಂಡನೆ ಮಾಡಿದ್ದು, ಬಿಎಸ್‌ವೈಗೆ ಈ ಬಾರಿಯ ಬಜೆಟ್ ನಿಜಕ್ಕೂ ಸವಾಲಾಗಿತ್ತು. ಆದರೆ ಎಲ್ಲವನ್ನೂ ಸೂಕ್ಷ್ಮವಾಗಿ ಸರಿದೂಗಿಸಿಕೊಂಡು ಹೋಗಿರುವ ಅವರು, ಯಾವುದೇ ತೆರಿಗೆ ಹೆಚ್ಚಳ ಮಾಡದೆ, ಎಲ್ಲ ಜಾತಿ, ಧರ್ಮಗಳನ್ನು ವಿಶ್ವಾಸಕ್ಕೆ ತೆಗೆದುಕೊಳ್ಳುವ ಮೂಲಕ ರಾಜ್ಯದ ಅಭಿವೃದ್ಧಿಗೆ ಹಲವು ಯೋಜನೆಗಳನ್ನು ಘೋಷಿಸುವ ಮೂಲಕ ಸೈ ಎನಿಸಿಕೊಂಡಿದ್ದಾರೆ.

**ತೆರಿಗೆ ಹೆಚ್ಚಳ ಇಲ್ಲ:** ಲಾಕ್‌ಡೌನ್‌ನಿಂದಾದ ನಷ್ಟವನ್ನು ಸರಿದೂಗಿಸಲು ಪೆಟ್ರೋಲ್, ಡೀಸೆಲ್ ಸೇರಿದಂತೆ ಇಂಧನಗಳ ತೆರಿಗೆ ಏರಿಕೆ ಮಾಡಲಾಗುತ್ತದೆ ಎಂದು ನಿರೀಕ್ಷಿಸಲಾಗಿತ್ತು. ಆದರೆ ಈ ಬಾರಿ ಬಜೆಟ್‌ನಲ್ಲಿ ಯಾವುದೇ ತೆರಿಗೆಯನ್ನು ಬಿಎಸ್‌ವೈ ಹೆಚ್ಚಿಸಿಲ್ಲ. ಉಳಿದ ರಾಜ್ಯಗಳಿಗೆ ಹೋಲಿಸಿದರೆ ಕರ್ನಾಟಕದಲ್ಲಿ ಇಂಧನದ ಮೇಲಿನ ತೆರಿಗೆ ಕಡಿಮೆ ಇದೆ ಎಂದು ಸರ್ಕಾರ ಹೇಳಿದೆ. ನೋಂದಣಿ ಹಾಗೂ ಮುದ್ರಾಂಕ ಶುಲ್ಕದಲ್ಲೂ ಏರಿಕೆಯಾಗಿಲ್ಲ. ಪ್ರತಿ ಬಜೆಟ್‌ನಲ್ಲೂ ಏರಿಕೆ ಕಾಣುವ ಅಬಕಾರಿ ಸುಂಕ, ಈ ಬಾರಿ ಯಾವುದೇ ಏರಿಕೆ ಕಂಡಿಲ್ಲ.

**ಸರ್ವ ಧರ್ಮಗಳನ್ನೂ ಸರಿದೂಗಿಸಿದ ಬಿಎಸ್‌ವೈ:** ಒಕ್ಕಲಿಗ ಅಭಿವೃದ್ಧಿ ಪ್ರಾಧಿಕಾರ ಸ್ಥಾಪನೆ ನಿರ್ಣಯದ ಜೊತೆಯಲ್ಲೇ 500 ಕೋಟಿ ರೂ ಅನುದಾನ, ವೀರಶೈವ ಲಿಂಗಾಯತ ಸಮಾಜದ ಸಮಗ್ರ ಅಭಿವೃದ್ಧಿಗೆ ರೂ. 500 ಕೋಟಿ ಅನುದಾನ, ಬ್ರಾಹ್ಮಣ ಅಭಿವೃದ್ಧಿ ಮಂಡಳಿಯ ಕಾರ್ಯಕ್ರಮಗಳಿಗೆ ರೂ. 50 ಕೋಟಿ ರಾಜ್ಯದಾದ್ಯಂತ ಎಲ್ಲ ಅಲ್ಪ ಸಂಖ್ಯಾತ ಸಮುದಾಯಗಳ ಸಮಗ್ರ ಏಳಿಗೆಗಳಾಗಿ ಒಟ್ಟು

ರೂ. 1,500 ಕೋಟಿಗಳನ್ನು ಮೀಸಲಿಟ್ಟಿದ್ದು ಈ ಪೈಕಿ ಕ್ರೈಸ್ತ ಸಮುದಾಯಕ್ಕೆ ರೂ. 200 ಕೋಟಿ ನೀಡುವ ಮೂಲಕ ಸರ್ವ ಧರ್ಮಗಳನ್ನೂ ಸರಿದೂಗಿಸಿಕೊಂಡು ಹೋಗಿದ್ದಾರೆ.

**ರಾಜಧಾನಿಗೆ ಭರ್ಜರಿ ಕೊಡುಗೆ:** ಬಿಬಿಎಂಪಿ ಚುನಾವಣೆ ಮೇಲೆ ಕಣ್ಣಿಟ್ಟಿರುವ ಯಡಿಯೂರಪ್ಪ, ರಾಜಧಾನಿಗೆ ಭರ್ಜರಿ ಕೊಡುಗೆ ನೀಡಿದ್ದಾರೆ. ರಾಜಧಾನಿಯ ಸಮಗ್ರ ಅಭಿವೃದ್ಧಿಗೆ ಒಟ್ಟು ರೂ. 87,795 ಕೋಟಿ ಹಣ ತೆಗೆದಿರಿಸಲಾಗಿದೆ. ಮಲ್ಲೇಶ್ವರದಲ್ಲಿರುವ ಮೈಸೂರು ಲ್ಯಾಂಪ್ಸ್ ನಿಯಮಿತಕ್ಕೆ ಸೇರಿದ ಪ್ರದೇಶದಲ್ಲಿ ಎಕ್ಸ್ಪೀರಿಯನ್ಸ್ ಬೆಂಗಳೂರು ಕೇಂದ್ರ ಅಭಿವೃದ್ಧಿ, ಬೈಯಪ್ಪನಹಳ್ಳಿಯಲ್ಲಿರುವ ಎನ್.ಜಿ.ಇ.ಎಫ್‌ನಲ್ಲಿ ಹಾಗೂ ನಗರದ ಇನ್ನೂ ಮೂರು ಕಡೆ ವೃಕ್ಷೋದ್ಯಾನಗಳ ಅಭಿವೃದ್ಧಿ, ನೆನೆಗುದಿಗೆ ಬಿದ್ದಿರುವ ಬೆಂಗಳೂರು ನಗರದ ಫೆರಿಫೆರಲ್ ರಿಂಗ್ ರಸ್ತೆ ಕಾಮಗಾರಿ ಆರಂಭಿಸಲು ಕ್ರಮ ಕೈಗೊಳ್ಳಲಾಗಿದೆ. 58.2 ಕಿಲೋ ಮೀಟರ್ ಉದ್ದದ ಔಟರ್ ರಿಂಗ್ ರೋಡ್ ಹಾಗೂ ಏರ್‌ಪೋರ್ಟ್ ಮೆಟ್ರೋ ಜಾಲ ಹಂತ 2 ಅ ಮತ್ತು 2 ಆ ಅನುಷ್ಠಾನಕ್ಕಾಗಿ ರೂ.14,778 ಕೋಟಿ ಅನುದಾನ ಮೀಸಲು ಸೇರಿದಂತೆ ಹಲವು ಯೋಜನೆಗಳಿಗೆ ಬಿಎಸ್‌ವೈ ಭರಪೂರ ಅನುದಾನ ನೀಡಿದ್ದಾರೆ.

**ಆರೋಗ್ಯ ಕ್ಷೇತ್ರಕ್ಕೆ ಭರಪೂರ ಹಣ ಮೀಸಲು:** ಆರೋಗ್ಯ ಕ್ಷೇತ್ರಕ್ಕೆ ಯಡಿಯೂರಪ್ಪ ಭರ್ಜರಿ ಅನುದಾನ ನೀಡಿದ್ದಾರೆ. ಆರೋಗ್ಯ ಮತ್ತು ವೈದ್ಯಕೀಯ ಕ್ಷೇತ್ರಕ್ಕೆ ರೂ.11,908 ಕೋಟಿ ಅನುದಾನ ಮೀಸಲಿಟ್ಟಿದ್ದಾರೆ. ಚಿತ್ರದುರ್ಗ ಜಿಲ್ಲೆಗೆ ಹೊಸ ವೈದ್ಯಕೀಯ ಕಾಲೇಜು, ನಾಲ್ಕು ವಿಭಾಗಗಳಲ್ಲಿ ತಾಯಂದಿರ ಎದೆಹಾಲು ಬ್ಯಾಂಕ್, ಶಿವಮೊಗ್ಗದ ಆಯುರ್ವೇದ ಕಾಲೇಜನ್ನು ಆಯುಷ್ ವಿಶ್ವವಿದ್ಯಾಲಯವನ್ನಾಗಿ ಮೇಲ್ದರ್ಜೆಗೇರಿಸಲು ಕ್ರಮ, ಶಿವಮೊಗ್ಗ ಮತ್ತು ಮೈಸೂರಿನಲ್ಲಿ ರೂ.100 ಕೋಟಿ. ವೆಚ್ಚದಲ್ಲಿ ಪ್ರಾದೇಶಿಕ ಕ್ಯಾನ್ಸರ್ ಚಿಕಿತ್ಸಾ ಕೇಂದ್ರ ಸೇರಿದಂತೆ ಹಲವು ಯೋಜನೆಗಳಿಗೆ ಸರ್ಕಾರ ಹಣ ಎತ್ತಿಟ್ಟಿದೆ.

**ಕೃಷಿ ಪರ ಸರ್ಕಾರವೆಂಬುದು ಮತ್ತೊಮ್ಮೆ ಸಾಬೀತು:** ಕೃಷಿ ವಲಯಕ್ಕೆ ಬರೋಬ್ಬರಿ 31,021 ಕೋಟಿ ರೂಪಾಯಿ ಅನುದಾನ ಮೀಸಲಿಡುವ ಮೂಲಕ ರೈತ ಪರ ಸರ್ಕಾರ ಎಂಬುದನ್ನು ಸಾಬೀತು ಮಾಡಿದ್ದಾರೆ. ಈ ಬಾರಿಯ ಬಜೆಟ್‌ನಲ್ಲಿ ಕೃಷಿ ವಲಯದ ಅಭಿವೃದ್ಧಿಗಾಗಿ ಹಲವಾರು ಹೊಸ ಯೋಜನೆಗಳನ್ನು ಕೈಗೊಳ್ಳಲಾಗಿದೆ. ಈ ಬಾರಿ ನೀರಾವರಿ ಮತ್ತು ಮಾರುಕಟ್ಟೆ ನಿರ್ಮಾಣಕ್ಕೆ ಯೋಜನೆ ಹಮ್ಮಿಕೊಂಡಿದೆ. ಜೊತೆಗೆ ಹಲವು ವರ್ಷಗಳಿಂದ ನೆನೆಗುದಿಗೆ ಬಿದ್ದಿದ್ದ ಹಲವಾರು ನೀರಾವರಿ ಯೋಜನೆಗಳನ್ನು ಅನುಷ್ಠಾನಗೊಳಿಸುವುದಾಗಿ ಬಜೆಟ್‌ನಲ್ಲಿ ಘೋಷಿಸಲಾಗಿದೆ.

**ಗೋ ಸಂರಕ್ಷಣೆಗೆ ಬದ್ಧ:** ತೀವ್ರ ವಿರೋಧದ ನಡುವೆಯೂ ಗೋ ಹತ್ಯೆ ನಿಷೇಧ ವಿಧೇಯಕವನ್ನು ಮಂಡಿಸಿ ಉಭಯ ಸದನಗಳಲ್ಲೂ ಅಂಗೀಕಾರ ಪಡೆದ ಸರ್ಕಾರ, ಇದೀಗ ಗೋವುಗಳ ಸಂರಕ್ಷಣೆ ನಿಟ್ಟಿನಲ್ಲಿ ಗೋ ಶಾಲೆಗಳ ಸ್ಥಾಪನೆಗೆ ಮುಂದಾಗಿದೆ. ಇದಲ್ಲದೆ ಸಮಗ್ರ ಗೋ ಸಂಕುಲ ಸಮೃದ್ಧಿ ಯೋಜನೆಯನ್ನೂ ಯಡಿಯೂರಪ್ಪ ಸರ್ಕಾರ ಜಾರಿಗೆ ತಂದಿದೆ. ಪ್ರತಿ ಜಿಲ್ಲೆಗೆ ಒಂದರಂತೆ ಗೋಶಾಲೆ ಸ್ಥಾಪನೆ ಮಾಡಲಾಗುವುದು ಎಂದು ಬಜೆಟ್‌ನಲ್ಲಿ ಸಿಎಂ ಯಡಿಯೂರಪ್ಪ ಘೋಷಣೆ ಮಾಡಿದ್ದಾರೆ. ವಯಸ್ಸಾದ ಗೋವುಗಳ ಪಾಲನೆ, ಪೋಷಣೆ ಹಿನ್ನೆಲೆಯಲ್ಲಿ ಈ ಗೋ ಶಾಲೆಗಳು ನೆರವಿಗೆ ಬರಲಿವೆ.

**ಪ್ರತಿಪಕ್ಷ ನಾಯಕರ ಬೇಡಿಕೆಗೂ ಮನ್ನಣೆ:** ಮಾಜಿ ಮುಖ್ಯಮಂತ್ರಿ ಸಿದ್ಧರಾಮಯ್ಯ ಅವರ ಮಹತ್ವಾಕಾಂಕ್ಷಿ ಅನುಗ್ರಹ ಯೋಜನೆಯನ್ನು ಮುಂದುವರಿಸಲು ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ ಸರ್ಕಾರ ನಿರ್ಧರಿಸಿದೆ. ಕುರಿಗಳು ಸತ್ತರೆ ಐದು ಸಾವಿರ ರೂ. ಪರಿಹಾರ ನೀಡುವ ಅನುಗ್ರಹ ಯೋಜನೆಯನ್ನು ರಾಜ್ಯ ಸರ್ಕಾರ ಹಿಂಪಡೆದಿತ್ತು. ಈ ಕುರಿತು ರಾಜ್ಯ ಸರ್ಕಾರಕ್ಕೆ ಪತ್ರ ಬರೆದಿದ್ದ ಸಿದ್ದರಾಮಯ್ಯ, ಮಳೆ, ಸಿಡಿಲು, ಪ್ರವಾಹ ಹಾಗೂ ಅಪಘಾತದಲ್ಲಿ ಕುರಿಗಳು ಸಾವಿಗೀಡಾದರೆ ಐದು ಸಾವಿರ ರೂಪಾಯಿಗಳ ಪರಿಹಾರ ನೀಡುವ ಅನುಗ್ರಹ ಯೋಜನೆಯನ್ನು ತಾವು ಮುಖ್ಯಮಂತ್ರಿಯಾಗಿದ್ದ ಸಂದರ್ಭದಲ್ಲಿ ಜಾರಿಗೆ ತರಲಾಗಿತ್ತು. ಆದರೆ ಈ ಯೋಜನೆಗೆ ತಡೆ ನೀಡಿ ರಾಜ್ಯ ಸರ್ಕಾರ ಅನ್ಯಾಯವೆಸಗಿದೆ ಎಂದು ಅಸಮಾಧಾನ ವ್ಯಕ್ತಪಡಿಸಿದ್ದರು.

**ತವರು ಜಿಲ್ಲೆ ಶಿವಮೊಗ್ಗಕ್ಕೆ ಸಿಹಿ:** ತವರು ಜಿಲ್ಲೆ ಶಿವಮೊಗ್ಗಕ್ಕೆ ಸಿಎಂ ಯಡಿಯೂರಪ್ಪ ಈ ಬಾರಿ ಹಲವು ಯೋಜನೆಗಳನ್ನು ಪ್ರಕಟಿಸಿದ್ದಾರೆ. ಪಶು ವೈದ್ಯಕೀಯ ವಿಜ್ಞಾನದಲ್ಲಿ ಆರ್ಯುವೇದ ಔಷಧಗಳ

ಅಳವಡಿಕೆ ಉತ್ತೇಜನಕ್ಕೆ, ಶಿವಮೊಗ್ಗದ ಪಶುವೈದ್ಯಕೀಯ ಮತ್ತು ಮೀನುಗಾರಿಕೆ ಕಾಲೇಜಿನಲ್ಲಿ ರೂ.2 ಕೋಟಿ ವೆಚ್ಚದಲ್ಲಿ ಸಂಶೋಧನಾ ಕೇಂದ್ರ ಸ್ಥಾಪಿಸುವುದಾಗಿ ಪ್ರಕಟಿಸಿದ್ದಾರೆ. ಶಿವಮೊಗ್ಗ ಜಿಲ್ಲೆಯಲ್ಲಿರುವ ಆಯುರ್ವೇದ ಕಾಲೇಜನ್ನು ಆಯುಷ್ ವಿಶ್ವವಿದ್ಯಾಲಯವಾಗಿ ಮೇಲ್ದರ್ಜೆಗೇರಿಸಲು ಕ್ರಮ, ಶಿವಮೊಗ್ಗ ಹಾಗೂ ಮೈಸೂರಿನಲ್ಲಿ ರೂ.100 ಕೋಟಿ ವೆಚ್ಚದಲ್ಲಿ ಪ್ರಾದೇಶಿಕ ಕ್ಯಾನ್ಸರ್ ಚಿಕಿತ್ಸಾ ಕೇಂದ್ರ ಪ್ರಾರಂಭ ಹಾಗೂ ಶಿವಮೊಗ್ಗದಲ್ಲಿ ರೂ.384 ಕೋಟಿ ವೆಚ್ಚದಲ್ಲಿ ನಿರ್ಮಾಣವಾಗುತ್ತಿರುವ ವಿಮಾನ ನಿಲ್ದಾಣ ಕಾಮಗಾರಿಯು ಶೀಘ್ರ ಪೂರ್ಣಗೊಳಿಸಲು ಕ್ರಮ ಕೈಗೊಳ್ಳಲಾಗುವುದು ಎಂದು ಭರವಸೆ ನೀಡಿದ್ದಾರೆ.

**ಅಯೋಧ್ಯೆಯಲ್ಲಿ ಯಾತ್ರಿ ನಿವಾಸ:** ಉತ್ತರ ಪ್ರದೇಶದ ಅಯೋಧ್ಯೆಯಲ್ಲಿ ನಿರ್ಮಾಣವಾಗಲಿರುವ ಭವ್ಯ ರಾಮ ಮಂದಿರ ಹಾಗೂ ನಗರದ ವಿವಿಧ ದೇವಸ್ಥಾನ ಹಾಗೂ ಪುಣ್ಯ ಕ್ಷೇತ್ರಗಳಿಗೆ ಭೇಟಿ ನೀಡುವ ಕರ್ನಾಟಕದ ಪ್ರವಾಸಿಗರ ಅನುಕೂಲಕ್ಕಾಗಿ, ಅಯೋಧ್ಯೆಯಲ್ಲಿ ಯಾತ್ರಿ ನಿವಾಸ ಸ್ಥಾಪಿಸಲು ರಾಜ್ಯ ಸರ್ಕಾರ ನಿರ್ಧರಿಸಿದೆ. ಅಯೋಧ್ಯೆಯಲ್ಲಿ ಯಾತ್ರಿ ನಿವಾಸ ನಿರ್ಮಾಣಕ್ಕೆ ಸಿಎಂ ಯಡಿಯೂರಪ್ಪ ತಮ್ಮ ಬಜೆಟ್‌ನಲ್ಲಿ ರೂ. 10 ಕೋಟಿ ಅನುದಾನ ಘೋಷಣೆ ಮಾಡಿದರು.

ಆಧಾರ: ವಿಶ್ವವಾಣಿ, ದಿನಾಂಕ:09.03.2021

## 33. ಇಂದು ಕಿತ್ತೂರು ರಾಣಿ ಚೆನ್ನಮ್ಮ ಪ್ರಶಸ್ತಿ ಪ್ರದಾನ

ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆ ಅಂಗವಾಗಿ ನಾನಾ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿದ ರಾಜ್ಯದ 49 ಮಹಿಳೆಯರು ಮತ್ತು ಸಂಘ ಸಂಸ್ಥೆಗಳನ್ನು 'ಕಿತ್ತೂರು ರಾಣಿ ಚೆನ್ನಮ್ಮ' ಪ್ರಶಸ್ತಿಗೆ ಆಯ್ಕೆ ಮಾಡಲಾಗಿದ್ದು, ಪ್ರಶಸ್ತಿಗಳನ್ನು ಪ್ರದಾನ ಮಾಡಲಾಗುವುದು ಎಂದು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವೆ ಶಶಿಕಲಾ ಜೊಲ್ಲೆ ತಿಳಿಸಿದರು.

ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆ ಅಂಗವಾಗಿ ಸಾಧನೆ ಮಾಡಿರುವ ಮಹಿಳೆಯರು, ಮಹಿಳಾ ಪರವಾಗಿ ಕೆಲಸ ಮಾಡಿರುವ ಸ್ವಯಂ ಸೇವಾ ಸಂಸ್ಥೆಗಳ ಮಕ್ಕಳಿಗೆ ಪ್ರಶಸ್ತಿ ನೀಡಲಾಗುತ್ತಿದೆ ಎಂದು ಪತ್ರಿಕಾ ಗೋಷ್ಠಿಯಲ್ಲಿ ತಿಳಿಸಿದರು.

ಮಹಿಳೆಯರ ಬಗ್ಗೆ ಸೇವೆ ಸಲ್ಲಿಸಿದ 6 ಸಂಸ್ಥೆಗಳು, 8 ವ್ಯಕ್ತಿಗಳು, ಕಲೆ 5, ಸಾಹಿತ್ಯ 3, ಕ್ರೀಡೆ 2, ಶಿಕ್ಷಣ 1, ವೀರಮಹಿಳೆ 1 ಹಾಗೂ 10 ಅತ್ಯುತ್ತಮ ಸ್ತ್ರೀ ಶಕ್ತಿಗುಂಪುಗಳಿಗೆ ಪ್ರಶಸ್ತಿ ನೀಡಲಾಗುವುದು ಮಕ್ಕಳ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿದ 4 ಸಂಸ್ಥೆಗಳು, ನಾಲ್ವರು ವ್ಯಕ್ತಿಗಳು ಹಾಗೂ ಸಾಹಸ ಪ್ರದರ್ಶಿಸಿದ ಮೂವರು ಮಕ್ಕಳಿಗೆ ಹೊಯ್ಸಳ ಹಾಗೂ ಕೆಳದಿ ಚೆನ್ನಮ್ಮ ಪ್ರಶಸ್ತಿ ಮತ್ತು ಇಬ್ಬರು ಮಕ್ಕಳಿಗೆ 'ಪ್ರಧಾನ ಮಂತ್ರಿ ರಾಷ್ಟ್ರೀಯ ಬಾಲ ಪುರಸ್ಕಾರ' ನೀಡಿ ಗೌರವಿಸಲಾಗುವುದು ಎಂದು ಸಚಿವರು ಮಾಹಿತಿ ನೀಡಿದರು. ಈ ಎಲ್ಲ ಪ್ರಶಸ್ತಿಗಳಿಗೆ 10 ಸಾವಿರದಿಂದ 1 ಲಕ್ಷ ರೂ. ವರೆಗೆ ನಗದು ಬಹುಮಾನ ನೀಡಲಾಗುತ್ತದೆ. ಒಟ್ಟು ರೂ. 16 ಲಕ್ಷ ಬಹುಮಾನ ನೀಡಲಾಗುವುದು ಎಂದು ತಿಳಿಸಿದರು.

ಉಸ್ತುವಾರಿ ಜವಾಬ್ದಾರಿ ಹೊರಲು ಸಿದ್ಧ: ಇದೇ ವೇಳೆ ರಾಜಕಾರಣದ ಬಗ್ಗೆ ಮಾತನಾಡಿದ ಸಚಿವೆ ಜೊಲ್ಲೆ ಅವರು, "ಮಾಜಿ ಸಚಿವ ರಮೇಶ್ ಜಾರಕಿಹೊಳಿ ಸಚಿವ ಸ್ಥಾನಕ್ಕೆ ರಾಜೀನಾಮೆ ಸಲ್ಲಿಸಿರುವುದರಿಂದ ಬೆಳಗಾವಿ ಜಿಲ್ಲಾ ಉಸ್ತುವಾರಿಯ ಜವಾಬ್ದಾರಿ ವಹಿಸಿದರೆ ನಿಭಾಯಿಸುವ ಸಾಮರ್ಥ್ಯ ಇದೆ. ಹೈಕಮಾಂಡ್ ಮತ್ತು ಸಿಎಂ ನಿರ್ಧಾರಕ್ಕೆ ನಾನು ಬದ್ಧ" ಎಂದು ಉತ್ತರಿಸಿದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:10.03.2021

## 34. ಉನ್ನತ ಸಮಿತಿಗೆ ನ್ಯಾ. ಅಡಿ ನೇತೃತ್ವ

ವಿವಿಧ ಸಮುದಾಯಗಳ ಮೀಸಲಾತಿ ಬೇಡಿಕೆ ಕುರಿತು ಪರಿಶೀಲಿಸಿ ಸರ್ಕಾರಕ್ಕೆ ವರದಿ ನೀಡಲು ನಿವೃತ್ತ ನ್ಯಾ. ಸುಭಾಷ್ ಅಡಿ ನೇತೃತ್ವದಲ್ಲಿ ಮೂರು ಜನರ ಉನ್ನತ ಮಟ್ಟದ ಸಮಿತಿ ರಚಿಸಲಾಗಿದೆ. ಈ ಸಮಿತಿಗೆ ನಿವೃತ್ತ ಮುಖ್ಯ ಕಾರ್ಯದರ್ಶಿ ರತ್ನಪ್ರಭಾ ಹಾಗೂ ಮೈಸೂರು ಮಹಾರಾಣಿ ಕಲಾ ಕಾಲೇಜಿನ ಸಹ ಪ್ರಾಧ್ಯಾಪಕ ಡಾ. ಬಿ.ವಿ. ವಸಂತಕುಮಾರ್ ಅವರನ್ನು ಸದಸ್ಯರನ್ನಾಗಿ ನೇಮಿಸಿ ಆದೇಶ

ಹೊರಡಿಸಿದ್ದಾರೆ. ಈ ಮಧ್ಯೆ ಮೀಸಲಾತಿ ನೀಡುವ ಸಂಬಂಧ ಉನ್ನತ ಮಟ್ಟದ ಸಮಿತಿ ಹಾಗೂ ಹಿಂದುಳಿದ ವರ್ಗಗಳ ಆಯೋಗದ ವರದಿ ಆಧರಿಸಿ ಕ್ರಮ ಕೈಗೊಳ್ಳಲಾಗುವುದು ಎಂದು ವಿಧಾನಸಭೆಯಲ್ಲಿ ಗೃಹ, ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವ ಬಸವರಾಜ ಬೊಮ್ಮಾಯಿ ಹೇಳಿದ್ದರು.

ಆಧಾರ: ಉದಯವಾಣಿ, ದಿನಾಂಕ:11.03.2021

## 35. ಇಂದು ಸದನದಲ್ಲಿ ಮೀಸಲು ಧ್ವನಿ

ಪಂಚಮಸಾಲಿ ಸಮುದಾಯಕ್ಕೆ 2ಎ ಮೀಸಲಾತಿ ಹಾಗೂ ಲಿಂಗಾಯತ ಬಡ ಸಮಾಜಗಳನ್ನು ಕೇಂದ್ರ ಸರ್ಕಾರದ ಒಬಿಸಿ ಮೀಸಲಾತಿ ಪಟ್ಟಿಗೆ ಸೇರಿಸುವ ಕುರಿತು ಮತ್ತೆ ಸದನದಲ್ಲಿ ಚರ್ಚೆಗೆ ಬರಲಿದೆ. ಶಾಸಕ ಬಸವನಗೌಡ ಪಾಟೀಲ್ ಯತ್ನಾಳ್, ಈ ಸಂಬಂಧ ವಿಧಾನಸಭೆಯಲ್ಲಿ ಸಮುದಾಯದ ಪರ ಧ್ವನಿ ಎತ್ತಲಿದ್ದಾರೆ. ಆ ಮೂಲಕ ಸಮುದಾಯರ ಭಾವನೆಗಳನ್ನು ಸದನದಲ್ಲಿ ಬಿಚ್ಚಿಡಲಿದ್ದಾರೆ ಎನ್ನಲಾಗಿದೆ.

ಸದನದಲ್ಲಿ ಯತ್ನಾಳ್ ಅವರಿಗೆ ಮಾತನಾಡಲು ಸಭಾಧ್ಯಕ್ಷರು ಅವಕಾಶ ನೀಡುವ ಭರವಸೆ ಇದೆ. ಈ ವೇಳೆ ಸಮುದಾಯದ ಶಾಸಕರೂ ಸಹ ಯತ್ನಾಳ್ ಅವರಿಗೆ ಬೆಂಬಲ ಸೂಚಿಸಲಿದ್ದಾರೆ. ಈ ಕುರಿತು ಶ್ರೀಗಳು, ಸಮುದಾಯದ ಶಾಸಕರು ಮತ್ತು ಸಚಿವರ ಗಮನಕ್ಕೆ ತಂದಿದ್ದಾರೆ ಎನ್ನಲಾಗಿದೆ.

**ಅವಕಾಶ ನೀಡದಿದ್ದರೆ ಧರಣಿ:** ಶಾಸಕ ಯತ್ನಾಳ್ ವಿಷಯ ಪ್ರಸ್ತಾಪಿಸಲು ಅವಕಾಶ ನೀಡದಿದ್ದರೆ ಹಾಗೂ 2 ಎ ಮೀಸಲಾತಿ ಬಗ್ಗೆ ಸರ್ಕಾರ ಸ್ಪಷ್ಟ ನಿರ್ಧಾರ ತಿಳಿಸದಿದ್ದರೇ, ಸದನದ ಆವರಣದಲ್ಲಿ ಯತ್ನಾಳ್ ಅವರು ಅಹೋರಾತ್ರಿ ಧರಣಿ ಕೈಗೊಳ್ಳಲಿದ್ದಾರೆ. ಅವರ ಧರಣಿ ಬೆಂಬಲಿಸಿ, ಸ್ವತಂತ್ರ ಉದ್ಯಾನದಲ್ಲಿ ಬಸವ ಜಯ ಮೃತ್ಯುಂಜಯ ಸ್ವಾಮೀಜಿ ನೇತೃತ್ವ ಹೋರಾಟ ಮುಂದುವರಿಸಲು ಸಿದ್ಧತೆ ಮಾಡಿಕೊಳ್ಳಲಾಗಿದೆಯೆಂದು ಹೇಳಲಾಗಿದೆ.

**ಇಂದು ಮುಂದುವರಿಯಲಿದೆ ಧರಣಿ:** ಪಂಚಮ ಸಾಲಿ ಸಮುದಾಯವನ್ನು ಪ್ರವರ್ಗ 2ಎ ಮೀಸಲಾತಿ ಪಟ್ಟಿಗೆ ಸೇರ್ಪಡೆಗೊಳಿಸಬೇಕೆಂದು ಅಗ್ರಹಿಸಿ, ಸ್ವತಂತ್ರ ಉದ್ಯಾನದಲ್ಲಿ ನಡೆಯುತ್ತಿರುವ ಧರಣಿ ಸತ್ಯಾಗ್ರಹ 22ನೇ ದಿನ ಪೂರೈಸಿದೆ. ಈ ಧರಣಿ ಮುಂದುವರಿಯಲಿದ್ದು, ಹೆಚ್ಚು ಜನ ಸೇರುವ ಸಾಧ್ಯತೆಗಳಿವೆ. ಮಹಾ ಶಿವರಾತ್ರಿ ಹಬ್ಬಕ್ಕೆ ತಮ್ಮ ತಮ್ಮ ಊರುಗಳಿಗೆ ತೆರಳಿದ್ದ ಸಮುದಾಯದ ಮುಖಂಡರು ಹಾಗೂ ಪದಾಧಿಕಾರಿಗಳು ರಾಜಧಾನಿಗೆ ಮರಳಿಲಿದ್ದಾರೆ. ಬಸವ ಜಯ ಮೃತ್ಯುಂಜಯ ಸ್ವಾಮೀಜಿ ಹಾಗೂ ರಾಷ್ಟ್ರೀಯ ಅಧ್ಯಕ್ಷ ವಿಜಯಾನಂದ ಕಾಶಪ್ಪನವರ್ ಹೋರಾಟದ ನೇತೃತ್ವವಹಿಸಲಿದ್ದಾರೆ.

ಈ ಸಂದರ್ಭದಲ್ಲಿ ಪಂಚಸೇನೆ ರಾಜ್ಯ ಅಧ್ಯಕ್ಷ ಡಾ.ಬಸವನಗೌಡ ಪಾಟೀಲ್, ಶಂಕರಗೌಡ ಬಿರಾದಾರ, ಮಲ್ಲನಗೌಡ ಎಸ್,ವಿರಾಜ್ ಪಾಟೀಲ್, ವಿಜಯ್ ಹಾಜರಿದ್ದರು.

ಆಧಾರ: ಉದಯವಾಣಿ, ದಿನಾಂಕ:15.03.2021

## 36. ಪಂಚಮಸಾಲಿ ಧರಣಿ ಅಂತ್ಯ

ಪಂಚಮಸಾಲಿ ಮೀಸಲಾತಿ ಹೋರಾಟ ಸಂಬಂಧ ಆರು ತಿಂಗಳಲ್ಲಿ ವರದಿ ಪಡೆದು ಸೂಕ್ತ ಕ್ರಮ ಕೈಗೊಳ್ಳುವುದಾಗಿ ಮುಖ್ಯಮಂತ್ರಿ ಯಡಿಯೂರಪ್ಪ ವಿಧಾನಸಭೆಯಲ್ಲಿ ಭರವಸೆ ನೀಡಿದ್ದು, ಇದರ ಬೆನ್ನಲ್ಲೇ ತಮ್ಮ ಧರಣಿಯನ್ನು ಕೂಡಲ ಸಂಗಮ ಪಂಚಮಸಾಲಿ ಮಠಾಧೀಶ ಬಸವ ಜಯಮೃತ್ಯುಂಜಯ ಸ್ವಾಮಿ ಹಿಂತೆಗೆದುಕೊಂಡರು.

2ಎಗೆ ಸೇರ್ಪಡೆ ಬೇಡಿಕೆ ಕುರಿತು ಶಾಶ್ವತ ಹಿಂದುಳಿದ ವರ್ಗಗಳ ಆಯೋಗ ಹಾಗೂ ನ್ಯಾಯಮೂರ್ತಿ ನೇತೃತ್ವದ ಸಮಿತಿಯಿಂದ ಆರು ತಿಂಗಳಲ್ಲಿ ವರದಿ ಪಡೆದು ಮುಂದಿನ ಕ್ರಮ ಕೈಗೊಳ್ಳುವ ಭರವಸೆ ನೀಡಿದ ಸಿಎಂ, ಧರಣಿ ಅಂತ್ಯ ಗೊಳಿಸುವಂತೆ ಮನವಿ ಮಾಡಿದರು.

ನಂತರ ಬಸವನಗೌಡ ಪಾಟೀಲ್ ಯತ್ನಾಳ್, ಸಚಿವ ಸಿ.ಸಿ.ಪಾಟೀಲ್, ಮಾಜಿ ಸಚಿವ ರೇಣುಕಾಚಾರ್ಯ ಅವರು ಸ್ಥಳಕ್ಕೆ ತೆರಳಿ ಸರ್ಕಾರದ ಸಂದೇಶವನ್ನು ಜಯಮೃತ್ಯುಂಜಯ ಸ್ವಾಮಿಯವರಿಗೆ ತಲುಪಿಸಿದರು. ಇದಕ್ಕೆ ಒಪ್ಪಿಕೊಂಡ ಸ್ವಾಮೀಜಿ 22 ದಿನಗಳಿಂದ ನಡೆಸುತ್ತಿದ್ದ ತಮ್ಮ ಧರಣಿ ಅಂತ್ಯಗೊಳಿಸುತ್ತಿರುವುದಾಗಿ ಘೋಷಿಸಿದರು. ಆರು ತಿಂಗಳಲ್ಲಿ ನಮ್ಮ ಬೇಡಿಕೆ ಈಡೇರದಿದ್ದರೆ ಮತ್ತು ಹೋರಾಟ ನಡೆಸಲಾಗುವುದು ಎಂದು ಬಸವನಗೌಡ ಪಾಟೀಲ್ ಯತ್ನಾಳ್ ಎಚ್ಚರಿಕೆ ನೀಡಿದರು.

ವಿಧಾನಸಭೆ ಕಲಾಪದಲ್ಲಿ ಬಿಜೆಪಿಯ ಬಸವನಗೌಡ ಪಾಟೀಲ್ ಯತ್ನಾಳ್ ವಿಷಯ ಪ್ರಸ್ತಾಪಿಸಿದರು. ಆಗ ಮುಖ್ಯಮಂತ್ರಿಯು ಪ್ರತಿಕ್ರಿಯಿಸಿ, ಮೀಸಲಾತಿ ಕೋರಿ ಸಾಕಷ್ಟು ಸಮುದಾಯಗಳು ಮನವಿ ಮಾಡಿದೆ. ಪತ್ರವನ್ನೂ ಕೊಟ್ಟಿವೆ. ಹಿಂದುಳಿದ ವರ್ಗಗಳ ಆಯೋಗ ಹಾಗೂ ನಿವೃತ್ತ ನ್ಯಾಯಮೂರ್ತಿ ನೇತೃತ್ವದ ಸಮಿತಿ ವರದಿ ಪಡೆದು ಮುಂದಿನ ಕ್ರಮ ಕೈಗೊಳ್ಳಲಾಗುವುದು ಎಂದರು. ಇದಕ್ಕೆ ಯತ್ನಾಳ್ ಅವರು, ಹಿಂದುಳಿದ ವರ್ಗಗಳ ಆಯೋಗದ ವರದಿ ಆಧಾರದ ಮೇಲೆ ಕ್ರಮ ಕೈಗೊಳ್ಳಿ, ನ್ಯಾಯಮೂರ್ತಿಯವರ ಸಮಿತಿ ವಿಚಾರ ಬೇಡ. ಕಾಲಮಿತಿಯಲ್ಲಿ ಕ್ರಮ ಬೇಕು ಎಂದು ಆಗ್ರಹಿಸಿದರು.

ಆಗ ಮಧ್ಯ ಪ್ರವೇಶಿಸಿದ ಗೃಹ ಸಚಿವ ಬಸವರಾಜ ಬೊಮ್ಮಾಯಿ ಅವರು, ಸರ್ಕಾರದ ಸಮಿತಿ ರಚಿಸಿದೆ. ಆಯೋಗದ ವರದಿ ಸಹ ಪಡೆಯಲಾಗುವುದು, ಸಮಿತಿಯ ವರದಿಯನ್ನು ಪಡೆಯಲಾಗುವುದು. ಇಷ್ಟೇ ದಿನ ಎಂದರೆ ಹೇಗೆ ಎಂದು ಪಶ್ನಿಸಿದರು.

ಯತ್ನಾಳ್ ಅವರು ಒಪ್ಪದಿದ್ದಾಗ ಮುಖ್ಯಮಂತ್ರಿಯವರು ಆರು ತಿಂಗಳಲ್ಲಿ ವರದಿ ಪಡೆಯಲಾಗುವುದು ಎಂದು ಹೇಳಿದರು. ಆಗ, ಸುಮ್ಮನಾದ ಯತ್ನಾಳ್, ಮುಖ್ಯಮಂತ್ರಿಯವರ ಭರವಸೆಗೆ ಅಭಿನಂದನೆಗಳು. ಆರು ತಿಂಗಳಲ್ಲಿ ಕ್ರಮ ಆಗಲೇಬೇಕು. ಇಲ್ಲದಿದ್ದರೆ ಮತ್ತೆ ಹೋರಾಟ ಆರಂಭಿಸಲಾಗುವುದು ಎಂದು ಎಚ್ಚರಿಕೆ ನೀಡಿದರು.

ಆಧಾರ: ಉದಯವಾಣಿ, ದಿನಾಂಕ:16.03.2021

## 37. 2ನೇ ಅಲೆಯತ್ತ ರಾಜ್ಯ

ರಾಜ್ಯದಲ್ಲಿ ಕೊರೋನಾ ಎರಡನೇ ಅಲೆ ಹೆಚ್ಚುತ್ತಿರುವ ಬಗ್ಗೆ ತಜ್ಞರ ಸಮಿತಿ ಮುನ್ಸೂಚನೆ ನೀಡಿದ್ದು, ಒಂದು ವಾರ ಸೂಕ್ಷ್ಮವಾಗಿ ಗಮನಿಸಿ ಕಟ್ಟುನಿಟ್ಟಿನ ಕ್ರಮಕೈಗೊಳ್ಳಲು ನಿರ್ಧರಿಸಲಾಗಿದೆ. ವಿಧಾನ ಸೌಧದಲ್ಲಿ ಮುಖ್ಯಮಂತ್ರಿ ಅವರ ಅಧ್ಯಕ್ಷತೆಯಲ್ಲಿ ನಡೆದ ತಜ್ಞರ ಸಮಿತಿ ಸಭೆಯಲ್ಲಿ ರಾಜ್ಯ ಸರ್ಕಾರ ಕೈಗೊಳ್ಳಬೇಕಾದ ಮುನ್ನೆಚ್ಚರಿಕೆ ಕ್ರಮಗಳ ಬಗ್ಗೆ ತಜ್ಞರು ಸಲಹೆ ನೀಡಿದ್ದಾರೆ.

ಸಭೆ ನಂತರ ಸುದ್ದಿಗೋಷ್ಠಿಯಲ್ಲಿ ಮಾತನಾಡಿದ ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ ಕಳೆದ 14 ದಿನಗಳಲ್ಲಿ ಕೊರೋನಾ ಸೋಂಕಿನ ಪ್ರಮಾಣ ಹೆಚ್ಚಾಗುತ್ತಿದ್ದು, ಎರಡನೇ ಅಲೆಯ ಮುನ್ಸೂಚನೆ ಎಂದು ತಜ್ಞರು ಎಚ್ಚರಿಕೆ ನೀಡಿದ್ದಾರೆ. ಈ ಹಿನ್ನೆಲೆಯಲ್ಲಿ ಮುಂದಿನ ಒಂದು ವಾರಗಳ ಕಾಲ ಕಾದು ಮುಂದಿನ ಹೆಜ್ಜೆ ಇಡಲು ಸರ್ಕಾರ ನಿರ್ಧರಿಸಿದೆ ಎಂದು ಹೇಳಿದರು.

ಮತ್ತೊಮ್ಮೆ ಲಾಕ್‌ಡೌನ್ ಆಗಬಾರದು ಎನ್ನುವ ಅಪೇಕ್ಷೆ ಇದ್ದರೆ ಜನರೇ ಮುಂಜಾಗ್ರತಾ ಕ್ರಮ ಕೈಗೊಳ್ಳಬೇಕು. ಈಗ ಕೊರೋನಾ ಜಾಗೃತಿ ಹೋಗಿದೆ. ಜಾತ್ರೆ ಸಂತೆಯಲ್ಲಿ ಶೇ.80 ರಷ್ಟು ಜನ ಮಾಸ್ಕ್ ಧರಿಸುತ್ತಿಲ್ಲ. ಜನರು ಸಹಕಾರ ಕೊಡಬೇಕು, ಜನರ ಸಹಕಾರ ಇಲ್ಲದೆ ಯಶಸ್ವಿ ಆಗುವುದಿಲ್ಲ ಎಂದು ಸಿಎಂ ಹೇಳಿದರು. ಬೀದರ್, ಕಲಬುರಗಿ, ಬೆಂಗಳೂರು ಗ್ರಾಮಾಂತರ, ತುಮಕೂರು, ಉಡುಪಿ, ಬೆಂಗಳೂರು ನಗರ ಜಿಲ್ಲೆಯಲ್ಲಿ ಪಾಸಿಟಿವ್ ದರ ಹೆಚ್ಚಾಗಿದೆ. ಹೆಚ್ಚು ಸಕ್ರಿಯ ಪ್ರಕರಣಗಳು ಇರುವ ಜಿಲ್ಲೆಯಲ್ಲಿ ಲಸಿಕೆ ಪ್ರಮಾಣ ಹೆಚ್ಚಿಸಲು ಅಧಿಕಾರಿಗಳು ಸಲಹೆ ನೀಡಿದ್ದಾರೆ ಎಂದರು.

ಮಹಾರಾಷ್ಟ್ರ ಕೇರಳದಿಂದ ಬರುವವರ ಮೇಲೆ ನಿಗಾ ಇಡಲು ಸಲಹೆ ಬಂದಿದೆ ಎಂದರು. ಕೊರೋನಾ ನಿಯಮ ಉಲ್ಲಂಘನೆಗೆ ದಂಡ ಹಾಕುವ ಮಟ್ಟಕ್ಕೆ ಜನರು ಹೋಗಬಾರದು, ಸದ್ಯದ ಪರಿಸ್ಥಿತಿಯಲ್ಲಿ ಒಂದು ವಾರ ಕಾದು ನೋಡುತ್ತೇವೆ ನಂತರ ದಂಡ ಹಾಕುವುದು ಅನಿವಾರ್ಯವಾಗಲಿದೆ.

ಈಗಿನ ಪರಿಸ್ಥಿತಿಯಲ್ಲಿ ದೊಡ್ಡವರು, ಚಿಕ್ಕವರು ಎನ್ನುವ ಪ್ರಶ್ನೆ ಇಲ್ಲ. ಎಲ್ಲರ ವಿರುದ್ಧ ಕ್ರಮ ಕೈಗೊಳ್ಳಲಾಗುತ್ತದೆ, ಮದುವೆ ಸಮಾರಂಭಗಳಲ್ಲಿ 500 ಕ್ಕಿಂತ ಹೆಚ್ಚು ಜನಸೇರಬಾರದು, ಹೆಚ್ಚು ಜನ ಸೇರುವುದಾದರೆ ಬ್ಯಾಚ್‌ಗಳಲ್ಲಿ ಬರಲಿ ಎಂದು ಹೇಳಿದರು.

ನೈಟ್ ಕರ್ಫ್ಯೂ ಜಾರಿ ಮಾಡುವ ಬಗ್ಗೆ ಇಂದಿನ ಸಭೆಯಲ್ಲಿ ಯಾವುದೇ ಚರ್ಚೆಯಾಗಿಲ್ಲ. ಪ್ರಧಾನಿ ನರೇಂದ್ರ ಮೋದಿ ಅವರ ಸಭೆ ನಂತರ ನಿರ್ಧಾರ ಕೈಗೊಳ್ಳಲಾಗುತ್ತದೆ ಎಂದು ಹೇಳಿದರು. ತಾಂತ್ರಿಕ ಸಲಹಾ ಸಮಿತಿಯ ಸದಸ್ಯರಾದ ಡಾ. ಸಿ.ಎನ್. ಮಂಜುನಾಥ್, ಡಾ. ಸುದರ್ಶನ್, ಡಾ. ರವಿ, ಪ್ರೊ. ಗಿರಿಧರಬಾಬು, ವಿಶ್ವ ಆರೋಗ್ಯ ಸಂಸ್ಥೆಯ ಪ್ರತಿನಿಧಿ ಮೊದಲಾದವರು ತಮ್ಮ ಅಭಿಪ್ರಾಯ ಮಂಡಿಸಿದರು.

ಉಪ ಮುಖ್ಯಮಂತ್ರಿ ಡಾ. ಸಿ.ಎನ್. ಅಶ್ವತ್ಥನಾರಾಯಣ, ಆರೋಗ್ಯ ಮತ್ತು ವೈದ್ಯಕೀಯ ಶಿಕ್ಷಣ ಸಚಿವ ಡಾ. ಕೆ.ಸುಧಾಕರ್, ಸರ್ಕಾರದ ಮುಖ್ಯ ಕಾರ್ಯದರ್ಶಿ ಪಿ. ರವಿಕುಮಾರ್ ಮತ್ತಿತರ ಹಿರಿಯ ಅಧಿಕಾರಿಗಳು ಉಪಸ್ಥಿತರಿದ್ದರು.

**1.25 ಲಕ್ಷ ಮಂದಿಗೆ ಲಸಿಕೆ:** ರಾಜ್ಯದಲ್ಲಿ 3,188 ಕೇಂದ್ರಗಳ ಮೂಲಕ 1.25 ಲಕ್ಷ ಮಂದಿಗೆ ಕೊರೋನಾ ಲಸಿಕೆ ವಿತರಿಸಲಾಗಿದೆ. 92,036 ಮಂದಿ 60 ವರ್ಷ ಮೇಲ್ಪಟ್ಟ ಹಿರಿಯ ನಾಗರಿಕರು ಹಾಗೂ 45–60 ವರ್ಷ ವಯೋಮಾನದ 20,746 ಮಂದಿ ನಾನಾ ಆರೋಗ್ಯ ಸಮಸ್ಯೆ ಹೊಂದಿದ್ದವರು ಲಸಿಕೆ ಪಡೆದುಕೊಂಡಿದ್ದಾರೆ. ಉಳಿದಂತೆ ಆರೋಗ್ಯ ಕಾರ್ಯಕರ್ತರಲ್ಲಿ 3,221 ಮಂದಿ ಮೊದಲ ಡೋಸ್ ಲಸಿಕೆ ಪಡೆದುಕೊಂಡಿದ್ದಾರೆ. ಮುಂಚೂಣಿ ಕಾರ್ಯಕರ್ತರಲ್ಲಿ 1,894 ಮಂದಿ ಮೊದಲ ಡೋಸ್ ಹಾಗೂ 4,433 ಮಂದಿ 2ನೇ ಡೋಸ್ ಲಸಿಕೆ ಹಾಕಿಸಿಕೊಂಡಿದ್ದಾರೆ. ಇದರೊಂದಿಗೆ ಈವರೆಗೂ ಲಸಿಕೆ ಪಡೆದವರ ಸಂಖ್ಯೆ 14.96 ಲಕ್ಷ ತಲುಪಿದೆ.

ಆಧಾರ: ಪ್ರಜಾವಾಣಿ, ದಿನಾಂಕ:17.03.2021

## 38. ರಾಜ್ಯ ಸರ್ಕಾರದಿಂದಲೇ ಜ್ಯುವೆಲ್ಲರಿ ಶಾಪ್

ರಾಜ್ಯ ಸರ್ಕಾರದಿಂದಲೇ ಕರ್ನಾಟಕ ಗೋಲ್ಡ್ ಜ್ಯುವೆಲ್ಲರಿ ಶಾಪ್ ಆರಂಭಿಸಲು ನಿರ್ಧರಿಸಿದ್ದು, ಪ್ರಾರಂಭಿಕ ಹಂತದಲ್ಲಿ ಐದು ಕಡೆ ಮಳಿಗೆ ತೆರೆಯಲು ಉದ್ದೇಶಿಸಲಾಗಿದೆ.

ಗಣಿ ಮತ್ತು ಭೂವಿಜ್ಞಾನ ಸಚಿವ ಮುರುಗೇಶ್ ನಿರಾಣಿ ವಿಕಾಸಸೌಧದಲ್ಲಿ ಚಿನ್ನಾಭರಣ ತಯಾರಿಕಾ ಸಂಘಗಳ ಜೊತೆ ಸಭೆ ನಡೆಸಿ, ಮೈಸೂರು ಸಿಲ್ಕ್, ಕಾವೇರಿ ಹ್ಯಾಂಡ್ ಲೂಮ್ಸ್ ಹಾಗೂ ಮೈಸೂರು ಸ್ಯಾಂಡಲ್ ಸೋಪ್ ಮಾದರಿಯಲ್ಲಿ ಸರ್ಕಾರಿ ಆಭರಣ ಮಳಿಗೆ ತೆರೆಯುವ ಮಹತ್ವದ ನಿರ್ಧಾರ ಪ್ರಸ್ತಾಪಿಸಿದರು.

ಬಳಿಕ ಸುದ್ದಿಗಾರರಿಗೆ ವಿವರಣೆ ನೀಡಿ, ಈ ಮಳಿಗೆಗಳನ್ನು ಸರ್ಕಾರವೇ ನಿರ್ವಹಣೆ ಮಾಡಲಿದ್ದು, ಗ್ರಾಹಕರ ಬೇಡಿಕೆಗೆ ತಕ್ಕಂತೆ ಆಭರಣಗಳನ್ನು ತಯಾರಿಸಲಿದೆ ಎಂದರು. ರಾಯಚೂರು ಜಿಲ್ಲೆ ಲಿಂಗಸಗೂರು ತಾಲ್ಲೂಕಿನ ಹಟ್ಟಿಯು ದೇಶದಲ್ಲಿ ಚಿನ್ನ ಉತ್ಪಾದನೆ ಮಾಡುವ ಏಕೈಕ ನಿಕ್ಷೇಪವಾಗಿದೆ. ಇದನ್ನು ಜಾಗತಿಕ ಮಟ್ಟಕ್ಕೆ ಕೊಂಡೊಯ್ಯಲು 'ಕರ್ನಾಟಕ ಸ್ಟೇಟ್ ಗೋಲ್ಡ್ ಮೈನ್ಸ್' ಎಂದು ಮರು ನಾಮಕರಣ ಮಾಡಲಾಗುವುದು ಎಂದು ಹೇಳಿದರು.

ಕರ್ನಾಟಕದಲ್ಲಿ ಹೆಚ್ಚಿನ ಖನಿಜ ಸಂಪತ್ತು ಲಭ್ಯವಿದೆ. ಇಲ್ಲಿ ಸಿಗುವಷ್ಟು ಸಂಪನ್ಮೂಲ ದೇಶದ ಯಾವುದೇ ಭಾಗದಲ್ಲೂ ಸಿಗುತ್ತಿಲ್ಲ. ಇದನ್ನು ಸದ್ಬಳಕೆ ಮಾಡಿಕೊಳ್ಳಲು ತೀರ್ಮಾನಿಸಲಾಗಿದೆ ಎಂದಲ್ಲದೆ, ಪ್ರಸ್ತುತ ಹಟ್ಟಿ ಚಿನ್ನದ ನಿಕ್ಷೇಪದಲ್ಲಿ ಉತ್ಪಾದನಾ ಸಾಮರ್ಥ್ಯವನ್ನು ವರ್ಷದ ಅಂತ್ಯಕ್ಕೆ 5000 ಕೆಜಿಗೆ ದ್ವಿಗುಣಗೊಳಿಸುವ ಯೋಜನೆ ಹೊಂದಲಾಗಿದೆ ಎಂದು ವಿವರಿಸಿದರು.

ಈಗ ಹಟ್ಟಿ ಗಣಿ ಉತ್ಪಾದನೆಯು ವಾರ್ಷಿಕವಾಗಿ 1700 ಕೆಜಿ ಉತ್ಪಾದನೆ ಮಾಡುತ್ತದೆ. ಇದನ್ನು ಡಿಸೆಂಬರ್ ಅಂತ್ಯಕ್ಕೆ 5000 ಕೆಜಿಗೆ ಹೆಚ್ಚಿಸುವ ಗುರಿ ಹೊಂದಲಾಗಿದೆ. ಇದಕ್ಕಾಗಿ ಆಧುನಿಕ ತಂತ್ರಜ್ಞಾನ ಅಳವಡಿಸಿಕೊಳ್ಳುವುದು ಎಂದು ಮಾಹಿತಿ ನೀಡಿದರು.

ಈ ಗಣಿಗಳ ಅಕ್ಕಪಕ್ಕಗಳಲ್ಲಿ ಭಾರತೀಯ ಭೂ ವೈಜ್ಞಾನಿಕ ಸಂಸ್ಥೆ ಖನಿಜ ಅನ್ವೇಷಣಾ ನಿಗಮ, ಹಟ್ಟಿ ಗೋಲ್ಡ್ ಮೈನ್ ಮತ್ತು ಖಾಸಗಿ ಸಂಸ್ಥೆಗಳು ಹೊಸ ಚಿನ್ನದ ಗಣಿಗಳನ್ನು ಪತ್ತೆ ಮಾಡಿವೆ. ಈ ಎಲ್ಲ ಚಿನ್ನದ ನಿಕ್ಷೇಪಗಳ ಅದಿರನ್ನು ಹಟ್ಟಿಯಲ್ಲಿ ಕರಗಿಸಬಹುದು ಎಂದು ತಿಳಿಸಿದರು. ಹೆಚ್ಚುವರಿ ಮುಖ್ಯ ಕಾರ್ಯದರ್ಶಿ ಕುಮಾರ್ ಜಿ.ನಾಯಕ್, ಹಟ್ಟಿ ಚಿನ್ನದ ಗಣಿ ನಿಗಮದ ಅಧ್ಯಕ್ಷ ಮಾನಪ್ಪ ವಜ್ಜಲ್ ಮತ್ತಿತರರು ಇದ್ದರು.

ಆಧಾರ: ವಿಜಯವಾಣಿ, ದಿನಾಂಕ:17.03.2021

## 39. ಪಿಎಚ್‌ಸಿಗಳಿಗೆ ಟೆಲಿಮೆಡಿಸನ್ ಭಾಗ್ಯ, ಕೈದಿಗಳಿಗೆ ಕೈತುಂಬ ಕೆಲಸ

ಕೊರೋನಾದ ಅನಿವಾರ್ಯ ಸಂದರ್ಭದಲ್ಲಿ ಬಳಕೆಯಾದ ಟೆಲಿಮೆಡಿಸನ್ ಸೇವೆಯನ್ನು ಗ್ರಾಮೀಣ ಭಾಗದ ಆರೋಗ್ಯ ಕೇಂದ್ರಗಳಿಗೆ ಶಾಶ್ವತವಾಗಿ ಲಭ್ಯವಾಗಿಸುವ ನಿಟ್ಟಿನಲ್ಲಿ ಆರೋಗ್ಯ ಇಲಾಖೆ ಮಹತ್ವದ ನಿರ್ಧಾರ ಮಾಡಿದೆ.

ಸಂಪುಟ ಸಭೆಯಲ್ಲಿ ಈ ಬಗ್ಗೆ ಚರ್ಚೆ ಮಾಡಿದ್ದು, ರಾಜ್ಯದ 1,120 ಪ್ರಾಥಮಿಕ ಆರೋಗ್ಯ ಕೇಂದ್ರಗಳು ಮತ್ತು 2032 ಆರೋಗ್ಯ ಮತ್ತು ಕಲ್ಯಾಣ ಕೇಂದ್ರಗಳಲ್ಲಿ ನ್ಯಾಷನಲ್ ಆರೋಗ್ಯ ಮಿಷನ್‌ನಡಿ ಟೆಲಿ ಮೆಡಿಸನ್ ಅಳವಡಿಕೆಗೆ ರೂ. 18.96 ಕೋಟಿ ಬಳಕೆ ಮಾಡಿಕೊಳ್ಳುವ ಪ್ರಸ್ತಾವನೆ ಕುರಿತು ನಿರ್ಣಯಿಸಿದೆ.

ತಳಹಂತದ ಆರೋಗ್ಯ ಕೇಂದ್ರಗಳಲ್ಲಿ ಪರಿಣಾಮಕಾರಿಯಾಗಿ ಟೆಲಿಮೆಡಿಸಿನ್ ಸೌಲಭ್ಯ ಬಳಸಿಕೊಳ್ಳಲು ವಿವಿಧ ಪರಿಕರ ಖರೀದಿಗೆ ಆಡಳಿತಾತ್ಮಕ ಅನುಮೋದನೆ ಪಡೆದುಕೊಳ್ಳಲು ಪ್ರಸ್ತಾವನೆ ಮಂಡನೆಯಾಗಿತ್ತು. ಈಗಾಗಲೇ ಕೆಲವು ಕಡೆ ಟೆಲಿಮೆಡಿಸಿನ್ ಸೇವೆ ಪ್ರಾಯೋಗಿಕವಾಗಿ ಜಾರಿಯಲ್ಲಿದ್ದು, ಪೂರ್ಣ ಪ್ರಮಾಣದಲ್ಲಿ ಅಪ್‌ಡೇಟ್ ರೂಪದಲ್ಲಿ ಅನುಷ್ಠಾನ ಮಾಡಲಾಗುತ್ತಿದೆ. ಕಲ್ಯಾಣ ಕರ್ನಾಟಕ ಭಾಗದ ಆರೋಗ್ಯ ಕ್ಷೇತ್ರ ಎದುರಿಸುತ್ತಿರುವ ವೈದ್ಯರು ಮತ್ತು ಇತರ ಸಿಬ್ಬಂದಿ ಕೊರತೆ ನೀಗಿಸುವ ಉದ್ದೇಶದಿಂದ ವಿಶೇಷ ಕಾನೂನು ಪ್ರಸ್ತಾಪಿಸುತ್ತಿದೆ. ಕರ್ನಾಟಕ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನೇಮಕಾತಿ ವಿಶೇಷ ಕಾನೂನುಗಳು 2020ಅನ್ನು ವಿಧಾನಸಭೆಯಲ್ಲಿ ಮಂಡಿಸಲು ಸಂಪುಟ ಸಭೆ ಒಪ್ಪಿಗೆ ನೀಡಿದೆ. ಈ ಅಧಿವೇಶನದಲ್ಲಿ ಮಂಡನೆಯಾಗಿ ತಡಮಾಡದೆ ನೇಮಕ ಮಾಡಿಕೊಳ್ಳಬೇಕೆಂದು ಸರ್ಕಾರ ಬಯಸಿದೆ.

ಕರ್ನಾಟಕ ಕಾರಾಗೃಹ ಅಭಿವೃದ್ಧಿ ಮಂಡಳಿ ಮೂಲಕ ಕೈದಿಗಳಿಗೆ ಕೈತುಂಬ ಕೆಲಸ ಕೊಡಲು ಸರ್ಕಾರ ಬಯಸಿದೆ. ಆಂಧ್ರ ಸೇರಿ ವಿವಿಧ ರಾಜ್ಯಗಳಲ್ಲಿ ಅನುಷ್ಠಾನದಲ್ಲಿರುವ ಕ್ರಮಗಳನ್ನು ಅಧ್ಯಯನ ಮಾಡಿ ಇಲ್ಲೂ ಕೈದಿಗಳಿಂದ ವಿವಿಧ ಉತ್ಪನ್ನ ತಯಾರಿಸಿ ಮಂಡಳಿ ಮೂಲಕ ಮಾರುಕಟ್ಟೆ ಮಾಡಲು ಬಯಸಲಾಗಿದೆ. ಇದರಿಂದ ಕೈದಿಗಳನ್ನು ತೊಡಗಿಸಿಕೊಳ್ಳುವುದು, ಬಂದ ಲಾಭವನ್ನು ಅವರಿಗೂ ನೀಡುವ ಮೂಲಕ ಅವರಲ್ಲಿ ಪರಿವರ್ತನೆ ತರಲು ಉದ್ದೇಶಿಸಲಾಗಿದೆ.

ಆಧಾರ: ಉದಯವಾಣಿ, ದಿನಾಂಕ:18.03.2021

## 40. ಮೇಯರ್, ವಾರ್ಡ್ ಸಮಿತಿ ಪ್ರಾಧಿಕಾರ ಆಗಬೇಕಿಲ್ಲ

'ಬಿಬಿಎಂಪಿ ಕಾಯ್ದೆ–2020'ರಲ್ಲಿ ಪಾಲಿಕೆ ಪ್ರಾಧಿಕಾರಗಳ ಸಂರಚನೆ, ಕಾರ್ಯನಿರ್ವಹಣೆಗಾಗಿ ಕೆಲವು ರಚನಾತ್ಮಕ ಸುಧಾರಣೆಗಳನ್ನು ಅಳವಡಿಸಿಕೊಳ್ಳಬೇಕು. ಇಲ್ಲದಿದ್ದಲ್ಲಿ ಪರಿಣಾಮಕಾರಿ, ಜನಸ್ನೇಹಿ ಆಡಳಿತವನ್ನು ಸುಸೂತ್ರವಾಗಿ ನಡೆಸುವುದು ಕಷ್ಟಸಾಧ್ಯವಾಗಬಹುದು.

ಬಿಬಿಎಂಪಿ ಕಾಯ್ದೆಯ ಸೆಕ್ಷನ್ 3ರಡಿಯಲ್ಲಿ ಕಾಯ್ದೆಯ ಉಪಬಂಧಗಳನ್ನು ಕಾರ್ಯಗತಗೊಳಿಸಲು ಮೇಯರ್, ವಾರ್ಡ್ ಸಮಿತಿಗಳು ಮತ್ತು ಪ್ರದೇಶ ಸಮಿತಿಗಳನ್ನು ಪಾಲಿಕೆಯ ಪ್ರಾಧಿಕಾರಿಗಳು ಎಂದು ಗೊತ್ತುಪಡಿಸಲಾಗಿದೆ. ಇದು ಅನವಶ್ಯಕ.

**ಮೇಯರ್ ಅಧಿಕಾರ:** ಬಿಬಿಎಂಪಿ ಕೌನ್ಸಿಲ್‌ನ ಪರವಾಗಿ ಮೇಯರ್ ಸಂವಿಧಾನದ ಅನುಚ್ಛೇದ 243–ಎಸ್ ಅಡಿ ಸಾಮೂಹಿಕ ಅಧಿಕಾರವನ್ನು ಚಲಾಯಿಸಲು ಉಪಬಂಧವನ್ನು ಕಲ್ಪಿಸಬಹುದು. ಇಂತಹ ಆಡಳಿತಾತ್ಮಕ ಅಧಿಕಾರವನ್ನು ಅವರು ವೈಯುಕ್ತಿಕವಾಗಿ ಚಲಾಯಿಸಿಲು ಬಿಬಿಎಂಪಿ ಕಾಯ್ದೆಯ ಸೆಕ್ಷನ್ 59 (4)ರಲ್ಲಿ ಸ್ಪಷ್ಟಪಡಿಸಿಲ್ಲ. ಸೆಕ್ಷನ್ 59 (4)ರಂತೆ ಮೇಯರ್ ಪರಿವೀಕ್ಷಣೆಯ ಸಾಮಾನ್ಯ ಅಧಿಕಾರಗಳನ್ನು ಹೊಂದಿರುತ್ತಾರೆ. ಪಾಲಿಕೆಯ ಕಾರ್ಯಗಳನ್ನು ನಿರ್ವಹಿಸಲು ಅಥವಾ ಪಾಲಿಕೆಯ ಅಥವಾ ಸ್ಥಾಯಿ ಸಮಿತಿಯ ಯಾವುದೇ ನಿರ್ಣಯವನ್ನು ಜಾರಿಗೆ ತರುವುದಕ್ಕೆ ಮುಖ್ಯ ಆಯುಕ್ತರಿಗೆ ನಿರ್ದೇಶನವನ್ನು ಕೊಡಬಹುದಾಗಿರುತ್ತದೆಯೇ ವಿನಹ ಕಾಯ್ದೆಯಡಿಯಲ್ಲಿ ಅವರಿಗೆ ಯಾವುದೇ ನೇರವಾದ ಆರ್ಥಿಕ ಅಧಿಕಾರವಿಲ್ಲ. ಗುತ್ತಿಗೆ ಅನುಮೋದನೆಯ ಅಧಿಕಾರ ಪ್ರತ್ಯಾ ಯೋಜನೆಯನ್ನೂ ನಿಗದಿಪಡಿಸಿಲ್ಲ. ಈ ಉಪಬಂಧಗಳು ಮೇಯರ್ ಅವರನ್ನು ಪಾಲಿಕೆ ಪ್ರಾಧಿಕರವನ್ನಾಗಿಸಲು ಪುಷ್ಟೀಕರಿಸಿದಂತಾಗುವುದಿಲ್ಲ.

**ಮೇಯರ್ ಅಧಿಕಾರಾವಧಿ:** ಬಿಬಿಎಂಪಿ ಕಾಯ್ದೆ ಪ್ರಕಾರ ಮೇಯರ್ ಅಧಿಕಾರಾವಧಿ ಎರಡೂವರೆ ವರ್ಷಗಳು, ಹೆಚ್ಚು ಜನಸ್ನೇಹಿ ಆಡಳಿತಕ್ಕೆ ಅವರನ್ನು ಹೊಣೆಗಾರರನ್ನಾಗಿಸಲು ಮತ್ತು ಸಾರ್ವಜನಿಕ ಅಡಳಿತಕ್ಕೆ ಅವರ ಸ್ಪಂದನೆ ಮತ್ತು ಉತ್ತರದಾಯಿತ್ವ ಖಾತರಿಪಡಿಸಲು ಮೇಯರ್‌ಗೆ ಮರುಚುನಾವಣೆಗೆ ಸ್ಪರ್ಧಿಸಲು ಅವಕಾಶ ಕಲ್ಪಿಸಬಹುದು.

1964ರ ಕರ್ನಾಟಕ ಪೌರಸಭೆಗಳ ಕಾಯ್ದೆಯಲ್ಲಿ ಪೌರಸಭೆಯ ಅಧ್ಯಕ್ಷರನ್ನು ಅವಿಶ್ವಾಸ ಮಂಡನೆಯ ಮೂಲಕ ತೆಗೆದುಹಾಕುವ ತತ್ವದಂತೆ, ಮೇಯರ್ ಅವರನ್ನು ಪ್ರಜಾಸತ್ತಾತ್ಮಕವಾಗಿ ಅವಿಶ್ವಾಸ ನಿರ್ಣಯದ ಮೂಲಕ ತೆಗೆದು ಹಾಕಲು ಬಿಬಿಎಂಪಿ ಕಾಯ್ದೆಯಲ್ಲೂ ಉಪಬಂಧ ಕಲ್ಪಿಸಿದ್ದಲ್ಲಿ ಈ ಹುದ್ದೆಯ ವಿಶ್ವಾಸಾರ್ಹತೆ ಹೆಚ್ಚಲಿದೆ.

**ಮುಖ್ಯ ಆಯುಕ್ತರು:** ಮುಖ್ಯ ಆಯುಕ್ತರ ಅಧಿಕಾರ ಮತ್ತು ಕಾರ್ಯಗಳನ್ನು ಸೆಕ್ಷನ್ 64ರಲ್ಲಿ ಗೊತ್ತುಪಡಿಸಲಾಗಿದೆ. ಸೆಕ್ಷನ್ 64 (3)ರಲ್ಲಿ ವಲಯ ಆಯುಕ್ತ ತನಗೆ ಉಲ್ಲೇಖಿಸಿದ ಅಂತರ್ ವಲಯಕ್ಕೆ ಸಂಬಂಧಪಟ್ಟ ವಿಷಯಗಳ ಸಮನ್ವಯ, ರಸ್ತೆ ಅಭಿವೃದ್ಧಿ, ಯೋಜನೆಗಳು, ನೀರು ಮತ್ತು ಇತರ ಭೌತಿಕ ಹಾಗೂ ಪ್ರಾಕೃತಿಕ ಸಂಪನ್ಮೂಲಗಳ ಹಂಚಿಕೆ, ಮೂಲಸೌಲಭ್ಯಗಳ ಸಮಗ್ರ ಅಭಿವೃದ್ಧಿ ಮತ್ತು ಪರಿಸರ ಸಂರಕ್ಷಣೆ ಇತ್ಯಾದಿ ಒಳಗೊಂಡಂತೆ ಸಮಾನ ಹಿತಾಸಕ್ತಿಯ ವಿಷಯಗಳನ್ನು ಸಂಬಂಧಪಟ್ಟ ವಲಯ ಸಮಿತಿಗಳ ಸಲಹೆ ಸೂಚನೆಗಳ ಮೇರೆಗೆ, ಮುಖ್ಯ ಆಯುಕ್ತ ಬಿಬಿಎಂಪಿ ಕೌನ್ಸಿಲ್ ಮುಂದೆ ಮಂಡಿಸಿ ತೀರ್ಮಾನ ಪಡೆಯುವುದು ಒಳ್ಳೆಯದು. ಬಿಬಿಎಂಪಿ ಕೌನ್ಸಿಲ್‌ನ ನಿರ್ಣಯಗಳ ಅನುಷ್ಠಾನಕ್ಕೆ ಮುಖ್ಯ ಆಯುಕ್ತರು ಮತ್ತು ಸಂಬಂಧಪಟ್ಟ ವಲಯ ಆಯುಕ್ತರು ಬದ್ಧರಾಗಿರುತ್ತಾರೆ ಎಂದು ನಿರ್ದಿಷ್ಟಪಡಿಸಿಕೊಳ್ಳುವುದು ಹಾಗೂ ಬಿಬಿಎಂಪಿ ಕಾಯ್ದೆಯಲ್ಲಿ ಅದಕ್ಕಾಗಿ ನೇರವಾದ ಉಪಬಂಧಗಳನ್ನು ಕಲ್ಪಿಸಿಕೊಳ್ಳುವುದು ಸೂಕ್ತ.

**ವಲಯ ಸಮಿತಿಗಳು:** ಬಿಬಿಎಂಪಿ ಕಾಯ್ದೆಯ ಸೆಕ್ಷನ್ 3ರಲ್ಲಿ ವಲಯ ಸಮಿತಿಯನ್ನು ಸಂವಿಧಾನದ ಅನುಚ್ಛೇದ 243–ಎಸ್ ಅನುಸಾರ ವಾರ್ಡುಗಳ ಸಮಿತಿಯೆಂದು ಪರಿಭಾವಿಸಬಹುದು. ಆದ್ದರಿಂದ, ವಲಯ ಸಮಿತಿಗೆ ಆಡಳಿತಾತ್ಮಕ ಮತ್ತು ಆರ್ಥಿಕ ವೆಚ್ಚದ ಅಧಿಕಾರ ಪ್ರತ್ಯಾಯೋಜನೆಯನ್ನು ನೀಡಿರುವುದು ಸಮರ್ಥನೀಯ.

**ವಾರ್ಡ್ ಸಮಿತಿಗಳು:** ಪಾಲಿಕೆ ಸದಸ್ಯರೇ ಆಯಾ ವಾರ್ಡ್ ಸಮಿತಿಯ ಅಧ್ಯಕ್ಷರು. ಬಿಬಿಎಂಪಿ ಕಾಯ್ದೆಯ ಸೆಕ್ಷನ್ 94ರಡಿ ಪಾಲಿಕೆ ಸದಸ್ಯರ ಅಧಿಕಾರವನ್ನು ಗೊತ್ತುಪಡಿಸಲಾಗಿದೆ. ಅವರು ಪಾಲಿಕೆ ಸದಸ್ಯರ ಅಧಿಕಾರವನ್ನು ಗೊತ್ತುಪಡಿಸಲಾಗಿದೆ. ಅವರು ಪಾಲಿಕೆಯ ಕಾರ್ಯನಿರ್ವಹಣೆಯಲ್ಲಿನ ಯಾವುದೇ ನಿರ್ಲಕ್ಷ್ಯದ ಬಗ್ಗೆ ಹಾಗೂ ಪಾಲಿಕೆಯ ಸ್ವತ್ತಿನ ಯಾವುದೇ ಪೋಲು ಕುರಿತಂತೆ ಅಥವಾ ಯಾವುದೇ ಪ್ರದೇಶದ (ವಾರ್ಡಿನ ಭಾಗದ) ಅಗತ್ಯಗಳ ಬಗ್ಗೆ ಸಂಬಂಧಪಟ್ಟ ಪಾಲಿಕೆಯ ಪ್ರಾಧಿಕಾರಿಯ ಗಮನ ಸೆಳೆಯಬಹುದು. ತಾವು ಅಪೇಕ್ಷಣೀಯವೆಂದು ಪರಿಗಣಿಸುವ ಸುಧಾರಣೆಗಳನ್ನು ಸೂಚಿಸಬಹುದೆಂದು ತಿಳಿಸಲಾಗಿದೆ. ವಲಯ ಸಮಿತಿಯಲ್ಲಿ ಆಯಾ ವಲಯದ ಪ್ರತಿ ಕಾರ್ಪೊರೇಟರ್‌ಗಳೂ ಸದಸ್ಯರಾಗಿರುವುದರಿಂದ, ವಲಯ ಸಮಿತಿಗೆ ಆರ್ಥಿಕ ವೆಚ್ಚದ ಮತ್ತು

ಆಡಳಿತಾತ್ಮಕ ಅನುಮೋದನೆ ನೀಡುವ ಅಧಿಕಾರವನ್ನು ನಿಗದಿಪಡಿಸಬಹುದು. ಆದರೆ, ವಾರ್ಡ್ ಸಮಿತಿಯ ಇತರ ಸದಸ್ಯರು ಪಾಲಿಕೆಯ ಸದಸ್ಯರಲ್ಲ. ಹಾಗಾಗಿ ವಾರ್ಡ್ ಸಮಿತಿಯನ್ನು ಪಾಲಿಕೆಯ ಪ್ರಾಧಿಕಾರವೆಂದು ನಿಗದಿಪಡಿಸುವುದು ಸಮಂಜಸವಲ್ಲ.

ಒಟ್ಟಾರೆಯಾಗಿ ಈ ಕಾಯ್ದೆಯು ಬಿಬಿಎಂಪಿಯ ಸಾಂಸ್ಥಿಕ ಸಂರಚನೆ ಮತ್ತು ಶಾಸನಾತ್ಮಕ ಚೌಕಟ್ಟಿನ ವಿಷಯದಲ್ಲಿ ಅಸಮರ್ಪಕವಾಗಿದೆ ಎಂದು ಹೇಳಿದರೆ ತಪ್ಪಾಗಲಾರದು. ಮುನ್ಸಿಪಲ್ ಮತ್ತು ಮೆಟ್ರೋಪಾಲಿಟನ್ ಆಡಳಿತಕ್ಕೆ ಸಂಬಂಧಪಟ್ಟಂತೆ ಒಂದು ನೂತನ ಹಾಗೂ ಸಮಗ್ರ ಕಾಯ್ದೆಯ ಬಗ್ಗೆ ಬೆಂಗಳೂರು ನಾಗರಿಕರ ನಿರೀಕ್ಷೆಯು ಇನ್ನೂ ಮರೀಚಿಕೆಯಾಗಿಯೇ ಉಳಿದಿದೆ. ಈ ಬಗ್ಗೆ ತೆಗೆದುಕೊಳ್ಳಬೇಕಾದ ಶಾಸನಾತ್ಮಕ ಕ್ರಮಗಳನ್ನು ಸಾಧ್ಯವಾದಷ್ಟು ಬೇಗ ಸರಿಯಾದ ರೀತಿಯಲ್ಲಿ ರಾಜ್ಯ ಸರ್ಕಾರವು ಶ್ರದ್ಧೆಯಿಂದ ಪ್ರಯತ್ನಿಸಿದರೆ ಒಳ್ಳೆಯದು.

ಆಧಾರ: ಪ್ರಜಾವಾಣಿ, ದಿನಾಂಕ:22.03.2021

## 41. ಲಸಿಕೆ: ವಿತರಣೆಗೆ ಸಮಸ್ಯೆ ಇಲ್ಲ

ಲಸಿಕೆಯ ಲಭ್ಯತೆಗೆ ಅನುಸಾರ ಜಿಲ್ಲೆಗಳಿಗೆ ಹಂಚಿಕೆ ಮಾಡಲಾಗುತ್ತಿದೆ. ನಮ್ಮ ಅಗತ್ಯಕ್ಕೆ ತಕ್ಕಷ್ಟು ಲಸಿಕೆ ಪೂರೈಕೆ ಮಾಡುವಂತೆ ಕೇಂದ್ರ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದೆ. ಲಸಿಕೆ ವಿತರಣೆಗೆ ಯಾವುದೇ ಸಮಸ್ಯೆ ಎಲ್ಲ ಎಂದು ಆರೋಗ್ಯ ಇಲಾಖೆ ಆಯುಕ್ತ ಡಾ.ಕೆ.ವಿ. ತ್ರಿಲೋಕ ಚಂದ್ರ ತಿಳಿಸಿದರು.

'ರಾಜ್ಯದಲ್ಲಿ ಪ್ರತಿನಿತ್ಯ 3 ಲಕ್ಷ ಮಂದಿಗೆ ಕೋವಿಡ್ ಲಸಿಕೆ ವಿತರಿಸುವ ಗುರಿಯನ್ನು ಆರೋಗ್ಯ ಇಲಾಖೆ ಹಾಕಿಕೊಂಡಿದೆ. ಆದರೆ, ಸದ್ಯ 9 ಲಕ್ಷ ಡೋಸ್‌ಗಳು ಲಭ್ಯ ಇದೆ. ಪ್ರಾಥಮಿಕ ಆರೋಗ್ಯ ಕೇಂದ್ರ, ಸಮುದಾಯ ಆರೋಗ್ಯ ಕೇಂದ್ರ, ತಾಲ್ಲೂಕು ಆಸ್ಪತ್ರೆಗಳು, ಜಿಲ್ಲಾ ಆಸ್ಪತ್ರೆಗಳ ಸೇರಿದಂತೆ 3,500ಕ್ಕೂ ಅಧಿಕ ಕೇಂದ್ರಗಳನ್ನು ಲಸಿಕೆ ವಿತರಣೆಗಾಗಿ ಗುರುತಿಸಲಾಗಿದೆ. ಪ್ರಾಥಮಿಕ ಆರೋಗ್ಯ ಕೇಂದ್ರದಲ್ಲಿ ದಿನಕ್ಕೆ 100 ಮಂದಿಗೆ ಹಾಗೂ ಆಸ್ಪತ್ರೆಗಳಲ್ಲಿ 500 ಮಂದಿಗೆ ಲಸಿಕೆ ನೀಡುವ ಗುರಿ ನೀಡಲಾಗಿದೆ. ದಿನವೊಂದಕ್ಕೆ ಸರಾಸರಿ 1.25 ಲಕ್ಷ ಮಂದಿಗೆ ಲಸಿಕೆ ವಿತರಣೆ ಮಾಡಲಾಗುತ್ತಿದೆ ಎಂದು ಹೇಳಿದರು.

'ಕೇಂದ್ರ ಸರ್ಕಾರವು ಈವರೆಗೆ ರಾಜ್ಯಕ್ಕೆ 38.85 ಲಕ್ಷ ಡೋಸ್ ಲಸಿಕೆ ನೀಡಿದೆ. ಕೆಲವು ಜಿಲ್ಲೆಗಳಿಗೆ ಅಗತ್ಯ ಪ್ರಮಾಣದಲ್ಲಿ ಲಸಿಕೆ ಪೂರೈಕೆ ಆಗುತ್ತಿಲ್ಲ ಎಂಬ ಅಪವಾದ ಎದ್ದಿದೆ. ಲಸಿಕೆಯ ಲಭ್ಯತೆ ಅನುಸಾರ ಹಂಚಿಕೆ ಮಾಡುತ್ತಿರುವ ಆರೋಗ್ಯ ಇಲಾಖೆಯು, ಹೆಚ್ಚಿನ ಪ್ರಮಾಣದಲ್ಲಿ ಲಸಿಕೆ ಪೂರೈಕೆ ಮಾಡಲು ಕೇಂದ್ರ ಸರ್ಕಾರಕ್ಕೆ ಮನವಿ ಮಾಡಿಕೊಂಡಿದೆ' ಎಂದು ಹೇಳಿದರು.

**ಕಲ್ಯಾಣ ಕರ್ನಾಟಕ: ಲಸಿಕೆ ಕೊರತೆ**

ಕೊರೋನಾ ಲಸಿಕೆಯ ದಾಸ್ತಾನು ಕಲಬುರ್ಗಿ, ಬೀದರ್, ಯಾದಗಿರಿ ಮತ್ತು ರಾಯಚೂರು ಜಿಲ್ಲೆಗಳಲ್ಲಿ ಕಡಿಮೆಯಾಗುತ್ತಿದೆ.

ಕಲಬುರ್ಗಿ ಜಿಲ್ಲೆಯಲ್ಲಿ 6.156 ಡೋಸ್ ಮಾತ್ರ ಸಂಗ್ರಹ ಇದೆ. '1.97 ಲಕ್ಷ ಜನರಿಗೆ ಲಸಿಕೆ ಹಾಕುವ ಗುರಿ ಇದ್ದು, 76,610 ಡೋಸ್ ಲಸಿಕೆ ತರಿಸಿಕೊಳ್ಳಲಾಗಿತ್ತು. ಅದರಲ್ಲಿ ಕೋವಿಶೀಲ್ಡ್ 65,410 ಡೋಸ್, ಕೋವ್ಯಾಕ್ಸಿನ್ 11,200 ಡೋಸ್ ನಷ್ಟು ಇತ್ತು. 64 ಸಾವಿರ ಡೋಸ್ ಬಳಕೆಯಾಗಿದ್ದು, ಅಗತ್ಯವಿರುವಷ್ಟು ದಾಸ್ತಾನು ಕಳುಹಿಸಿಕೊಡಲು ಸರ್ಕಾರಕ್ಕೆ ಪತ್ರ ಬರೆದಿದ್ದೇವೆ' ಎಂದು ಕಲಬುರ್ಗಿ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ ಡಾ. ರಾಜಶೇಖರ ಮಾಲಿ ತಿಳಿಸಿದರು.

'ಯಾದಗಿರಿ ಜಿಲ್ಲೆಗೆ 20 ಸಾವಿರ ಡೋಸ್ ಪೂರೈಸುವಂತೆ ಬೇಡಿಕೆ ಸಲ್ಲಿಸಲಾಗಿದೆ' ಎಂದು ಜಿಲ್ಲಾ ಆರೋಗ್ಯಾಧಿಕಾರಿ ಡಾ. ಇಂದುಮತಿ ಪಾಟೀಲ ಹೇಳಿದರು.

'ರಾಯಚೂರು ಜಿಲ್ಲೆಯಲ್ಲಿ ಈವರೆಗೆ 65 ಸಾವಿರ ಜನರಿಗೆ ಲಸಿಕೆ ನೀಡಲಾಗಿದೆ. ಚಿತ್ರದುರ್ಗ ಮತ್ತು ನೆರೆಯ ಜಿಲ್ಲೆಗಳಿಂದ ಲಸಿಕೆ ತರಿಸಿಕೊಂಡು ಕೊರತೆ ನೀಗಿಸಿಕೊಳ್ಳಲಾಗುತ್ತಿದೆ. ಬೆಂಗಳೂರಿನಿಂದ

ಲಸಿಕೆ ಹಂಚಿಕೆಯಾಗಲಿದ್ದು, ಲಸಿಕೆ ಹಂಚಿಕೆಯಾಗಲಿದ್ದು, ಸಮಸ್ಯೆ ಇಲ್ಲ' ಎಂದು ಜಿಲ್ಲಾಧಿಕಾರಿ ಆರ್. ವೆಂಕಟೇಶ್‌ಕುಮಾರ್ ಪ್ರತಿಕ್ರಯಿಸಿದರು.

ಕೋವಿಶೀಲ್ಡ್ ಪೂರೈಕೆಯಲ್ಲಿ ಕೊರತೆ ಇದೆ. ಜಿಲ್ಲೆಗೆ 73 ಸಾವಿರ ಡೋಸ್ ಲಸಿಕೆ ಬಂದಿದ್ದು, 65 ಸಾವಿರ ಜನರಿಗೆ ಕೊಡಲಾಗಿದೆ. ಕೋವ್ಯಾಕ್ಸಿನ್ 11,200 ಡೋಸ್ ಬಂದಿದೆ. ನಿತ್ಯ ಐದರಿಂದ ಆರು ಸಾವಿರ ಜನರಿಗೆ ಲಸಿಕೆ ಕೊಡುತ್ತಿದ್ದೇವೆ. ಎರಡು ದಿನಕ್ಕೆ ಆಗುವಷ್ಟು ಮಾತ್ರ ಲಸಿಕೆ ಇದೆ' ಎಂದು ಬೀದರ್ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ ಡಾ. ವಿ.ಜಿ.ರೆಡ್ಡಿ ಮಾಹಿತಿ ನೀಡಿದರು.

ಕೋವಿಶೀಲ್ಡ್‌ನ ಎರಡನೇ ಲಸಿಕೆ ನೀಡುವುದನ್ನು 8 ವಾರಗಳ ಕಾಲ ಮುಂದೂಡುವಂತೆ ಕೇಂದ್ರ ಆರೋಗ್ಯ ಸಚಿವಾಲಯ ಎಲ್ಲ ರಾಜ್ಯಗಳಿಗೆ ಸೂಚನೆ ನೀಡಲು ನಿರ್ಧರಿಸಿದೆ. ಸಚಿವಾಲಯದ ಈ ನಿರ್ಧಾರಕ್ಕೂ ಸಚಿವ ಸಂಪುಟ ಅನುಮೋದನೆ ನೀಡಿದೆ. 45 ವರ್ಷ ಮೇಲ್ಪಟ್ಟ ವಯೋಮಾನದ ಎಲ್ಲಾ ಅರ್ಹ ವ್ಯಕ್ತಿಗಳಿಗೆ ಕೋವಿಡ್ ಲಸಿಕೆಯ ಮೊದಲನೇ ಡೋಸ್ ಸಿಗಲಿದೆ.

**ಪರೀಕ್ಷೆ ಹೆಚ್ಚಳಕ್ಕೆ ಸೂಚನೆ:** ಕೋವಿಡ್–19 ಪ್ರಕರಣಗಳು ಹೆಚ್ಚುತ್ತಿರುವ ಹಿನ್ನೆಲೆಯಲ್ಲಿ ಆರ್‌ಟಿ–ಪಿಸಿಆರ್ ಪರೀಕ್ಷೆಗಳನ್ನು ಹೆಚ್ಚಿಸುವಂತೆ ಕೇಂದ್ರ ಸರ್ಕಾರ ಎಲ್ಲ ರಾಜ್ಯಗಳು ಹಾಗೂ ಕೇಂದ್ರಾಡಳಿತ ಪ್ರದೇಶಗಳಿಗೆ ಸೂಚನೆ ನೀಡಿದೆ.

ಪರೀಕ್ಷೆ–ಪತ್ತೆ ಕಾರ್ಯ ಹಾಗೂ ಚಿಕಿತ್ಸೆ ನಿಯಮವನ್ನು ಕಟ್ಟುನಿಟ್ಟಾಗಿ ಪಾಲಿಸಬೇಕು. ಆದ್ಯತಾ ಗುಂಪುಗಳಿಗೆ ಲಸಿಕೆ ನೀಡುವ ಪ್ರಕ್ರಿಯೆಯನ್ನು ಚುರುಕುಗೊಳಿಸಬೇಕು ಎಂದು ಸೂಚಿಸಿದೆ.

ಏಪ್ರಿಲ್ ಅವಧಿಗೆ ಸಂಬಂಧಿಸಿದಂತೆ ಹೊಸ ಮಾರ್ಗಸೂಚಿಗಳನ್ನು ಕೇಂದ್ರ ಗೃಹ ಸಚಿವಾಲಯ ಬಿಡುಗಡೆ ಮಾಡಿದೆ. ಪರೀಕ್ಷೆಗಳನ್ನು ಹೆಚ್ಚಿಸುವ ಜೊತೆಗೆ ಕೋವಿಡ್ ದೃಢಪಟ್ಟವರನ್ನು ತ್ವರಿತವಾಗಿ ಕ್ವಾರಂಟೈನ್‌ಗೆ ಒಳಪಡಿಸಬೇಕು ಹಾಗೂ ಸಕಾಲಕ್ಕೆ ಚಿಕಿತ್ಸೆ ನೀಡಲು ಕ್ರಮ ಕೈಗೊಳ್ಳಬೇಕು ಎಂದು ಗೃಹ ಸಚಿವಾಲಯ ಸೂಚಿಸಿದೆ. ವಾರದೊಳಗೆ ಕೇಂದ್ರವು ರಾಜ್ಯಕ್ಕೆ 12.50 ಲಕ್ಷ ಡೋಸ್ ಲಸಿಕೆ ಪೂರೈಸಲಿದೆ. ಅದಕ್ಕೂ ಮುನ್ನ ಮಾರ್ಚ್ 24ರಂದು 4 ಲಕ್ಷ ಡೋಸ್ ಲಸಿಕೆಯನ್ನು ಕಳುಹಿಸುತ್ತಿದೆ ಎಂದು ಡಾ. ಕೆ. ಸುಧಾಕರ್ ಹೇಳಿದರು.

ಆಧಾರ: ಪ್ರಜಾವಾಣಿ, ದಿನಾಂಕ:24.03.2021

## 42. 2 ವಾರ ಟಫ್ ರೂಲ್ಸ್

ಕೊರೋನಾ ಎರಡನೇ ಅಲೆ ವೇಗವಾಗಿ ಹಬ್ಬುತ್ತಿರುವಾಗಲೇ ತುರ್ತು ಸಭೆ ಕರೆದಿದ್ದ ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪ ಅವರು, ರಾಜ್ಯದಲ್ಲಿ ಲಾಕ್‌ಡೌನ್ ಇಲ್ಲ ಎನ್ನುವುದನ್ನು ಸ್ಪಷ್ಟಪಡಿಸಿದ್ದಾರೆ. ಅಲ್ಲದೇ, ಮುಂದಿನ ಎರಡು ವಾರಗಳ ಕಾಲ ಟಫ್ ರೂಲ್ಸ್ ಹೇರಲಾಗುವುದು ಎಂದು ಹೇಳಿದ್ದಾರೆ.

ಕೊರೋನಾ ಪ್ರಕರಣ ಹೆಚ್ಚುತ್ತಿರುವ ಹಿನ್ನೆಲೆಯಲ್ಲಿ ಸಿಎಂ ನೇತೃತ್ವದಲ್ಲಿ ಸಭೆ ನಡೆಸಲಾಯಿತು. ಸಭೆಯ ಬಳಿಕ ಸುದ್ದಿಗೋಷ್ಠಿಯಲ್ಲಿ ಮಾತನಾಡಿದ ಅವರು, 'ಸದ್ಯಕ್ಕೆ ರಾಜ್ಯದಲ್ಲಿ ಲಾಕ್‌ಡೌನ್ ಹಾಗೂ ನೈಟ್‌ಕರ್ಫ್ಯೂ ಮಾಡಲ್ಲ. ಜಾತ್ರೆ, ಮದುವೆ ಸೇರಿದಂತೆ ಯಾವುದೇ ಕಾರ್ಯ ಕ್ರಮಗಳಿಗೆ ಹೆಚ್ಚಿನ ಜನ ಸೇರುವಂತಿಲ್ಲ. ಸಾರ್ವಜನಿಕ ಸ್ಥಳಗಳಲ್ಲಿ ಜನರು ಕಡ್ಡಾಯವಾಗಿ ಮಾಸ್ಕ್ ಬಳಸಲೇಬೇಕು. ಮಾಸ್ಕ್ ಹಾಕದಿದ್ದಲ್ಲಿ ದಂಡ ವಿಧಿಸಲಾಗುವುದು' ಎಂದು ಎಚ್ಚರಿಕೆ ಸಂದೇಶ ನೀಡಿದ್ದಾರೆ.

ಕೊರೋನಾ ವಿಷಯವಾಗಿ ಪ್ರತಿಪಕ್ಷ ನಾಯಕ ಸಿದ್ದರಾಮಯ್ಯ ಪತ್ರ ಬರೆದು ಸಲಹೆ ನೀಡಿದ್ದಾರೆ. ಈ ಸಭೆಯಲ್ಲಿ ಪ್ರತಿಪಕ್ಷ ನಾಯಕರ ಸಲಹೆಯನ್ನು ಎಲ್ಲರಿಗೂ ತಿಳಿಸಿದೇವೆ.' ಎಂದರು.

ಸಚಿವರ ಬೇಕಾಬಿಟ್ಟಿ ಹೇಳಿಕೆಗೆ ಸಿಎಂ ಬ್ರೇಕ್: ಲಾಕ್‌ಡೌನ್, ನೈಟ್ ಕರ್ಫ್ಯೂ ಬಗ್ಗೆ ಯಾರೂ ಬೇಕಾಬಿಟ್ಟಿ ಹೇಳಿಕೆ ಕೊಡುವ ಹಾಗಿಲ್ಲ ಎಂದು ಸಚಿವರು ಮತ್ತು ಅಧಿಕಾರಿಗಳಿಗೆ ಸಿಎಂ ಖಡಕ್ ಸೂಚನೆ ನೀಡಿದ್ದಾರೆ.

ಲಾಕ್‌ಡೌನ್, ಕರ್ಫ್ಯೂ, ಕಂಟೇನ್ಮೆಂಟ್ ವಲಯಗಳ ಬಗ್ಗೆ ಆಯಾ ಕಾಲಕ್ಕೆ ತಕ್ಕಂತೆ ಕೇಂದ್ರ ಗೃಹ ಸಚಿವಾಲಯ ಮಾತ್ರ ಆದೇಶ ಹೊರಡಿಸಲಿದೆ. ಕೊರೋನಾ ನಿಯಮಾವಳಿ ಕುರಿತು ಕೇಂದ್ರದ ಮಾದರಿಯಲ್ಲೇ ರಾಜ್ಯ ವಿಪತ್ತು ನಿರ್ವಹಣಾ ಇಲಾಖೆ ಆದೇಶಗಳನ್ನು ಹೊರಡಿಸಲಿದೆ. ಆದರೆ ಇತ್ತೀಚೆಗೆ ಕೆಲವು ಆದೇಶಗಳನ್ನು ಇತರೆ ಇಲಾಖೆಗಳು ಹೊರಡಿಸಿರುವುದು ಗಮನಕ್ಕೆ ಬಂದ ಹಿನ್ನೆಲೆ ಕೊರೋನಾಗೆ ಸಂಬಂಧಿಸಿದ ಯಾವುದೇ ಸೂಚನೆಗಳನ್ನು ಮತ್ತು ನಿರ್ದೇಶನಗಳನ್ನು ರಾಜ್ಯ ವಿಪತ್ತು ನಿರ್ವಹಣಾ ಕಾರ್ಯ ಸಮಿತಿಯ ಮುಖ್ಯಸ್ಥರೇ ಹೊರಡಿಸಬೇಕು. ಅದು ಮುಖ್ಯಮಂತ್ರಿಗಳ ಅನುಮೋದನೆ ಪಡೆದ ಬಳಿಕವೇ ಮುಖ್ಯಕಾರ್ಯದರ್ಶಿಗಳು ಆದೇಶ ಹೊರಡಿಸತಕ್ಕದ್ದು. ಎಂದು ಕಚೇರಿಯಿಂದ ಆದೇಶ ಹೊರಬಿದ್ದಿದೆ.

**ಆರು ತಿಂಗಳು ಕಲ್ಯಾಣ ಮಂಟಪ ಬಂದ್:** ಕೊರೋನಾ ಮಾರ್ಗಸೂಚಿ ಪಾಲಿಸದಿದ್ದರೆ ಕಲ್ಯಾಣ ಮಂಟಪದ ಮಾಲೀಕರಿಗೆ ದಂಡ ಹಾಕಲಾಗುತ್ತದೆ. ಕೊರೋನಾ ಸೋಂಕು ಹೆಚ್ಚು ಕಂಡ ಬಂದರೆ 6 ತಿಂಗಳು ಮದುವೆ ಮಂಟಪಗಳನ್ನು ಬಂದ್ ಮಾಡಲಾಗುವುದು.

ಕೊಳಗೇರಿಗಳಲ್ಲಿ ಕೊರೋನಾ ಪ್ರಕರಣಗಳು ಕಡಿಮೆ ಇವೆ. ಅಪಾರ್ಟ್‌ಮೆಂಟ್‌ಗಳಲ್ಲಿ ಕೊರೋನಾ ನಿರ್ವಹಣೆ ಅಗತ್ಯ. ಕೊರೋನಾ ಹೆಚ್ಚಾಗುತ್ತಿರುವ ಅಪಾರ್ಟ್‌ಮೆಂಟ್‌ಗಳಲ್ಲಿ ಮೋಜು–ಮಸ್ತಿ ಮಾಡಲು ಅವಕಾಶ ಇಲ್ಲ.

**ಶಾಲಾ–ಕಾಲೇಜು ಬಂದ್ ಮಾಡಲ್ಲ:** ಇನ್ನು ಹದಿನೈದು ದಿನಗಳಲ್ಲಿ ಪರೀಕ್ಷೆಗಳು ಬರುತ್ತವೆ. ಯಾವುದೇ ಕಾರಣಕ್ಕೂ ಶಾಲೆ–ಕಾಲೇಜುಗಳನ್ನು ಬಂದ್ ಮಾಡುವುದಿಲ್ಲ. ಪರೀಕ್ಷೆ ಇಲ್ಲದೇ ಯಾವುದೇ ವಿದ್ಯಾರ್ಥಿಗಳನ್ನು ಪಾಸ್ ಮಾಡುವುದಿಲ್ಲ.

ಚಿತ್ರಮಂದಿರಗಳಿಗೂ ನಿರ್ಬಂಧ ಇಲ್ಲ: ಚಿತ್ರಮಂದಿಗಳಲ್ಲಿ ಮತ್ತೆ ಶೇ.50 ರಷ್ಟು ಸೀಟ್ ಭರ್ತಿಗೆ ಆದೇಶಿಸಿ ಎಂದು ತಾಂತ್ರಿಕ ಸಲಹಾ ಸಮಿತಿ ಹೇಳಿದೆ ಆದರೆ ಈ ಬಗ್ಗೆ ಯಾವುದೇ ನಿರ್ಧಾರ ಸದ್ಯಕ್ಕೆ ಬೇಡ ಎನ್ನಲಾಗಿದೆ. ಆರ್ಥಿಕವಾಗಿ ಹೊಡೆತ ಕೊಡುವ ಯಾವುದೇ ನಿರ್ಧಾರಗಳನ್ನು ತೆಗೆದುಕೊಂಡಿಲ್ಲ.

ಆಧಾರ: ವಿಶ್ವವಾಣಿ, ದಿನಾಂಕ:30.03.2021

# ಭಾಗ–5

# ರಾಜ್ಯ ನೆಲ–ಜಲ–ಭಾಷೆ

## 1. ನಾವೀನ್ಯತೆಯಲ್ಲಿ ಕರ್ನಾಟಕವೇ ನಂಬರ್ 1

ನೀತಿ ಆಯೋಗದ ಬಿಡುಗಡೆ ಮಾಡಿರುವ ನಾವೀನ್ಯತೆ ಸೂಚ್ಯಂಕದಲ್ಲಿ ಕರ್ನಾಟಕ ದೇಶದಲ್ಲೇ ಮೊದಲ ಸ್ಥಾನ ಪಡೆದಿದೆ. ಜಾಗತಿಕ ಮಟ್ಟದ ಮಾನದಂಡ ಅನುಸರಿಸಿ ಈ ವರದಿ ತಯಾರಿಸಲಾಗಿದ್ದು, ಕರ್ನಾಟಕ ಮೊದಲ ಸ್ಥಾನ ಪಡೆದುಕೊಂಡಿದೆ.

ಎರಡನೇ ಸ್ಥಾನದಲ್ಲಿ ಮಹಾರಾಷ್ಟ್ರ ಇದ್ದು, ಮೂರನೇ ಸ್ಥಾನದಲ್ಲಿ ತಮಿಳುನಾಡು, ನಾಲ್ಕನೇ ಸ್ಥಾನದಲ್ಲಿ ತೆಲಂಗಾಣ ಹಾಗೂ ಐದನೇ ಸ್ಥಾನದಲ್ಲಿ ಕೇರಳ ಇದೆ. ಮೊದಲ ಐದು ಸ್ಥಾನಗಳ ಪೈಕಿ ನಾಲ್ಕು ಸ್ಥಾನಗಳನ್ನು ದಕ್ಷಿಣದ ರಾಜ್ಯಗಳೇ ಬಾಚಿಕೊಂಡಿರುವುದು ವಿಶೇಷ.

ನೀತಿ ಆಯೋಗದ ಉಪಾಧ್ಯಕ್ಷ ರಾಜೀವ್ ಕುಮಾರ್ ಜಾಗೂ ಸಿಇಒ ಅಮಿತಾಭ್ ಕಾಂತ್ ಅವರು ಈ ವರದಿ ಬಿಡುಗಡೆ ಮಾಡಿದ್ದಾರೆ. ದೇಶದ ಎಲ್ಲ ರಾಜ್ಯ ಹಾಗೂ ಕೇಂದ್ರಾಡಳಿತ ಪ್ರದೇಶಗಳನ್ನು ಒಳಗೊಂಡ ವರದಿ ಇದಾಗಿದ್ದು, ರಾಜ್ಯಗಳು ನಾವೀನ್ಯತೆಗೆ ನೀಡುವ ಬೆಂಬಲ. ಅದಕ್ಕಾಗಿ ರೂಪಿಸುವ ಯೋಜನೆಗಳು ಮುಂತಾದವುಗಳ ಆಧಾರದಲ್ಲಿ ಈ ಸ್ಥಾನಗಳನ್ನು ನೀಡಲಾಗಿದೆ.

ರಾಜ್ಯಗಳನ್ನು ಒಟ್ಟು ಮೂರು ವಿಭಾಗಗಳನ್ನಾಗಿ ವಿಂಗಡಿಸಿ ಈ ಪಟ್ಟಿ ತಯಾರಿಸಲಾಗಿದೆ. 17 ಮುಖ್ಯ ರಾಜ್ಯಗಳು, 10 ಈಶಾನ್ಯ ಮತ್ತು ಗುಡ್ಡಗಾಡು ರಾಜ್ಯಗಳು ಹಾಗೂ 9 ನಗರ ರಾಜ್ಯಗಳು ಎಂದು ಮೂರು ವಿಭಾಗಗಳಾಗಿ ವಿಂಗಡಿಸಲಾಗಿದೆ. ಒಟ್ಟು 36 ವಿಷಯಗಳನ್ನು ಆಧರಿಸಿ ರಾಜ್ಯಗಳಿಗೆ ಈ ರ್‍ಯಾಂಕಿಂಗ್ ನೀಡಲಾಗಿದೆ.

ಆಧಾರ:ವಿಶ್ವವಾಣಿ ದಿನಾಂಕ:02.01.2021

## 2. ಬೆಂಗಳೂರಿಗೆ ಅಡಿಗಲ್ಲು ಹಾಕಿ 483 ವರ್ಷವಾಯ್ತು

ಬೆಂಗಳೂರು ನಿರ್ಮಾಣಕ್ಕೆ ಅಡಿಗಲ್ಲು ಹಾಕಿ ಇವತ್ತಿಗೆ 483 ವರ್ಷಗಳು ಗತಿಸಿವೆ. ಕ್ರಿ.ಶ.1538ರ ಜನವರಿ 14 ನಾಡಪ್ರಭು ಹಿರಿಯ ಕೆಂಪೇಗೌಡ ಬೆಂಗಳೂರು ನಿರ್ಮಾಣಕ್ಕೆ ಅಡಿಗಲ್ಲು ಹಾಕಿದ್ದರು. ನಂತರ, ಕೆಂಪೇಗೌಡ ವಂಶಸ್ಥರುಗಳಾದ ರಣ ಭೈರೇಗೌಡ, ಕೆಂಪೇನಂಜೇಗೌಡ ಹಾಗೂ ಇಮ್ಮಡಿ ಕೆಂಪೇಗೌಡ ಬೆಂಗಳೂರನ್ನು ಕಟ್ಟಿ ಬೆಳೆಸಿದ್ದಾರೆ.

ನಾಡಪ್ರಭು ಕೆಂಪೇಗೌಡ ವಂಶಸ್ಥರು, ಚಿಕ್ಕದೇವರಾಜ ಒಡೆಯರ್, ಜಯಚಾಮರಾಜೇಂದ್ರ ಒಡೆಯರ್, ದಿವಾನ್ ಪೂರ್ಣಯ್ಯ, ಸಿ.ವಿ.ರಂಗಚಾರ್ಲು, ಕುಮಾರಪುರಂ ಶೇಷಾದ್ರಿ ಅಯ್ಯರ್, ಸರ್.ಎಂ.ವಿಶ್ವೇಶ್ವರಯ್ಯ ಹಾಗೂ ಸರ್ ಮಿರ್ಜಾ ಇಸ್ಮಾಯಿಲ್ ಸೇರಿ ಅನೇಕರು ಬೆಂಗಳೂರು ಅಭಿವೃದ್ಧಿಗೆ ತಮ್ಮದೇ ಕೊಡುಗೆಗಳನ್ನು ನೀಡಿದ್ದಾರೆ.

**ವಿವಿಧ ರಾಜರ ಆಳ್ವಿಕೆ:** ಕ್ರಿ.ಶ.1537ರವರೆಗೆ ಬೆಂಗಳೂರು ದಕ್ಷಿಣ ಭಾರತದ ಸಂಸ್ಥಾನಗಳಾದ ಗಂಗ, ಚೋಳ ಮತ್ತು ಹೊಯ್ಸಳರ ಆಳ್ವಿಕೆಗೆ ಒಳಪಟ್ಟಿದೆ. ನಂತರ, ವಿಜಯನಗರ ಸಾಮ್ರಾಜ್ಯದ ಸಾಮಂತ ರಾಜ ಕೆಂಪೇಗೌಡರು ಬೆಂಗಳೂರಿನಲ್ಲಿ ಮಣ್ಣಿನ ಕೋಟೆ ಕಟ್ಟಿಸುವ ಮೂಲಕ ಆಧುನಿಕ ಬೆಂಗಳೂರಿನ ಉದಯಕ್ಕೆ ಕಾರಣರಾದರು. ಮರಾಠರು ಹಾಗೂ ಮೊಘಲರ ಅಲ್ಪಾವಧಿ ಆಡಳಿತಕ್ಕೆ ಒಳಗಾಗಿದ್ದ ಬೆಂಗಳೂರು, ಮೈಸೂರು ರಾಜರ ಅಧಿಪತ್ಯದಲ್ಲೇ ಉಳಿದಿತ್ತು. ನಂತರ, ಹೈದರ್ ಆಲಿ ಮತ್ತು ಟಿಪ್ಪು ಸುಲ್ತಾನ್ ಆಡಳಿತಕ್ಕೆ ಒಳಪಟ್ಟ ಬೆಂಗಳೂರನ್ನು 4ನೇ ಆಂಗ್ಲೋ ಮೈಸೂರು ಯುದ್ಧದಲ್ಲಿ ಬ್ರಿಟಿಷರು ವಶಪಡಿಸಿಕೊಂಡಿದ್ದರು. ಆನಂತರ ಮೈಸೂರು ಸಂಸ್ಥಾನವನ್ನು ತಮ್ಮ ಆಡಳಿತದ ಒಂದು ರಾಜ್ಯವನ್ನಾಗಿಸಿದ ಬ್ರಿಟಿಷರು, ಮೈಸೂರು ಒಡೆಯರ ಆಡಳಿತಕ್ಕೆ ಒಪ್ಪಿಸಿದರು.

18 ಮತ್ತು 19ನೇ ಶತಮಾನದಲ್ಲಿ ಬೆಂಗಳೂರು ಒಂದು ನಗರವಾಗಿ ಬೆಳೆಯಿತು. ಆಗ ಪ್ರಮುಖ ಎರಡು ಮುಖ್ಯ ರಸ್ತೆಗಳಿದ್ದವು, ಚಿಕ್ಕಪೇಟೆ ಮತ್ತು ದೊಡ್ಡಪೇಟೆ ರಸ್ತೆಗಳು. ಸ್ವಾತಂತ್ರ್ಯ ಬಳಿಕ ಬಹುದೊಡ್ಡ ಕೈಗಾರಿಕಾ ಉತ್ಪಾದನಾ ಕ್ಷೇತ್ರಗಳಿಗೆ ಬೆಂಗಳೂರು ಸಾಕ್ಷಿಯಾಯಿತು.

ಆಧಾರ: ವಿಜಯವಾಣಿ ದಿನಾಂಕ:15.01.2021

## 3. ಜಂಟಿ ನಿರೀಕ್ಷಣಾ ಸಮಿತಿಗೆ ರಾಜ್ಯದ ಪ್ರತಿನಿಧಿ ನೇಮಕ

ಮಹದಾಯಿ ಜಲ ವಿವಾದದ ಹಿನ್ನೆಲೆಯಲ್ಲಿ ಸುಪ್ರೀಂಕೋರ್ಟ್ ಆದೇಶಿಸಿರುವ ಜಂಟಿ ಸಮಿತಿಗೆ ಕರ್ನಾಟಕದಿಂದ ಮಲಪ್ರಭಾ ಎಡದಂಡೆ ಕಾಲುವೆ ವೃತ್ತದ ಅಧೀಕ್ಷಕ ಅಭಿಯಂತರರು ಕೃಷ್ಣೋಜಿರಾವ್ ಅವರನ್ನು ನೇಮಕ ಮಾಡಲಾಗಿದೆ.

ಈ ಕುರಿತು ರಾಜ್ಯ ಸರ್ಕಾರದ ಜಲಸಂಪನ್ಮೂಲ ಇಲಾಖೆ ಅಪರ ಮುಖ್ಯ ಕಾರ್ಯದರ್ಶಿ ರಾಕೇಶ್ ಸಿಂಗ್ ಗೋವಾ ಮತ್ತು ಮಹಾರಾಷ್ಟ್ರದ ಸರ್ಕಾರಕ್ಕೆ ಪತ್ರ ಬರೆದಿದ್ದಾರೆ. ಮೂವರು ಸದಸ್ಯರ ಜಂಟಿ ಸಮಿತಿಗೆ ಗೋವಾ ಮತ್ತು ಮಹಾರಾಷ್ಟ್ರ ಪ್ರತಿನಿಧಿಸುವ ಸದಸ್ಯರ ಮಾಹಿತಿ ಒದಗಿಸಿ ಸಮನ್ವಯತೆ ಮೂಡಿಸುವಂತೆ ಅವರು ಕೋರಿದ್ದಾರೆ.

ಮಹದಾಯಿ ಕಣವೆಯಲ್ಲಿ ಕರ್ನಾಟಕ ಸರ್ಕಾರ ನಿಯಮ ಉಲ್ಲಂಘಿಸಿ ಕಾಮಗಾರಿ ಕೈಗೊಂಡಿದೆ ಎಂದು ಗೋವಾ ಸರ್ಕಾರ ಕೋರ್ಟ್‌ಗೆ ಅರ್ಜಿ ಸಲ್ಲಿಸಿದೆ. ಈ ಕುರಿತು ಫೆ.22ರಂದು ಸುಪ್ರೀಂ ಕೋರ್ಟ್‌ನಲ್ಲಿ ನಡೆದ ವಿಚಾರಣೆ ವೇಳೆ ಮೂರು ರಾಜ್ಯಗಳನ್ನು ಪ್ರತಿನಿಧಿಸುವ ತ್ರಿ ಸದಸ್ಯರ ಜಂಟಿ ಸಮಿತಿ ರಚನೆ ಮಾಡಿ ಮಹದಾಯಿ ಕಣಿವೆಯಲ್ಲಿ ಆಗಿರುವ ಬೆಳವಣಿಗೆ ಕುರಿತು ಮುಂದಿನ 4 ವಾರಗಳಲ್ಲಿ ವರದಿ ನೀಡುವಂತೆ ಸುಪ್ರೀಂಕೋರ್ಟ್ ಆದೇಶಿಸಿತ್ತು.

ಸುಪ್ರೀಂಕೋರ್ಟ್ ಅದೇಶದ ಪ್ರಕಾರ ಕರ್ನಾಟಕ ಜಂಟಿ ಸಮಿತಿಗೆ ಸದಸ್ಯರನ್ನು ನೇಮಕ ಮಾಡಿದೆ. ಮಾರ್ಚ್ ಮೊದಲ ಅಥವಾ ಎರಡನೇ ವಾರದಲ್ಲಿ ಮಹದಾಯಿ ಕಣಿವೆ ಸ್ಥಳಕ್ಕೆ ಭೇಟಿ ನೀಡುವ ಕುರಿತು ಪ್ರಸ್ತಾವ ಸಲ್ಲಿಸಿದೆ. ಜಂಟಿ ಸಮಿತಿ ಭೇಟಿ ಸಂದರ್ಭದಲ್ಲಿ ಮೂರು ರಾಜ್ಯಗಳ ಅಧಿಕಾರಿಗಳ ಸಮನ್ವಯತೆಗಾಗಿ ಹಿಡಕಲ್ ಜಿಅರ್‌ಬಿಸಿ ವೃತ್ತದ ಅಧೀಕ್ಷಕ ಅಭಿಯಂತರರು ಆರ್.ಬಿ. ದ್ಯಾಮನ್ನವರ ಅವರನ್ನು ನೇಮಕ ಮಾಡಲಾಗಿದೆ.

ಆಧಾರ:ವಿಜಯಕರ್ನಾಟಕ, ದಿನಾಂಕ:01.03.2021

## 4. ದೇಶದಲ್ಲೇ ಬೆಂಗಳೂರು ನಂ.1 ವಾಸಯೋಗ್ಯ ನಗರ.

ಭಾರತದ 111 ವಾಸಯೋಗ್ಯ ನಗರಗಳ ಸಮಗ್ರ ಪಟ್ಟಿಯಲ್ಲಿ ಸಿಲಿಕಾನ್ ಸಿಟಿ ಎಂದೇ ಖ್ಯಾತವಾದ ಬೆಂಗಳೂರು ಮೊದಲ ಸ್ಥಾನ ಗಳಿಸಿದೆ. ಇದರೊಂದಿಗೆ ಕರ್ನಾಟಕದ ರಾಜಧಾನಿಯ ಕಿರೀಟಕ್ಕೆ ಮತ್ತೊಂದು ಗರಿ ಲಭಿಸಿದಂತಾಗಿದೆ. ಇದೇ ವೇಳೆ ಹುಬ್ಬಳ್ಳಿ-ಧಾರವಾಡ ಮಹಾನಗರಕ್ಕೆ ದೇಶದಲ್ಲೇ 37ನೇ ಸ್ಥಾನ ಲಭಿಸಿದೆ. ಇನ್ನು 10 ಲಕ್ಷಕ್ಕಿಂತ ಕಡಿಮೆ ಜನಸಂಖ್ಯೆಯ ವಾಸಯೋಗ್ಯ ನಗರಗಳ ಪಟ್ಟಿಯನ್ನು ಪ್ರತ್ಯೇಕವಾಗಿ ತಯಾರಿಸಲಾಗಿದ್ದು, ಇದರಲ್ಲಿ ಶಿಮ್ಲಾ ಮೊದಲ ಸ್ಥಾನ ಪಡೆದಿದ್ದರೆ, ದಾವಣಗೆರೆ 9ನೇ ಸ್ಥಾನವನ್ನು ಪಡೆದಿದೆ. ಕೇಂದ್ರ ನಗರಾಭಿವೃದ್ಧಿ ಸಚಿವ ಪರ್ದೀಪ್ ಪುರಿ ಅವರು ಘೋಷಿಸಿದರು.

| ದೇಶದ ಟಾಪ್ 5 ವಾಸಯೋಗ ನಗರ: | | ರಾಜ್ಯದ ಟಾಪ್ 5 ವಾಸಯೋಗ ನಗರ | |
|---|---|---|---|
| 1 | ಬೆಂಗಳೂರು (ಕರ್ನಾಟಕ) | 1 | ದಾವಣಗೆರೆ (ದೇಶಕ್ಕೆ ನಂ.9) |
| 2 | ಪುಣೆ (ಮಹಾರಾಷ್ಟ್ರ) | 2 | ಮಂಗಳೂರು (ದೇಶಲ್ಲೆ ನಂ.20) |
| 3 | ಅಹಮದಾಬಾದ್ (ಗುಜರಾತ್) | 3 | ತುಮಕೂರು (ದೇಶಕ್ಕೆ ನಂ.23) |
| 4 | ಚೆನ್ನೈ (ತಮಿಳುನಾಡು) | 4 | ಶಿವಮೊಗ್ಗ (ದೇಶಕ್ಕೆ ನಂ.26) |
| 5 | ಸೂರತ್ (ಗುಜರಾತ್) | 5 | ಬೆಳಗಾವಿ (ದೇಶಕ್ಕೆ ನಂ.47) |

ಆಧಾರ:ಕನ್ನಡಪ್ರಭ, ದಿನಾಂಕ:05.03.2021

## 5. ನೇತ್ರಾವತಿ ನದಿಗೆ ವರ್ಟಿಕಲ್ ಲಿಫ್ಟ್ ಅಣೆಕಟ್ಟು

ಆಧುನಿಕ ತಂತ್ರಜ್ಞಾನ ಅಳವಡಿಸಿ ಪುತ್ತೂರು ತಾಲ್ಲೂಕಿನ ಬಿಳಿಯೂರು ಗ್ರಾಮದ ಕಡಪುವಿನಲ್ಲಿ ನೇತ್ರಾವತಿ ನದಿ ವರ್ಟಿಕಲ್ ಲಿಫ್ಟ್ ಅಣೆಕಟ್ಟು ನಿರ್ಮಾಣ ಯೋಜನಾ ಕಾಮಗಾರಿ ಭರದಿಂದ ಸಾಗುತ್ತಿದೆ.

ಬೆಳ್ತಂಗಡಿ ಹಾಗೂ ಪುತ್ತೂರು ಎರಡು ತಾಲ್ಲೂಕಿನ ಹಲವು ಊರುಗಳನ್ನು ಬೆಸೆಯಲು ಸೇತುವೆ. ನೀರೋದಗಿಸಲು ಕಿಂಡಿ ಅಣೆಕಟ್ಟು ನಿರ್ಮಾಣ ಹಂತದಲ್ಲಿದ್ದು, ಆಧುನಿಕ ತಂತ್ರಜ್ಞಾನ ಹೊಂದಿರುವ ವಿದ್ಯುತ್ ಚಾಲಿತ ಹಾಗೂ ಮ್ಯಾನುವೆಲ್ ನಿರ್ವಹಣೆಯ ಗೇಟ್ ಅಳವಡಿಸುವ ತಂತ್ರಜ್ಞಾನ ಇಲ್ಲಿ ಅನುಷ್ಠಾನಿಸಲಾಗುತ್ತಿದೆ.

ಮೂರು ತಿಂಗಳ ಹಿಂದೆಯಷ್ಟೇ ಸಚಿವ ಮಾಧುಸ್ವಾಮಿ ಅವರು ಸೇತುವೆ ನಿರ್ಮಾಣಕ್ಕೆ ಶಿಲಾನ್ಯಾಸ ನೆರವೇರಿಸಿದ್ದು, 2022 ಮಾರ್ಚ್ ಒಳಗಾಗಿ ಕಾಮಗಾರಿ ಪೂರ್ಣಗೊಳ್ಳುವ ನಿರೀಕ್ಷೆ ಇದೆ.

**ರೂ.46.70 ಕೋಟಿ ವೆಚ್ಚದ ಯೋಜನೆ:** ಪಶ್ಚಿಮವಾಹಿನಿ ಯೋಜನೆಯಡಿ ಸಣ್ಣ ನೀರಾವರಿ ಇಲಾಖೆ ಮೂಲಕ ರೂ.46.70 ಕೋಟಿ ವೆಚ್ಚದಲ್ಲಿ ಪುತ್ತೂರು ಮತ್ತು ಬೆಳ್ತಂಗಡಿ ತಾಲ್ಲೂಕು ಬೆಸೆಯುವ ಸೇತುವೆ ಹಾಗೂ ಕೃಷಿ ಭೂಮಿಗೆ ನೀರೋದಗಿಸುವ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಗೆ ಚಾಲನೆ ನೀಡಲಾಗಿತ್ತು. ಪುತ್ತೂರು ವಿಧಾನಸಭಾ ಕ್ಷೇತ್ರದ ಬಿಳಿಯೂರಿನಿಂದ ಬೆಳ್ತಂಗಡಿ ತಾಲ್ಲೂಕಿನ ತೆಕ್ಕಾರೆಗೆ ಸಂಪರ್ಕ ಕಲ್ಪಿಸುವ ಸೇತುವೆ ಇದಾಗಿದೆ. ರಾಷ್ಟ್ರೀಯ ಹೆದ್ದಾರಿಯ ಪೆರ್ನೆಯಿಂದ ಬೆಳ್ತಂಗಡಿ ಗಡಿಯ ಬಾಜಲ್‌ಗೆ ಸಂಪರ್ಕ ಕಲ್ಪಿಸಲಿದೆ. ಇದರಿಂದ ಬಂಟ್ವಾಳ, ಪುಂಜಾಲಕಟ್ಟೆ, ಬೆಳ್ತಂಗಡಿಯ ಕೆಲವು ಪ್ರದೇಶಗಳಿಗೆ ಸಂಚಾರ ಹತ್ತಿರವಾಗಲಿದ್ದು, ಅನಗತ್ಯ ಸುತ್ತಾಟ ತಪ್ಪಲಿದೆ.

ಆಧಾರ:ವಿಶ್ವವಾಣಿ ದಿನಾಂಕ:10.03.2021

## 6. ಭದ್ರಾ ಯೋಜನೆಗೆ ಈಗ ರಾಷ್ಟ್ರೀಯ ಸ್ಥಾನಮಾನ

ದಶಕದ ಬೇಡಿಕೆ ಕೊನೆಗೂ ಈಡೇರಿದ್ದು, ಕೇಂದ್ರ ಹೂಡಿಕೆ ಸಮಿತಿಯು ಭದ್ರಾ ಮೇಲ್ದಂಡೆ ಯೋಜನೆಗೆ ರಾಷ್ಟ್ರೀಯ ಯೋಜನೆಯ ಸ್ಥಾನಮಾನ ನೀಡಿ ಅನುಮೋದಿಸಿದೆ.

ರಾಷ್ಟ್ರೀಯ ಸ್ಥಾನಮಾನ ಪಡೆದ ರಾಜ್ಯದ ಮೊದಲ ಯೋಜನೆ ಎಂಬ ಹೆಗ್ಗಳಿಕೆಗೆ ಈ ಭದ್ರಾ ಮೇಲ್ದಂಡೆ ಯೋಜನೆ ಪಾತ್ರವಾಗಿದ್ದು, ಯೋಜನೆಯಿಂದ ಚಿತ್ರದುರ್ಗ, ದಾವಣಗೆರೆ, ತುಮಕೂರು, ಚಿಕ್ಕಮಗಳೂರು ಜಿಲ್ಲೆಗೆ ಅನುಕೂಲವಾಗಲಿದೆ. ಯೋಜನೆಗೆ ರೂ.21,450 ಕೋಟಿ ವೆಚ್ಚವಾಗಲಿದೆ ಎಂದು ಅಂದಾಜಿಸಲಾಗಿದೆ. ಈ ಪೈಕಿ ರೂ.16,125 ಕೋಟಿಗಳನ್ನು ಕೇಂದ್ರ ಸರ್ಕಾರವು ನೀಡಲಿದೆ.

ಹೂಡಿಕೆ ಸಮಿತಿಯ ನಿರ್ಧಾರಕ್ಕೆ ಮುಖ್ಯಮಂತ್ರಿಯವರು ಹರ್ಷ ವ್ಯಕ್ತಪಡಿಸಿದ್ದು, ತಮ್ಮ ಮನವಿಗೆ ಸ್ಪಂದಿಸಿ ಯೋಜನೆಗೆ ಅನುಮೋದನೆ ದೊರಕಿಸಿಕೊಟ್ಟ ಕೇಂದ್ರ ಜಲಶಕ್ತಿ ಸಚಿವ ಗಜೇಂದ್ರ ಸಿಂಗ್ ಶೇಖಾವತ್ ಅವರಿಗೆ ನಾಡಿನ ಜನರ ಪರವಾಗಿ ಅಭಿನಂದನೆ ಸಲ್ಲಿಸಿದ್ದಾರೆ.

ಈ ನಿರ್ಧಾರದಿಂದ ಹಿಂದೆ ಜಲಸಂಪನ್ಮೂಲ ಸಚಿವರಾಗದ್ದ ರಮೇಶ್ ಜಾರಕಿಹೊಳಿ ಅವರ ಪರಿಶ್ರಮವು ಸಾಕಷ್ಟಿದೆ. ಇದಕ್ಕಾಗಿ ಜಾರಕಿಹೊಳಿ ಅವರು ಹಲವು ಬಾರಿ ದೆಹಲಿಗೆ ತೆರಳಿ ಕೇಂದ್ರ ಸಚಿವರನ್ನು ಭೇಟಿ ಮಾಡಿ ಒತ್ತಡ ಹೇರುವ ಪ್ರಯತ್ನ ಮಾಡಿದ್ದರು. ಭದ್ರಾ ಮೇಲ್ದಂಡೆ ಯೋಜನೆಯನ್ನು ಚಿತ್ರದುರ್ಗ, ದಾವಣಗೆರೆ, ತುಮಕೂರು ಮತ್ತು ಚಿಕ್ಕಮಗಳೂರಿನ ಕೆಲವು ಭಾಗಗಳನ್ನು 2.25 ಲಕ್ಷ ಹೆಕ್ಟೇರ್ ನೀರಾವರಿ ಮಾಡಲು ವಿನ್ಯಾಸಗೊಳಿಸಲಾಗಿದೆ. ಹನಿ ನೀರಾವರಿ ಅಡಿಯಲ್ಲಿ 2 ಲಕ್ಷ ಹೆಕ್ಟೇರ್ ಪ್ರದೇಶವನ್ನೊಳಗೊಂಡ ಯೋಜನೆಗಳು ಮಾತ್ರ ರಾಷ್ಟ್ರೀಯ ಯೋಜನೆಯ ಸ್ಥಾನಮಾನವನ್ನು ಪಡೆಯುತ್ತವೆ. ಈ ಮೂಲಕ ಕೇಂದ್ರದಿಂದ ಹಣವನ್ನು ಪಡೆಯಲು ಅರ್ಹತೆ ಪಡೆಯುತ್ತವೆ.

ರಾಷ್ಟ್ರೀಯ ಯೋಜನೆಯ ಸ್ಥಾನಮಾನ ಬಯಸಿದ ಬಳಿಕ ವಿವಿಧ ಇಲಾಖೆಗಳಿಂದ ಅನುಮೋದನೆ ಪಡೆಯುವ ಕೆಲಸ ನಡೆಯಿತು. 12 ಇಲಾಖೆಗಳಿಂದ ನಿರಾಕ್ಷೇಪಣಾ ಪ್ರಮಾಣ ಪತ್ರ

ಕಡ್ಡಾಯವಾಗಿದ್ದು, ಕಳೆದ ಎರಡು ವರ್ಷದಲ್ಲಿ ಎಂಟು ಇಲಾಖೆಗಳಿಂದ ಎನ್‌ಓಸಿ ಪಡೆಯಲಾಗಿದೆ. ಈ ಮೊದಲು ನಾಲ್ಕು ಇಲಾಖೆಗಳಿಂದ ಎನ್‌ಓಸಿ ಪಡೆಯಲಾಗಿತ್ತು.

2003ರಲ್ಲಿ ಆಡಳಿತಾತ್ಮಕ ಅನುಮೋದನೆಯನ್ನು ಪಡೆಯಲಾಯಿತು. ಭೂಸ್ವಾಧೀನ ಸಮಸ್ಯೆಗಳು, ಅರಣ್ಯ ಇಲಾಖೆ ಅನುಮತಿ ಪಡೆದುಕೊಳ್ಳುವಲ್ಲಿ ವಿಳಂಬ, ವೆಚ್ಚ ಹೆಚ್ಚಳ ಸೇರಿದಂತೆ ಇತರೆ ಕಾರಣಗಳಿಂದಾಗಿ ತಡವಾಯಿತು. ಪ್ರಸ್ತುತ ಒಟ್ಟಾರೆ ಕೆಲಸದಲ್ಲಿ ಕೇವಲ ಶೇ.16ರಷ್ಟು ಮಾತ್ರ ಪೂರ್ಣಗೊಂಡಿದೆ. ಯೋಜನೆಯು ಸುಮಾರು ಮೂರು ವರ್ಷದಲ್ಲಿ ಪೂರ್ಣಗೊಳ್ಳುವ ಸಾಧ್ಯತೆ ಇದೆ ಎಂದು ನಿರೀಕ್ಷಿಸಲಾಗಿದೆ.

**ಏನಿದು ಯೋಜನೆ:** ಭದ್ರಾ ಜಲಾಶಯದಿಂದ ಬಯಲುಸೀಮೆಗೆ ನೀರಾವರಿ ಸೌಲಭ್ಯ ಕಲ್ಪಿಸುವುದು ಯೋಜನೆಯ ಉದ್ದೇಶವಾಗಿದೆ. ತುಂಗಾ ಜಲಾಶಯದ ನೀರನ್ನು ತರೀಕೆರೆ ತಾಲ್ಲೂಕಿನ ಲಕ್ಕವಳ್ಳಿ ಸಮೀಪದ ಭದ್ರಾ ಜಲಾಶಯಕ್ಕೆ ಹರಿಸಲಾಗುತ್ತದೆ. ಅಲ್ಲಿಂದ ನಾಲೆಯ ಮೂಲಕ ಚಿತ್ರದುರ್ಗ, ಚಿಕ್ಕಮಗಳೂರು, ತುಮಕೂರು ಮತ್ತು ದಾವಣಗೆರೆ ಜಿಲ್ಲೆಗೆ ನೀರು ಉಣಿಸುವುದು ಯೋಜನೆಯ ಉದ್ದೇಶ. ಹನಿ ನೀರಾವರಿ ಮೂಲಕ ನೀರು ಒದಗಿಸುವ ರಾಜ್ಯದ ಬಹುದೊಡ್ಡ ನೀರಾವರಿ ಯೋಜನೆ ಇದಾಗಿದೆ. ಯಾವುದೇ ಅಣೆಕಟ್ಟು ನಿರ್ಮಿಸದೆ ಭಾರೀ ಪ್ರಮಾಣದ ನೀರು ಹಂಚಿಕೆ ಮಾಡಿ ರೂಪಿಸಿದ ಯೋಜನೆ ಇದಾಗಿದೆ.

ಭದ್ರಾ ಜಲಾಶಯದ ನೀರನ್ನು ಚಿತ್ರದುರ್ಗಕ್ಕೆ ಹರಿಸಬೇಕು ಎಂಬುದು ದಶಕಗಳ ಕನಸು. ಮಾಜಿ ಮುಖ್ಯಮಂತ್ರಿ ಎಸ್.ನಿಜಲಿಂಗಪ್ಪ ಅವರ ಕಾಲದಿಂದಲೂ ಈ ಪ್ರಯತ್ನ ನಡೆಯುತ್ತಲೇ ಇತ್ತು. ಎರಡೂವರೆ ದಶಕದಿಂದೀಚೆಗೆ ಹೋರಾಟದ ರೂಪು ಪಡೆದುಕೊಂಡಿತು. ನೀರಾವರಿ ತಜ್ಞ ಕೆ.ಸಿ.ರೆಡ್ಡಿ ಅಧ್ಯಕ್ಷತೆಯಲ್ಲಿ ರಚನೆಗೊಂಡ ಸಮಿತಿ ಅಧ್ಯಯನ ನಡೆಸಿ ಸರ್ಕಾರಕ್ಕೆ ವರದಿ ಸಲ್ಲಿಸಿತ್ತು. ಇದಕ್ಕೆ ಒಪ್ಪಿಗೆ ಸೂಚಿಸಿದ ರಾಜ್ಯ ಸರ್ಕಾರ 2008ರಲ್ಲಿ ಭದ್ರಾ ಮೇಲ್ದಂಡೆ ಯೋಜನೆಗೆ ಚಾಲನೆ ನೀಡಿತು.

ಆಧಾರ:ಕನ್ನಡಪ್ರಭ, ದಿನಾಂಕ:26.03.2021

## 7. ರೈತರು, ಹೋರಾಟಗಾರರಲ್ಲಿ ಹರ್ಷ

ಬಯಲುಸೀಮೆಯ ಜಿಲ್ಲೆಗಳಿಗೆ ನೀರುಣಿಸುವ ಭದ್ರಾ ಮೇಲ್ದಂಡೆ ಯೋಜನೆಗೆ ರಾಷ್ಟ್ರೀಯ ಮಾನ್ಯತೆ ಸಿಕ್ಕಿದ್ದು, ಕೇಂದ್ರದಿಂದ ರೂ.16,125 ಕೋಟಿ ನೆರವು ಸಿಗಲಿದೆ.

ಈ ವಿಚಾರವನ್ನು ತಿಳಿಸಿರುವ ಮುಖ್ಯಮಂತ್ರಿ ಅವರು ರಾಷ್ಟ್ರೀಯ ಮುದ್ರೆ ಒತ್ತಿದ ಪ್ರಧಾನಿ ನರೇಂದ್ರ ಮೋದಿ ಹಾಗೂ ಜಲಶಕ್ತಿ ಸಚಿವ ಗಜೇಂದ್ರ ಸಿಂಗ್ ಶೆಖಾವತ್‌ರನ್ನು ಅಭಿನಂದಿಸಿದ್ದಾರೆ. ರಾಷ್ಟ್ರೀಯ ಯೋಜನೆ ಮಾನ್ಯತೆ ನೀಡಿದ್ದಕ್ಕಾಗಿ ಪ್ರಧಾನಿ ನರೇಂದ್ರ ಮೋದಿ ಹಾಗೂ ಸಿಎಂ ಬಿ.ಎಸ್. ಯಡಿಯೂರಪ್ಪರನ್ನು ಸಂಸದ ಎ.ನಾರಾಯಣಸ್ವಾಮಿ ಅಭಿನಂದಿಸಿದ್ದಾರೆ.

**ಜನತೆಯ ಹೋರಾಟಕ್ಕೆ ಗೆಲುವು:** ಭದ್ರಾಮೇಲ್ದಂಡೆ ಯೋಜನೆಗೆ ರಾಷ್ಟ್ರೀಯ ಮಾನ್ಯತೆ ಸಿಕ್ಕಿರುವುದು ಯೋಜನೆ ಜಾರಿಗಾಗಿ ದಶಕಗಳ ಕಾಲ ಜಿಲ್ಲೆಯ ಜನರು ನಡೆಸಿದ ಹೋರಾಟಕ್ಕೆ ಸಿಕ್ಕ ಗೆಲುವು ಆಗಿದೆ. ಎಂದು ಭದ್ರಾ ಮೇಲ್ದಂಡೆ ಹೋರಾಟ ಸಮಿತಿ ಅಭಿಪ್ರಾಯಪಟ್ಟಿದೆ.

ರಾಷ್ಟ್ರೀಯ ಯೋಜನೆ ಮನ್ನಣೆಯಿಂದಾಗಿ ಯೋಜನೆಗೆ ಹಣದ ಕೊರತೆ ನೀಗುವ ಜೊತೆಗೆ ಕಾಮಗಾರಿ ವೇಗ ಪಡೆದುಕೊಳ್ಳಲಿದೆ. ಈ ನಿಟ್ಟಿನಲ್ಲಿ ಶ್ರಮಿಸಿದ ಮಠಾಧೀಶರು, ಜನಪ್ರತಿನಿಧಿಗಳು, ಸರ್ಕಾರಗಳು, ಪಕ್ಷಗಳ ಮುಖಂಡರು, ಪ್ರತಿನಿಧಿಗಳು, ಜಿಲ್ಲೆಯ ಎಲ್ಲ ಸಂಘಟನೆಗಳ ಪದಾಧಿಕಾರಿಗಳು, ಕಾರ್ಯಕರ್ತರ ಶ್ರಮ ಸ್ಮರಣೀಯ ಎಂದು ಸಂಚಾಲನಾ ಸಮಿತಿ ಅಭಿಪ್ರಾಯಪಟ್ಟಿದೆ.

**ನಾಲ್ಕು ಜಿಲ್ಲೆಗಳಿಗೆ ಅನುಕೂಲ:** ಭದ್ರ ಮೇಲ್ದಂಡೆ ಯೋಜನೆಗೆ ಕೇಂದ್ರ ನೆರವು ನೀಡಿರುವುದರಿಂದ ದಾವಣಗೆರೆ, ಚಿತ್ರದುರ್ಗ, ತುಮಕೂರು, ಚಿಕ್ಕಮಗಳೂರು ಜಿಲ್ಲೆಯ ರೈತರಿಗೆ ಅನುಕೂಲವಾಗಲಿದೆ.

**ಯೋಜನೆಯ ಉದ್ದೇಶಗಳು:**

- ಏತ ನೀರಾವರಿ ಮೂಲಕ ತರೀಕೆರೆ ತಾಲ್ಲೂಕಿನ 20,150 ಹೆಕ್ಟೇರ್‌ಗಳಿಗೆ ಹನಿ ನೀರಾವರಿ ಹಾಗೂ 79 ಕೆರೆಗಳಿಗೆ ನೀರು ತುಂಬಿಸುವುದು.
- ಚಿತ್ರದುರ್ಗ ಶಾಖಾ ಕಾಲುವೆ ಮುಖಾಂತರ ಚಿಕ್ಕಮಗಳೂರು, ಚಿತ್ರದುರ್ಗ ಜಿಲ್ಲೆಯಲ್ಲಿ ಹನಿ ನೀರಾವರಿ ಮೂಲಕ 1,07,265 ಹೆಕ್ಟೇರ್ ಪ್ರದೇಶಕ್ಕೆ, 36 ಕೆರೆಗಳಿಗೆ ನೀರು.
- ತುಮಕೂರು ಶಾಖಾ ಕಾಲುವೆ ಮೂಲಕ ಚಿಕ್ಕಮಗಳೂರು, ಚಿತ್ರದುರ್ಗ ಮತ್ತು ತುಮಕೂರು ಜಿಲ್ಲೆಗಳಲ್ಲಿ 84,900 ಹೆಕ್ಟೇರ್‌ಗೆ ನೀರಾವರಿ ಕಲ್ಪಿಸಿ, 8 ಕೆರೆಗಳಿಗೆ ನೀರುಣಿಸುವುದು.
- ಜಗಳೂರು ಕಾಲುವೆ ಮೂಲಕ ದಾವಣಗೆರೆಯ ಜಗಳೂರು ಮತ್ತು ಚಿತ್ರದುರ್ಗ ತಾಲ್ಲೂಕಿನ ಒಟ್ಟು 13,200 ಹೆಕ್ಟೇರ್‌ಗೆ ಹನಿ ನೀರಾವರಿ, 131 ಕೆರೆ ತುಂಬಿಸುವುದು.
- ಹೊಳಲ್ಕೆರೆ ತಾಲ್ಲೂಕಿನಲ್ಲಿ ಬರುವ 21 ಕೆರೆಗಳು, ಚಳ್ಳಕೆರೆ ತಾಲ್ಲೂಕಿನಲ್ಲಿ ಬರುವ 42 ಕೆರೆಗಳು, ಮೊಳಕಾಲ್ಮೂರು ತಾಲ್ಲೂಕಿನ 20 ಕೆರೆಗಳಿಗೆ ನೀರು ತುಂಬಿಸುವುದು.
- ಪಾವಗಡ ತಾಲ್ಲೂಕಿನ 30 ಕೆರೆಗಳಿಗೆ ನೀರು ತುಂಬಿಸುವುದು.
- ವಾಣಿ ವಿಲಾಸ ಸಾಗರದ ಜಲಾಶಯಕ್ಕೆ ತುಮಕೂರು ಶಾಖಾ ಕಾಲುವೆ ಮುಖಾಂತರ 2.00 ಟಿಎಂಸಿ ನೀರನ್ನು ಹರಿಸುವುದು.

ಆಧಾರ: ವಿಜಯ ಕರ್ನಾಟಕ, ದಿನಾಂಕ:27.03.2021.

## 8. ಒಡೆದ 'ಕಾವೇರಿ ಕುಟುಂಬ' ಚಾರಿತ್ರಿಕ ಸೋಲು

ಕಾವೇರಿ ನೀರು ಹಂಚಿಕೆ ವಿವಾದಕ್ಕೆ ರೈತರಿಂದಲೇ ಪರಿಹಾರ ಕಂಡುಕೊಳ್ಳುವ ಉದ್ದೇಶದಿಂದ ರಚನೆಯಾದ 'ಕಾವೇರಿ ಕುಟುಂಬ' ದ ಹೆಜ್ಜೆ ಅಂತರರಾಷ್ಟ್ರೀಯ ಮಟ್ಟದಲ್ಲಿ ಗಮನ ಸೆಳೆದಿತ್ತು. ಇದು ವಿಶ್ವದ ಪ್ರಥಮ ಪ್ರಯೋಗವಾಗಿದ್ದು ಫಲಿತಾಂಶಕ್ಕೆ ಕಾಯುತ್ತಿರುವುದಾಗಿ ವರ್ಲ್ಡ್ ವಾಟರ್ ಫೋರಂ (ಡಬ್ಲ್ಯು ಡಬ್ಲ್ಯು ಎಫ್) ಹೇಳಿತ್ತು.

ವಿಶ್ವಸಂಸ್ಥೆ ಕೂಡ ಕಾವೇರಿ ಕುಟುಂಬದ ಯತ್ನವನ್ನು ಶ್ಲಾಘಿಸಿತ್ತು. ವಿಶ್ವಸಂಸ್ಥೆಯ ಅಂಗ ಸಂಸ್ಥೆಯಾಗಿರುವ ಯುನೈಟೆಡ್ ನೇಷನ್ ಡೆವೆಲಪ್‌ಮೆಂಟ್ ಪ್ರೋಗ್ರಾಂ (ಯುಎನ್‌ಡಿಪಿ) ನಡಾವಳಿಯಲ್ಲಿ ಕುಟುಂಬದ ಪ್ರಯತ್ನವನ್ನು ದಾಖಲಿಸಲಾಗಿತ್ತು. ನೈಲ್ ನದಿ ಅಚ್ಚುಕಟ್ಟಿನ 9 ದೇಶಗಳ ನಡುವೆ ವಿವಾದವಿದ್ದು ಆ ಎಲ್ಲಾ ದೇಶಗಳ ಪ್ರತಿನಿಧಿಗಳು ಕಾವೇರಿ ಕುಟುಂಬ ಕೈಗೊಳ್ಳಲಿರುವ ಪರಿಹಾರ ಸೂತ್ರವನ್ನು ಕಾತುರದಿಂದ ಕಾಯುತ್ತಿದ್ದವು.

ಕಾವೇರಿ ಕುಟುಂಬ ಕೈಗೊಳ್ಳುವ ನಿರ್ಧಾರಕ್ಕೆ ಬೆಂಬಲವಿದೆ ಎಂದು ಕರ್ನಾಟಕ ಸರ್ಕಾರ ಘೋಷಿಸಿತ್ತು. ರೈತಸಂಘ, ಇತರ ಸಂಘಟನೆಗಳು ಕುಟುಂಬ ಪ್ರತಿನಿಧಿಗಳಿಗೆ ಬೆನ್ನೆಲುಬಾಗಿ ನಿಂತಿದ್ದವು. ಆದರೆ ಇಂಥದ್ದೊಂದು ಬದ್ಧತೆ ತಮಿಳುನಾಡು ಕಡೆಯಿಂದ ಕಂಡುಬರಲಿಲ್ಲ. ನಿರ್ಧಾರಗಳಿಗೆ ಬದ್ಧರಾಗಲಿಲ್ಲ, ಸಭೆಯ ನಡಾವಳಿಯನ್ನೇ ಧಿಕ್ಕರಿಸಿದರು. ಕಾವೇರಿ ಕುಟುಂಬ ಒಡೆದ ಮನೆಯಾಯಿತು. ಕಡೆಗೆ ವಿಶ್ವದ ಹಲವು ರಾಷ್ಟ್ರಗಳ ಶುಭ ಸುದ್ದಿಯ ನಿರೀಕ್ಷೆ ಕೈಗೂಡಲಿಲ್ಲ, ಇತಿಹಾಸ ನಿರ್ಮಾಣವಾಗಲಿಲ್ಲ. ಈ ವೈಫಲ್ಯವನ್ನು ಹೋರಾಟಗಾರರು ಇತಿಹಾಸದ ಸೋಲು ಎಂದೇ ಬಣ್ಣಿಸುತ್ತಾರೆ.

ಕಾವೇರಿ ನ್ಯಾಯಮಂಡಳಿ 1991ರಲ್ಲಿ ಮಧ್ಯಂತರ ತೀರ್ಪು ಪ್ರಕಟಿಸಿದ ನಂತರ ಕರ್ನಾಟಕ–ತಮಿಳುನಾಡು ನಡುವೆ ಸಂಘರ್ಷ ತೀವ್ರ ಸ್ವರೂಪ ಪಡೆಯಿತು. ಎಸ್.ಬಂಗಾರಪ್ಪ ಮುಖ್ಯಮಂತ್ರಿಯಾಗಿದ್ದ

ವೇಳೆ ಸರ್ಕಾರಿ ಪ್ರಾಯೋಜಿತ ಬಂದ್ ಆಚರಣೆಯಿಂದಾಗಿ 'ತಮಿಳರ ವಿರುದ್ಧ ಕನ್ನಡಿಗರ ಹೋರಾಟ' ಆರಂಭವಾಗಿತ್ತು.

ಹೋರಾಟದ ಸ್ವರೂಪ ಗಮನಿಸಿದ ಎರಡೂ ರಾಜ್ಯಗಳ ಸಮಾನ ಮನಸ್ಕರು ಸ್ನೇಹಯುತವಾಗಿ ವಿವಾದ ಬಗೆಹರಿಸಿಕೊಳ್ಳುವ ಕುರಿತು ಚರ್ಚೆ ನಡೆಸಿದರು. ತಮಿಳುನಾಡಿನ ಪ್ರೊ.ಜನಕರಾಜನ್ ಪ್ರಸ್ತಾವಕ್ಕೆ ಕರ್ನಾಟಕದ ನೀರಾವರಿ ತಜ್ಞರು, ಪರಿಸರ ಪ್ರೇಮಿಗಳು, ಚಿಂತಕರು ಒಪ್ಪಿದರು. ಕೇರಳ, ಪುದುಚೇರಿ ತಜ್ಞರನ್ನು ಸೇರಿಸಿಕೊಳ್ಳಲಾಯಿತು. 2000ದಲ್ಲಿ ತಮಿಳುನಾಡಿನ ಮದ್ರಾಸ್ ಅಭಿವೃದ್ಧಿ ಅಧ್ಯಯನ ಸಂಸ್ಥೆಯಲ್ಲಿ (ಎಂಐಡಿಎಸ್) ಮೊದಲ ಪೂರ್ವಭಾವಿ ಸಭೆ ನಡೆಯಿತು ಬೆಂಗಳೂರಿನ ಭಾರತೀಯ ವಿಜ್ಞಾನ ಸಂಸ್ಥೆಯಲ್ಲಿ (ಐಐಎಸ್‌ಸಿ) 2ನೇ ಪೂರ್ವಭಾವಿ ಸಭೆ ನಡೆಯಿತು.

ಬೆಂಗಳೂರಿನ ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಅಡ್ವಾನ್ಸ್‌ಡ್ ಸ್ಟಡೀಸ್ ವೇದಿಕೆಯಲ್ಲಿ 'ಕಾವೇರಿ ಕುಟುಂಬ' ಕ್ಕೆ ಅಂತಿಮ ರೂಪ ನೀಡಲಾಯಿತು. ಪ್ರಾಧ್ಯಾಪಕ ಪ್ರೊ.ಕೆ.ಸಿ.ಬಸವರಾಜು ಕರ್ನಾಟಕ ಕುಟುಂಬದ ಮುಖ್ಯಸ್ಥರಾಗಿ, ಪ್ರೊ.ರಂಗನಾಥನ್ ತಮಿಳುನಾಡು ಕುಟುಂಬದ ಮುಖ್ಯಸ್ಥರಾಗಿ ಆಯ್ಕೆಯಾದರು. ತಲಾ 14 ಮಂದಿ ರೈತ ಮುಖಂಡರು ಕಾವೇರಿ ಕುಟುಂಬದ ಪ್ರತಿನಿಧಿಗಳಾಗಿ ಸೇರಿದರು. 2003ರಲ್ಲಿ ಅಧಿಕೃತವಾಗಿ ಕಾವೇರಿ ಕುಟುಂಬ ಕಾರ್ಯ ಚಟುವಟಿಕೆ ಆರಂಭಿಸಿತು.

ಒಂದು ಸಭೆ ತಮಿಳುನಾಡಿನ ತಿರುಚನಾಪಳ್ಳಿಯಲ್ಲಿ ನಡೆದರೆ ಮತ್ತೊಂದು ಸಭೆ ಬೆಂಗಳೂರು ಕೃಷಿ ವಿಶ್ವವಿದ್ಯಾಲಯದ ಮಂಗಳಾ ಸಭಾಂಗಣದಲ್ಲಿ ನಡೆಯುತ್ತಿತ್ತು. ಒಟ್ಟು ಏಳು ಸಭೆ ನಡೆದವು. ಸರ್ಕಾರದಿಂದ ಒಂದು ಪೈಸೆ ಹಣ ಪಡೆಯದೇ ರೈತ ಮುಖಂಡರು ಸಭೆ ಆಯೋಜಿಸುತ್ತಿದ್ದರು.

**ಪರಿಹಾರ ಸೂತ್ರವೇನು:** ನದಿ ಕಣಿವೆಯ ಕೆಳಭಾಗದಲ್ಲಿ ದೊರೆಯುವ ಅಂತರ್ಜಲ ಪ್ರಮಾಣವನ್ನು ಹಲವು ಸಂಸ್ಥೆಗಳು ಗುರುತಿಸಿವೆ. ಕಾವೇರಿ ನ್ಯಾಯಮಂಡಳಿ ಕೂಡ 29 ಟಿಎಂಸಿ ಅಡಿ ಅಂತರ್ಜಲ ಪ್ರಮಾಣವನ್ನು ಗುರುತಿಸಿದೆ. ಆದರೆ ಇದನ್ನು ತಮಿಳುನಾಡು ತಿರಸ್ಕರಿಸುತ್ತಲೇ ಬಂದಿದ್ದು ಒಟ್ಟಾರೆ ನೀರಿನ ಲಭ್ಯತೆಯ ಪ್ರಮಾಣಕ್ಕೆ ಸೇರಿಸಿಕೊಳ್ಳಲು ಈವರೆಗೂ ಸಾಧ್ಯವಾಗಿಲ್ಲ.

ಅಂತರ್ಜಲದ ಲಭ್ಯತೆಯನ್ನು ತಮಿಳುನಾಡು ಕುಟುಂಬದ ಸದಸ್ಯರು ಒಪ್ಪಿಕೊಳ್ಳುವಂತೆ ಮಾಡಲು ಕರ್ನಾಟಕ ಕುಟುಂಬ ಸದಸ್ಯರು ಯಶಸ್ವಿಯಾಗಿದ್ದರು. ಹೀಗಾಗಿ ಕಾವೇರಿ ಅಚ್ಚುಕಟ್ಟಿನಲ್ಲಿ ದೊರೆಯುವ ಒಟ್ಟು ನೀರಿನ ಲಭ್ಯತೆಯಲ್ಲಿ (740 ಟಿಎಂಸಿಅಡಿ) 10ಟಿಎಂಸಿ ಅಡಿ ಕರ್ನಾಟಕಕ್ಕೆ ಹೆಚ್ಚುವರಿಯಾಗಿ ಕೊಡಲು ತಮಿಳುನಾಡು ಸದಸ್ಯರು ಒಪ್ಪಿದರು.

ಬೆಂಗಳೂರಿನ ಜನರ ಕುಡಿಯುವ ನೀರಿಗಾಗಿ 10ಟಿಎಂಸಿ ಅಡಿ ಹೆಚ್ಚುವರಿ ಕೊಡುವಂತೆ ಒತ್ತಾಯ ಮಾಡಲಾಗಿತ್ತು. 5 ಟಿಎಂಸಿ ಅಡಿ ಬೆಂಗಳೂರಿಗೆ ಸಿಕ್ಕೇ ಸಿಗುತ್ತದೆ. ಎಂಬ ವಿಶ್ವಾಸ ಕರ್ನಾಟಕದ ಪ್ರತಿನಿಧಿಗಳಿಗಿತ್ತು. ನಂತರ ಕಾವೇರಿ ಕುಟುಂಬದ ತೀರ್ಮಾನವನ್ನೂ ನಾಲ್ಕೂ ರಾಜ್ಯಗಳ ಮುಖ್ಯಮಂತ್ರಿಗಳ ಮುಂದೆ ಮಂಡಿಸುವ ಮಾತುಕತೆಯೂ ನಡೆದಿತ್ತು.

ಈ ವೇಳೆ 2007 ರಲ್ಲಿ ಕಾವೇರಿ ನ್ಯಾಯಮಂಡಳಿ ಅಂತಿಮ ತೀರ್ಪು ಪ್ರಕಟಿಸಿತು. ಜೊತೆಗೆ ತಮಿಳುನಾಡು ರೈತರು ಕಾವೇರಿ ಕುಟುಂಬದ ಚಟುವಟಿಕೆಯಿಂದ ದೂರ ಉಳಿದರು. ತಮಿಳುನಾಡು, ಕರ್ನಾಟಕ ಸರ್ಕಾರಗಳು ನ್ಯಾಯಮಂಡಳಿಯ ತೀರ್ಪಿನ ವಿರುದ್ಧ ಸುಪ್ರೀಂಕೋರ್ಟ್‌ನಲ್ಲಿ ಅರ್ಜಿ ಸಲ್ಲಿಸಿದ ನಂತರ ಕಾವೇರಿ ಕುಟುಂಬ ಒಡೆದು ಹೋಯಿತು.

**'ಮೇಕೆದಾಟು ಸಾಕಾರ ಹಲವು ಸಮಸ್ಯೆಗಳಿಗೆ ಪರಿಹಾರ'**

ಸಿದ್ದರಾಮಯ್ಯ ಮುಖ್ಯಮಂತ್ರಿಯಾಗಿದ್ದಾಗ ಕಾನೂನು ಹಾಗೂ ಸಂಸದೀಯ ವ್ಯವಹಾರಗಳ ಸಚಿವರಾಗಿದ್ದ ಹಾಗೂ ಟಿ.ಬಿ.ಜಯಚಂದ್ರ ಅವರು ಮೇಕೆದಾಟು ಬಳಿ ಕಾವೇರಿ ನದಿಗೆ ಅಡ್ಡಲಾಗಿ ಅಣೆಕಟ್ಟು ನಿರ್ಮಾಣಕ್ಕೆ ಪ್ರಯತ್ನ ನಡೆಸಿದ್ದರು. ಕಾನೂನು ತೊಡಕುಗಳನ್ನು ನಿವಾರಿಸಿ ವಿಸ್ತೃತ ಯೋಜನಾ ವರದಿ (ಡಿಪಿಆರ್) ಸಿದ್ದಪಡಿಸಲು ಜಲಸಂಪನ್ಮೂಲ ಇಲಾಖೆಗೆ ನಿರ್ದೇಶನ ಕೊಡಿಸಿದ್ದರು. ಮೇಕೆದಾಟು ಮತ್ತು ನದಿ ಜೋಡಣೆ ಯೋಜನೆಗಳ ಬಗ್ಗೆ ತಮ್ಮ ಅಭಿಪ್ರಾಯವನ್ನು ಸಂದರ್ಶನದಲ್ಲಿ ಬಿಚ್ಚಿಟ್ಟಿದ್ದಾರೆ.

**ಕಾವೇರಿಯ 'ಹೆಚ್ಚುವರಿ' ನೀರನ್ನು ವೈಗೈ ಗುಂಡಾರ್ ನದಿಗಳಿಗೆ ಹರಿಸುವ ತಮಿಳುನಾಡಿನ ಯೋಜನೆಯು ಕರ್ನಾಟಕ–ತಮಿಳುನಾಡು ಮಧ್ಯೆ ಮತ್ತೆ ಜಲ ವಿವಾದಕ್ಕೆ ನಾಂದಿ ಹಾಡಿದೆಯಲ್ಲ**

ಈಗಾಗಲೇ ವಿವಾದ ಹುಟ್ಟು ಹಾಕಿದೆ. ಈ ವಿಚಾರ ಬಂದಾಗಲೆಲ್ಲ ಎರಡೂ ರಾಜ್ಯಗಳ ನಡುವೆ ಸಂಘರ್ಷ ಆರಂಭವಾಗುತ್ತದೆ. ಕಾವೇರಿ ನೀರನ್ನು ನಾವು ಸಮರ್ಪಕವಾಗಿ ಬಳಕೆ ಮಾಡಿಕೊಳ್ಳುವಲ್ಲಿ ಸೋತಿರುವುದು ಇಷ್ಟೆಲ್ಲ ಸಮಸ್ಯೆ, ರಾದ್ಧಾಂತಕ್ಕೆ ಕಾರಣವಾಗಿದೆ. ಕಾವೇರಿ ನ್ಯಾಯ ಮಂಡಳಿ ಐತೀರ್ಪು ನಮ್ಮ ಮುಂದಿದೆ. ತಮಿಳುನಾಡಿಗೆ ಹಿಂದೆ 192 ಟಿಎಂಸಿ ಅಡಿ ನೀರು ಬಿಡಬೇಕಿತ್ತು. ನ್ಯಾಯ ಮಂಡಳಿ ತೀರ್ಪಿನಂತೆ ಈಗ 177 ಟಿಎಂಸಿ ಅಡಿ ಹರಿಸಬೇಕಿದೆ. ನಂತರ ನಮಗೆ ಹೆಚ್ಚುವರಿ ನೀರು ಲಭ್ಯವಾಗಿದೆ. ಒಟ್ಟಾರೆಯಾಗಿ ಸಮುದ್ರಕ್ಕೆ ನೀರು ಹರಿದು ಹೋಗುವುದನ್ನು ತಡೆದು, ಬಳಸಿಕೊಳ್ಳಬೇಕಿದೆ. ಇದಕ್ಕೆ ಮೇಕೆದಾಟು ಬಳಿ ಅಣೆಕಟ್ಟೆ ಕಟ್ಟುವುದೊಂದೇ ಪರಿಹಾರ. ಈ ಯೋಜನೆ ಸಾಕಾರಗೊಂಡರೆ ತಮಿಳುನಾಡಿಗೆ ಕಾಲಕಾಲಕ್ಕೆ ನಿಗದಿಪಡಿಸಿದಷ್ಟು ನೀರು ಹರಿಸಬಹುದು. ಇದರಿಂದ ಅವರ ಪಾಲಿನ ನೀರನ್ನಷ್ಟೇ ಬಿಟ್ಟು, ಉಳಿದ ಹೆಚ್ಚುವರಿ ನೀರನ್ನು ರಾಜ್ಯದಲ್ಲಿ ಬಳಸಿಕೊಳ್ಳಬಹುದು. ಜೊತೆಗೆ 500ರಿಂದ 600 ಮೆಗಾವಾಟ್ ವಿದ್ಯುತ್ ಉತ್ಪಾದನೆ ಮಾಡಬಹುದು. ರಾಜಕೀಯ ಇಚ್ಛಾಶಕ್ತಿ ಕೊರತೆಯಿಂದ ಇದು ಕೈಗೂಡಿಲ್ಲ.

**ಮೇಕೆದಾಟು ಯೋಜನೆಗೆ ಕೇಂದ್ರ ಒಪ್ಪಿಗೆ ನೀಡುತ್ತಿಲ್ಲವಲ್ಲ?**

ಹೌದು ರಾಜಕೀಯ ಇಲ್ಲಿ ಕೆಲಸ ಮಾಡುತ್ತಿದೆ. ಪ್ರಸ್ತುತ ತಮಿಳುನಾಡಿನಲ್ಲಿ ವಿಧಾನ ಸಭೆ ಚುನಾವಣೆ ನಡೆಯುತ್ತಿದ್ದು, ನದಿ ಜೋಡಣೆಗೆ ಅವಕಾಶ ಮಾಡಿಕೊಡಲಾಗಿದೆ. ಲೋಕಸಭೆಯಲ್ಲೂ ನೀರಾವರಿ ವಿಚಾರದಲ್ಲಿ ತಮಿಳುನಾಡಿನ ಎಲ್ಲ ಸಂಸದರು ಒಟ್ಟಾಗುತ್ತಾರೆ ಎಂಬ ಭಯ ಪ್ರಧಾನಿ ನರೇಂದ್ರ ಮೋದಿ ಅವರಿಗಿದೆ. ನಮ್ಮಲ್ಲಿ ಬಿಜೆಪಿ ಸಂಸದರಿದ್ದರೂ ಒಟ್ಟಾಗಿ ಪ್ರಧಾನಿ ಬಳಿ ಹೋಗಿ ಯೋಜನೆಗೆ ಒಪ್ಪಿಗೆ ಪಡೆಯುವ ಪ್ರಯತ್ನ ಮಾಡಲಿಲ್ಲ. ಮೇಲಿಂದ ಕೆಳಗಿನ ತನಕ ಒಂದೇ ಸರ್ಕಾರ ಇದ್ದರೆ ಅಭಿವೃದ್ಧಿಯ ಹೊಳೆ ಹರಿಯುತ್ತದೆ ಎಂದು ಸುಳ್ಳು ಹೇಳಿ ಜನರನ್ನು ನಂಬಿಸಿದರು. ಜನ ಬೆಂಬಲಿಸಿದರೂ ಅವರ ಕೆಲಸ ಮಾಡುತ್ತಿಲ್ಲ. ಮೇಕೆದಾಟು ಯೋಜನೆ ಜಾರಿಗೆ ಈಗಲೂ ಎರಡು ಮಾರ್ಗ ಇವೆ. ಒಂದು ಮುಖ್ಯಮಂತ್ರಿ ಅವರು ಪ್ರಧಾನಿ ಬಳಿಗೆ ಹೋಗಿ ಒಪ್ಪಿಗೆ ಪಡೆದುಕೊಳ್ಳುವುದು. ಇದು ಸಾಧ್ಯವಾಗದಿದ್ದರೆ ಎರಡನೆಯದಾಗಿ ಸುಪ್ರಿಂಕೋರ್ಟ್ ಮೆಟ್ಟಿಲೇರುವುದು. ತಮಿಳುನಾಡಿನಲ್ಲಿ ನದಿ ಜೋಡಣೆಗೆ ಅವಕಾಶ ನೀಡಲಾಗಿದೆ. ಅದರಂತೆ ಅಣೆಕಟ್ಟು ನಿರ್ಮಿಸಲು ನಮಗೂ ಒಪ್ಪಿಗೆ ಕೊಡಿ ಎಂದು ಕೇಳುವುದು. ತಮಿಳುನಾಡಿಗೆ ನಿಗದಿತ ಪ್ರಮಾಣದಷ್ಟು ನೀರು ಬಿಡುಗಡೆ ಮಾಡುವ ಭರವಸೆಯನ್ನು ಕೋರ್ಟ್‌ಗೆ ನೀಡಬೇಕು. ಬೆಂಗಳೂರಿನ ಜನತೆ ಕುಡಿಯುವ ನೀರಿಲ್ಲದೆ ಪರಿತಪಿಸುತ್ತಿರುವುದು ಹಾಗೂ ವಿದ್ಯುತ್ ಸಮಸ್ಯೆ ಬಗ್ಗೆಯೂ ಮನದಟ್ಟು ಮಾಡಿಕೊಟ್ಟು ಒಪ್ಪಿಗೆ ಪಡೆಯುವುದೊಂದೇ ಉಳಿದಿರುವ ಮಾರ್ಗ.

**ನುಗು ರೀತಿಯಲ್ಲಿ ಸಣ್ಣ ಅಣೆಕಟ್ಟುಗಳನ್ನು ನಿರ್ಮಿಸಿಕೊಂಡರೆ ಮಳೆಗಾಲದಲ್ಲಿ ನೀರು ಸಂಗ್ರಹಿಸಬಹುದು. ಆದರೆ ಆ ಕೆಲಸವನ್ನೂ ಸರ್ಕಾರ ಮಾಡುತ್ತಿಲ್ಲ? ಇದಕ್ಕೆ ಇರುವ ತೊಡಕುಗಳು ಏನು?**

ಯಾವ ತೊಡಕುಗಳು ಇಲ್ಲ. ಆದರೆ ಮಾಡುತ್ತಿಲ್ಲ. ಸಾಕಷ್ಟು ಕಡೆಗಳಲ್ಲಿ ಸಣ್ಣ ಪ್ರಮಾಣದ ಅಣೆಕಟ್ಟುಗಳನ್ನು ನಿರ್ಮಿಸಿದರೆ ನೀರು ಸಂಗ್ರಹಿಸಬಹುದು. ನನಗೆ ನೆನಪಿರುವ ಒಂದು ಉದಾಹರಣೆ ಹೇಳುತ್ತೇನೆ. ಮಡಿಕೇರಿ ಬಳಿ ಇಂದು ಸ್ಥಳ ಗುರುತಿಸಲಾಗಿತ್ತು. ಅಲ್ಲಿ ಪುಟ್ಟದಾದ ಅಣೆಕಟ್ಟು ನಿರ್ಮಿಸಿದರೆ 4 ರಿಂದ 5 ಟಿಎಂಸಿ ನೀರು ಸಂಗ್ರಹಿಸಬಹುದು. ಇದೇ ರೀತಿಯಲ್ಲಿ ಹಲವು ಕಡೆಗಳಲ್ಲಿ ಪ್ರಯತ್ನ ಮಾಡಬಹುದು. ಸಂಗ್ರಹಿಸಿದ ನೀರನ್ನು ಸ್ಥಳೀಯವಾಗಿ ಬಳಸಬಹುದು. ಹೆಚ್ಚಿನ ಆರ್ಥಿಕ ಹೊರೆಯೂ ಆಗುವುದಿಲ್ಲ. ಕೇಂದ್ರವನ್ನು ಬೇಡುವ ಸ್ಥಿತಿಯೂ ಬರುವುದಿಲ್ಲ.

**ಕಾಲುವೆಯ ಕೊನೆ ಭಾಗಕ್ಕೆ ನೀರು ಹರಿಯುವುದೇ ಇಲ್ಲ, ಆ ಭಾಗದ ಜನರು ಪ್ರತಿ ವರ್ಷವೂ ಹೋರಾಟ ನಡೆಸುವುದು ನಿಂತಿಲ್ಲ? ಆದರೂ ಸರ್ಕಾರ, ಜನಪ್ರತಿನಿಧಿಗಳು ಸ್ಪಂದಿಸುವುದಿಲ್ಲ ಏಕೆ?**

ಯಾವುದೇ ಸರ್ಕಾರವಿದ್ದರೂ ನೀರಾವರಿ ವಿಚಾರ ಹಾಗೂ ಯೋಜನೆಗಳು ನಿರ್ಲಕ್ಷ್ಯಕ್ಕೆ ಒಳಗಾಗುತ್ತದೆ. ಯೋಜನೆ ರೂಪಿಸಿ ಜಾರಿ ಮಾಡಿ ಸುಮ್ಮನಾಗುತ್ತೇವೆ. ನಾಲೆ ಆಧುನೀಕರಣ

ಮಾಡುವುದಿಲ್ಲ. ಗೊರೂರು ಜಲಾಶಯದಿಂದ ತುಮಕೂರು ಭಾಗಕ್ಕೆ ನೀರು ಹರಿದು ಬರುವ ಹೇಮಾವತಿ ನಾಲೆ ಆಧುನೀಕರಣಕ್ಕೆ ನಾನು ಹೋರಾಟಮಾಡಿ ಕಾರ್ಯಗತ ಮಾಡಿಸಬೇಕಾಯಿತು. ಜನಪ್ರತಿನಿಧಿಗಳು ತಮ್ಮ ಅಗತ್ಯವನ್ನಷ್ಟೇ ನೋಡಿಕೊಂಡು ಸುಮ್ಮನಾಗುವುದರಿಂದ ನಾಲೆಯ ಕೊನೆ ಭಾಗಕ್ಕೆ ನೀರು ಹರಿಯುವುದಿಲ್ಲ.

**ಕುಡಿಯಲು ನೀರು ಬಳಕೆ ಮಾಡುವಲ್ಲೂ ಇದೇ ಮನಸ್ಥಿತಿ ಇದೆಯಲ್ಲ?**

ಈ ಬಗ್ಗೆ ಯಾರೂ ಸರಿಯಾಗಿ ಯೋಚಿಸುವುದಿಲ್ಲ ಬೆಂಗಳೂರು ಸುತ್ತಮುತ್ತಲಿನ ಗ್ರಾಮ ಪಂಚಾಯಿತಿಗಳನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಕೆ ವ್ಯಾಪ್ತಿಗೆ ಸೇರಿಸಿಕೊಂಡು ದಶಕ ಕಳೆದಿದ್ದರೂ ಈವರೆಗೂ ಕುಡಿಯಲು ನೀರು ಕೊಡಲು ಸಾಧ್ಯವಾಗಿಲ್ಲ. ಬೆಂಗಳೂರು ನಗರದ ಜನಸಂಖ್ಯೆ ಬೆಳವಣಿಗೆಯನ್ನು ನೋಡಿದರೆ 2030 ರ ವೇಳೆಗೆ 2.25 ಕೋಟಿ ದಾಟುತ್ತದೆ. ಆ ವೇಳೆಗೆ 80 ಟಿಎಂಸಿ ಅಡಿ ನೀರು ಬೇಕಾಗುತ್ತದೆ. ಮಾಹಿತಿ ತಂತ್ರಜ್ಞಾನ ಕಂಪನಿಗಳ ಸಂಖ್ಯೆ ಹೆಚ್ಚುತ್ತಲೇ ಇದೆ. ನಗರದ ಜನಸಂಖ್ಯೆ ವೇಗವಾಗಿ ಬೆಳೆಯುತ್ತಿದೆ. ಮುಂದೆ ಕುಡಿಯುವ ನೀರಿಗೆ ಏನು ಮಾಡಬೇಕು ಎಂಬ ಬಗ್ಗೆ ಯಾರೊಬ್ಬರೂ ತಲೆಕೆಡಿಸಿಕೊಂಡಿಲ್ಲ. ಈಗಲೇ ಯೋಚಿಸದಿದ್ದರೆ ಮುಂದೆ ನಗರದ ಜನರು ನೀರಿಲ್ಲದೆ ಪರಿತಪಿಸುತ್ತಾರೆ. ಮೇಕೆದಾಟು ಜಲಾಶಯ ನಿರ್ಮಾಣವಾದರೆ ಮಾತ್ರ ನೀರಿನ ಸಮಸ್ಯೆಗೆ ಪರಿಹಾರ ಕಂಡು ಕೊಳ್ಳಬಹುದು.

**ನೀವು ಸಚಿವರಾಗಿದ್ದಾಗ ಯಾವೆಲ್ಲ ಪ್ರಯತ್ನಗಳು ನಡೆದಿದ್ದವು?**

ನಾನು ಕಾನೂನು ಸಚಿವನಾಗಿದ್ದಾಗ ಮೇಕೆದಾಟು ಯೋಜನೆಗೆ ಸ್ಥಳೀಯವಾಗಿ ಇದ್ದ ಎಲ್ಲ ಅಡೆತಡೆಗಳನ್ನು ನಿವಾರಿಸಿದ್ದೆ. ಹಿರಿಯ ವಕೀಲ ಫಾಲಿ ನಾರಿಮನ್ ಅವರಿಂದ ಸಲಹೆ ಪಡೆದುಕೊಂಡಿದ್ದೆ. ತಾಂತ್ರಿಕ ಒಪ್ಪಿಗೆಯೂ ಸಿಕ್ಕಿತ್ತು. ನಂತರ ವಿಸ್ತೃತ ಯೋಜನಾ ವರದಿ (ಡಿಪಿಆರ್) ಸಿದ್ದಪಡಿಸಲು ಜಲಸಂಪನ್ಮೂಲ ಇಲಾಖೆಗೆ ಸೂಚಿಸಲಾಗಿತ್ತು. ನಂತರ ಬಂದ ಸರ್ಕಾರಗಳು ಕೇಂದ್ರದ ಒಪ್ಪಿಗೆ ಕೋರಿ ಯೋಜನಾ ವರದಿ ಸಲ್ಲಿಸಿದ್ದರೂ ರಾಜಕೀಯ ಉದ್ದೇಶದಿಂದ ಈವರೆಗೂ ಅನುಮತಿ ಸಿಕ್ಕಿಲ್ಲ. ತಮಿಳುನಾಡಿನ ರಾಜಕೀಯ ಒತ್ತಡಕ್ಕೆ ಮಣಿದು ನದಿ ಜೋಡಣೆಗೆ ಅನುಮತಿ ನೀಡಲಾಗಿದೆ. ರಾಜ್ಯದಲ್ಲಿ ಬಿಜೆಪಿ ಸರ್ಕಾರ ಹಾಗೂ ಹೆಚ್ಚಿನ ಸಂಖ್ಯೆಯ ಬಿಜೆಪಿ ಸಂಸದರು ಇದ್ದರೂ ಕೇಂದ್ರದ ಮೇಲೆ ಒತ್ತಡ ಹಾಕಲು ಸಾಧ್ಯವಾಗಿಲ್ಲ ಹಾಗಾಗಿ ನಾವು ಹಿಂದುಳಿದಿದ್ದೇವೆ

ಆಧಾರ: ಪ್ರಜಾವಾಣಿ, ದಿನಾಂಕ:31.03.2021.

# ಭಾಗ–6

# ಚುನಾವಣಾ ಸುದ್ದಿಗಳು

## 1. ಉಪ ಚುನಾವಣೆಗೆ ಶೀಘ್ರ ಅಧಿಸೂಚನೆ ಪ್ರಕಟ

ರಾಜ್ಯದ ಒಂದು ಲೋಕಸಭೆ ಮತ್ತು ಮೂರು ವಿಧಾನಸಭಾ ಕ್ಷೇತ್ರಗಳಿಗೆ ಉಪ ಚುನಾವಣೆ ನಡೆಸುವ ಸಂಬಂಧ ಮುಂದಿನ ವಾರ ಚುನಾವಣಾ ಆಯೋಗ ವೇಳಾಪಟ್ಟಿ ಪ್ರಕಟಿಸಲಿದೆ ಎಂದು ಮೂಲಗಳು ತಿಳಿಸಿವೆ. ತಮಿಳುನಾಡು, ಪಶ್ಚಿಮ ಬಂಗಾಳ, ಕೇರಳ, ಅಸ್ಸಾಂ ಹಾಗೂ ಪುದುಚೇರಿ ರಾಜ್ಯಗಳ ವಿಧಾನ ಸಭೆ ಚುನಾವಣೆ ದಿನಾಂಕ ಪ್ರಕಟವಾಗಿದೆ. ಇದರ ನಡುವೆಯೇ ಕರ್ನಾಟಕದ ನಾಲ್ಕು ಕ್ಷೇತ್ರಗಳ ಚುನಾವಣೆಗೆ ಪ್ರತ್ಯೇಕ ಅಧಿಸೂಚನೆ ಮೂಲಕ ದಿನಾಂಕವನ್ನು ನಂತರ ಪ್ರಕಟಿಸಲಾಗುತ್ತದೆ ಎಂದು ಕ್ಷೇತ್ರದ ಚುನಾಣಾಧಿಕಾರಿ ಸುನಿಲ್ ಆರೋರಾ ತಿಳಿಸಿದ್ದರು.

ಆಧಾರ: ವಿಜಯವಾಣಿ, ದಿನಾಂಕ:01.03.2021

## 2. ತುಳಸಿ ಮುನಿರಾಜುಗೌಡ ಪ್ರಮಾಣ ವಚನ ಸ್ವೀಕಾರ:

ವಿಧಾನಸಭೆಯಿಂದ ವಿಧಾನಪರಿಷತ್‌ಗೆ ಚುನಾಯಿತರಾದ ಮುನಿರಾಜುಗೌಡ ಅವರು ಕಲಾಪದ ಆರಂಭದ ವೇಳೆ ಭಗವಂತನ ಹೆಸರಿನಲ್ಲಿ ಪ್ರಮಾಣ ವಚನ ಸ್ವೀಕರಿಸಿದರು. ಕೇಸರಿ ಶಾಲು ಧರಿಸಿ ಆಗಮಿಸಿದ್ದ ತುಳಸಿ ಮುನಿರಾಜುಗೌಡ ಎಲ್ಲರ ಗಮನ ಸೆಳೆದರು. ಸಭಾಪತಿ ಬಸವರಾಜ ಹೊರಟ್ಟಿಯವರು ತಮ್ಮ ಪೀಠದಿಂದ ಪ್ರಮಾಣ ವಚನ ಬೋಧಿಸಿ, ಸಂವಿಧಾನದ ಪುಸ್ತಕ ನೀಡಿ ಸ್ವಾಗತಿಸಿದರು.

ಪ್ರಮಾಣ ವಚನದ ನಂತರ ತುಳಸಿ ಮುನಿರಾಜುಗೌಡ ಅವರು ಪ್ರತಿಪಕ್ಷದ ಸಾಲಿನಲ್ಲಿ ತೆರಳಿ ಸದಸ್ಯರನ್ನು ಪರಿಚಯಿಸಿಕೊಂಡರು. ನಂತರ ಆಡಳಿತ ಪಕ್ಷದ ಸದಸ್ಯರಿಂದ ಅಭಿನಂದನೆ ಸ್ವೀಕರಿಸಿದರು. ಕಂದಾಯ ಸಚಿವ ಆರ್.ಆಶೋಕ್ ಅವರ ಕಾಲಿಗೆ ಬಿದ್ದು ಆಶೀರ್ವಾದ ಪಡೆದು, ತಮಗೆ ನಿಗದಿಪಡಿಸಿದ್ದ ಆಸನದಲ್ಲಿ ಆಸೀನರಾದರು. ಸದನಕ್ಕೆ ಆಗಮಿಸುವ ಪೂರ್ವದಲ್ಲಿ ವಿಧಾನ ಸೌಧದ ಮುಖ್ಯದ್ವಾರದ ಮೆಟ್ಟಿಲಿಗೆ ಹಣೆ ಮುಟ್ಟಿಸಿ ನಮಸ್ಕರಿಸಿ ಒಳಗೆ ಪ್ರವೇಶ ಮಾಡಿದ್ದು ವಿಶೇಷವಾಗಿತ್ತು.

ಆಧಾರ: ಉದಯವಾಣಿ, ದಿನಾಂಕ:11.03.2021

## 3. ಏಪ್ರಿಲ್ 17ಕ್ಕೆ ರಾಜ್ಯ ಮಿನಿ ಸಮರ

ಪಂಚರಾಜ್ಯಗಳ ವಿಧಾನಸಭೆ ಚುನಾವಣೆ ಜೊತೆ ಜೊತೆಯಲ್ಲೇ ರಾಜ್ಯದಲ್ಲೂ ಮತ್ತೊಂದು ಮಿನಿಸಮರಕ್ಕೆ ಮುಹೂರ್ತ ನಿಗದಿಯಾಗಿದೆ. ತೀವ್ರ ಕುತೂಹಲ ಕೆರಳಿಸಿದ್ದ ಬಸವಕಲ್ಯಾಣ, ಮಸ್ಕಿ ವಿಧಾನಸಭಾ ಕ್ಷೇತ್ರ ಮತ್ತು ಬೆಳಗಾವಿ ಲೋಕಸಭಾ ಕ್ಷೇತ್ರಗಳ ಉಪ ಸಮರಕ್ಕೆ ಏಪ್ರಿಲ್ 17ರಂದು ಮತದಾನ ನಿಗದಿಪಡಿಸಿ ಕೇಂದ್ರ ಚುನಾವಣಾ ಆಯೋಗ ವೇಳಾಪಟ್ಟಿ ಪ್ರಕಟಿಸಿದೆ. ಮೇ 2ರಂದು ಮತ ಎಣಿಕೆ ನಡೆಯಲಿದೆ. ಆ ಮೂಲಕ ರಾಜಕೀಯ ಪಕ್ಷಗಳ ಪ್ರತಿಷ್ಠೆ ಹಾಗೂ ಸವಾಲಿನ ಸಂಗ್ರಾಮಕ್ಕೆ ರಾಜಕೀಯ ಆಖಾಡ ತೆರೆದುಕೊಂಡಂತಾಗಿದೆ.

ಆಧಾರ: ವಿಜಯವಾಣಿ, ದಿನಾಂಕ:17.03.2021

## 4. ಬಿಜೆಪಿಯ ನಾಲ್ಕು ಅಭ್ಯರ್ಥಿಗಳ ಆಯ್ಕೆ

ಬೆಳಗಾವಿ ಲೋಕಸಭಾ ಕ್ಷೇತ್ರ ಮತ್ತು ಬಸವಕಲ್ಯಾಣ ವಿಧಾನಸಭಾ ಕ್ಷೇತ್ರಗಳ ಉಪ ಚುನಾವಣೆಗೆ ಬಿಜೆಪಿ ಅಭ್ಯರ್ಥಿಗಳನ್ನು ಪ್ರಕಟಿಸಿದೆ. ಬೆಳಗಾವಿ ಲೋಕಸಭಾ ಕ್ಷೇತ್ರಕ್ಕೆ ದಿವಂಗತ ಸುರೇಶ್ ಅಂಗಡಿ ಅವರ ಪತ್ನಿ ಮಂಗಳಾ ಅಂಗಡಿ, ಬಸವಕಲ್ಯಾಣ ಕ್ಷೇತ್ರಕ್ಕೆ ಶರಣು ಸಲಗರ, ಮಸ್ಕಿ ಕ್ಷೇತ್ರಕ್ಕೆ ಪ್ರತಾಪಗೌಡ ಪಾಟೀಲ್ ಅವರು ಅಭ್ಯರ್ಥಿಯಾಗಿ ಕಣಕ್ಕಿಳಿಯಲಿದ್ದಾರೆ.

ಆಂಧ್ರಪ್ರದೇಶದ ತಿರುಪತಿ ಲೋಕಸಭಾ ಕ್ಷೇತ್ರದ ಉಪ ಚುನಾವಣೆಗೆ ಕರ್ನಾಟಕ ಸರ್ಕಾರದ ಮುಖ್ಯ ಕಾರ್ಯದರ್ಶಿಯಾಗಿ ನಿವೃತ್ತಿಯಾಗಿರುವ ಕೆ.ರತ್ನಪ್ರಭಾ ಅವರನ್ನು ಅಭ್ಯರ್ಥಿಯನ್ನಾಗಿ ಘೋಷಿಸಿದೆ.

ಆಧಾರ: ವಿಜಯವಾಣಿ, ದಿನಾಂಕ:26.03.2021

## 5. ಉಪ ಚುನಾವಣೆ ಸತೀಶ್ ಜಾರಕಿಹೊಳಿ ಕಾಂಗ್ರೆಸ್ ಅಭ್ಯರ್ಥಿ

ಯಮಕನಮರಡಿ ಕ್ಷೇತ್ರದ ಶಾಸಕ ಸತೀಶ್ ಜಾರಕಿಹೊಳಿ ಅವರನ್ನು ಬೆಳಗಾವಿ ಲೋಕಸಭೆ ಕ್ಷೇತ್ರದ ಉಪ ಚುನಾವಣೆಯ ಅಭ್ಯರ್ಥಿಯನ್ನಾಗಿ ಕಾಂಗ್ರೆಸ್ ಘೋಷಿಸಿದೆ.

ಎಐಸಿಸಿ ಅಧ್ಯಕ್ಷೆ ಸೋನಿಯಾ ಗಾಂಧಿ ಅವರು ಸತೀಶ್ ಅವರನ್ನು ಪಕ್ಷದ ಅಭ್ಯರ್ಥಿಯಾಗಿ ನೇಮಿಸಿ ಅನುಮೋದಿಸಿದ್ದಾರೆ ಎಂದು ಪ್ರಧಾನ ಕಾರ್ಯದರ್ಶಿ ಮುಕುಲ್ ವಾಸ್ನಿಕ್ ತಿಳಿಸಿದ್ದಾರೆ.

ರೈಲ್ವೆ ಖಾತೆ ರಾಜ್ಯ ಸಚಿವರಾಗಿದ್ದ ಸುರೇಶ ಅಂಗಡಿ ಅವರ ನಿಧನದಿಂದ ತೆರವಾಗಿರುವ ಬೆಳಗಾವಿ ಕ್ಷೇತ್ರದ ಉಪ ಚುನಾವಣೆ ಏಪ್ರಿಲ್ 17ರಂದು ನಿಗದಿಯಾಗಿದೆ.

ಆಧಾರ: ಪ್ರಜಾವಾಣಿ, ದಿನಾಂಕ:27.03.2021

## 6. 10 ನಗರಗಳ ಸ್ಥಳೀಯ ಸಂಸ್ಥೆಗಳಿಗೆ ಚುನಾವಣೆ

ಬಳ್ಳಾರಿ ಮಹಾನಗರ ಪಾಲಿಕೆ ಸೇರಿ ರಾಜ್ಯದ 10 ನಗರ ಸ್ಥಳೀಯ ಸಾರ್ವತ್ರಿಕ ಚುನಾವಣೆಗೆ ಮುಹೂರ್ತ ನಿಗದಿಪಡಿಸಿ ರಾಜ್ಯ ಚುನಾವಣಾ ಆಯೋಗ ವೇಳಾಪಟ್ಟಿ ಪ್ರಕಟಿಸಿದೆ.

ರಾಜ್ಯದ 1 ಮಹಾನಗರ ಪಾಲಿಕೆ, 5 ನಗರ ಸಭೆಗಳು, 2 ಪುರಸಭೆ ಮತ್ತು 2 ಪಟ್ಟಣ ಪಂಚಾಯಿತಿಗಳ 266 ವಾರ್ಡ್‌ಗಳಿಗೆ ಚುನಾವಣೆ ಘೋಷಣೆಯಾಗಿದ್ದು, ಏಪ್ರಿಲ್ 27ರಂದು ಮತದಾನ ನಡೆಯಲಿದೆ. ತಕ್ಷಣದಿಂದ ನೀತಿ ಸಂಹಿತೆ ಜಾರಿಗೆ ಬರಲಿದ್ದು, ಅಂದರೆ, ಏಪ್ರಿಲ್ 8 ರಿಂದ 31ರ ವರೆಗೆ ಚುನಾವಣೆ ನಡೆಯುವ ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ನೀತಿ ಸಂಹಿತೆ ಜಾರಿಯಲ್ಲಿರುತ್ತದೆ ಎಂದು ಚುನಾವಣಾ ಆಯೋಗದ ಪ್ರಕಟಣೆ ತಿಳಿಸಿದೆ. ಚುನಾವಣೆ ಸಂಬಂಧ ಆಯಾ ಜಿಲ್ಲಾಧಿಕಾರಿಗಳು ಏಪ್ರಿಲ್ 8 ರಂದು ಅಧಿಸೂಚನೆ ಹೊರಡಿಸಲಿದ್ದಾರೆ.

ಬಳ್ಳಾರಿ ಮಹಾನಗರ ಪಾಲಿಕೆಯ 39, ಬೆಂಗಳೂರು ಗ್ರಾಮಾಂತರ ಜಿಲ್ಲೆ ವಿಜಯಪುರ ಪುರಸಭೆಯ 23, ರಾಮನಗರ ಜಿಲ್ಲೆ, ರಾಮನಗರ ನಗರಸಭೆಯ 31, ಚನ್ನಪಟ್ಟಣ ನಗರಸಭೆಯ 31, ಚಿಕ್ಕಬಳ್ಳಾಪುರ ಜಿಲ್ಲೆಯ ಗುಡಿಬಂಡೆ ಪಟ್ಟಣ ಪಂಚಾಯಿತಿಯ 11, ಶಿವಮೊಗ್ಗ ಜಿಲ್ಲೆ ಭದ್ರಾವತಿ ನಗರಸಭೆಯ 35, ತೀರ್ಥಹಳ್ಳಿ ಪಟ್ಟಣ ಪಂಚಾಯಿತಿಯ 15, ಹಾಸನ ಜಿಲ್ಲೆ ಬೇಲೂರು ಪುರಸಭೆಯ 23, ಕೊಡಗು ಜಿಲ್ಲೆ ಮಡಿಕೇರಿ ನಗರಸಭೆಯ 23, ಬೀದರ್ ಜಿಲ್ಲೆ ಬೀದರ್ ನಗರಸಭೆಯ 35 ವಾರ್ಡ್‌ಗಳಿಗೆ ಚುನಾವಣೆ ನಡೆಯಲಿದೆ.

ಆಧಾರ: ಉದಯವಾಣಿ, ದಿನಾಂಕ:30.03.2021

# ಭಾಗ–7

# ಸರ್ವೋಚ್ಚ/ಉಚ್ಚ ನ್ಯಾಯಾಲಯದ ಸುದ್ದಿಗಳು

## 1. ಸೆಂಟ್ರಲ್ ವಿಸ್ತಾ ಯೋಜನೆಗೆ ಸಮ್ಮತಿ

ನೂತನ ಸಂಸತ್ ಭವನ ಸೇರಿದಂತೆ ಹಲವು ಸಂಕೀರ್ಣಗಳ ನಿರ್ಮಾಣಕ್ಕೆ ಕೇಂದ್ರ ಸರ್ಕಾರ ಅನುಷ್ಠಾನಗೊಳಿಸಿರುವ 'ಸೆಂಟ್ರಲ್ ವಿಸ್ತಾ' ಯೋಜನೆ ಮುಂದುವರಿಕೆಗೆ ಸುಪ್ರೀಂಕೋರ್ಟ್ ಹಸಿರು ನಿಶಾನೆ ತೋರಿದೆ.

ಸೆಂಟ್ರಲ್ ವಿಸ್ತಾ ಯೋಜನೆ ಅನುಷ್ಠಾನಕ್ಕೆ ನೀಡಲಾಗಿದ್ದ ಪರಿಸರ ಅನುಮತಿ ಮತ್ತು ಭೂ ಪರಿವರ್ತನೆ ಒಪ್ಪಿಗೆಯನ್ನು ಪ್ರಶ್ನಿಸಿ ಸಲ್ಲಿಸಲಾಗಿದ್ದ ಅರ್ಜಿಗಳನ್ನು ವಜಾಗೊಳಿಸಿದ ನ್ಯಾಯಾಮೂರ್ತಿ ಎ.ಎಂ. ಖನ್ವಿಲ್ಕರ್ ನೇತೃತ್ವದ ತ್ರಿಸದಸ್ಯ ಪೀಠವು ವಿಸ್ತಾ ಯೋಜನೆ ಪರವಾಗಿ 2:1 ಬಹುಮತದ ತೀರ್ಪು ನೀಡಿತ್ತು. ಅಂದಾಜು ರೂ.971 ಕೋಟಿ ವೆಚ್ಚದ ಯೋಜನೆಯ ಕಾರ್ಯಾದೇಶ ನೀಡಲು ಪೀಠ ಒಪ್ಪಿಗೆ ನೀಡಿತು. "ಈಗಾಗಲೇ ಅನುಷ್ಠಾನಗೊಂಡಿರುವ ಯೋಜನೆಯಲ್ಲಿ ಯಾವುದೇ ಪ್ರಮಾದ ಇಲ್ಲ, ಪರಿಸರ ಅನುಮತಿ ಮತ್ತು ಭೂ ಪರಿವರ್ತನೆಯಲ್ಲಿಯೂ ಗಂಭೀರ ಲೋಪಗಳು ಕಾಣಿಸಿಲ್ಲ ಎಂದು ಬಹುಮತದ ತೀರ್ಪು ಬರೆದ ನ್ಯಾ. ಖನ್ವಿಲ್ಕರ್ ತಿಳಿಸಿದರು. ಪೀಠದಲ್ಲಿದ್ದ ಇನ್ನೊಬ್ಬ ನ್ಯಾಯಾಮೂರ್ತಿ ದಿನೇಶ್ ಮಹೇಶ್ವರಿ ಈ ತೀರ್ಪಿಗೆ ಸಹಮತ ವ್ಯಕ್ತಪಡಿಸಿದರು. ವಿಸ್ತಾ ಯೋಜನೆಯ ಕಟ್ಟಡಗಳಲ್ಲಿ ಹೊಗೆ ಹೊರ ಸೂಸುವ ಎತ್ತರದ ಚಿಮಣಿಗಳನ್ನು ಅಳವಡಿಸಬೇಕು. ನಿರ್ಮಾಣ ಸ್ಥಳದಲ್ಲಿ ಹೊಗೆ ನಿರೋಧಕ ಕೊಳವೆಗಳನ್ನು ಜೋಡಿಸಬೇಕು ಎಂದು ನ್ಯಾ. ದಿನೇಶ್ ಮಹೇಶ್ವರಿ ಆದೇಶಿಸಿದರು. ಮೂರನೆ ಸದಸ್ಯರಾಗಿ ನ್ಯಾಯಪೀಠದಲ್ಲಿದ್ದ ನ್ಯಾ.ಸಂಜೀವ್ ಖನ್ನಾ ಯೋಜನೆ ಅನುಷ್ಠಾನಕ್ಕೆ ಒಪ್ಪಿಗೆ ನೀಡಿದರಾದರೂ ಭೂ ಪರಿವರ್ತನೆ ಮತ್ತು ಪರಿಸರ ಅನುಮತಿ ವಿಷಯದಲ್ಲಿ ಭಿನ್ನಾಭಿಪ್ರಾಯ ದಾಖಲಿಸಿದರು.

ದಟ್ಟ ಹಸಿರಿನ ತಾಣಗಳ ನಡುವೆ ಕೈಗೊಂಡ ದೈತ್ಯಕಟ್ಟಡಗಳ ನಿರ್ಮಾಣ ಕಾಮಗಾರಿಗೆ ಅನೇಕ ಪರಿಸರವಾದಿಗಳು ವಿರೋಧ ವ್ಯಕ್ತಪಡಿಸಿದ್ದರು. ವಿಸ್ತಾ ಯೋಜನೆಯಲ್ಲಿ ಅನೇಕ ಗಂಭೀರ ಲೋಪಗಳಿವೆ ಎಂದು ಆರೋಪಿಸಿ ಹತ್ತಾರು ಅರ್ಜಿಗಳು ಸಲ್ಲಿಕೆಯಾಗಿದ್ದವು.

ಬಹುಮಹಡಿಯ ಹಲವು ಕಟ್ಟಡಗಳನ್ನು ನಿರ್ಮಾಣ ಮಾಡುವ ಉದ್ದೇಶದ ಸೆಂಟ್ರಲ್ ವಿಸ್ತಾ ಯೋಜನೆಯು 2019ರಲ್ಲಿ ಘೋಷಣೆಯಾಗಿತ್ತು. ಇದರಲ್ಲಿ ಪ್ರಧಾನವಾಗಿ ಗಮನಸೆಳೆದದ್ದು ತ್ರಿಕೋನಾಕೃತಿಯ ನೂತನ ಸಂಸತ್ ಭವನ ಕಟ್ಟಡ. 900 ರಿಂದ 1200 ಸಂಸದರಿಗೆ ಆಸನ ವ್ಯವಸ್ಥೆ ಒಳಗೊಳ್ಳಲಿರುವ ಈ ಕಟ್ಟಡವು 2022ರ ವೇಳೆಗೆ ಸಿದ್ಧಗೊಳ್ಳಲಿದೆ. ದೇಶದ 75ನೇ ಸ್ವಾತಂತ್ರ್ಯೋತ್ಸವ ಗಮನದಲ್ಲಿಟ್ಟುಕೊಂಡು ಕಟ್ಟಡ ಕಾಮಗಾರಿ ಪೂರ್ಣಗೊಳಿಸಲು ನಿರ್ಧರಿಸಲಾಗಿದೆ. ಟಾಟಾ ಕಂಪನಿಗೆ ಗುತ್ತಿಗೆ ಪಡೆದಿರುವ ಇದರ ಕಾಮಗಾರಿ ಚುರುಕಿನಿಂದ ಸಾಗಿದೆ.

2024ರ ವೇಳೆಗೆ ಪೂರ್ಣಗೊಳ್ಳಲಿರುವ ಕೇಂದ್ರ ಸಚಿವಾಲಯ ಕಟ್ಟಡ ನಿರ್ಮಾಣ ಯೋಜನೆಗೆ ಸಂಬಂಧಿಸಿದಂತೆಯೂ ಹಲವು ತಕರಾರು ಅರ್ಜಿಗಳು ದಾಖಲಾಗಿವೆ. ಈ ಕುರಿತು ಇದೇ ತ್ರಿಸದಸ್ಯ ನ್ಯಾಯಪೀಠ ನವೆಂಬರ್ 5ಕ್ಕೆ ತೀರ್ಪನ್ನು ಕಾಯ್ದಿರಿಸಿದೆ.

**ವಿಸ್ತಾ ವಿಸ್ತರಿಸಿದ ಪರಿ:**

- ಸೆಪ್ಟೆಂಬರ್ 2019: ನೂತನ ಸಂಸತ್ ಭವನ ನಿರ್ಮಾಣ ಯೋಜನೆ ಘೋಷಣೆ.
- ಫೆಬ್ರವರಿ 11, 2020: ಮಾಸ್ಟರ್ ಪ್ಲಾನ್‌ನಲ್ಲಿ ಬದಲಾವಣೆ ಮಾಡುವ ಮೊದಲು ಕೋರ್ಟ್‌ಗೆ ಮನವಿ ಸಲ್ಲಿಸುವಂತೆ ಡಿಸಿಎಗೆ ದಿಲ್ಲಿ ಹೈಕೋರ್ಟ್ ಆದೇಶ.
- ಫೆಬ್ರವರಿ 28: ಡಿಡಿಎ ಮನವಿ ಕುರಿತು ಏಕಸದಸ್ಯ ಪೀಠ ನೀಡಿದ್ದ ತೀರ್ಪಿಗೆ ದಿಲ್ಲಿ ಹೈಕೋರ್ಟ್ ತಡೆ.

- ಜುಲೈ 17: ಯೋಜನೆ ಕುರಿತ ತಕರಾರು ಅರ್ಜಿಗಳ ವಿಚಾರಣೆ ಸುಪ್ರೀಂಕೋರ್ಟ್‌ನಲ್ಲಿ ಆರಂಭ.
- ಡಿಸೆಂಬರ್7 : ಸೆಂಟ್ರಲ್ ವಿಸ್ತಾ ಶಂಕುಸ್ಥಾಪನೆ ನಡೆಸಲು ಸುಪ್ರೀಂ ಸಮ್ಮತಿ.
- ಡಿಸೆಂಬರ್ 10: ಪ್ರಧಾನಿ ನರೇಂದ್ರ ಮೋದಿ ಅವರಿಂದ ಯೋಜನೆಗೆ ಶಂಕುಸ್ಥಾಪನೆ.
- ಜನವರಿ 5 2021: ನಿರ್ಮಾಣ ಕಾಮಗಾರಿ ಮುಂದುವರಿಸಲು ಸುಪ್ರೀಂ ಸಮ್ಮತಿ

ಆಧಾರ: ವಿಜಯ ಕರ್ನಾಟಕ, ದಿನಾಂಕ:06.01.2021

## 2. ಕೃಷಿ ಕಾಯಿದೆ: ಕೇಂದ್ರಕ್ಕೆ ಸುಪ್ರೀಂ ಚಾಟಿ

ರೈತರ ಬಗ್ಗೆ ನಮಗೆ ಕಾಳಜಿ ಇದೆ. ನಿಮಗೆ ನಂಬಿಕೆ ಇದೆಯೋ ಇಲ್ಲವೋ, ಈ ಬಗ್ಗೆ ಒಂದು ಸಮಿತಿ ರಚಿಸಿ ಮುಂದಿನ ನಿರ್ಧಾರ ಕೈಗೊಳ್ಳಿ. ಒಂದು ವೇಳೆ ನಿಮಗೆ ಕೃಷಿ ಕಾಯಿದೆಗಳನ್ನು ತಡೆಹಿಡಿಯಲು ಸಾಧ್ಯವಾಗದಿದ್ದರೆ, ಅದನ್ನು ನಾವು ಮಾಡುತ್ತೇವೆ ಎಂದು ಕೇಂದ್ರ ಸರ್ಕಾರಕ್ಕೆ ಸುಪ್ರೀಂಕೋರ್ಟ್ ಖಾರದ ಮಾತುಗಳಲ್ಲಿ ಹೇಳಿದೆ.

ಕೇಂದ್ರದ ಕೃಷಿ ಕಾಯಿದೆಗಳ ವಿರುದ್ಧ ಹಲವು ರಾಜ್ಯಗಳು ದಂಗೆ ಏಳುತ್ತಿವೆ. ಈ ಸಮಯದಲ್ಲಿ ನಿಮ್ಮ ಮಾತುಗಳನ್ನು ದಾರಿತಪ್ಪಿಸುವ ಯೋಚನೆ ಪೀಠಕ್ಕಿಲ್ಲ. ಆದರೆ, ಇಲ್ಲಿಯವರೆಗೂ ಆದ ಪ್ರಕ್ರಿಯೆಗಳ ಬಗ್ಗೆ ತೀವ್ರ ನಿರಾಶೆಯಾಗಿದೆ. ಕೃಷಿ ಕಾನೂನು ರದ್ದುಗೊಳಿಸುವ ಬಗ್ಗೆಯೂ ಪೀಠ ಮಾತನಾಡುತ್ತಿಲ್ಲ. ಅದು ಬಹಳ ಸೂಕ್ಷ್ಮ ಸಂಗತಿ, ಆದರೆ, ಈ ಕೃಷಿ ಕಾನೂನುಗಳು ಪ್ರಯೋಜನಕಾರಿ ಎಂದು ಹೇಳುವ ಒಂದು ಅರ್ಜಿಯೂ ನಮ್ಮ ಮುಂದಿಲ್ಲ ಎಂದು ಅಚ್ಚರಿ ವ್ಯಕ್ತಪಡಿಸಿದೆ.

**ಮಾತು–ಮನವಿ:**

- ಈಗಾಗಲೇ ಸಮಸ್ಯೆ ಉದ್ಭವವಾಗುತ್ತಿದೆ. ಪರಿಹಾರ ಸಾಧ್ಯತೆಗೆ ಇನ್ನಷ್ಟು ಸಮಯ ನೀಡಲ್ಲ. ಎಲ್ಲವೂ ತುರ್ತಾಗಿ ಇತ್ಯರ್ಥವಾಗಲಿ: ನ್ಯಾಯಪೀಠ
- ಚಳಿಯಲ್ಲಿ ನರಳುವುದನ್ನು ನೋಡಲಾಗುತ್ತಿಲ್ಲ, ಪ್ರತಿಭಟನಾ ನಿರತ ವೃದ್ಧ ರೈತರು ಮನೆಗೆ ತೆರಳಿ: ಸಿಜೆಐ ಎಸ್.ಎ.ಬೋಬ್ಡೆ.

**ಇಂದು ತೀರ್ಪು:** ರೈತ ಪ್ರತಿಭಟನೆಗೆ ಸಂಬಂಧಿಸಿದ ಹಲವು ವಿಷಯಗಳ ಕುರಿತು ಸುಪ್ರೀಂಕೋರ್ಟ್ ಆದೇಶ ಪ್ರಕಟಿಸಲಿದೆ. ರೈತರು–ಕೇಂದ್ರ ಸರ್ಕಾರದ ಬಿಕ್ಕಟ್ಟಿನ ಪರಿಹಾರಕ್ಕೆ ಮಾರ್ಗಗಳನ್ನು ಕಂಡುಕೊಳ್ಳಲು ಭಾರತದ ಮಾಜಿ ಮುಖ್ಯ ನ್ಯಾಯಮೂರ್ತಿ ನೇತೃತ್ವದ ಸಮಿತಿ ರಚನೆ ಆಗುವ ಸಂಭವವಿದೆ.

ಆಧಾರ: ವಿಶ್ವವಾಣಿ, ದಿನಾಂಕ:12.01.2021

## 3. ಟರ್ಫ್ ಕ್ಲಬ್‌ಗಳು ಆರ್‌ಟಿಐ ಅರ್ಜಿಗೆ ಮಾಹಿತಿ ನೀಡಬೇಕು

ನಗರದ ಬೆಂಗಳೂರು ಟರ್ಫ್ ಕ್ಲಬ್, ಮೈಸೂರು ಟರ್ಫ್ ಕ್ಲಬ್ ಸೇರಿ ಸರ್ಕಾರಿ ಭೂಮಿಯನ್ನು ರಿಯಾಯಿತಿ ದರದಲ್ಲಿ ಗುತ್ತಿಗೆ ಪಡೆದಿರುವ ಸಂಸ್ಥೆಗಳು ಮಾಹಿತಿ ಹಕ್ಕು ಕಾಯಿದೆಯಡಿ ಮಾಹಿತಿ ನೀಡುವ ಉತ್ತರದಾಯಿತ್ವ ಹೊಂದಿವೆ ಎಂದು ಹೈಕೋರ್ಟ್ ಮಹತ್ವದ ತೀರ್ಪು ನೀಡಿದೆ.

ಕ್ಲಬ್‌ಗಳಿಗೆ ಸಂಬಂಧಿಸಿ ಅರ್ಜಿದಾರರು ಕೋರಿರುವ ಮಾಹಿತಿ ನೀಡಲು ಆದೇಶಿಸಿದ್ದ ರಾಜ್ಯ ಮಾಹಿತಿ ಆಯೋಗದ ಕ್ರಮ ಪ್ರಶ್ನಿಸಿ ಬೆಂಗಳೂರು ಟರ್ಫ್ ಕ್ಲಬ್, ಮೈಸೂರು ಟರ್ಫ್ ಕ್ಲಬ್ ಮತ್ತು ಇನ್‌ಸ್ಟಿಟ್ಯೂಟ್ ಆಫ್ ಎಂಜಿನಿಯರ್ ಸಂಸ್ಥೆಗಳು ಸಲ್ಲಿಸಿದ್ದ ಅರ್ಜಿಗಳನ್ನು ವಿಚಾರಣೆ ನಡೆಸಿದ ನ್ಯಾ. ಪಿ.ಬಿ. ಭಜಂತ್ರಿ ಅವರಿದ್ದ ಏಕ ಸದಸ್ಯ ಪೀಠ ಈ ಆದೇಶ ಮಾಡಿದೆ.

ಪೀಠ ತನ್ನ ತೀರ್ಪಿನಲ್ಲಿ ಸರ್ಕಾರ ಈ ಸಂಸ್ಥೆಗಳಿಗೆ ರಿಯಾಯಿತಿ ದರದಲ್ಲಿ ಭೂಮಿ ಗುತ್ತಿಗೆ ನೀಡಿದೆ. ಸರ್ಕಾರಿ ಭೂಮಿ ಸಾರ್ವಜನಿಕರ ಭೂಮಿ ಇದ್ದಂತೆ. ಇಂತಹ ಭೂಮಿಯನ್ನು ಸರ್ಕಾರ ಮಾರುಕಟ್ಟೆ ಮೌಲ್ಯಕ್ಕಿಂತ ಸಾಕಷ್ಟು ಕಡಿಮೆ ಬಾಡಿಗೆಗೆ ಗುತ್ತಿಗೆ ನೀಡಿದೆ. ಈ ಮೂಲಕ ಪರೋಕ್ಷವಾಗಿ ರಿಯಾಯಿತಿ ನೀಡಿದ್ದು, ಭೂಮಿ ಗುತ್ತಿಗೆ ಪಡೆದವರು ಜನರಿಗೆ ಉತ್ತರದಾಯಿಯಾಗುತ್ತಾರೆ. ಈ ಸಂಸ್ಥೆಗಳನ್ನು ಸಾರ್ವಜನಿಕ ಪ್ರಾಧಿಕಾರಗಳಂತೆ ಪರಿಗಣಿಸಬಹುದಾಗಿದೆ. ಸಾರ್ವಜನಿಕರು ಆರ್‌ಟಿಐ ಕಾಯಿದೆಯಡಿ ಮಾಹಿತಿ ಪಡೆಯಬಹುದು ಎಂದು ಆದೇಶಿಸಿಸುವ ಮೂಲಕ ಮಾಹಿತಿ ಆಯೋಗದ ಆದೇಶವನ್ನು ಎತ್ತಿ ಹಿಡಿದಿದೆ.

**2013ರಲ್ಲಿ ಮಾಹಿತಿ ಆಯೋಗಕ್ಕೆ ದೂರು:** ವಕೀಲ ಉಮಾಪತಿ ಹಾಗೂ ಡಾ:ಕುದೂರು ವೆಂಕಟೇಶ್ ಎಂಬುವವರು ಬೆಂಗಳೂರು ಟರ್ಫ್ ಕ್ಲಬ್, ಮೈಸೂರು ಟರ್ಫ್ ಕ್ಲಬ್, ಲೇಡಿಸ್ ಕ್ಲಬ್ ಹಾಗೂ ಇನ್‌ಸ್ಟಿಟ್ಯೂಟ್ ಆಫ್ ಇಂಜಿನಿಯರ್ ಸಂಸ್ಥೆಗಳಿಂದ ಕೆಲ ಮಾಹಿತಿ ಕೋರಿ 2012ರಲ್ಲಿ ಅರ್ಜಿ ಸಲ್ಲಿಸಿದ್ದರು. ಆದರೆ, ಸಂಸ್ಥೆಗಳು ಯಾವುದೇ ಮಾಹಿತಿ ನೀಡಿರಲಿಲ್ಲ. ಅರ್ಜಿ ವಿಚಾರಣೆ ನಡೆಸಿದ್ದ ರಾಜ್ಯ ಮಾಹಿತಿ ಆಯೋಗವು ಮಾಹಿತಿ ನೀಡುವಂತೆ ಸಂಸ್ಥೆಗಳಿಗೆ ಆದೇಶಿಸಿತ್ತು. ಮಾಹಿತಿ ಆಯೋಗಕ್ಕೆ 2013ರ ಜುಲೈ 1 ರಂದು ಮಾಹಿತಿ ನೀಡುವಂತೆ ಸಂಸ್ಥೆಗಳಿಗೆ ಆದೇಶಿಸಿತ್ತು. ಮಾಹಿತಿ ಆಯೋಗದ ಈ ಆದೇಶ ಪ್ರಶ್ನಿಸಿ ಅರ್ಜಿದಾರ ಸಂಸ್ಥೆಗಳು ನಾವು ಸಾರ್ವಜನಿಕ ಪ್ರಾಧಿಕಾರಗಳಲ್ಲಿ ಬರುವುದು, ಹೀಗಾಗಿ ಮಾಹಿತಿ ಹಕ್ಕು ಕಾಯಿದೆ–2005ರ ಸೆಕ್ಷನ್ 2 (ಎಚ್) ಅಡಿ ಮಾಹಿತಿ ನೀಡುವ ಬಾಧ್ಯತೆ ಹೊಂದಿಲ್ಲ ಎಂದು ವಾದಿಸಿದ್ದವು. ವಾದ ಅಲ್ಲಗಳೆದಿರುವ ಪೀಠ ಸಾರ್ವಜನಿಕ ಭೂಮಿಯನ್ನು ರಿಯಾಯಿತಿ ದರದಲ್ಲಿ ಪಡೆದಿರುವ ಸಂಸ್ಥೆಗಳು ಅವರಿಗೆ ಉತ್ತರದಾಯಿಗಳಾಗಿದ್ದು, ಮಾಹಿತಿ ನೀಡಬೇಕು ಎಂದಿದ್ದು, ಅರ್ಜಿ ವಜಾ ಮಾಡಿ ಆದೇಶಿಸಿದೆ.

ಆಧಾರ: ಕನ್ನಡಪ್ರಭ, ದಿನಾಂಕ:17.01.2021

## 4. ಜಿಲ್ಲಾವಾರು ಕೆರೆ ವಿವರ ನೀಡಿ

ರಾಜ್ಯದಲ್ಲಿರುವ ಒಟ್ಟು ಕೆರೆಗಳು ಮತ್ತು ಅವುಗಳ ವಿಸ್ತೀರ್ಣ ಒತ್ತುವರಿಯಾಗಿರುವ ಕೆರೆಗಳು ಹಾಗೂ ಆ ಒತ್ತುವರಿ ತೆರವಿಗೆ ಸಂಬಂಧಿಸಿದಂತೆ ಜಿಲ್ಲಾವಾರು ವಿವರಗಳನ್ನು ಒದಗಿಸುವಂತೆ ಸರ್ಕಾರಕ್ಕೆ ಹೈಕೋರ್ಟ್ ನಿರ್ದೇಶಿಸಿದೆ.

ಕೆರೆಗಳ ಸಂರಕ್ಷಣೆ ಹಾಗೂ ಪುನಶ್ಚೇತನಕ್ಕೆ ಕ್ರಮ ಕೈಗೊಳ್ಳಲು ಸರ್ಕಾರಕ್ಕೆ ನಿರ್ದೇಶಿಸುವಂತೆ ಕೋರಿ 'ಸಿಟಿಜನ್ ಆ್ಯಕ್ಷನ್ ಗ್ರೂಪ್' ಸಲ್ಲಿಸಿರುವ ಸಾರ್ವಜನಿಕ ಹಿತಾಸಕ್ತಿ ಅರ್ಜಿಯನ್ನು ಮುಖ್ಯ ನ್ಯಾಯಮೂರ್ತಿ ಎ.ಎಸ್. ಓಕಾ ನೇತೃತ್ವದ ವಿಭಾಗೀಯ ಪೀಠ ವಿಚಾರಣೆ ನಡೆಸಿತು.

ಸರ್ಕಾರ ಸಲ್ಲಿಸಿದ ಅನುಪಾಲನಾ ವರದಿ ಪರಿಶೀಲಿಸಿದ ಪೀಠ, ರಾಜ್ಯದಲ್ಲಿರುವ ಎಲ್ಲ ಕೆರೆಗಳ ಸರ್ವೆ ನಡೆಸಿ ಅದರ ಭೌಗೋಳಿಕ ಗಡಿ ಗುರುತಿಸಿ ಬೇಲಿ ಹಾಕಲು ಈ ಹಿಂದೆಯೇ ಕೋರ್ಟ್ ನಿರ್ದೇಶಿಸಿದೆ. ಸರ್ವೆ ವರದಿಯ ಪ್ರತಿಯನ್ನು ಕೋರ್ಟ್‌ಗೆ ಹಾಜರುಪಡಿಸುವಂತೆ 2019ರ ಜೂನ್ 18ರಂದು ಸೂಚಿಸಲಾಗಿತ್ತು. ಸರ್ಕಾರದ ಅನುಪಾಲನಾ ವರದಿಗಳಲ್ಲಿ ಈ ಬಗ್ಗೆ ಮಾಹಿತಿಯೇ ಇಲ್ಲ. ಆದ್ದರಿಂದ, ರಾಜ್ಯದಲ್ಲಿರುವ ಕೆರೆಗಳು, ಅವುಗಳ ವಿಸ್ತೀರ್ಣ ಒತ್ತುವರಿಯಾಗಿರುವ ಹಾಗೂ ಒತ್ತುವರಿ ತೆರವುಗೊಳಿಸಿರುವ ಕೆರೆಗಳ ವಿಸ್ತೀರ್ಣದ ಬಗ್ಗೆ ಜಿಲ್ಲಾವಾರು ಮಾಹಿತಿ ಒಳಗೊಂಡ ಪ್ರಮಾಣ ಪತ್ರ ಸಲ್ಲಿಸಬೇಕು ಎಂದು ಕಂದಾಯ ಇಲಾಖೆಯ ಪ್ರಧಾನ ಕಾರ್ಯದರ್ಶಿಗೆ ನಿರ್ದೇಶಿಸಿತ್ತು.

ಜಿಲ್ಲಾವಾರು ಮಾಹಿತಿ ಒದಗಿಸುವ ಕೆಲಸ ಮೊದಲು ಬೆಂಗಳೂರು ನಗರ ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲೆಗಳಿಂದಲೇ ಆರಂಭವಾಗಲಿ ಎಂದ ಪೀಠ, 2 ವಾರಗಳಲ್ಲಿ ಈ ಎರಡು ಜಿಲ್ಲೆಗಳ ಕೆರೆಗಳ ಮಾಹಿತಿ ಒಳಗೊಂಡ ಪ್ರಮಾಣ ಪತ್ರ ಸಲ್ಲಿಸಬೇಕೆಂದು ಸರ್ಕಾರಕ್ಕೆ ಸೂಚಿಸಿತು.

ರಾಜಕಾಲುವೆಗಳ ಒತ್ತುವರಿ ತೆರವಿಗೆ ಸಂಬಂಧಿಸಿದಂತೆ ಕೈಗೊಂಡ ಕ್ರಮಗಳ ಬಗ್ಗೆಯೂ ಮುಂದಿನ ವಿಚಾರಣೆ ವೇಳೆ ಪ್ರಮಾಣಪತ್ರ ಸಲ್ಲಿಸಲು ಸೂಚಿಸಿ ವಿಚಾರಣೆ ಮುಂದೂಡಿತು.

**ಸಭೆಯ ನಡಾವಳಿಗಳ ಮಾಹಿತಿ ಕೊಡಿ**: ಕೆರೆಗಳ ಸಂರಕ್ಷಣೆ ಮತ್ತು ಪುನಶ್ಚೇತನಕ್ಕಾಗಿ ಜಿಲ್ಲಾ ಸಮಿತಿಗಳಿಗೆ ಮಾರ್ಗದರ್ಶನ ನೀಡಲು ಹೈಕೋರ್ಟ್ ಆದೇಶದಂತೆ 2013ರ ಡಿಸೆಂಬರ್ 9ರಂದು ರಚಿಸಲಾಗಿರುವ ರಾಜ್ಯಮಟ್ಟದ ಅಪೆಕ್ಸ್ ಕಮಿಟಿ ಈವರೆಗೆ ಎಷ್ಟು ಸಭೆಗಳನ್ನು ನಡೆಸಿದೆ. ಸಮಿತಿಗೆ ಬಂದ ದೂರುಗಳೆಷ್ಟು. ಅದಕ್ಕೆ ಸಮಿತಿ ನೀಡಿದ ಮಾರ್ಗದರ್ಶನವೇನು ಎಂಬ ವಿವರಗಳೂ ಸೇರಿ ಸಮಿತಿಯ ಸಭೆಗಳ ನಡಾವಳಿಗಳ ವಿವರಗಳನ್ನು ಪ್ರಮಾಣ ಪತ್ರದ ರೂಪದಲ್ಲಿ ಸಲ್ಲಿಸುವಂತೆ ಸರ್ಕಾರಕ್ಕೆ ಹೈಕೋರ್ಟ್ ನಿರ್ದೇಶಿಸಿತು.

ಆಧಾರ: ವಿಜಯವಾಣಿ, ದಿನಾಂಕ:17.01.2021

## 5. ಮಾಹಿತಿ ಕೇಳಿದರೆ ನಿರಾಕರಿಸುವಂತಿಲ್ಲ : ಪೊಲೀಸರಿಗೆ ಸೂಚನೆ

ಮಾಹಿತಿ ಹಕ್ಕು ಕಾಯಿದೆ ಅಡಿ ಪೊಲೀಸ್ ಠಾಣೆಯ ಸಿಸಿಟಿವಿ ದೃಶ್ಯಾವಳಿ ಸೇರಿದಂತೆ ಇನ್ನಿತರ ಮಾಹಿತಿಯನ್ನು ಅರ್ಜಿದಾರರು ಕೇಳಿದರೆ, ಪೊಲೀಸರು ಮಾಹಿತಿ ಒದಗಿಸದೆ ನಿರಾಕರಿಸುವಂತಿಲ್ಲ.

ಆರ್‌ಟಿಐ ಅರ್ಜಿದಾರ ಫಾರೂಕ್ ಆಹ್ಮದ್ ಸಲ್ಲಿಸಿರುವ ಅರ್ಜಿ ವಿಚಾರಣೆ ವೇಳೆ ರಾಜ್ಯ ಮಾಹಿತಿ ಹಕ್ಕು ಆಯೋಗ ಪೊಲೀಸರಿಗೆ ಈ ಸೂಚನೆ ನೀಡಿದೆ. 2018ರಲ್ಲಿ ಕಾಡುಗೊಂಡನಹಳ್ಳಿ ಪೊಲೀಸ್ ಠಾಣೆಯ ತಮ್ಮ ವಿರುದ್ಧ ದಾಖಲಾದ ಕ್ರಿಮಿನಲ್ ಪ್ರಕರಣ ಸಂಬಂಧ ಪೊಲೀಸ್ ಠಾಣೆಯ ಸಿಸಿಟಿವಿ ದೃಶ್ಯಾವಳಿ ಕೋರಿ ಫಾರೂಕ್ ಅರ್ಜಿ ಸಲ್ಲಿಸಿದ್ದರು.

ಎಹ್ತೇಶಮ್ ಕುತುಬುದ್ದೀನ್ ಸಿದ್ದಿಕಿವರ್ಸಸ್ ಇಂಟೆಲಿಜನ್ಸ್ ಬ್ಯೂರೊ ಪ್ರಕರಣ ಸಂಬಂಧ ದಿಲ್ಲಿ ಹೈಕೋರ್ಟ್ ನೀಡಿರುವ ತೀರ್ಪು ಆಧರಿಸಿ ರಾಜ್ಯ ಮಾಹಿತಿ ಆಯುಕ್ತ ಎಸ್.ಟಿ. ಪಾಟೀಲ್ ಈ ಆದೇಶ ನೀಡಿದ್ದಾರೆ.

ಎಲ್ಲ ಪೊಲೀಸ್ ಠಾಣೆಗಳಲ್ಲಿ ಸಿಸಿಟಿವಿ ಕ್ಯಾಮರಾಗಳನ್ನು ಅಳವಡಿಸುವುದು ಮತ್ತು ಸಿಸಿಟಿವಿ ಡೇಟಾ ಬ್ಯಾಕಪ್ ಅನ್ನು ಕನಿಷ್ಠ ಆರು ತಿಂಗಳವರೆಗೆ ಸಂರಕ್ಷಿಸುವುದರ ಜೊತೆಗೆ ಸಿಸಿಟಿವಿ ಕ್ಯಾಮರಾಗಳು ಸುಸ್ಥಿತಿಯಲ್ಲಿವೆ ಎಂಬುದನ್ನು ಆಗಿಂದ್ದಾಗಲೇ ಖಾತರಿ ಪಡಿಸಿಕೊಳ್ಳಬೇಕು ಎಂದು ಸುಪ್ರೀಂಕೋರ್ಟ್‌ನ ಇತ್ತೀಚಿನ ಆದೇಶವನ್ನು ಆಯೋಗವು ಉಲ್ಲೇಖಿಸಿದೆ.

ಇನ್ನು ಮುಂದೆ ಪೊಲೀಸ್ ಅಧಿಕಾರಿಗಳ ಖಾಸಗಿ ಮೊಬೈಲ್‌ನ ವಾಟ್ಸ್‌ಆ್ಯಪ್ ಸಂದೇಶಗಳು ಮತ್ತು ಸಾರ್ವಜನಿಕ ಆಡಳಿತಕ್ಕೆ ಒಳಪಡದ ಖಾಸಗಿ ವಸತಿ ಪ್ರದೇಶಗಳ ಸಿಸಿಟಿವಿ ದೃಶ್ಯಾವಳಿಗಳು ಆರ್‌ಟಿಐ ಕಾಯಿದೆ ಅಡಿ ಮಾಹಿತಿ ಕೇಳಲು ಬರುವುದಿಲ್ಲ ಎಂದು ಆಯೋಗ ಸ್ಪಷ್ಟಪಡಿಸಿದೆ.

ಫಾರೂಕ್ ಆಹ್ಮದ್ ಪ್ರಕರಣಕ್ಕೆ ಸಂಬಂಧಿಸಿದಂತೆ, ಅರ್ಜಿದಾರರಿಗೆ 2018ರ ಘಟನೆಯ ದಿನದ ಸಿಸಿಟಿವಿ ದೃಶ್ಯಾವಳಿ ಒದಗಿಸುವಂತೆ ಕಾಡುಗೊಂಡನಹಳ್ಳಿ ಠಾಣೆ ಪೊಲೀಸರಿಗೆ ಆದೇಶಿಸಿರುವ ರಾಜ್ಯ ಮಾನವ ಹಕ್ಕು ಆಯೋಗ ಮಾಹಿತಿ ನೀಡಲು ನಿರಾಕರಿಸಿದ ಪೊಲೀಸ್ ಸಬ್ ಇನ್ಸ್‌ಪೆಕ್ಟರ್‌ಗೆ ರೂ.10,000/– ದಂಡ ವಿಧಿಸಿದೆ. ಮಾಹಿತಿ ಒದಗಿಸದ ಹಿನ್ನೆಲೆಯಲ್ಲಿ ಸಂಬಂಧಿಸಿದ ಪೊಲೀಸ್ ಠಾಣೆಯ ಮೇಲ್ಮನವಿ ಸಲ್ಲಿಸಿರುವ ಅರ್ಜಿದಾರರಿಗೆ ರೂ.15,000 ಪರಿಹಾರ ನೀಡಬೇಕು ಎಂದು ಆದೇಶಿಸಿದೆ.

ಆಧಾರ:ವಿಜಯ ಕರ್ನಾಟಕ, ದಿನಾಂಕ:17.01.2021

## 6. ರಾಜ್ಯ – ಕೇಂದ್ರಕ್ಕೆ ನೋಟಿಸ್

ಬೆಂಗಳೂರಿನ ಸುತ್ತ ರಸ್ತೆ ನಿರ್ಮಾಣದಲ್ಲಿ ಅಕ್ರಮ ನಡೆದಿರುವ ಆರೋಪದ ಮೇಲೆ ಹೈಕೋರ್ಟ್ ರಾಜ್ಯ ಮತ್ತು ಕೇಂದ್ರ ಸರ್ಕಾರಗಳಿಗೆ ನೋಟಿಸ್ ನೀಡಿದೆ. ಬೆಂಗಳೂರು ಆವೃತ್ತ ರಸ್ತೆ ಎಂಬ ಹೆಸರಿನಲ್ಲಿ ರಾಜ್ಯದ ರಸ್ತೆ ಅಭಿವೃದ್ಧಿ ನಿಗಮ ಹೆಸರಿನಲ್ಲಿ ರಾಜ್ಯದ ರಸ್ತೆ ಅಭಿವೃದ್ದಿ ನಿಗಮ ಅಕ್ರಮವಾಗಿ 155 ಕಿ.ಮೀ. ರಸ್ತೆ ನಿರ್ಮಿಸುತ್ತಿದೆ ಎಂದು ಆರೋಪಿಸಿ ಹೈಕೋರ್ಟ್‌ನಲ್ಲಿ ಸಲ್ಲಿಸಲಾಗಿದ್ದ ವಿಚಾರಣೆ ನಡೆಸಿದ ನ್ಯಾಯಾಲಯ ಈ ಕ್ರಮ ಕೈಗೊಂಡಿದೆ.

ಜಟ್ಕಾ ಡಾಟ್ ಆರ್ಗ್ ಸೇರಿದಂತೆ ಮೂರು ಕಂಪನಿಗಳು ಸಲ್ಲಿಸಿದ ಅರ್ಜಿಯನ್ನು ವಿಚಾರಣೆ ನಡೆಸಿದ ನ್ಯಾಯಾಧೀಶ ಅಭಯ್ ಶ್ರೀನಿವಾಸ್ ಓಕಾ ಮತ್ತು ನ್ಯಾಯಾಧೀಶ ಸಚಿನ್ ಶಂಕರ್ ಮಗ್ದಮ್ ನೇತೃತ್ವದ ವಿಭಾಗೀಯ ಪೀಠ ಸರ್ಕಾರಕ್ಕೆ ನೋಟಿಸ್ ಜಾರಿಗೊಳಿಸಿತು. ಪರಿಸರ ಮೇಲಿನ ಪರಿಣಾಮ ಅಂದಾಜು (ಎನ್ವಿರಾನ್ಮೆಂಟ್ ಇಂಪ್ಯಾಕ್ಟ್ ಆಸೆಸ್ಮಂಟ್) ಅಧಿಸೂಚನೆ–2006ರ ನಿಯಮವನ್ನು ಉಲ್ಲಂಘಿಸಿ ಪೂರ್ವಾನುಮತಿಯಿಲ್ಲದೆ ರಸ್ತೆ ನಿರ್ಮಾಣ ನಡೆಸಲಾಗುತ್ತಿದೆ ಎಂದು ಅರ್ಜಿಯಲ್ಲಿ ದೂರಲಾಗಿತ್ತು.

ರಸ್ತೆ ನಿರ್ಮಾಣಕ್ಕೂ ಮೊದಲು ಅರಣ್ಯ ಸಂರಕ್ಷಣೆ ಕಾಯ್ದೆ ಹಾಗೂ ವನ್ಯಜೀವಿ ಮಂಡಳಿಯ ಸ್ಥಾಯಿ ಸಮಿತಿಯ ಯಾವುದೇ ಪೂರ್ವ ಶಿಫಾರಸ್ಸು ಪಡೆದಿಲ್ಲ ಎಂದು ಆರೋಪಿಸಿದ್ದ ಅರ್ಜಿದಾರರು ಪ್ರಸಕ್ತ ಯೋಜನೆಯು ಅಸ್ತಿತ್ವದಲ್ಲಿರುವ ಪ್ರಮುಖ ಜಿಲ್ಲಾ ರಸ್ತೆಗಳು, ರಾಜ್ಯ ಹೆದ್ದಾರಿಗಳು ಮತ್ತು ರಾಷ್ಟ್ರೀಯ ಹೆದ್ದಾರಿಗಳ ಸಂಯೋಜನೆಯಲ್ಲವಾದರೂ ಸಂಪೂರ್ಣ ಹೊಸ ರೈಲ್ವೆ ಓವರ್ ಬ್ರಿಡ್ಜಸ್, ರೈಲ್ವೆ ಅಂಡರ್ ಬ್ರಿಡ್ಜ್‌ಗಳು, ಗ್ರೇಡ್ ಸೆಪರೇಟರ್‌ಗಳು ಮತ್ತು ಎಲಿವೇಟೆಡ್ ಕಾರಿಡಾರ್ ನಿರ್ಮಾಣವನ್ನು ಒಳಗೊಂಡಿದೆ ಎಂದು ವಿವರಿಸಿದ್ದಾರೆ. ಈ ಯೋಜನೆಯು ಬೆಂಗಳೂರಿನಲ್ಲಿ ಪರಿಸರ ನಾಶಕ್ಕೆ ಕಾರಣವಾಗಲಿದ್ದು, ಬೆಂಗಳೂರು ಮತ್ತು ಸುತ್ತಮುತ್ತಲಿನ ಪ್ರದೇಶಗಳಲ್ಲಿ ಸುಮಾರು 8,561 ಮರಗಳನ್ನು ಕಡಿಯಲು ಕಾರಣವಾಗಲಿದೆ ಎಂದು ಅರ್ಜಿಯಲ್ಲಿ ಉಲ್ಲೇಖಿಸಲಾಗಿದೆ.

ಆಧಾರ:ಸಂಯುಕ್ತ ಕರ್ನಾಟಕ, ದಿನಾಂಕ:18.01.2021

## 7. ಸುಪ್ರೀಂಕೋರ್ಟ್ ಸಮಿತಿಯ ಮೊದಲ ಸಭೆ

ಕೃಷಿ ಕಾಯಿದೆ ಬಿಕ್ಕಟ್ಟು ಬಗೆಹರಿಸಲು ಸುಪ್ರೀಂಕೋರ್ಟ್ ರಚಿಸಿರುವ ತಜ್ಞರ ಸಮಿತಿಯ ಮೊದಲ ಸಭೆ ನಡೆಯಲಿದೆ.

ಸಮಿತಿಯ ಸದಸ್ಯರು ಹೊಸದಿಲ್ಲಿಯ ಪೂಸಾ ಕ್ಯಾಂಪಸ್‌ನಲ್ಲಿ ಸಭೆ ಸೇರಿ ಮುಂದಿನ ಕಾರ್ಯತಂತ್ರದ ಕುರಿತು ಚರ್ಚಿಸಲಿದ್ದೇವೆ. ಸಮಿತಿಯ ಕಾರ್ಯವ್ಯಾಪ್ತಿಯ ಚೌಕಟ್ಟಿನ ಕುರಿತು ಅಧಿಕೃತ ಆದೇಶ ತಲುಪಿದೆ. ಜನವರಿ 21 ರಿಂದ ಸಮಿತಿ ಪೂರ್ಣ ಪ್ರಮಾಣದಲ್ಲಿ ಕಾರ್ಯಾರಂಭ ಮಾಡಲಿದೆ ಎಂದು ಸದಸ್ಯ ಅನಿಲ್ ಘನವಂತ್ ತಿಳಿಸಿದ್ದಾರೆ.

ಸರ್ಕಾರ ಮತ್ತು ರೈತ ಸಂಘಟನೆಗಳ ನಡುವೆ 10ನೇ ಸುತ್ತಿನ ಮಾತುಕತೆ ನಡೆಯಲಿದೆ. ಈ ಕುರಿತು ಘನವಂತ್ ಅವರನ್ನು ಪ್ರಶ್ನಿಸಿದಾಗ ನಮ್ಮ ಪ್ರಯತ್ನದಿಂದಲೋ ಅಥವಾ ಸರ್ಕಾರದ ಪ್ರಯತ್ನದಿಂದಲೋ ಒಟ್ಟಾರೆ ಬಿಕ್ಕಟ್ಟು ಬಗೆಹರಿಯುವುದು ಮುಖ್ಯ. ನಾವು ಏನು ಮಾಡಬೇಕೋ ಅದನ್ನು ಮಾಡುತ್ತೇವೆ. ಸರ್ಕಾರ ಮಾತುಕತೆ ಮುಂದುವರಿಸಲಿ ಎಂದು ತಿಳಿಸಿದರು.

ಸುಪ್ರೀಂಕೋರ್ಟ್ ಜನವರಿ 11 ರಂದು ನೀಡಿದ ಮಧ್ಯಂತರ ತೀರ್ಪಿನಲ್ಲಿ ಮೂರು ಕೃಷಿ ಕಾಯಿದೆಗಳಿಗೆ ತಡೆ ನೀಡಿದಲ್ಲದೆ, ಬಿಕ್ಕಟ್ಟು ಬಗೆಹರಿಸಲು ತಜ್ಞರ ಸಮಿತಿ ರಚಿಸಿದೆ. ಭಾರತೀಯ ಕಿಸಾನ್ ಯೂನಿಯನ್ ಅಧ್ಯಕ್ಷ ಭೂಪಿಂದರ್ ಸಿಂಗ್ ಮಾನ್, ಅಂತರರಾಷ್ಟ್ರೀಯ ಆಹಾರ ನೀತಿ ಸಂಶೋಧನಾ ಸಂಸ್ಥೆಯ ದಕ್ಷಿಣ ಏಷ್ಯಾ ನಿರ್ದೇಶಕ ಡಾ: ಪ್ರಮೋದ್ ಕುಮಾರ್ ಜೋಶಿ, ಕೃಷಿ ಅರ್ಥಶಾಸ್ತ್ರಜ್ಞ ಅಶೋಕ್ ಗುಲಾಟಿ ಹಾಗೂ ಶೇತ್ಕರಿ ಸಂಘಟನೆ (ಮಹಾರಾಷ್ಟ್ರ) ಅಧ್ಯಕ್ಷ ಅನಿಲ್ ಘನವಂತ್ ಅವರನ್ನು ಸಮಿತಿ ಸದಸ್ಯರಾಗಿ ನೇಮಕ ಮಾಡಿದೆ. ಈ ಪೈಕಿ ತಾವು ಸಮಿತಿಯಿಂದ ಹೊರಬರುವುದಾಗಿ ಮಾನ್ ಘೋಷಿಸಿದ್ದಾರೆ.

ಸದಸ್ಯರೆಲ್ಲರೂ ಕೃಷಿ ಕಾಯಿದೆಗಳ ಪರ ಇರುವುದರಿಂದ ಇಡೀ ಸಮಿತಿಯನ್ನೇ ಹೊಸದಾಗಿ ರಚಿಸಬೇಕೆಂದು ಪ್ರತಿಭಟನಾ ನಿರತ ರೈತ ಸಂಘಟನೆಗಳು ಸುಪ್ರೀಂಕೋರ್ಟ್‌ಗೆ ಮನವಿ ಸಲ್ಲಿಸಿವೆ. ಇದರ ಮಧ್ಯೆಯೇ, ಸಮಿತಿ ಸಭೆ ಸೇರಲಿದೆ. ಮೊದಲ ಸಭೆ ನಡೆಸಿದ ದಿನದಿಂದ ಎರಡು ತಿಂಗಳೊಳಗಾಗಿ ಕೋರ್ಟ್‌ಗೆ ವರದಿ ಸಲ್ಲಿಸಬೇಕಿದೆ.

**ತೋಮರ್ ಸ್ಪಷ್ಟನೆ:** ಮಂಡಿ ವ್ಯವಸ್ಥೆ ವರ್ತಕರ ನೋಂದಣಿ ಸೇರಿದಂತೆ ರೈತ ಸಂಘಟನೆಗಳು ಸಂದೇಹ ವ್ಯಕ್ತಪಡಿಸಿರುವ ಸಂಗತಿಗಳ ಕುರಿತು ಸರ್ಕಾರ ಯಾವ ಕ್ರಮ ಕೈಗೊಂಡಿದ ಎನ್ನುವ

ಮಾಹಿತಿಯನ್ನು ನೀಡಿದ್ದೇವೆ. ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ (ಎಪಿಎಂಸಿ) ಮಂಡಿಗಳು ಮುಂದುವರಿಯಲಿವೆ. ಕನಿಷ್ಠ ಬೆಂಬಲ ಬೆಲೆ ವ್ಯವಸ್ಥೆಯಲ್ಲಿ ಯಾವುದೇ ಬದಲಾವಣೆ ಇಲ್ಲ ಎನ್ನುವುದನ್ನು ಮನವರಿಕೆ ಮಾಡಿಕೊಟ್ಟಿದ್ದೇವೆ. ಇಂಧನ ಕಾಯಿದೆ, ಕೃಷಿ ಕೊಳೆ ಸುಡುವುದನ್ನು ನಿಷೇಧಿಸುವ ಸುಗ್ರೀವಾಜ್ಞೆ ಕುರಿತಾಗಿಯೂ ಮಾತುಕತೆ ವೇಳೆ ಚರ್ಚೆ ನಡೆಸಿದ್ದೇವೆ. ರೈತ ಸಂಘಟನೆಗಳು ಮುಂದಿನ ಮಾತುಕತೆಯಲ್ಲಿ ಕಾಯಿದೆಗಳ ಸಮಗ್ರ ಚರ್ಚೆಗೆ ಮುಂದಾಗುತ್ತಾರೆಂಬ ವಿಶ್ವಾಸವಿದೆ ಎಂದು ಕೇಂದ್ರ ಕೃಷಿ ಸಚಿವ ನರೇಂದ್ರ ಸಿಂಗ್ ತೋಮರ್ ತಿಳಿಸಿದರು.

ದೇಶದ ಬಹುತೇಕ ರೈತರು ಹಾಗೂ ಕೃಷಿ ತಜ್ಞರು ನೂತನ ಕೃಷಿ ಕಾಯಿದೆಗಳನ್ನು ಸ್ವಾಗತಿಸಿದ್ದಾರೆ. ಈಗ ಸುಪ್ರೀಂ ಕೋರ್ಟ್ ತಡೆ ನೀಡಿರುವುದರಿಂದ ಸದ್ಯಕ್ಕೆ ಕಾಯಿದೆಗಳ ಜಾರಿ ಸಾಧ್ಯವಿಲ್ಲ ಎಂದು ತೋಮರ್ ಹೇಳಿದರು.

**40ಕ್ಕೂ ಹೆಚ್ಚು ರೈತರಿಗೆ ಸಮನ್ಸ್:** ಸಿಖ್ಸ್ ಫಾರ್ ಜಸ್ಟೀಸ್ ಸಂಘಟನೆ ವಿರುದ್ಧ ದಾಖಲಾಗಿರುವ ಪ್ರಕರಣಕ್ಕೆ ಸಂಬಂಧಿಸಿ ರಾಷ್ಟ್ರೀಯ ತನಿಖಾ ಸಂಸ್ಥೆಯು 40 ರೈತರಿಗೆ ಸಮನ್ಸ್ ಜಾರಿಗೊಳಿಸಿದೆ. ರೈತರನ್ನು ಪ್ರಚೋದಿಸಿ ಸರ್ಕಾರದ ವಿರುದ್ಧ ಪಿತೂರಿ ನಡೆಸಿದ ಆರೋಪವನ್ನು ಸಿಖ್ಸ್ ಫಾರ್ ಜಸ್ಟೀಸ್ ಸಂಘಟನೆ ವಿರುದ್ಧ ಹೊರಿಸಲಾಗಿದೆ. ಎನ್‌ಐಎ ಸಮನ್ಸ್ ಖಂಡಿಸಿರುವ ಶಿರೋಮಣಿ ಅಕಾಲಿದಳ ನಾಯಕ ಸುಖಬೀರ್ ಸಿಂಗ್ ಬಾದಲ್ ಅವರು ಪ್ರತಿಭಟನೆ ನಡೆಸುತ್ತಿರುವ ರೈತರು ದೇಶದ್ರೋಹಿಗಳಲ್ಲ. ರೈತರಿಗೆ ಎನ್‌ಐಎ ಸಮನ್ಸ್ ಜಾರಿಗೊಳಿಸಿರುವುದು ಖಂಡನೀಯ ಎಂದು ಹೇಳಿದ್ದಾರೆ.

ಆಧಾರ:ವಿಜಯ ಕರ್ನಾಟಕ, ದಿನಾಂಕ:18.01.2021

## 8. ರೇಸ್‌ಕೋರ್ಸ್‌ಗಳು ಸಹ ಆರ್‌ಟಿಐ ಅಡಿ ಮಾಹಿತಿ ನೀಡಬೇಕು: ಹೈಕೋರ್ಟ್

ಮೈಸೂರು ರೇಸ್ ಕ್ಲಬ್ ಮತ್ತು ಬೆಂಗಳೂರು ಟರ್ಫ್‌ಕ್ಲಬ್‌ನ (ರೇಸ್ ಕೋರ್ಸ್) ಎಲ್ಲ ವ್ಯವಹಾರಗಳು ಮಾಹಿತಿ ಹಕ್ಕು ಕಾಯಿದೆ ಅಡಿ ಬರುತ್ತದೆ ಎಂದು ಹೈಕೋರ್ಟ್ ಸ್ಪಷ್ಟಪಡಿಸಿದೆ. ಮೈಸೂರು ರೇಸ್ ಕ್ಲಬ್ ಮತ್ತು ಬೆಂಗಳೂರು ಟರ್ಫ್ ಕ್ಲಬ್ ರೇಸ್ ಕೋರ್ಸ್‌ಗಳು ಮಾಹಿತಿ ಹಕ್ಕು ಕಾಯಿದೆ ವ್ಯಾಪ್ತಿಗೆ ಬರಲಿವೆ ಎಂದು ಮಾಹಿತಿ ಹಕ್ಕು ಆಯೋಗ 2014ರಲ್ಲಿ ಆದೇಶಿಸಿತ್ತು. ಇದನ್ನು ಪ್ರಶ್ನಿಸಿ ಎರಡೂ ಸಂಸ್ಥೆಗಳು ಹೈಕೋರ್ಟ್‌ನಲ್ಲಿ ಅರ್ಜಿ ಸಲ್ಲಿಸಿದ್ದವು. ಈ ಅರ್ಜಿಗಳ ವಿಚಾರಣೆ ನಡೆಸಿದ ನ್ಯಾ.ಪಿ.ಬಿ.ಭಜಂತ್ರಿ ಅವರಿದ್ದ ನ್ಯಾಯಪೀಠ, ಮಾಹಿತಿ ಹಕ್ಕು ಆಯೋಗದ ಆದೇಶವನ್ನು ಎತ್ತಿ ಹಿಡಿದಿದೆ. ಈ ಎರಡು ರೇಸ್‌ಕೋರ್ಸ್‌ಗಳಿಗೆ ರಿಯಾಯಿತಿ ಬೆಲೆಯಲ್ಲಿ ಸರ್ಕಾರ ಗುತ್ತಿಗೆಗೆ ಜಮೀನು ಮಂಜೂರು ಮಾಡಿದೆ. ಆ ಮೂಲಕ ಪರೋಕ್ಷವಾಗಿ ಆರ್ಥಿಕ ನೆರವು ನೀಡಿದೆ. ಸರ್ಕಾರದ ಆಸ್ತಿ ಸಾರ್ವಜನಿಕರ ಆಸ್ತಿಯಾಗಿದ್ದು, ಜನತೆಗೆ ಉತ್ತರದಾಯಿಯಾಗಿರಬೇಕು ಎಂದು ನ್ಯಾಯಪೀಠ ನಿರ್ದೇಶಿಸಿದೆ.

ಆಧಾರ: ಕನ್ನಡ ಪ್ರಭ, ದಿನಾಂಕ: 18.01.2021

## 9. ರ್‍ಯಾಲಿ: ಪೊಲೀಸರಿಗೆ ಅಧಿಕಾರ

'ಪ್ರತಿಭಟನಾ ನಿರತ ರೈತರು ಗಣರಾಜ್ಯೋತ್ಸವದಂದು ಟ್ರ್ಯಾಕ್ಟರ್ ರ್‍ಯಾಲಿ ನಡೆಸಲು ಉದ್ದೇಶಿಸಿರುವುದು ಕಾನೂನು ಸುವ್ಯವಸ್ಥೆಗೆ ಸಂಬಂಧಿಸಿದ ವಿಷಯವಾಗಿದ್ದು, ಅನುಮತಿ ನೀಡಬೇಕೇ ಬೇಡವೇ ಎಂಬುದು ದೆಹಲಿ ಪೊಲೀಸರಿಗೆ ಬಿಟ್ಟ ವಿಚಾರ' ಎಂದು ಸುಪ್ರೀಂಕೋರ್ಟ್ ಅಭಿಪ್ರಾಯಪಟ್ಟಿದೆ.

ಉದ್ದೇಶಿತ ಟ್ರ್ಯಾಕ್ಟರ್ ರ್‍ಯಾಲಿಯು ಗಣರಾಜ್ಯೋತ್ಸವ ಸಮಾರಂಭಕ್ಕೆ ಅಡ್ಡಿಯಾಗುವ ಸಾಧ್ಯತೆ ಇದ್ದು, ಅದಕ್ಕೆ ಅಥವಾ ಯಾವುದೇ ರೀತಿಯ ಪ್ರತಿಭಟನೆಗೆ ತಡೆಯಾಜ್ಞೆ ನೀಡಬೇಕು ಎಂದು ಕೋರಿ ಕೇಂದ್ರ ಸರ್ಕಾರ ಸಲ್ಲಿಸಿದ್ದ ಅರ್ಜಿಯ ವಿಚಾರಣೆ ನಡೆಸಿದ ಮುಖ್ಯ ನ್ಯಾಯಮೂರ್ತಿ ಎಸ್.ಎ. ಬೊಬಡೆ ನೇತೃತ್ವದ ನ್ಯಾಯಪೀಠ, ಈ ಬಗ್ಗೆ ನಿರ್ಧಾರ ತೆಗೆದುಕೊಳ್ಳಲು ಪೊಲೀಸರಿಗೆ ಅಧಿಕಾರವಿದೆ ಎಂದಿದೆ.

'ಪೊಲೀಸರ ಅಧಿಕಾರಗಳು ಯಾವುವು ಮತ್ತು ಅವುಗಳನ್ನು ಹೇಗೆ ಬಳಸಬೇಕು ಎಂದು ಸುಪ್ರೀಂ ಕೋರ್ಟ್ ಹೇಳಬೇಕೇ, ಏನು ಮಾಡಬೇಕೆಂದು ನಾವು ನಿಮಗೆ ಹೇಳಲು ಹೋಗುವುದಿಲ್ಲ' ಎಂದು

ನ್ಯಾಯಮೂರ್ತಿಗಳಾದ ಎಲ್.ಎನ್.ರಾವ್ ಮತ್ತು ವಿನೀತ್ ಸರನ್ ಅವರನ್ನು ಒಳಗೊಂಡ ನ್ಯಾಯಪೀಠ ಹೇಳಿತು.

'ರೈತರು ದೆಹಲಿಗೆ ಪ್ರವೇಶಿಸುವ ಪ್ರಶ್ನೆಯು ಕಾನೂನು ಮತ್ತು ಸುವ್ಯವಸ್ಥೆಗೆ ಸಂಬಂಧಿಸಿದೆ. ಅದನ್ನು ಪೊಲೀಸರು ನಿರ್ಧರಿಸುತ್ತಾರೆ' ಎಂದು ಪೀಠ, ಈ ವಿಷಯವನ್ನು ಎದುರಿಸಲು ನಿಮಗೆ ಎಲ್ಲ ಅಧಿಕಾರವಿದೆ ಎಂದು ಅಟಾರ್ನಿ ಜನರಲ್ ಅವರಿಗೆ ತಿಳಿಸಿತು. ವಿಚಾರಣೆಯನ್ನು ಜನವರಿ 20ಕ್ಕೆ ಮುಂದೂಡಲಾಯಿತು.

ಗಣರಾಜ್ಯೋತ್ಸವ ಆಚರಣೆಗೆ ಅಡ್ಡಿಪಡಿಸುವ ಮತ್ತು ತೊಂದರೆ ನೀಡಲು ಪ್ರಯತ್ನಿಸುವ ಯಾವುದೇ ಉದ್ದೇಶಿತ ಮೆರವಣಿಗೆ ಅಥವಾ ಪ್ರತಿಭಟನೆಯು 'ರಾಷ್ಟ್ರಕ್ಕೆ ಮುಜುಗರ' ಉಂಟು ಮಾಡುತ್ತದೆ ಎಂದು ದೆಹಲಿ ಪೊಲೀಸರ ಮೂಲಕ ಸಲ್ಲಿಸಿದ ಅರ್ಜಿಯಲ್ಲಿ ಕೇಂದ್ರ ಸರ್ಕಾರ ಹೇಳಿತು.

ಸುಪ್ರೀಂಕೋರ್ಟ್ ನೇಮಿಸಿರುವ ನಾಲ್ವರು ಸದಸ್ಯರ ಸಂಧಾನ ಸಮಿತಿಯಲ್ಲಿ ಮೂವರನ್ನು ಬದಲಿಸುವಂತೆ ಕೋರಿ ಸಲ್ಲಿಸಲಾಗಿರುವ ಅರ್ಜಿಯ ವಿಚಾರಣೆ ನಡೆಸಿದ ಪೀಠ ಈ ಬಗ್ಗೆಯೂ ಮುಂದಿನ ವಿಚಾರಣೆಯಲ್ಲಿ ಪರಿಶೀಲಿಸುವುದಾಗಿ ತಿಳಿಸಿತು.

**ಮಾತುಕತೆ ನಾಳೆಗೆ ಮುಂದೂಡಿಕೆ**

ಹೊಸ ಕೃಷಿ ಕಾಯ್ದೆ ಕುರಿತು ಸರ್ಕಾರ ಮತ್ತು ಪ್ರತಿಭಟನಾ ನಿರತ ರೈತರ ಪ್ರತಿನಿಧಿಗಳ ನಡುವಣ 10ನೇ ಸುತ್ತಿನ ಮಾತುಕತೆಯನ್ನು ಮುಂದೂಡಲಾಗಿದೆ. ಆದಷ್ಟು ಬೇಗ ಬಿಕ್ಕಟ್ಟನ್ನು ಬಗೆಹರಿಸಲು ಎರಡೂ ಕಡೆಯವರು ನಿರ್ಧರಿಸಿದ್ದಾರೆ ಆದರೆ ಸೈದ್ಧಾಂತಿಕ ಭಿನ್ನಾಭಿಪ್ರಾಯ ಇರುವವರ ಮಧ್ಯ ಪ್ರವೇಶದಿಂದಾಗಿ ಇದು ವಿಳಂಬ ಆಗುತ್ತಿದೆ ಎಂದು ಕೇಂದ್ರ ಸರ್ಕಾರ ಹೇಳಿದೆ.

ಮಾತುಕತೆಯು ಜನವರಿ 19ಕ್ಕೆ ಬದಲು ಜನವರಿ 20ರಂದು ಮಧ್ಯಾಹ್ನ 2 ಗಂಟೆಗೆ ವಿಜ್ಞಾನ ಭವನದಲ್ಲಿ ನಡೆಯಲಿದೆ ಎಂದು ಕೃಷಿ ಸಚಿವಾಲಯದ ಪ್ರಕಟಣೆ ತಿಳಿಸಿದೆ. ಬಿಕ್ಕಟ್ಟನ್ನು ಇತ್ಯರ್ಥಪಡಿಸಲು ಸುಪ್ರೀಂಕೋರ್ಟ್ ನೇಮಕ ಮಾಡಿರುವ ಸಮಿತಿಯು ತನ್ನ ಮೊದಲ ಸಭೆಯನ್ನು ನಡೆಸಲಿದೆ.

'ಅನಿವಾರ್ಯ ಕಾರಣಗಳಿಂದ ಸಭೆ ಮುಂದಕ್ಕೆ ಹೋಗಿದೆ. ನೀವು ಸಭೆಯಲ್ಲಿ ಭಾಗವಹಿಸಬೇಕು' ಎಂದು ಕೃಷಿ ಸಚಿವಾಲಯದ ಕಾರ್ಯದರ್ಶಿ ಸಂಜಯ್ ಅಗರ್‌ವಾಲ್ ಅವರು 40 ರೈತ ಸಂಘಟನೆಗಳ ಸದಸ್ಯರಿಗೆ ಬರೆದ ಪತ್ರದಲ್ಲಿ ಕೋರಿದ್ದಾರೆ.

'ರಾಜ್‌ಪಥ್‌ಗೆ ಹೋಗುವುದಿಲ್ಲ': 'ಶಾಂತಿಯುತವಾಗಿ ಟ್ರ್ಯಾಕ್ಟರ್ ರ್‍ಯಾಲಿ ನಡೆಸಲು ರೈತರಿಗೆ ಸಂವಿಧಾನ ಬದ್ಧ ಹಕ್ಕಿದೆ' ಎಂದು ಪ್ರತಿಭಟನಾನಿರತ ರೈತ ಮುಖಂಡರು ಹೇಳಿದ್ದಾರೆ. ಜನವರಿ 26ರಂದು ನಡೆಯುವ ಉದ್ದೇಶಿತ ಕಾರ್ಯಕ್ರಮದಲ್ಲಿ ಸಾವಿರಾರು ಜನರು ಭಾಗವಹಿಸಲಿದ್ದಾರೆ ಎಂದು ಅವರು ಪ್ರತಿಪಾದಿಸಿದ್ದಾರೆ.

'ರೈತರು ರಾಜ್‌ಪಥ್ ಮತ್ತು ಇತರ ಅತಿ ಭದ್ರತೆಯ ಪ್ರದೇಶಗಳಲ್ಲಿ ರ್‍ಯಾಲಿ ನಡೆಸಲು ಹೋಗುವುದಿಲ್ಲ. ಇದರಿಂದಾಗಿ ಗಣರಾಜ್ಯೋತ್ಸವ ಮೆರವಣಿಗೆಗೆ ಅಡ್ಡಿಯಾಗುವುದಿಲ್ಲ' ಎಂದು ಭಾರತೀಯ ಕಿಸಾನ್ ಯೂನಿಯನ್ (ಲಖೋವಾಲ್) ಪಂಜಾಬ್ ಘಟಕದ ಪ್ರಧಾನ ಕಾರ್ಯದರ್ಶಿ ಪರಮಜಿತ್ ಸಿಂಗ್ ತಿಳಿಸಿದ್ದಾರೆ.

'ನಾವು ಸರ್ಕಾರಿ ಸಮಾರಂಭ ನಡೆಯುವ ಯಾವುದೇ ಸ್ಥಳಕ್ಕೆ ಹೋಗುವುದಿಲ್ಲ. ಆದರೂ ಕಾನೂನು ಮತ್ತು ಸುವ್ಯವಸ್ಥೆಗೆ ಅಡ್ಡಿಯಾಗುತ್ತದೆ ಎಂಬಂತಿದ್ದರೆ, ದೆಹಲಿ ಪೊಲೀಸರು ಟ್ರ್ಯಾಕ್ಟರ್ ರ್‍ಯಾಲಿಗೆ ಪರ್ಯಾಯ ಮಾರ್ಗಗಳನ್ನು ಸೂಚಿಸಬಹುದು. ರೈತರ ಸಮಿತಿಯು ಆ ಬಗ್ಗೆ ಚಿಂತನೆ ನಡೆಸುವುದು. ಆದರೆ ರ್‍ಯಾಲಿ ನಡೆಸುವುದು ಖಚಿತ' ಎಂದು ಅಖಿಲ ಭಾರತ ಕಿಸಾನ್ ಸಭೆಯ ಉಪಾಧ್ಯಕ್ಷ (ಪಂಜಾಬ್) ಲಖ್ಬೀರ್ ಸಿಂಗ್ ಹೇಳಿದ್ದಾರೆ.

ಆಧಾರ: ಪ್ರಜಾವಾಣಿ, ದಿನಾಂಕ:19.01.2021

## 10. ಪ್ರಚೋದಕ ಟಿವಿ ಕಾರ್ಯಕ್ರಮ ನಿರ್ಬಂಧಿಸಿ: ಕೇಂದ್ರಕ್ಕೆ ಸುಪ್ರೀಂ

ದೆಹಲಿಯಲ್ಲಿ ನಡೆದ ಹಿಂಸಾಚಾರಕ್ಕೆ ಸಂಬಂಧಿಸಿದಂತೆ ಪ್ರಚೋದನಕಾರಿ ಟಿವಿ ಕಾರ್ಯಕ್ರಮಗಳನ್ನು ನಿಯಂತ್ರಿಸಲು ಕೇಂದ್ರ ಸರ್ಕಾರ ವಿಫಲವಾಗಿದೆ ಎಂದು ಸರ್ಕಾರವನ್ನು ಸುಪ್ರೀಂ ಕೋರ್ಟ್ ತರಾಟೆಗೆ ತೆಗೆದುಕೊಂಡಿದೆ.

ಕಳೆದ ವರ್ಷ ತಬ್ಲೀಘಿ ಜಮಾತ್ ಸಭೆಯ ಬಗ್ಗೆ ಮಾಧ್ಯಮಗಳಲ್ಲಿ ಪ್ರಸಾರವಾದ ವರದಿಗಳನ್ನು ಪ್ರಶ್ನಿಸಿ ಸಲ್ಲಿಸಿದ್ದ ಅರ್ಜಿಗಳ ವಿಚಾರಣೆ ನಡೆಸುವ ವೇಳೆ ಸುಪ್ರೀಂಕೋರ್ಟ್ ಈ ಅಭಿಪ್ರಾಯ ವ್ಯಕ್ತಪಡಿಸಿದೆ. ರೈತರು ಹಮ್ಮಿಕೊಂಡಿದ್ದ ಟ್ರ್ಯಾಕ್ಟರ್ ಪರೇಡ್ ಸಂದರ್ಭದಲ್ಲಿ ದೆಹಲಿಯ ಕೆಲವು ಭಾಗಗಳಲ್ಲಿ ಸರ್ಕಾರ ಇಂಟರ್‌ನೆಟ್ ಸೇವೆ ಸ್ಥಗಿತಗೊಳಿಸಿದ ಕ್ರಮವನ್ನು ಉಲ್ಲೇಖಿಸಿದ ಸುಪ್ರೀಂಕೋರ್ಟ್, ಸಮಸ್ಯೆಗಳು ಎದುರಾದ ಸಂದರ್ಭದಲ್ಲಿ ಸುದ್ದಿ ವಾಹಿನಿಗಳು ಪ್ರಚೋದಿಸುವ ಕಾರ್ಯಕ್ರಮಗಳನ್ನು ಪ್ರಸಾರ ಮಾಡಬಾರದು. ಕಾನೂನು ಸುವ್ಯವಸ್ಥೆಯ ದೃಷ್ಟಿಯಿಂದ ಇಂತಹ ಕಾರ್ಯಕ್ರಮಗಳಿಗೆ ಸರ್ಕಾರ ಕಡಿವಾಣ ಹಾಕಬೇಕು' ಎಂದು ಹೇಳಿರುತ್ತದೆ.

ಆಧಾರ: ಕನ್ನಡಪ್ರಭ, ದಿನಾಂಕ:29.01.2021.

## 11. ಕರ್ನಾಟಕ ಭೂಕಬಳಿಕೆ ನಿಷೇಧ ಕಾಯ್ದೆ ಎತ್ತಿಹಿಡಿದ ಹೈಕೋರ್ಟ್

ಸರ್ಕಾರಿ ಜಮೀನು ಕಬಳಿಕೆ ತಡೆಯುವ ಉದ್ದೇಶದಿಂದ ರಾಜ್ಯ ಸರ್ಕಾರ ಜಾರಿಗೆ ತಂದ 'ಕರ್ನಾಟಕ ಭೂ ಕಬಳಿಕೆ ನಿಷೇಧ ಕಾಯ್ದೆ–2011 ಸಂವಿಧಾನ ಬದ್ಧವಾಗಿದೆ ಎಂದು ಹೈಕೋರ್ಟ್ ಮಹತ್ವದ ತೀರ್ಪು ನೀಡಿದೆ. ಕಾಯ್ದೆಯ ಸಿಂಧುತ್ವವನ್ನು ಪ್ರಶ್ನಿಸಿ ಸಲ್ಲಿಕೆಯಾಗಿದ್ದ ಸುಮಾರು 200ಕ್ಕೂ ಹೆಚ್ಚು ಅರ್ಜಿಗಳ ವಿಚಾರಣೆ ನಡೆಸಿದ ಹಿರಿಯ ನ್ಯಾಯಮೂರ್ತಿ ಅರವಿಂದ್ ಕುಮಾರ್ ಮತ್ತು ನ್ಯಾ.ಬಿ.ಎ.ಪಾಟೀಲ್ ಅವರಿದ್ದ ವಿಭಾಗೀಯ ಪೀಠ ಈ ತೀರ್ಪು ನೀಡಿದೆ. ಕರ್ನಾಟಕ ಭೂ ಕಬಳಿಕೆ ನಿಷೇಧ ಕಾಯ್ದೆ–2011ರಡಿ ವಿಶೇಷ ನ್ಯಾಯಾಲಯಕ್ಕೆ ಮ್ಯಾಜಿಸ್ಟ್ರೇಟ್ ಅಧಿಕಾರ ನೀಡಿರುವುದನ್ನು ಕಾನೂನುಬಾಹಿರ ಎಂಬುದಾಗಿ ಘೋಷಿಸಬೇಕೆಂದು ಅರ್ಜಿದಾರರು ಮಾಡಿದ್ದ ಮನವಿಯನ್ನು ಪುರಸ್ಕರಿಸಲು ಹೈಕೋರ್ಟ್ ನಿರಾಕರಿಸಿದೆ.

ಆಧಾರ: ಉದಯವಾಣಿ, ದಿನಾಂಕ:29.01.2021.

## 12. ಬೆಂಗಳೂರಿನಲ್ಲಿ ದೇಶದ ಮೊದಲ ವಾಣಿಜ್ಯ ಕೋರ್ಟ್

ಪ್ರಮುಖ ವಾಣಿಜ್ಯ ತಾಣವಾಗಿ ರೂಪುಗೊಂಡಿರುವ ಬೆಂಗಳೂರು ನಗರದಲ್ಲಿ ವಾಣಿಜ್ಯ ವ್ಯಾಜ್ಯಗಳ ಶೀಘ್ರ ವಿಲೇವಾರಿಗೆ ದೇಶದಲ್ಲಿಯೇ ಮೊದಲ ವಾಣಿಜ್ಯ ಕೋರ್ಟ್‌ಗಳನ್ನು ಆರಂಭಿಸಲಾಗಿದೆ. ಬೆಂಗಳೂರು ನಗರ ಜಿಲ್ಲೆಗೆ 8 ಕೋರ್ಟ್ ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ 1 ಕೋರ್ಟ್ ಆರಂಭಿಸಲಾಗಿದ್ದು, ಕ್ರಮವಾಗಿ 5183 ಮತ್ತು 1768 ವಾಣಿಜ್ಯ ಕೇಸುಗಳನ್ನು ಆ ಕೋರ್ಟ್‌ಗಳಿಗೆ ವರ್ಗಾಯಿಸಲಾಗಿದೆ.

ಕರ್ನಾಟಕ ನ್ಯಾಯಾಂಗ ಅಕಾಡೆಮಿಯು ರಾಜ್ಯ ಸರ್ಕಾರದ ಸಹಯೋಗದಲ್ಲಿ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಸುಪ್ರೀಂಕೋರ್ಟ್‌ನ ಹಿರಿಯ ನ್ಯಾಯಮೂರ್ತಿ ಮೋಹನ್ ಶಾಂತನ ಗೌಡರ್ ಅವರು ವಿಡಿಯೋ ಕಾನ್ಫರೆನ್ಸ್ ಮೂಲಕ ವಾಣಿಜ್ಯ ಕೋರ್ಟ್‌ಗಳನ್ನು ಉದ್ಘಾಟಿಸಿದರು. ಇದೇ ವೇಳೆ ಇತರೆ ಹಲವು ಯೋಜನೆಗಳ ಉದ್ಘಾಟನೆಯೂ ನಡೆಯಿತು.

ಹೈಕೋರ್ಟ್‌ನ ಮುಖ್ಯ ನ್ಯಾಯಮೂರ್ತಿ ಎ.ಎಸ್.ಓಕಾ ಮಾತನಾಡಿ, "ಇತರ ರಾಜ್ಯಗಳಿಗೆ ಹೋಲಿಸಿದರೆ ಕರ್ನಾಟಕದಲ್ಲಿ ನ್ಯಾಯಾಲಯಗಳಿಗೆ ಉತ್ತಮ ಮೂಲಸೌಕರ್ಯವಿದೆ, ಅದನ್ನು ಸಮರ್ಥವಾಗಿ ಬಳಸಿಕೊಂಡು ನ್ಯಾಯಾಂಗ ಅಧಿಕಾರಿಗಳು ಪ್ರಕರಣಗಳ ತ್ವರಿತ ವಿಲೇವಾರಿಗೆ ಶ್ರಮಿಸಬೇಕು. ಆ ಮೂಲಕ ಕರ್ನಾಟಕ ನ್ಯಾಯದಾನದಲ್ಲಿ ದೇಶದಲ್ಲಿಯೇ ಮುಂಚೂಣಿಗೆ ಬರಬೇಕು" ಎಂದು ಕರೆ ನೀಡಿದರು.

ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ, "ಕಕ್ಷಿದಾರರಿಗೆ ಸಕಾಲದಲ್ಲಿ ನ್ಯಾಯದಾನ ದೊರಕಿಸಿ ಕೊಡಲು ನ್ಯಾಯಾಂಗ ಕ್ಷೇತ್ರಕ್ಕೆ ಎಲ್ಲ ಅಗತ್ಯ ಮೂಲಸೌಕರ್ಯ ಒದಗಿಸಲು ಸರ್ಕಾರ ಬದ್ಧವಾಗಿದೆ" ಎಂದರು.

ಸುಪ್ರೀಂಕೋರ್ಟ್‌ನ ನ್ಯಾಯಮೂರ್ತಿಗಳಾದ ಅಬ್ದುಲ್ ನಜೀರ್ ಮತ್ತು ಎ.ಎಸ್.ಬೋಪಣ್ಣ, ಉಪ ಮುಖ್ಯಮಂತ್ರಿ ಗೋವಿಂದ ಕಾರಜೋಳ, ಗೃಹ ಸಚಿವ ಬಸವರಾಜ ಬೊಮ್ಮಾಯಿ, ಹೈಕೋರ್ಟ್‌ನ ಹಿರಿಯ ನ್ಯಾಯಮೂರ್ತಿಗಳಾದ ಸತೀಶ್ ಚಂದ್ರ, ಬಿ.ವಿ. ನಾಗರತ್ನ, ಅರವಿಂದ್ ಕುಮಾರ್, ಎಎಸ್‌ಜಿ ಎಂ.ಬಿ. ನರಗುಂದ್, ಅಡ್ವೊಕೇಟ್ ಜನರಲ್ ಪ್ರಭುಲಿಂಗ ನಾವಡಗಿ ಮತ್ತಿತರರು ಭಾಗವಹಿಸಿದ್ದರು.

**ಯಾವ್ಯಾವ ಕಾರ್ಯಕ್ಕೆ ಚಾಲನೆ:–**

- ಮಧ್ಯಸ್ಥಿಕೆ ಕೇಂದ್ರದ ಹೊಸ ಕಟ್ಟಡಕ್ಕೆ ಶಂಕುಸ್ಥಾಪನೆ: ಸಿದ್ದಯ್ಯ ರಸ್ತೆಯಲ್ಲಿರುವ ನ್ಯಾಯದೇಗುಲದ ಪಕ್ಕ ತಲೆ ಎತ್ತಲಿರುವ 120 ಕೋಟಿ ವೆಚ್ಚದ ಯೋಜನೆ.
- ವಾಣಿಜ್ಯ ಕೋರ್ಟ್ ಸಂಕೀರ್ಣ: ಜಿಪಿಓ ಸಮೀಪದ ಬಿಎಸ್‌ಎನ್‌ಎಲ್ ಕಟ್ಟಡದಲ್ಲಿ ಬೆಂಗಳೂರು ನಗರದ 8 ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಯ 1 ವಾಣಿಜ್ಯ ಕೋರ್ಟ್ ಕಾರ್ಯಾರಂಭ.
- ಕಾನೂನು ಸೇವಾ ಪ್ರಾಧಿಕಾರದ ಥೀಮ್ ಸಾಂಗ್: ಗಾಯಕ ವಿಜಯ್ ಪ್ರಕಾಶ್ ಗಾಯನದಲ್ಲಿ ಜನರ ಮನೆ ಬಾಗಿಲಿಗೆ ನ್ಯಾಯದಾನ ನೀಡುವ ಕುರಿತ ಕನ್ನಡದ ಹಾಡು ಗಾಯನ ಸೆಳೆಯುತ್ತದೆ.
- ಜಸ್ಟೀಸ್ ಕ್ಲಾಕ್: ಹೈಕೋರ್ಟ್ ಆವರಣದಲ್ಲಿ ಸ್ಥಾಪಿಸಿರುವ ಈ ಗಡಿಯಾರಾಕಾರದ ಡಿಸ್‌ಪ್ಲೇ ಬೋರ್ಡ್‌ನಲ್ಲಿ ನಾನಾ ನ್ಯಾಯಾಲಯಗಳಲ್ಲಿ ಬಾಕಿ ಇರುವ ಕೇಸುಗಳ ವಿವರ, ಇತ್ಯರ್ಥವಾದ ಕೇಸುಗಳೆಷ್ಟು ಎಂಬ ವಿವರ ದೊರೆಯಲಿದೆ.
- 2ನೇ ಹಂತದ ಕಟ್ಟಡಕ್ಕೆ ಶಂಕುಸ್ಥಾಪನೆ: 96 ಕೋಟಿ ವೆಚ್ಚದ ಕಟ್ಟಡದಲ್ಲಿ ನ್ಯಾಯಾಂಗ ಅಧಿಕಾರಿಗಳ ತರಬೇತಿಗೆ ವ್ಯವಸ್ಥೆ.
- ಪೊಲೀಸ್ ಐಟಿ ಜೊತೆ ಐಸಿಜೆಎಸ್ ಸಂಯೋಜನೆ: ಪೊಲೀಸ್ ಇಲಾಖೆಯ ಮಾಹಿತಿ ತಂತ್ರಜ್ಞಾನದ ಜೊತೆ ಕೋರ್ಟ್‌ಗಳ ತಂತ್ರಾಂಶವನ್ನು ಸಂಯೋಜಿಸಲಾಗಿದ್ದು, ಪೊಲೀಸರು ಎಫ್‌ಐಆರ್ ದಾಖಲಿಸುತ್ತಿದ್ದಂತೆಯೇ ಕೋರ್ಟ್‌ಗಳಿಗೆ ಡಿಜಿಟಲ್ ಸಹಿ ಇರುವ ಎಫ್‌ಐಆರ್‌ಗಳು ಲಭ್ಯವಾಗುತ್ತವೆ.

ಆಧಾರ: ವಿಜಯ ಕರ್ನಾಟಕ, ದಿನಾಂಕ: 07.02.2021

## 13. ವಿದ್ಯಾವಂತ ಪತ್ನಿ ಜೀವನಾಂಶಕ್ಕೆ ಅರ್ಹಳು

ಪತ್ನಿ ವಿದ್ಯಾವಂತೆ ಎಂಬ ಕಾರಣಕ್ಕೆ ಆಕೆಗೆ ಜೀವನಾಂಶ ನೀಡಲು ಪತಿ ನಿರಾಕರಿಸುವಂತಿಲ್ಲ ಎಂದು ಹೈಕೋರ್ಟ್ ಮಹತ್ವದ ತೀರ್ಪು ನೀಡಿದೆ.

ಕೌಟುಂಬಿಕ ಪ್ರಕರಣವೊಂದರಲ್ಲಿ ದಂಪತಿ ನಡುವಿನ ವಿವಾಹವನ್ನು ಅನೂರ್ಜಿತಗೊಳಿಸಿ, ಪತ್ನಿಗೆ ಮಾಸಿಕ ರೂ.3 ಸಾವಿರ ಜೀವನಾಂಶ ನೀಡುವಂತೆ ಮೈಸೂರಿನ ಕೌಟುಂಬಿಕ ನ್ಯಾಯಾಲಯ ನೀಡಿದ್ದ ಆದೇಶ ಪ್ರಶ್ನಿಸಿ ಪತಿ ಹೈಕೋರ್ಟ್‌ಗೆ ಮರು ಪರಿಶೀಲನಾ ಅರ್ಜಿ ಸಲ್ಲಿಸಿದ್ದರು. ಅರ್ಜಿಯನ್ನು ಇತ್ತೀಚೆಗೆ ವಜಾಗೊಳಿಸಿರುವ ನ್ಯಾಯಮೂರ್ತಿ ಎಚ್.ಬಿ. ಪ್ರಭಾಕರ ಶಾಸ್ತ್ರಿ ಅವರಿದ್ದ ಪೀಠ, ಪತ್ನಿ ವಿದ್ಯಾವಂತೆ ಎಂಬ ಕಾರಣಕ್ಕೆ ಆಕೆಗೆ ಜೀವನಾಂಶ ನೀಡದಿರಲು ಸಾಧ್ಯವಿಲ್ಲ. ವಿದ್ಯಾರ್ಹತೆ ಇದ್ದ ಮಾತ್ರಕ್ಕೆ ಉದ್ಯೋಗ ಪಡೆದು ತನ್ನ ಜೀವನ ನಿಭಾಯಿಸುತ್ತಾಳೆಂದು ಹೇಳಲಾಗುವುದಿಲ್ಲ ಎಂದು ಅಭಿಪ್ರಾಯ ವ್ಯಕ್ತಪಡಿಸಿ, ಕೌಟುಂಬಿಕ ನ್ಯಾಯಾಲಯದ ಆದೇಶದಲ್ಲಿ ಮಧ್ಯಪ್ರವೇಶಿಸುವ ಅಗತ್ಯತೆ ಕಂಡುಬರುತ್ತಿಲ್ಲ ಎಂದು ಹೇಳಿದೆ.

**ಹೈಕೋರ್ಟ್ ಹೇಳಿದ್ದೇನು:** ಪತ್ನಿ ಅನಾರೋಗ್ಯ ಮರೆಮಾಚಿ ವಂಚಿಸಿದ್ದಾರೆ ಎಂಬುದಕ್ಕೆ ಸೂಕ್ತ ಸಾಕ್ಷ್ಯಾಧಾರಗಳಿಲ್ಲ. ಪತಿ ಆರ್ಥಿಕವಾಗಿ ಸದೃಢವಾಗಿಲ್ಲ ಎಂದು ಹೇಳಲಾಗಿದೆ. ಅಮಿಕಸ್ ಕ್ಯೂರಿ ಕಲೆ ಹಾಕಿರುವ ಮಾಹಿತಿ ಪ್ರಕಾರ, ಅರ್ಜಿದಾರರಿಗೆ ಬೆಂಗಳೂರಿನಲ್ಲಿ 2 ಟೈಲರಿಂಗ್ ಶಾಪ್‌ಗಳಿದ್ದು, ಪ್ರತಿದಿನ 3 ರಿಂದ ರೂ.5 ಸಾವಿರ ದುಡಿಯುತ್ತಿದ್ದಾರೆ. ಅವರ ಹೆಸರಿನಲ್ಲಿ ಸ್ಥಿರಾಸ್ತಿಗಳಿವೆ. ಅರ್ಜಿದಾರ ಪತಿಯ ತಂದೆ ಸರ್ಕಾರಿ ಉದ್ಯೋಗಿಯಾಗಿದ್ದು, ಅವರ ಮರಣದ ನಂತರ ತಾಯಿಗೆ ಪಿಂಚಣಿ ಬರುತ್ತಿದೆ. ಎಲ್ಲಕ್ಕಿಂತ ಮುಖ್ಯವಾಗಿ ಉನ್ನತ ಶಿಕ್ಷಣ ಇದೆ ಎಂಬ ಮಾತ್ರಕ್ಕೆ ಪತ್ನಿಗೆ ಉದ್ಯೋಗ ಲಭ್ಯವಾಗಲಿದೆ ಎಂದು ಒಪ್ಪಲಾಗಲ್ಲ.

**ಪ್ರಕರಣವೇನು:** ಮೈಸೂರು ಜಿಲ್ಲೆ ಕೆ.ಆರ್ ನಗರದಲ್ಲಿ 2003ರ ಜೂನ್ 8ರಂದು ಮದುವೆಯಾಗಿ ದಂಪತಿ ಬೆಂಗಳೂರಿನಲ್ಲಿ ನೆಲೆಸಿದ್ದರು. ಈ ನಡುವೆ ಪತ್ನಿಗೆ ಆರೋಗ್ಯ ಸಮಸ್ಯೆ ಕಾಣಿಸಿಕೊಂಡು, ಗರ್ಭಕೋಶ ತೆಗೆಯಲಾಗಿತ್ತು. ಪತ್ನಿಗೆ ಮಕ್ಕಳಾಗುವುದಿಲ್ಲ ಎಂದು ತಿಳಿದ ನಂತರ ಮನಸ್ತಾಪ ಉಂಟಾಗಿ ವಿವಾಹ ಅನೂರ್ಜಿತಗೊಳಿಸಲು ಕೋರಿ ಗಂಡ 2008ರಲ್ಲಿ ಮೈಸೂರಿನ ಕೌಟುಂಬಿಕ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿದ್ದರು. 2013ರ ಜನವರಿ 3ರಂದು ವಿಚ್ಛೇದನ ಆದೇಶ ಹೊರಡಿಸಿ ಅರ್ಜಿ ಸಲ್ಲಿಸಿದ ದಿನದಿಂದ ಅನ್ವಯವಾಗುವಂತೆ ಪತ್ನಿಗೆ ಮಾಸಿಕ 3 ಸಾವಿರ ರೂ. ಜೀವನಾಂಶ ನೀಡುವಂತೆ ಪತಿಗೆ ಆದೇಶಿಸಿತ್ತು. ಇದನ್ನು ಪ್ರಶ್ನಿಸಿ ಪತಿ ಹೈಕೋರ್ಟ್ ಮೆಟ್ಟಿಲೇರಿದ್ದರು. ಪತ್ನಿ ವಿಚಾರಣೆಗೆ ಹಾಜರಾಗದ ಹಿನ್ನೆಲೆಯಲ್ಲಿ ನ್ಯಾಯಾಲಯವೇ ಆಕೆಯ ಪರ ವಾದ ಮಂಡಿಸಲು ವಕೀಲೆ ಕೆ.ಎಂ. ಅರ್ಚನಾ ಅವರನ್ನು ಅಮಿಕಸ್ ಕ್ಯೂರಿಯಾಗಿ ನೇಮಕ ಮಾಡಿತ್ತು. ಅವರಿಗೆ ರೂ.4 ಸಾವಿರ ಗೌರವಧನ ನೀಡುವಂತೆ ರಿಜಿಸ್ಟ್ರಿಗೆ ಹೈಕೋರ್ಟ್ ಸೂಚಿಸಿದೆ.

ಆಧಾರ: ವಿಜಯವಾಣಿ, ದಿನಾಂಕ: 07.02.2021

## 14. ಸುದೀರ್ಘ ಪ್ರತಿಭಟನೆ ಸಲ್ಲದು ಎಂದ ಸುಪ್ರೀಂ

ಪ್ರತಿಭಟನೆಯು ವ್ಯಕ್ತಿಯ ಸಾಂವಿಧಾನಿಕ ಹಕ್ಕಾದರೂ ಅದು ಕೆಲವೊಂದು ಷರತ್ತುಗಳಿಗೆ ಒಳಪಟ್ಟಿರುತ್ತದೆ. ಸಾರ್ವಜನಿಕ ಸ್ಥಳಗಳಲ್ಲಿ ಇತರರ ಹಕ್ಕುಗಳಿಗೆ ಅಡ್ಡಿಪಡಿಸಿ ಸುದೀರ್ಘ ಅವಧಿಗೆ ಪ್ರತಿಭಟನೆ ನಡೆಸುವುದು ಸಲ್ಲದು ಎಂದು ಸುಪ್ರೀಂಕೋರ್ಟ್ ಹೇಳಿದೆ.

"ಪ್ರಜಾಪ್ರಭುತ್ವ ಮತ್ತು ಭಿನ್ನಧ್ವನಿ ಎರಡೂ ಜೊತೆ ಜೊತೆಯಲ್ಲಿ ಸಾಗಬಹುದಾದರೂ, ಅಭಿವ್ಯಕ್ತಿ ಸ್ವಾತಂತ್ರ್ಯದ ಹೆಸರಿನಲ್ಲಿ ಬೇರೆಯವರ ಹಕ್ಕುಗಳಿಗೆ ಅಡ್ಡಿಪಡಿಸಬಾರದು. ಪ್ರತಿಭಟನೆಯ ಎಲ್ಲ ಸಂದರ್ಭಗಳಲ್ಲಿಯೂ, ಎಲ್ಲ ಸ್ಥಳಗಳಲ್ಲಿಯೂ ಬಳಸಲು ಸಾಧ್ಯವಿಲ್ಲ," ಎಂದು ಕೋರ್ಟ್ ಹೇಳಿದೆ.

ದಿಲ್ಲಿಯ ಶಹೀನ್ ಬಾಗ್‌ನಲ್ಲಿ ಪೌರತ್ವ ತಿದ್ದುಪಡಿ ಕಾಯಿದೆ (ಸಿಎಎ) ವಿರೋಧಿಸಿ ನಡೆಸಲಾದ ಪ್ರತಿಭಟನೆಗೆ ಸಂಬಂಧಿಸಿದಂತೆ 2020ರ ಅಕ್ಟೋಬರ್ 7ರಂದು ನೀಡಿದ್ದ ತೀರ್ಪನ್ನು ಮರುಪರಿಶೀಲಿಸುವಂತೆ ಕೋರಿ ಸಲ್ಲಿಸಲಾಗಿದ್ದ ಅರ್ಜಿಯ ವಿಚಾರಣೆ ವೇಳೆ ನ್ಯಾಯಾಲಯ ಈ ಅಭಿಪ್ರಾಯ ವ್ಯಕ್ತಪಡಿಸಿದೆ. ತೀರ್ಪು ಮರುಪರಿಶೀಲನೆ ಅರ್ಜಿಯನ್ನು ನ್ಯಾ. ಸಂಜಯ್ ಕಿಶನ್ ಕೌಲ್, ನ್ಯಾ. ಅನಿರುದ್ಧ ಬೋಸ್ ಮತ್ತು ನ್ಯಾ. ಕೃಷ್ಣ ಮುರಾರಿ ಅವರಿದ್ದ ಪೀಠವು ವಜಾಗೊಳಿಸಿದೆ. ಸಿಎಎ ವಿರೋಧಿ ಪ್ರತಿಭಟನೆಯ ಸಂದರ್ಭದಲ್ಲಿ ದೀರ್ಘ ಕಾಲದವರೆಗೆ ಸಾರ್ವಜನಿಕ ರಸ್ತೆಗಳಲ್ಲಿ ಸಂಚಾರಕ್ಕೆ ಅಡಚಣೆಯೊಡ್ಡಿದ್ದು ಸರಿಯಲ್ಲವೆಂದು ಸುಪ್ರೀಂಕೋರ್ಟ್ 2020ರ ತೀರ್ಪಿನಲ್ಲಿ ಹೇಳಿತ್ತು. ಇದನ್ನು ಮರುಪರಿಶೀಲಿಸುವಂತೆ ಶಹೀನ್ ಬಾಗ್ ನಿವಾಸಿ ಕನಿಜ್ ಫಾತಿಮಾ ಮತ್ತಿತರರು ಅರ್ಜಿ ಸಲ್ಲಿಸಿದ್ದರು.

"ಮೇಲ್ಮನವಿಯಲ್ಲಿ ಉಲ್ಲೇಖಿಸಿದ ಅಂಶಗಳನ್ನು ಪರಿಗಣಿಸಿದ್ದೇವೆ. ಅದರಲ್ಲಿ ಮರು ಪರಿಶೀಲಿಸಬಹುದಾದ ಯಾವ ಅಂಶ ಕಂಡು ಬಂದಿಲ್ಲ. ಮರುಪರಿಶೀಲನೆಯ ಅಗತ್ಯ ಕಂಡುಬರುತ್ತಿಲ್ಲ" ಎಂದು ತೀರ್ಪು ಮರುಪರಿಶೀಲನೆ ಅರ್ಜಿ ತಿರಸ್ಕರಿಸಿರುವ ನ್ಯಾಯಪೀಠ ಹೇಳಿದೆ. 2020ರ ಅಕ್ಟೋಬರ್ 7ರ ತೀರ್ಪಿನಲ್ಲಿ ಸುಪ್ರೀಂಕೋರ್ಟ್ ದಿಲ್ಲಿಯ ಶಹೀನ್ ಬಾಗ್ ಪ್ರತಿಭಟನೆ ನಡೆಸಲಾದ ವಿಧಾನದ ಬಗ್ಗೆ ವಿರುದ್ಧ ತೀವ್ರ ಆಕ್ಷೇಪ ವ್ಯಕ್ತಪಡಿಸಿತ್ತು. "ಯಾವುದೇ ಪ್ರತಿಭಟನೆಯನ್ನು ಗೊತ್ತುಪಡಿಸಿದ ಜಾಗದಲ್ಲಿ ಮತ್ತು ನಿರ್ದಿಷ್ಟ ಅವಧಿಗೆ ಮಾತ್ರ ನಡೆಸಬೇಕು. ಸಾರ್ವಜನಿಕ ಹಾದಿಗಳು, ಪ್ರದೇಶಗಳನ್ನು ಸುದೀರ್ಘ

ಅವಧಿಯವರೆಗೂ ಪ್ರತಿಭಟನಾಕಾರರು ಸ್ವಾಧೀನಕ್ಕೆ ತೆಗೆದುಕೊಳ್ಳುವುದು ಸಲ್ಲದು," ಎಂದು ನ್ಯಾಯಪೀಠ ಹೇಳಿತ್ತು.

ಆಧಾರ: ವಿಜಯ ಕರ್ನಾಟಕ, ದಿನಾಂಕ: 14.02.2021

## 15. ಕೃಷಿ ಕಾಯ್ದೆಗಳಿಗೆ 'ಸುಪ್ರೀಂ' ತಡೆ

ಕೃಷಿ ಸುಧಾರಣೆಯ ಮೂರು ಕಾಯ್ದೆಗಳ ಜಾರಿಗೆ ಮುಂದಿನ ಆದೇಶದವರೆಗೆ ಸುಪ್ರೀಂ ಕೋರ್ಟ್ ತಡೆ ನೀಡಿದೆ. ಕಾಯ್ದೆಗಳ ವಿರುದ್ಧ ರೈತರು ನಡೆಸುತ್ತಿರುವ ಪ್ರತಿಭಟನೆಯಿಂದ ಉಂಟಾಗಿರುವ ಬಿಕ್ಕಟ್ಟು ಪರಿಹಾರಕ್ಕೆ ನಾಲ್ವರ ಸದಸ್ಯರ ಸಮಿತಿಯನ್ನು ರಚಿಸಿದೆ.

ತಡೆ ನೀಡಿಕೆಯನ್ನು ರೈತರು ಸ್ವಾಗತಿಸಿದ್ದಾರೆ. ಆದರೆ, ಸಮಿತಿ ರಚನೆಯ ಬಗ್ಗೆ ಅವರು ಸಂತೃಪ್ತರಾಗಿಲ್ಲ. ಸಮಿತಿಯ ಮುಂದೆ ಹೋಗುವುದೂ ಇಲ್ಲ ಎಂದು ಹೇಳಿದ್ದಾರೆ.

ಮೂರು ಕಾಯ್ದೆಗಳ ಸಾಂವಿಧಾನಿಕ ಸಿಂಧುತ್ವ ಪ್ರಶ್ನಿಸಿ ಸುಪ್ರೀಂ ಕೋರ್ಟ್‌ಗೆ ಸಲ್ಲಿಕೆಯಾಗಿರುವ ಹಲವು ಅರ್ಜಿಗಳ ವಿಚಾರಣೆಯನ್ನು ಮುಖ್ಯ ನ್ಯಾಯಾಮೂರ್ತಿ ಎಸ್.ಎ.ಬೊಬಡೆ, ನ್ಯಾಯಾಮೂರ್ತಿಗಳಾದ ಎ.ಎಸ್. ಬೋಪಣ್ಣ ಮತ್ತು ವಿ.ರಾಮಸುಬ್ರಮಣಿಯನ್ ಅವರ ಪೀಠವು ನಡೆಸಿತು. ಬಿಕ್ಕಟ್ಟು ಪರಿಹಾರಕ್ಕೆ ನೇಮಿಸಿರುವ ಸಮಿತಿಯು ರೈತರ ಸಮಸ್ಯೆಗಳನ್ನು ಆಲಿಸಲಿದೆ ಎಂದು ಪೀಠವು ಹೇಳಿದೆ.

ಬಿಕ್ಕಟ್ಟು ಪರಿಹಾರಕ್ಕೆ ರೈತರು ಸಹಕರಿಸಬೇಕು ಎಂದು ವಿಚಾರಣೆಯ ವೇಳೆ ನ್ಯಾಯಮೂರ್ತಿಗಳು ಹೇಳಿದ್ದಾರೆ. ವಿವಾದಾತ್ಮಕ ಕಾಯ್ದೆಗಳಿಂದ ಉಂಟಾಗಿರುವ ಬಿಕ್ಕಟ್ಟು ಪರಿಹಾರಕ್ಕೆ ಸಮಿತಿ ರಚಿಸುವುದರಿಂದ ಜಗತ್ತಿನ ಯಾವ ಶಕ್ತಿಯೂ ನ್ಯಾಯಾಲಯವನ್ನು ತಡೆಯಲಾಗದು. ರೈತರು ಸಮಿತಿಯ ಮುಂದೆ ಹಾಜರಾಗಿ ತಮ್ಮ ಸಮಸ್ಯೆ ಹೇಳಿಕೊಳ್ಳಬೇಕು ಎಂದು ಪೀಠವು ಹೇಳಿದೆ.

ಭಾರತದ ಜನರ ಜೀವ ಮತ್ತು ಆಸ್ತಿಯ ರಕ್ಷಣೆ ಬಗ್ಗೆ ನಮಗೆ ಕಾಳಜಿ ಇದೆ. ಈ ಸಮಸ್ಯೆಯನ್ನು ಪರಿಹರಿಸಲು ನಾವು ಬಯಸಿದ್ದೇವೆ. ಸಮಸ್ಯೆಗೆ ನಿಜವಾಗಿಯೂ ಪರಿಹಾರ ಬೇಕು ಎಂದು ಬಯಸುವವರು ಸಮಿತಿಯ ಮುಂದೆ ವಿಷಯ ಹೇಳಿಕೊಳ್ಳಬೇಕು ಎಂದು ವಿಡಿಯೋ ಕಾನ್ಫರೆನ್ಸ್ ಮೂಲಕ ನಡೆದ ವಿಚಾರಣೆಯಲ್ಲಿ ಪೀಠವು ಸೂಚಿಸಿದೆ.

**ಸಮಿತಿ ರಚನೆಯ ಹಿಂದೆ ಸರ್ಕಾರ:** ಸಮಿತಿ ರಚಿಸಿದ ಸುಪ್ರಿಂಕೋರ್ಟ್ ಕ್ರಮವು ಪ್ರತಿಭಟನಾನಿರತ ರೈತರಿಗೆ ಸಮಾಧಾನ ತಂದಿಲ್ಲ. ಅವರು ಪ್ರತಿಭಟನೆ ಮುಂದುವರಿಸುವುದಾಗಿ ಹೇಳಿದ್ದಾರೆ. ದೆಹಲಿಯ ಸಿಂಘ ಗಡಿಯಲ್ಲಿ ಮಾಧ್ಯಮಗೋಷ್ಠಿಯಲ್ಲಿ ಮಾತನಾಡಿದ ರೈತ ಮುಖಂಡರು, ಸಮಿತಿಯ ಎಲ್ಲ ಸದಸ್ಯರು ಸರ್ಕಾರದ ಪರ ಇರುವವರು ಎಂದಿದ್ದಾರೆ.

ಸುಪ್ರೀಂಕೋರ್ಟ್ ನೇಮಿಸಿರುವ ಸಮಿತಿಯ ಸದಸ್ಯರು ನಂಬಿಕಾರ್ಹರಲ್ಲ ಅವರೆಲ್ಲರೂ ಕೃಷಿ ಕಾಯ್ದೆಗಳನ್ನು ರೈತ ಪರ ಎಂದು ಲೇಖನಗಳನ್ನು ಬರೆದವರು ಎಂದು ರೈತ ಮುಖಂಡ ಬಲಬೀರ್ ಸಿಂಗ್ ರಾಜೇವಾಲ್ ಹೇಳಿದ್ದಾರೆ.

ಸಮಸ್ಯೆ ಪರಿಹಾರಕ್ಕೆ ಸಮಿತಿ ರಚಿಸುವಂತೆ ರೈತ ಸಂಘಟನೆಗಳು ಕೇಳಿಯೇ ಇಲ್ಲ. ಸಮಿತಿ ರಚನೆಯ ವಿದ್ಯಮಾನದ ಹಿಂದೆ ಕೇಂದ್ರ ಸರ್ಕಾರವೇ ಇದೆ. ಪ್ರತಿಭಟನೆಯಿಂದ ಗಮನವನ್ನು ಬೇರೆಡೆ ಸೆಳೆಯುವುದಕ್ಕಾಗಿ ಸರ್ಕಾರ ಈ ಕೆಲಸ ಮಾಡಿದೆ ಎಂದು ಅವರು ಆರೋಪಿಸಿದ್ದಾರೆ.

ಸುಪ್ರೀಂ ಕೋರ್ಟ್ ಸ್ವಯಂಪ್ರೇರಣೆಯಿಂದ ಕಾಯ್ದೆಗಳನ್ನು ರದ್ದು ಮಾಡಲು ಅವಕಾಶ ಇದೆ. ಹೊರಗಿನ ಯಾವುದೇ ಸಮಿತಿಯ ಅಗತ್ಯ ಇಲ್ಲ. ಸಂಸತ್ತಿನಲ್ಲಿ ಚರ್ಚೆ ಮಾಡಿ, ಸಮಸ್ಯೆ ಬಗೆಹರಿಸಬೇಕು. ಇದೇ 15 ರಂದು ಸರ್ಕಾರದ ಜೊತೆಗೆ ನಿಗದಿಯಾಗಿರುವ ಮಾತುಕತೆಗೆ ಹೋಗುವುದಾಗಿಯೂ ರೈತರು ತಿಳಿಸಿದ್ದಾರೆ.

ಇದು ರಾಜಕಾರಣ ಅಲ್ಲ, ರಾಜಕೀಯ ಮತ್ತು ನ್ಯಾಯಾಂಗದ ನಡುವೆ ವ್ಯತ್ಯಾಸ ಇದೆ. ನೀವು ಸಹಕರಿಸಬೇಕು ಎಂದು ಪ್ರತಿಭಟನೆ ನಡೆಸುತ್ತಿರುವ ಸಂಘಟನೆಗಳಿಗೆ ಹೇಳಿತು.

ರೈತ ಪ್ರತಿಭಟನೆಯನ್ನು ನಿರ್ವಹಿಸಿದ ರೀತಿಯ ಬಗ್ಗೆ ಕೇಂದ್ರದ ವಿರುದ್ಧ ಸುಪ್ರೀಂಕೋರ್ಟ್ ಅಸಮಾಧಾನ ವ್ಯಕ್ತಪಡಿಸಿತ್ತು. ಕೇಂದ್ರ ಮತ್ತು ರೈತ ಸಂಘಟನೆಗಳ ನಡುವೆ ಎಂಟು ಸುತ್ತಿನ ಮಾತುಕತೆಗಳು ನಡೆದಿವೆ. ಆದರೆ, ಯಾವುದೇ ಪ್ರಯೋಜನ ಆಗಿಲ್ಲ. ಪ್ರತಿಭಟನೆ ನಡೆಸುತ್ತಿರುವ ರೈತರು ಮೂರು ಕಾಯ್ದೆಗಳನ್ನು ವಾಪಸ್ಸು ಪಡೆಯಬೇಕು ಎಂಬ ಬೇಡಿಕೆಯಿಂದ ಒಂದಿಂಚೂ ಹಿಂದೆ ಸರಿದಿಲ್ಲ.

**ಸಮಿತಿಯ ಸದಸ್ಯರು:**

- ಭೂಪಿಂದರ್ ಸಿಂಗ್ ಮಾನ್, ಭಾರತೀಯ ಕಿಸಾನ್ ಯೂನಿಯನ್ ಅಧ್ಯಕ್ಷ
- ಅನಿಲ್ ಘಣವಟ್, ಮಹಾರಾಷ್ಟ್ರದ ಶೇತ್ಕರಿ ಸಂಘಟನೆಯ ಅಧ್ಯಕ್ಷ
- ಪ್ರಮೋದ್ ಕುಮಾರ್ ಜೋಷಿ, ಅಂತರರಾಷ್ಟ್ರೀಯ ಆಹಾರ ನೀತಿ, ಸಂಶೋಧನಾ ಸಂಸ್ಥೆಯ ದಕ್ಷಿಣ ಏಷ್ಯಾ ನಿರ್ದೇಶಕ
- ಅಶೋಕ್ ಗುಲಾಟಿ, ಕೃಷಿ ಅರ್ಥಶಾಸ್ತ್ರಜ್ಞ

**ಪ್ರತಿಭಟನೆಯಲ್ಲಿ ಖಲಿಸ್ತಾನಿಗಳು:** ನಿಷೇಧಿತ ಸಂಘಟನೆಯೊಂದು ಪ್ರತಿಭಟನೆಗೆ ಬೆಂಬಲ ನೀಡುತ್ತಿದೆ ಎಂದು ಸಲ್ಲಿಸಲಾಗಿರುವ ಅರ್ಜಿಯನ್ನು ನ್ಯಾಯಪೀಠದ ಗಮನಕ್ಕೆ ತರಲಾಯಿತು ಈ ಬಗ್ಗೆ ಅಟಾರ್ನಿ ಜನರಲ್ ವೇಣುಗೋಪಾಲ್ ಅವರನ್ನು ಪೀಠವು ಪ್ರಶ್ನಿಸಿತು. ಖಲಿಸ್ತಾನಿಗಳು ಪ್ರತಿಭಟನೆಗೆ ನುಸುಳಿದ್ದಾರೆ ಎಂದು ವೇಣುಗೋಪಾಲ್ ಅವರು ತಿಳಿಸಿದರು. ಈ ಬಗ್ಗೆ ಪ್ರಮಾಣ ಪತ್ರ ಸಲ್ಲಿಸುವುದಾಗಿ ಅವರು ತಿಳಿಸಿದರು.

ಆಧಾರ: ಕನ್ನಡಪ್ರಭ, ದಿನಾಂಕ:18.02.2021

## 16. ಜಿಲ್ಲೆಗೊಂದು ಬಾಲ ನ್ಯಾಯಮಂಡಳಿ ರಚನೆಗೆ ಹೈಕೋರ್ಟ್ ಸೂಚನೆ

ಬಾಲಾಪರಾಧಿಗಳ ನಿರ್ವಹಣೆಗೆ ಪ್ರತಿ ಜಿಲ್ಲೆಗೆ ಒಂದೊಂದು ಹೆಚ್ಚುವರಿ ಬಾಲ ನ್ಯಾಯ ಮಂಡಳಿ ರಚಿಸುವಂತೆ ರಾಜ್ಯ ಸರ್ಕಾರಕ್ಕೆ ಹೈಕೋರ್ಟ್ ನಿರ್ದೇಶನ ನೀಡಿದೆ. ರಾಜ್ಯದಲ್ಲಿ ಬಾಲ ನ್ಯಾಯ ಕಾಯ್ದೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಕ್ಕೆ ತರುವ ವಿಚಾರವಾಗಿ ಹೈಕೋರ್ಟ್ ದಾಖಲಿಸಿಕೊಂಡ ಸ್ವಯಂ ಪ್ರೇರಿತ ಸಾರ್ವಜನಿಕ ಹಿತಾಸಕ್ತಿ ಅರ್ಜಿ ವಿಚಾರಣೆ ನಡೆಸಿದ ಮುಖ್ಯ ನ್ಯಾಯಮೂರ್ತಿ ಎ.ಎಸ್.ಓಕಾ ಅವರ ನೇತೃತ್ವದ ವಿಭಾಗೀಯ ನ್ಯಾಯಪೀಠ ಈ ಆದೇಶ ಮಾಡಿದೆ. ಬಾಲಾಪರಾಧಿಗಳ ನಿರ್ವಹಣೆಗೆ ಪ್ರತಿ ಜಿಲ್ಲೆಗೆ ಒಂದೊಂದು ಹೆಚ್ಚುವರಿ ಬಾಲ ನ್ಯಾಯ ಮಂಡಳಿ ರಚಿಸಬೇಕು. ಅವು ನಿಯಮಿತವಾಗಿ ಕಾರ್ಯನಿರ್ವಹಿಸುವಂತೆ ನೋಡಿಕೊಳ್ಳಬೇಕು. ಎಲ್ಲ ಬಾಲ ನ್ಯಾಯ ಮಂಡಳಿಗಳ ಕಛೇರಿಗಳನ್ನು ಸಮಾನ ರೀತಿಯಲ್ಲಿ ವಿನ್ಯಾಸಗೊಳಿಸಬೇಕು. ಮೂಲ ಸೌಕರ್ಯ ಹಾಗೂ ಮಾನವ ಸಂಪನ್ಮೂಲ ಒದಗಿಸಲು ಏಕರೂಪ ನೀತಿ ಅನುಸರಿಸಬೇಕು ಎಂದು ಹೈಕೋರ್ಟ್ ನಿರ್ದೇಶಿಸಿದೆ.

ಆಧಾರ: ಕನ್ನಡ ಪ್ರಭ, ದಿನಾಂಕ: 19.02.2021

## 17. ಮಹದಾಯಿ ನೀರು ಬಳಕೆ ಜಂಟಿ ಪರಿಶೀಲನೆಗೆ ಆದೇಶ

ಮಹದಾಯಿ ನದಿ ನೀರನ್ನು ಕರ್ನಾಟಕ ಮಲಪ್ರಭಾ ನದಿಗೆ ತಿರುಗಿಸಿದೆ ಎಂಬ ಆರೋಪಕ್ಕೆ ಸಂಬಂಧಿಸಿದಂತೆ, ಜಂಟಿ ಪರಿಶೀಲನೆಗೆ ಸುಪ್ರೀಂಕೋರ್ಟ್ ಆದೇಶಿಸಿದೆ. ಈ ಸಂಬಂಧ ನಾಲ್ಕು ವಾರಗಳಲ್ಲಿ ವರದಿ ಸಲ್ಲಿಸುವಂತೆ ನಿರ್ದೇಶನ ನೀಡಿದೆ.

ಕರ್ನಾಟಕವು ಮಹದಾಯಿ ನೀರನ್ನು ಮಲಪ್ರಭಾ ನದಿಗೆ ತಿರುಗಿಸಿದ್ದು, ನೀರು ಹಂಚಿಕೆಗೆ ಸಂಬಂಧಿಸಿದಂತೆ ನ್ಯಾಯಾಧೀಕರಣ ಮತ್ತು ಸುಪ್ರೀಂಕೋರ್ಟ್‌ನ ಆದೇಶವನ್ನು ಉಲ್ಲಂಘಿಸಿದೆ ಎಂದು ಆರೋಪಿಸಿ ಗೋವಾ ನ್ಯಾಯಾಂಗ ನಿಂದನೆ ಅರ್ಜಿ ಸಲ್ಲಿಸಿತು.

ಯೋಜನೆಯ ಪ್ರದೇಶದಲ್ಲಿ ಗೋವಾ, ಕರ್ನಾಟಕ ಮತ್ತು ಮಹಾರಾಷ್ಟ್ರ ಮೂರೂ ರಾಜ್ಯಗಳ ಪ್ರತಿನಿಧಿಗಳನ್ನು ಒಳಗೊಂಡ ಸಮಿತಿಯಿಂದ ಜಂಟಿ ಪರಿಶೀಲನೆಗೆ ಆದೇಶಿಸುವಂತೆ ಕೋರಿತ್ತು.

ವಿಡಿಯೋ ಕಾನ್ಫರೆನ್ಸ್ ಮೂಲಕ ಈ ಅರ್ಜಿಯ ವಿಚಾರಣೆ ನಡೆಸಿದ ನ್ಯಾ. ಡಿ.ವೈ. ಚಂದ್ರಚೂಡ್ ನೇತೃತ್ವದ ಪೀಠವು, ಕಳಸಾ-ಬಂಡೂರಿ ಯೋಜನೆ ಪ್ರದೇಶದಲ್ಲಿ ಅಧ್ಯಯನ ನಡೆಸಿ, 4 ವಾರಗಳಲ್ಲಿ ವರದಿ ಸಲ್ಲಿಸುವಂತೆ ಸೂಚಿಸಿದೆ.

"ಮೂರು ರಾಜ್ಯಗಳ ಅಧೀಕ್ಷಕ ಎಂಜಿನಿಯರ್‌ಗಳ ಸಮಿತಿ ರಚಿಸುವಂತೆ ಸೂಚಿಸಲಾಗಿದೆ. ಅದರಂತೆ ಕ್ರಮ ಜರುಗಲಿದೆ," ಎಂದು ಜಲಸಂಪನ್ಮೂಲ ಸಚಿವ ರಮೇಶ್ ಜಾರಕಿಹೊಳಿ ತಿಳಿಸಿದ್ದಾರೆ.

**ನಮ್ಮ ನೀರು ನಮಗಿರಲಿ:**

ಕಾವೇರಿ ನದಿಯ 'ಹೆಚ್ಚುವರಿ' ನೀರನ್ನು ಬಳಸಿಕೊಳ್ಳಲು ಮುಂದಾಗಿರುವ ತಮಿಳುನಾಡಿನ ನಡೆ, ರಾಜ್ಯದಲ್ಲಿ ಆಂತಕಕ್ಕೆ ಕಾರಣವಾಗಿದೆ. ಕಾವೇರಿಯ 45 ಟಿಎಂಸಿ ಹೆಚ್ಚುವರಿ ನೀರು ಬಳಸಲು 6,941 ಕೋಟಿ ರೂಪಾಯಿ ವೆಚ್ಚದಲ್ಲಿ ತಮಿಳುನಾಡು ಸರ್ಕಾರ ಬೃಹತ್ ಯೋಜನೆ ರೂಪಿಸಿದೆ. ಇದಕ್ಕಾಗಿ ವೈಗೈ, ವೆಲ್ಲಾರು, ಗುಂಡಾರು ನದಿಗಳನ್ನು ಕಾವೇರಿಯೊಂದಿಗೆ ಜೋಡಣೆ ಮಾಡಲು ಹೊರಟಿದೆ. ಈ ಯೋಜನೆಗೆ ಆರ್ಥಿಕ ನೆರವನ್ನು ನೀಡಲು ಕೇಂದ್ರ ಸರ್ಕಾರ ಮುಂದಾಗಿದೆ. ನಮ್ಮ ರಾಜ್ಯ ಸರ್ಕಾರ ಇದುವರೆಗೂ ಈ ವಿಚಾರದಲ್ಲಿ ಮೌನವಾಗಿತ್ತು. ತನ್ನದೇ ಪಕ್ಷ ಕೇಂದ್ರದಲ್ಲಿದ್ದರೂ ತಮಿಳುನಾಡಿನ ಯೋಜನೆಗೆ ಅದು ನೀಡುತ್ತಿರುವ ಸಹಕಾರ ರಾಜ್ಯ ಸರ್ಕಾರಕ್ಕೆ ತಿಳಿದಿರಲೇ ಇಲ್ಲವೋ, ತಿಳಿದೂ ಮೌನವಹಿಸಿತ್ತೋ ಗೊತ್ತಿಲ್ಲ. ಪ್ರತಿಪಕ್ಷಗಳು ಹಾಗೂ ತಜ್ಞರ ಆತಂಕದ ಬಳಿಕ ಪ್ರತಿಕ್ರಿಯೆ ನೀಡಿರುವ ನಮ್ಮ ಮುಖ್ಯಮಂತ್ರಿಗಳು, ರಾಜ್ಯದ ನೀರನ್ನು ಬಿಟ್ಟುಕೊಡುವ ಪ್ರಶ್ನೆಯೇ ಇಲ್ಲ ಎಂದಿದ್ದಾರೆ. ಇದು ಬರಿಯ ಬಾಯಿಮಾತಿನಲ್ಲಿದ್ದರೆ ಸಾಲದು; ಕ್ರಿಯೆಯಲ್ಲಿಯೂ ಸಾಕಾರಗೊಳ್ಳಬೇಕಾದರೆ ಗಟ್ಟಿ ಕಾನೂನು ಹಾಗೂ ರಾಜ ತಾಂತ್ರಿಕ ಕ್ರಮಗಳ ಪ್ರಕ್ರಿಯೆಗೆ ಮುಂದಾಗಬೇಕು.

ಮಹದಾಯಿ ನದಿ ನೀರನ್ನು ಕರ್ನಾಟಕ ಮಲಪ್ರಭಾ ನದಿಗೆ ತಿರುಗಿಸಿದೆ ಎಂಬ ಆರೋಪಕ್ಕೆ ಸಂಬಂಧಿಸಿ ಜಂಟಿ ತನಿಖೆಗೆ ಸುಪ್ರೀಂಕೋರ್ಟ್ ಆದೇಶಿಸಿದೆ. ನೀರು ಹಂಚಿಕೆಗೆ ಸಂಬಂಧಿಸಿ ನ್ಯಾಯಾಧೀಕರಣ ಮತ್ತು ಸುಪ್ರೀಂಕೋರ್ಟ್‌ನ ಆದೇಶವನ್ನು ಕರ್ನಾಟಕ ಉಲ್ಲಂಘಿಸಿದೆ ಎಂಬುದು ಗೋವಾದ ವಾದ. ಕಳಸಾ-ಬಂಡೂರಿ ಯೋಜನೆ ಪ್ರದೇಶದಲ್ಲಿ ಪರಿಶೀಲನೆ ನಡೆಸಿ, ನಾಲ್ಕು ವಾರಗಳಲ್ಲಿ ವರದಿ ಸಲ್ಲಿಸುವಂತೆ ನ್ಯಾಯಪೀಠ ಸೂಚಿಸಿದೆ. ಮಹದಾಯಿ ವಿವಾದಕ್ಕೆ ಸಂಬಂಧಿಸಿ ಕರ್ನಾಟಕ ಮತ್ತು ಮಹಾರಾಷ್ಟ್ರ ಸರ್ಕಾರಗಳು ಕೂಡ ಸುಪ್ರೀಂಕೋರ್ಟ್‌ನಲ್ಲಿ ವಿಶೇಷ ಅರ್ಜಿಗಳನ್ನು ಸಲ್ಲಿಸಿವೆ. ನ್ಯಾಯಾಧಿಕರಣ ಹಾಗೂ ಕೋರ್ಟ್‌ಗಳಲ್ಲಿ ಕರ್ನಾಟಕಕ್ಕೆ ಇದುವರೆಗೂ ಸಂತೃಪ್ತಿದಾಯಕ ಎಂಬ ಪರಿಹಾರ ಗಮನಕ್ಕೆ ತಂದು ಕಾನೂನು ಹೋರಾಟ ರೂಪಿಸುವ ಕಾನೂನು ತಂಡ, ರಾಜತಾಂತ್ರಿಕ ಹೋರಾಟ ರೂಪಿಸುವ ಜನಪ್ರತಿನಿಧಿ-ತಜ್ಞರ ತಂಡಗಳು ಸದಾ ಸಕ್ರಿಯವಾಗಿರಬೇಕಾದ ಅಗತ್ಯವಿದೆ.

ಕಾವೇರಿ ನೀರಿನ ವಿಚಾರವನ್ನೇ ನೋಡುವುದಾದರೆ, ನಾವು ಕುಡಿಯುವ ನೀರಿಗಾಗಿ ನಮ್ಮ ಪಾಲಿನ ಹೆಚ್ಚುವರಿ ನೀರನ್ನು ಮೇಕೆದಾಟಿನಿಂದ ತರಲು ಮುಂದಾದರೆ ತಮಿಳುನಾಡು ಕೋರ್ಟಿಗೆ ಹೋಗುತ್ತದೆ. ಆದರೆ ತಮಿಳುನಾಡು ಇಂಥದೇ ಕೆಲಸಕ್ಕೆ ಮುಂದಾದರೆ ನಾವು ಕನಿಷ್ಟ ಪಕ್ಷ ಆಕ್ಷೇಪವನ್ನೂ ಎತ್ತುವುದಿಲ್ಲ ಎಂದರೆ ಏನರ್ಥ, ಅದಕ್ಕೂ ಸಾರ್ವಜನಿಕರ ಆಕ್ಷೇಪಣೆ ಬರುವವರೆಗೆ ಯಾಕೆ ಕಾಯಬೇಕು, ಇಂದು ನಾವು ಆಕ್ಷೇಪ ಎತ್ತಿಲ್ಲ ಎಂಬ ಅಂಶವನ್ನೇ ಇಟ್ಟುಕೊಂಡು ಹೆಚ್ಚುವರಿ ನೀರು ತನ್ನದೇ ಎಂಬ ಸ್ವಾಮ್ಯವನ್ನು ತಮಿಳುನಾಡು ಮಂಡಿಸುವ ಸಾಧ್ಯತೆ ಮುಂದೆ ಇದ್ದೇ ಇದೆ. ಮಹದಾಯಿ ಯೋಜನೆಯ ಪರಿಸರ ಮೌಲ್ಯಮಾಪನ ಕೈಗೊಂಡಿರುವ ಕೇಂದ್ರ ಪರಿಸರ ಸಚಿವಾಲಯ, ಕಾಮಗಾರಿ ಆರಂಭಿಸಲು ಷರತ್ತುಬದ್ಧ ಅನುಮತಿಯನ್ನು ಈ ಹಿಂದೆಯೇ ನೀಡಿತ್ತು. ಗೆಜೆಟ್ ಅಧಿಸೂಚನೆ ಹೊರಡಿಸಲು ಮಾತ್ರ ಕೇಂದ್ರ ಮೀನಮೇಷ ಎಣಿಸುತ್ತಲೇ ಇದೆ. ಕೃಷ್ಣಾ ಪ್ರಕರಣದಲ್ಲೂ ಹೀಗೇ ಆಗಿದೆ. 2010ರಲ್ಲೇ ಕೃಷ್ಣಾ ನ್ಯಾಯಾಧೀಕರಣ-2ರ ತೀರ್ಪು ಹೊರಬಿದ್ದಿದ್ದು, ಆಲಮಟ್ಟಿ ಅಣೆಕಟ್ಟಿನ ಎತ್ತರವನ್ನು 524.25 ಮೀಟರ್‌ಗೆ ಏರಿಸಲು ಒಪ್ಪಿದ್ದರೂ ಈ ತೀರ್ಪಿನ ಅಂತಿಮ ಅಧಿಸೂಚನೆಯೂ ಹೊರಬಿದ್ದಿಲ್ಲ. ರಾಜ್ಯದ ಮಹತ್ವದ

ಯೋಜನೆಗಳು ಹೀಗೆ ನೆನೆಗುದಿಗೆ ಬಿದ್ದಿವೆ. ಹಾಗೇ ಮೇಕೆದಾಟು ಯೋಜನೆ ಸಹ, ಈ ಎಲ್ಲ ಪ್ರಕರಣಗಳಲ್ಲೂ ನ್ಯಾಯ ಕಂಡುಕೊಳ್ಳಬೇಕು.

**ತಮಿಳುನಾಡಿನ ಯೋಜನೆಗೆ ರಾಜ್ಯದ ಮೌನ:** ತಮಿಳುನಾಡು ಸರ್ಕಾರ ಕಾವೇರಿಯ 45 ಟಿಎಂಸಿ ಹೆಚ್ಚುವರಿ ನೀರು ಬಳಸಲು ಬೃಹತ್ ಯೋಜನೆ ರೂಪಿಸಿರುವ ಬಗ್ಗೆ ರಾಜ್ಯದ ಮೌನಕ್ಕೆ ಜೆಡಿಎಸ್ ಪಕ್ಷ ಆಕ್ರೋಶ ವ್ಯಕ್ತಪಡಿಸಿದ್ದು, ಸರ್ಕಾರದ ಆಡಳಿತ ವೈಫಲ್ಯಕ್ಕೆ ಕೈಗನ್ನಡಿ ಎಂದು ಆರೋಪಿಸಿದೆ.

ಮೈಸೂರಿನ ಉಪ್ಪಳ್ಳಿಯಲ್ಲಿ ಸುದ್ದಿಗಾರರೊಂದಿಗೆ ಮಾತನಾಡಿದ ಮಾಜಿ ಪ್ರಧಾನಿ ಹೆಚ್.ಡಿ.ದೇವೇಗೌಡ, "ರಾಜ್ಯದ ಪಾಲಿನ ನೀರು ಕಬಳಿಸಲು ತಮಿಳುನಾಡು ಪ್ರಧಾನಿಯ ಮೇಲೆ ಒತ್ತಡ ತರುತ್ತಿದೆ. ರಾಜ್ಯದ ಹಿತ ಕಾಪಾಡುವಲ್ಲಿ ಕಾಂಗ್ರೆಸ್, ಬಿಜೆಪಿ ವಿಫಲವಾಗಿದೆ," ಎಂದು ಟೀಕಿಸಿದರು.

"ಎಐಡಿಎಂಕೆ ಜೊತೆ ಬಿಜೆಪಿ ಹೊಂದಾಣಿಕೆ ಮಾಡಿಕೊಂಡು ಹಲವು ಯೋಜನೆ ಘೋಷಿಸಿದ್ದು, ರಾಜ್ಯದ ಹಿತಕ್ಕೆ ಧಕ್ಕೆ ಮಾಡಲು ಬಿಡುವುದಿಲ್ಲ. ಬೀದಿಗಿಳಿದು ಹೋರಾಟ ಮಾಡುತ್ತೇನೆ. ಸಮಸ್ಯೆಗಳಿಗೆ ಪರಿಹಾರಕ್ಕಾಗಿ ಧ್ವನಿ ಎತ್ತುತ್ತೇನೆ," ಎಂದು ಎಚ್ಚರಿಸಿದರು.

**ರಾಜ್ಯದ ಹಿತಕ್ಕಾಗಿ ಚಾಲೆಂಜ್ ಮಾಡಲಿ:** "ಕಾವೇರಿಯ ಹೆಚ್ಚುವರಿ ನೀರಿಗಾಗಿ ವೈಗೈ, ವೆಲ್ಲಾರು, ಗುಂಡಾರು ನದಿಗಳಿಗೆ ಜೋಡಣೆ ಮಾಡುವ ತಮಿಳುನಾಡಿನ ಯೋಜನೆ ಮತ್ತು ಅದಕ್ಕೆ ಕೇಂದ್ರದ ಹಣಕಾಸಿನ ಸ್ಪಂದನೆಯು ರಾಜ್ಯ ಸರ್ಕಾರದ ಅರಿವಿಗೆ ಬಾರದೇ ಹೋಗಿದ್ದು ಆಶ್ಚರ್ಯಕರ," ಎಂದು ಮಾಜಿ ಸಿ.ಎಂ. ಹೆಚ್.ಡಿ.ಕುಮಾರಸ್ವಾಮಿ ವ್ಯಂಗ್ಯವಾಡಿದ್ದಾರೆ. "ಜಲಸಂಪನ್ಮೂಲ ಸಚಿವ ರಮೇಶ್ ಜಾರಕಿಹೊಳಿ ಅವರ ವೈಫಲ್ಯ, ಅವರನ್ನು ಸೋಲಿಸುತ್ತೇನೆ. ಇವರನ್ನು ಸೋಲಿಸುತ್ತೇನೆ ಎನ್ನುವುದರ ಬದಲಿಗೆ ರಾಜ್ಯದ ಹಿತಕ್ಕಾಗಿ ಅವರು ಚಾಲೆಂಜ್ ಮಾಡಲಿ" ಎಂದು ಸರಣಿ ಟ್ವೀಟ್‌ನಲ್ಲಿ ತಾಕೀತು ಮಾಡಿದ್ದಾರೆ.

"ನಾನು ಸಿಎಂ ಆಗಿದ್ದಾಗ ಮೇಕೆದಾಟು ಯೋಜನೆ ರೂಪಿಸಿದ್ದೆ. ಈ ಜಲಾಶಯ ನಿರ್ಮಾಣವಾದರೆ ಹೆಚ್ಚುವರಿ ನೀರು ಅಲಭ್ಯ ಎಂಬ ಕಾರಣಕ್ಕೆ ಎಐಎಡಿಎಂಕೆ ಸರ್ಕಾರ ಅಡಿಗಡಿಗೂ ಕಾಡಿತ್ತು. ಈಗ ಅದೇ ಹೆಚ್ಚುವರಿ 6 ಕ್ಯೂಬಿಕ್ ಫೀಟ್ ನೀರು ಬಳಸಿಕೊಂಡು ಎಐಎಡಿಎಂಕೆ ಸರ್ಕಾರ 342 ಕೆರೆ, 42,170 ಎಕರೆಗೆ ನೀರು ಪೂರೈಸುತ್ತಿದೆ. ಹೆಚ್ಚುವರಿ ನೀರು ಬಳಸಿಕೊಳ್ಳಲು ಯೋಜನೆ ರೂಪಿಸಲಾಗುತ್ತಿದೆ ಎಂದು ಹೇಳಲಾಗಿದೆಯಾದರೂ, ಸಂಕಷ್ಟದ ಪರಿಸ್ಥಿತಿಯಲ್ಲಿ ಹೆಚ್ಚುವರಿ ನೀರನ್ನೂ ತಮಿಳುನಾಡು ತನ್ನ ಹಕ್ಕೆಂದು ಪ್ರತಿಪಾದಿಸುವ ಅಪಾಯವಿದೆ," ಎಂದು ಎಚ್ಚರಿಸಿದ್ದಾರೆ.

**ತಮಿಳುನಾಡಿಗೆ ಹೆಚ್ಚುವರಿ ನೀರು ಬಳಕೆಗೆ ಅವಕಾಶವಿಲ್ಲ:** ಕಾವೇರಿ ನದಿಯ ಹೆಚ್ಚುವರಿ ನೀರನ್ನು ಯಾವುದೇ ಕಾರಣಕ್ಕೂ ತಮಿಳುನಾಡಿಗೆ ಬಳಕೆ ಮಾಡಿಕೊಡಲು ಅವಕಾಶ ನೀಡುವ ಪ್ರಶ್ನೆಯೇ ಇಲ್ಲವೆಂದು ಮುಖ್ಯಮಂತ್ರಿಯವರು ಸ್ಪಷ್ಟ ಮಾತುಗಳಲ್ಲಿ ಹೇಳಿದ್ದಾರೆ. ಸುದ್ದಿಗಾರರೊಂದಿಗೆ ಮಾತನಾಡಿದ ಅವರು, "ಕಾವೇರಿ ನದಿ ನೀರು ಹಂಚಿಕೆ ಸಂಬಂಧದಲ್ಲಿ ನ್ಯಾಯಾಲಯದ ತೀರ್ಪಿನಂತೆ ಉಭಯ ರಾಜ್ಯಗಳು ನಡೆದುಕೊಳ್ಳಬೇಕಾಗುತ್ತದೆ," ಎಂದರು. ಸರ್ವಪಕ್ಷದ ಸಭೆ ನಡೆಸುವ ಬಗ್ಗೆ ಕೇಳಿದಾಗ, "ಸದ್ಯಕ್ಕೆ ಈ ಬಗ್ಗೆ ಯೋಚಿಸಿಲ್ಲ ಮುಂದೆ ತೀರ್ಮಾನ ಕೈಗೊಳ್ಳಲಾಗುವುದು," ಎಂದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:23.02.2021

## 18. ಜೋತು ಬಿದ್ದ ಕೇಬಲ್: ಅಪರೇಟರ್‌ಗಳ ವಿರುದ್ಧ ಕ್ರಮಕ್ಕೆ ಹೈಕೋರ್ಟ್ ಸೂಚನೆ

ಪಾದಚಾರಿ ಮಾರ್ಗ ಮತ್ತು ರಸ್ತೆಗಳಲ್ಲಿ ಕೇಬಲ್‌ಗಳು ಜೋತು ಬಿದ್ದಿರುವ ಪ್ರಕರಣಕ್ಕೆ ಸಂಬಂಧಿಸಿದಂತೆ ಅಪರೇಟರ್‌ಗಳ ವಿರುದ್ಧ ಕ್ರಮ ಕೈಗೊಳ್ಳುವ ಕುರಿತು ನಿಲುವು ಸ್ಪಷ್ಟಪಡಿಸುವಂತೆ ಬಿಬಿಎಂಪಿಗೆ ಹೈಕೋರ್ಟ್ ನಿರ್ದೇಶನ ನೀಡಿದೆ.

ಕೇಬಲ್ ಟೆಲಿವಿಷನ್ ನೆಟ್‌ವರ್ಕ್ಸ್ (ನಿಯಂತ್ರಣ) ಕಾಯ್ದೆ–1995ರ ಪ್ರಕಾರ ಕ್ರಿಮಿನಲ್ ಕ್ರಮ ಜರುಗಿಸಲು ಬಿಬಿಎಂಪಿಗೆ ಅಧಿಕಾರ ಇದೆ ಎಂದು ನ್ಯಾಯಾಲಯ ಹೇಳಿದೆ.

ವಕೀಲ ಎನ್.ಪಿ.ಅಮೃತೇಶ್ ಸಲ್ಲಿಸಿದ್ದ ಸಾರ್ವಜನಿಕ ಹಿತಾಸಕ್ತಿ ಅರ್ಜಿಯನ್ನು ಮುಖ್ಯ ನ್ಯಾಯಮೂರ್ತಿ ಎ.ಎಸ್.ಓಕಾ ನೇತೃತ್ವದ ವಿಭಾಗೀಯ ಪೀಠ ವಿಚಾರಣೆ ನಡೆಸಿತು.

'ವಿದ್ಯುತ್ ಕೇಬಲ್‌ಗಳು ಇಡೀ ನಗರದಲ್ಲಿ ಅಪಾಯಕಾರಿಯಾಗಿ ತೂಗಾಡುತ್ತಿವೆ. 2015 ರಿಂದ 2019ರ ನಡುವೆ 507 ಜನ ವಿದ್ಯುತ್ ಸ್ಪರ್ಶದಿಂದ ಪ್ರಾಣ ಕಳೆದುಕೊಂಡಿದ್ದಾರೆ. ಹೈಟೆನ್ಷನ್ ತಂತಿಯ ಕೆಳಗೆ 7 ಸಾವಿರಕ್ಕೂ ಹೆಚ್ಚು ಕಟ್ಟಡಗಳಿವೆ' ಎಂದು ಅರ್ಜಿದಾರರು ವಿವರಿಸಿದ್ದಾರೆ.

'ಯಾವುದೇ ಕೇಬಲ್ ಅಳವಡಿಸುವ ಮೊದಲು ಸ್ಥಳೀಯ ಪ್ರಾಧಿಕಾರದ ಅನುಮತಿ ಪಡೆಯುವುದು ಕಡ್ಡಾಯ. ಈ ಕೇಬಲ್‌ಗಳು ನಾಗರಿಕರಿಗೆ ತೊಂದರೆ ಉಂಟು ಮಾಡುತ್ತಿದ್ದರೆ ಕ್ರಮ ಜರುಗಿಸಲು ಇರುವ ಅಧಿಕಾರವನ್ನು ಪಾಲಿಕೆ ಬಳಸಿಕೊಳ್ಳಬೇಕು' ಎಂದು ಪೀಠ ತಿಳಿಸಿತು.

ವಿದ್ಯುತ್ ತಂತಿ ಮತ್ತು ಎಲ್ಲ ಕೇಬಲ್‌ಗಳನ್ನು ನೆಲದೊಳಗೆ ಕೊಂಡೊಯ್ಯುವ ಕಾರ್ಯವನ್ನು ಹಂತ–ಹಂತವಾಗಿ ಮಾಡಲಾಗುತ್ತಿದೆ ಎಂದು ಬಿಬಿಎಂಪಿ ಪರ ವಕೀಲರು ಮಾಹಿತಿ ನೀಡಿದರು. ಯಾವ ರೀತಿ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ ಎಂಬುದರ ಕುರಿತು ಪ್ರಮಾಣಪತ್ರ ಸಲ್ಲಿಸುವಂತೆ ಪೀಠ ನಿರ್ದೇಶನ ನೀಡಿತು.

ಆಧಾರ: ಪ್ರಜಾವಾಣಿ, ದಿನಾಂಕ: 25.02.2021

## 19. ಅಂಗನವಾಡಿಗಳ ಸ್ಥಿತಿಗತಿ ವರದಿ ನೀಡಿ

ರಾಜ್ಯದಲ್ಲಿರುವ ಅಂಗನವಾಡಿ ಕೇಂದ್ರಗಳ ಸ್ಥಿತಿಗತಿ ಬಗ್ಗೆ ಜಿಲ್ಲಾ ಕಾನೂನು ಸೇವಾ ಪ್ರಾಧಿಕಾರಿಗಳು ಸಲ್ಲಿಸಿರುವ ವರದಿ ಬಗ್ಗೆ ಪ್ರತಿಕ್ರಿಯೆ ನೀಡುವಂತೆ ಸರ್ಕಾರಕ್ಕೆ ಹೈಕೋರ್ಟ್ ನಿರ್ದೇಶಿಸಿದೆ.

ರಾಜ್ಯದಲ್ಲಿ ಅಪೌಷ್ಟಿಕತೆಯಿಂದ ಬಳಲುತ್ತಿರುವ ಮಕ್ಕಳ ವಿಚಾರಕ್ಕೆ ಸಂಬಂಧಿಸಿದಂತೆ ಬೆಳಗಾವಿ ಜಿಲ್ಲೆಯ ಅಥಣಿ 'ವಿಮೋಚನಾ' ಸ್ವಯಂ ಸೇವಾ ಸಂಸ್ಥೆಯ ಬಿ.ಎಲ್. ಪಾಟೀಲ್ ಬರೆದಿದ್ದ ಪತ್ರ ಆಧರಿಸಿ ಹೈಕೋರ್ಟ್ ಸ್ವಯಂ ಪ್ರೇರಿತ ಪಿಐಎಲ್ ದಾಖಲಿಸಿಕೊಂಡಿದ್ದು, ವಿಚಾರಣೆ ನಡೆಸಿತು. ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರದ ಪರ ವಕೀಲರು, ಅಂಗನವಾಡಿ ಕೇಂದ್ರಗಳಿಗೆ ಭೇಟಿ ಕೊಟ್ಟು ಅಲ್ಲಿನ ಸ್ಥಿತಿಗತಿಗಳ ಬಗ್ಗೆ ಜಿಲ್ಲಾ ಕಾನೂನು ಸೇವಾ ಪ್ರಾಧಿಕಾರದ ಸದಸ್ಯ ಕಾರ್ಯದರ್ಶಿಗಳು ಸಲ್ಲಿಸಿರುವ ವರದಿಗಳನ್ನು ನ್ಯಾಯಪೀಠಕ್ಕೆ ಸಲ್ಲಿಸಿದರು. ವರದಿ ಪರಿಶೀಲಿಸಿದ ಪೀಠ, ಜಿಲ್ಲಾ ಕಾನೂನು ಸೇವಾ ಪ್ರಾಧಿಕಾರಗಳ ವರದಿ ಬಗ್ಗೆ ಪ್ರತಿಕ್ರಿಯೆ ನೀಡಲು ಮತ್ತು ಅಂಗನವಾಡಿ ಕೇಂದ್ರಗಳ ಸುಧಾರಣೆಗೆ ಯಾವೆಲ್ಲ ಕ್ರಮಗಳನ್ನು ಕೈಗೊಳ್ಳಲಾಗುವುದು ಎಂಬ ಬಗ್ಗೆ ಪ್ರಮಾಣಪತ್ರ ಸಲ್ಲಿಸಲು ಸರ್ಕಾರಕ್ಕೆ ಸೂಚಿಸಿ ವಿಚಾರಣೆಯನ್ನು ಮಾರ್ಚ್ 15ಕ್ಕೆ ಮುಂದೂಡಿತು.

ಅಪೌಷ್ಟಿಕತೆಯಿಂದ ಬಳಲುತ್ತಿರುವ ಮಕ್ಕಳು, ಗರ್ಭಿಣಿಯರು, ಬಾಣಂತಿಯರು, ಕಿಶೋರಾವಸ್ಥೆಯ ಹೆಣ್ಣುಮಕ್ಕಳನ್ನು ಗುರುತಿಸಿ ಆರೋಗ್ಯ ತಪಾಸಣೆ ಮಾಡುವ ಕಾರ್ಯಕ್ರಮಗಳ ಮೇಲ್ವಿಚಾರಣೆ ನಡೆಸಲು ಹೈಕೋರ್ಟ್ ನಿವೃತ್ತ ನ್ಯಾಯಮೂರ್ತಿ ಎ.ಎನ್.ವೇಣುಗೋಪಾಲಗೌಡ ನೇತೃತ್ವದಲ್ಲಿ ಸಮಿತಿ ರಚಿಸಿ ಫೆಬ್ರವರಿ 18ರಂದು ಹೊರಡಿಸಿರುವ ಆದೇಶದ ಪ್ರತಿಯನ್ನು ಸರ್ಕಾರದ ಪರ ವಕೀಲರು ನ್ಯಾಯಪೀಠಕ್ಕೆ ಸಲ್ಲಿಸಿದರು.

ಆಧಾರ: ಪ್ರಜಾವಾಣಿ, ದಿನಾಂಕ: 26.02.2021

## 20. 15 ರಿಂದ ಸುಪ್ರೀಂ ಹೈಬ್ರಿಡ್ ಕಲಾಪ

ಕೊರೋನಾ ವೈರಸ್‌ನಿಂದಾಗಿ ಕಳೆದ ವರ್ಷದ ಮಾರ್ಚ್‌ನಿಂದ ಕೇವಲ ವಿಡಿಯೋ ಕಾನ್ಫರೆನ್ಸ್‌ನಲ್ಲಿ ಮಾತ್ರ ವಿಚಾರಣೆಗಳು ನಡೆಯುತ್ತಿದ್ದ ಸುಪ್ರೀಂಕೋರ್ಟ್‌ನಲ್ಲಿ ಮಾರ್ಚ್ 15 ರಿಂದ ಭೌತಿಕ ಕಲಾಪಗಳು ಮತ್ತೆ ಆರಂಭವಾಗಲಿವೆ. ಅದು ಹೈಬ್ರಿಡ್ ಮಾದರಿಯಲ್ಲಿರಲಿದೆ. ಅಂದರೆ, ಕೆಲ ದಿನ ವಿಡಿಯೋ ಕಾನ್ಫರೆನ್ಸ್ ವಿಚಾರಣೆ ಹಾಗೂ ಇನ್ನು ಕೆಲ ದಿನ ಭೌತಿಕ ಕಲಾಪಗಳು ನಡೆಯಲಿವೆ.

ಭೌತಿಕ ಕಲಾಪ ಪುನಾರಂಭಿಸಲು ಸುಪ್ರೀಂಕೋರ್ಟ್ ನಿಯಮಾವಳಿ ಬಿಡುಗಡೆ ಮಾಡಿದೆ. ಅದರನ್ವಯ, ಮಾರ್ಚ್ 15 ರಿಂದ ಪ್ರಾಯೋಗಿಕವಾಗಿ ಹೈಬ್ರಿಡ್ ಕಲಾಪ ಆರಂಭಿಸಲಾಗುತ್ತದೆ. ಯಾವ ವಿಚಾರಣೆ ಕೋರ್ಟ್‌ನಲ್ಲಿ ನಡೆಯಬೇಕು ಮತ್ತು ಯಾವ ವಿಚಾರಣೆ ವಿಡಿಯೋ ಕಾನ್ಫರೆನ್ಸ್‌ನಲ್ಲಿ ನಡೆಯಬೇಕು ಎಂಬುದನ್ನು ನಿರ್ಧರಿಸುವ ಅಧಿಕಾರವನ್ನು ಆಯಾ ಪೀಠಗಳಿಗೆ ಬಿಡಲಾಗಿದೆ. ಮಂಗಳವಾರ, ಬುಧವಾರ ಹಾಗೂ ಗುರುವಾರ ಅಂತಿಮ ವಿಚಾರಣೆಯ/ಸಾಮಾನ್ಯ ಕೇಸುಗಳನ್ನು ಹೈಬ್ರಿಡ್ ಮಾದರಿಯಲ್ಲಿ ನಡೆಸಬೇಕು ಎಂದು ಸೂಚಿಸಲಾಗಿದೆ. ಪ್ರಕರಣದಲ್ಲಿರುವ ಕಕ್ಷಿದಾರರ ಸಂಖ್ಯೆ, ಕೋರ್ಟ್ ರೂಮ್ ಗಾತ್ರ ಮುಂತಾದವುಗಳನ್ನು ಗಮನಿಸಿ ಕಲಾಪ ಹೇಗೆ ನಡೆಯಬೇಕು ಎಂಬುದನ್ನು ಜಡ್ಜ್ ನಿರ್ಧರಿಸಬಹುದು. ರೀತಿಯ ಪ್ರಕರಣಗಳು ಹಾಗೂ ಸೋಮವಾರ ಮತ್ತು ಶುಕ್ರವಾರ ವಿಚಾರಣೆಗೆ ನಿಗದಿಯಾಗುವ ಪ್ರಕರಣಗಳು ವಿಡಿಯೋ ಕಾನ್ಫರೆನ್ಸ್ ಮೂಲಕ ನಡೆಯಬೇಕು ಎಂದು ಸೂಚಿಸಲಾಗಿದೆ. ಪ್ರಕರಣದ ವಿಚಾರಣೆಯಲ್ಲಿ ಪಾಲ್ಗೊಳ್ಳುವ ವಕೀಲರು ಹಾಗೂ ಕಕ್ಷಿದಾರರ ಸಂಖ್ಯೆ 20ಕ್ಕಿಂತ ಹೆಚ್ಚಿದ್ದರೆ ವಿಚಾರಣೆಯನ್ನು ವಿಡಿಯೋ ಕಾನ್ಫರೆನ್ಸ್‌ನಲ್ಲೇ ನಡೆಸಬೇಕು ಎಂದು ಮಾರ್ಗಸೂಚಿಯಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಆದರೆ, ಭೌತಿಕವಾಗಿ ವಿಚಾರಣೆ ನಡೆಯಬೇಕು ಎಂದು ಜಡ್ಜ್‌ಗೆ ಅನ್ನಿಸಿದರೆ ಭೌತಿಕ ವಿಚಾರಣೆ ನಡೆಸಲು ಅವರಿಗೆ ಅಧಿಕಾರ ನೀಡಲಾಗಿದೆ.

ಆಧಾರ: ಕನ್ನಡ ಪ್ರಭ, ದಿನಾಂಕ: 07.03.2021

## 21. ಸುಪ್ರೀಂ ಕೋರ್ಟ್ ವಕೀಲರ ಸಂಘದ ಅಧ್ಯಕ್ಷ ದುಷ್ಯಂತ್ ದಾವೆ ರಾಜೀನಾಮೆ

ಸುಪ್ರೀಂಕೋರ್ಟ್ ವಕೀಲರ ಸಂಘದ (ಎಸ್‌ಸಿಬಿಎ) ಅಧ್ಯಕ್ಷ ಸ್ಥಾನಕ್ಕೆ ಹಿರಿಯ ವಕೀಲ ದುಷ್ಯಂತ್ ದವೆ ಅವರು ರಾಜೀನಾಮೆ ನೀಡಿದ್ದಾರೆ. ಸಂಘದ ಕಾರ್ಯಕಾರಿ ಸಮಿತಿ ಅವಧಿ ಮುಗಿದಿರುವುದರಿಂದ ಅಧ್ಯಕ್ಷನಾಗಿ ಮುಂದುವರಿಯುವ ಹಕ್ಕನ್ನು ಕಳೆದುಕೊಂಡಿರುವುದಾಗಿ ಅವರು ಹೇಳಿದ್ದಾರೆ. "ಈಗಾಗಲೇ ಎಸ್‌ಸಿಬಿಎ ಕಾರ್ಯಕಾರಿ ಸಮಿತಿಯ ಅಧಿಕಾರಾವಧಿ ಮುಗಿದಿದೆ. ಸಮಿತಿಯ ಸದಸ್ಯರ ಆಯ್ಕೆಗೆ ವರ್ಚುವಲ್ ಚುನಾವಣೆ ನಡೆಸಲು ನಾವು ಪ್ರಾಮಾಣಿಕವಾಗಿ ನಿರ್ಧರಿಸಿದ್ದೇವೆ. ಆದರೆ ಕೆಲ ವಕೀಲರು ಆಕ್ಷೇಪಣೆ ಸಲ್ಲಿಸಿರುವ ಹಿನ್ನೆಲೆಯಲ್ಲಿ ಸಮಿತಿ ಘೋಷಿಸಿದ ವೇಳಾಪಟ್ಟಿಯ ಪ್ರಕಾರ ಚುನಾವಣೆ ನಡೆಸಲು ಸಾಧ್ಯವಾಗುತ್ತಿಲ್ಲ. ಸದಸ್ಯರ ಜೊತೆ ನನಗೆ ಯಾವುದೇ ಭಿನ್ನಾಭಿಪ್ರಾಯವಿಲ್ಲ. ಇಂತಹ ಸಂಧರ್ಭದಲ್ಲಿ ಅಧ್ಯಕ್ಷನಾಗಿ ಮುಂದುವರಿಯುವುದು ನೈತಿಕವಾಗಿ ತಪ್ಪಾಗುತ್ತದೆ. ಹಾಗಾಗಿ ರಾಜೀನಾಮೆ ನೀಡಿದ್ದೇನೆ," ಎಂದು ಅವರು ಹೇಳಿದ್ದಾರೆ. ದುಷ್ಯಂತ್ ದವೆ ಅವರ ರಾಜೀನಾಮೆಯನ್ನು ಎಸ್‌ಸಿಬಿಎ ಕಾರ್ಯದರ್ಶಿ ರೋಹಿಂತ್ ಪಾಂಡೆ ಖಚಿತಪಡಿಸಿದ್ದಾರೆ. ದವೆ ಅವರು ಇತ್ತೀಚೆಗೆ ಸುಪ್ರೀಂಕೋರ್ಟ್‌ನಲ್ಲಿ ಕೆಲವು ರೈತ ಸಂಘಗಳ ಪರವಾಗಿ ಪ್ರತಿನಿಧಿಸಿದ್ದರು.

ಆಧಾರ: ಕನ್ನಡ ಪ್ರಭ, ದಿನಾಂಕ: 07.03.2021

## 22. ಮೀಸಲು ಏರಿಕೆಗೆ ಸಹಮತ

ಮೀಸಲಾತಿ ಕುರಿತು ವಿವಿಧ ಸಮುದಾಯಗಳಿಂದ ಬರುತ್ತಿರುವ ಬೇಡಿಕೆ ಬಗ್ಗೆ ಪರಾಮರ್ಶಿಸಲು ಈಗಾಗಲೇ ಉನ್ನತ ಮಟ್ಟದ ಸಮಿತಿ ರಚಿಸಿರುವ ರಾಜ್ಯ ಸರ್ಕಾರ, ಈಗ ಮೀಸಲು ಮಿತಿ ಏರಿಸಲು ಸಹಮತ ವ್ಯಕ್ತಪಡಿಸಿದೆ. ಸಂಪುಟ ಸಭೆಯಲ್ಲಿ ಈ ಬಗ್ಗೆ ಚರ್ಚೆ ನಡೆದಿದ್ದು, ಮಿತಿ ಹೆಚ್ಚಳಕ್ಕೆ ಅಭ್ಯಂತರವಿಲ್ಲ ಎಂಬ ತೀರ್ಮಾನಕ್ಕೆ ಸರ್ಕಾರ ಬಂದಿದೆ.

ಸರ್ವೋಚ್ಚ ನ್ಯಾಯಾಲಯದಲ್ಲಿ ಮರಾಠಿ ಮೀಸಲಾತಿ ಕುರಿತು ನಡೆಯುತ್ತಿರುವ ಪ್ರಕರಣವೊಂದರಲ್ಲಿ ನ್ಯಾಯಪೀಠ ಎಲ್ಲ ರಾಜ್ಯಗಳಿಂದ ಅಭಿಪ್ರಾಯ ಕೇಳಿದ್ದು, ಕರ್ನಾಟಕ ತನ್ನ ನಿಲುವು ವ್ಯಕ್ತಪಡಿಸಿದೆ. 'ಈಗಿರುವ ಮೀಸಲಾತಿ ಪ್ರಮಾಣ ಏರಿಕೆ ಮಾಡಲೇಬೇಕಾದ ಅನಿವಾರ್ಯತೆ ಇದೆ. ಜನಸಂಖ್ಯೆ ಗಣನೀಯವಾಗಿ ಏರಿಕೆಯಾಗಿದೆ. ಬಹುತೇಕ ಹಿಂದುಳಿದ ಸಮುದಾಯಗಳು ಮೀಸಲಾತಿಗೆ ಬೇಡಿಕೆಗೆ ಪೂರಕವಾಗಿ ತೀರ್ಮಾನ ಕೈಗೊಳ್ಳಬೇಕಾದರೆ ಮೀಸಲಾತಿ ಪ್ರಮಾಣ ಏರಿಕೆ ಅಗತ್ಯ. ಈ ತೀರ್ಮಾನ ಐತಿಹಾಸಿಕವಾಗಿ ದಾಖಲಾಗಿಲಿದೆ' ಎಂದು ಸಂಪುಟ ಸಭೆಯಲ್ಲಿ ಅಭಿಪ್ರಾಯ ವ್ಯಕ್ತವಾಯಿತು.

ಸಂಪುಟ ಸಭೆ ಬಳಿಕೆ ರಾಜ್ಯದ ಅಡ್ವೋಕೇಟ್ ಜನರಲ್‌ಗೆ ಸರ್ಕಾರ ನಿರ್ಣಯ ತಲುಪಿಸಿದ್ದು, ಅವರು ಪ್ರಮಾಣಪತ್ರ ರೂಪದಲ್ಲಿ ಸುಪ್ರಿಂಕೋರ್ಟ್‌ಗೆ ಸಲ್ಲಿಸಿದ್ದಾರೆ.

**ಏನಿದು ಮೀಸಲಾತಿ ಪ್ರಕರಣ:** ಉದ್ಯೋಗ ಹಾಗೂ ಶಿಕ್ಷಣ ಕ್ಷೇತ್ರದಲ್ಲಿ ಹಿಂದುಳಿದ ವರ್ಗಗಳಿಗೆ ನೀಡಲಾಗುವ ಮೀಸಲಾತಿ ಪ್ರಮಾಣ ಶೇ. 50 ಮೀರಬಾರದು ಎಂದು 1992ರಲ್ಲಿ ಸುಪ್ರೀಂ ಕೋರ್ಟ್ ಮಹತ್ವದ ತೀರ್ಪು ನೀಡಿತ್ತು. ಆದರೆ ಮಹಾರಷ್ಟ್ರ ಸರ್ಕಾರ, ಮರಾಠರಿಗೆ ಶೇ. 16 ಮೀಸಲಾತಿ ನಿಗದಿ ಮಾಡಿ ಕಾಯ್ದೆಗೆ ತಿದ್ದುಪಡಿ ತಂದಿತ್ತು. ಇದರ ವಿರುದ್ಧ ಬಾಂಬೆ ಹೈಕೋರ್ಟ್‌ನಲ್ಲಿ ಸಾರ್ವಜನಿಕ ಹಿತಾಸಕ್ತಿ ಅರ್ಜಿ ಸಲ್ಲಿಕೆಯಾಗಿತ್ತು. ಮೀಸಲಾತಿ ನೀಡಿಕೆಯನ್ನು ಎತ್ತಿ ಹಿಡಿದ ಬಾಂಬೆ ಹೈಕೋರ್ಟ್, ಮರಾಠರಿಗೆ ಶಿಕ್ಷಣ ಕ್ಷೇತ್ರದಲ್ಲಿ ಶೇ. 12 ಹಾಗೂ ಉದ್ಯೋಗದಲ್ಲಿ ಶೇ. 13 ಮೀಸಲಾತಿ ಒದಗಿಸುವಂತೆ ಆದೇಶ ನೀಡಿತ್ತು. ಈ ಆದೇಶದಿಂದ ಮೀಸಲಾತಿ ಪ್ರಮಾಣ ಶೇ. 50ಕ್ಕಿಂತ ಅಧಿಕವಾಗುತ್ತದೆ. ಇದು ಸುಪ್ರೀಂಕೋರ್ಟ್ ಆದೇಶದ ಉಲ್ಲಂಘನೆ ಎಂದು ಆರೋಪಿಸಿ, ಸರ್ವೋಚ್ಚ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಕೆಯಾಗಿತ್ತು.

'ಈ ವಿಚಾರ ಕೇವಲ ಮರಾಠರಿಗೆ ಸಂಬಂಧಿಸಿದ್ದಲ್ಲ. ಮೀಸಲಾತಿ ಪ್ರಮಾಣ ಎಲ್ಲ ರಾಜ್ಯಗಳಿಗೂ ಅನ್ವಯ ಆಗುತ್ತದೆ. ಹೀಗಾಗಿ ಕೋರ್ಟ್ ಈ ಕುರಿತು ಸಮಗ್ರವಾಗಿ ಪರಿಶೀಲನೆ ನಡೆಸಬೇಕು' ಎಂದು ಹಿರಿಯ ವಕೀಲ ಮುಕುಲ್ ರೊಹಟಗಿ, ಅಭಿಷೇಕ್ ಮನು ಸಿಂಘ್ವಿ ಕಪಿಲ್ ಸಿಬಲ್ ಮನವಿ ಮಾಡಿದ್ದರು. ಇದನ್ನು ಪರಿಗಣಿಸಿದ್ದ ಸುಪ್ರೀಂಕೋರ್ಟ್ ವಿಚಾರಣೆಗೆ ಸಮ್ಮತಿ ನೀಡಿತ್ತು. ಜೊತೆಗೆ ಮೀಸಲಾತಿಗೆ ಶೇ. 50 ಮಿತಿ ಹೇರಬೇಕೆ ಅಥವಾ ಏರಿಕೆ ಮಾಡಬೇಕೆ ಎಂಬ ಬಗ್ಗೆ ಪ್ರತಿಕ್ರಿಯೆ ನೀಡುವಂತೆ ಎಲ್ಲ ರಾಜ್ಯಗಳಿಗೆ ನೋಟಿಸ್ ಜಾರಿ ಮಾಡಿತ್ತು.

- ನ್ಯಾಯಮೂರ್ತಿಗಳಾದ ಅಶೋಕ್ ಭೂಷಣ್, ಎಲ್ ನಾಗೇಶ್ವರ್ ರಾವ್, ಎಸ್ ಅಬ್ದುಲ್ ನಜೀರ್, ಹೇಮಂತ್ ಗುಪ್ತಾ ಮತ್ತು ರವೀಂದ್ರ ಭಟ್ ಅವರಿದ್ದ ಸಾಂವಿಧಾನಿಕ ಪೀಠ ಮೀಸಲಾತಿ ಪ್ರಕರಣವನ್ನು ನಿರಂತರವಾಗಿ ವಿಚಾರಣೆ ನಡೆಸುತ್ತಿದೆ.

- ಇಂದಿರಾ ಸಾಹಾನಿ ತೀರ್ಪಿನ ಮೂಲಕ ಶೇ 50 ಮೀಸಲಾತಿ ಮಿತಿ ನಿಗದಿಗೊಳಿಸಿರುವುದನ್ನು ಪುನರ್ ಪರಿಶೀಲಿಸುವ ಅಗತ್ಯವಿದೆ ಎಂದು ಹಿರಿಯ ವಕೀಲ ಮುಕುಲ್ ರೋಹಟ್ಗಿ ಅವರು ವಾದಿಸಿದ್ದರು.

- ಎಲ್ಲಿಯವರೆಗೆ ಮೀಸಲಾತಿ ಯೋಜನೆ ಮುಂದುವರಿಯಬೇಕು ಎಂದು ಸುಪ್ರೀಂಕೋರ್ಟ್ ಗಂಭೀರವಾಗಿ ಪ್ರಶ್ನಿಸಿತ್ತು. ಇದರಿಂದ ಉಂಟಾಗುವ ಅಸಮಾನತೆಯ ಪಾಡೇನು. ಎಷ್ಟು ತಲೆಮಾರುಗಳವರೆಗೆ ಇದು ಮುಂದುವರಿಯಲಿದೆ ಎಂದು ನ್ಯಾಯಪೀಠ ಪ್ರಶ್ನಿಸಿತು.

- ಸ್ವಾತಂತ್ರ್ಯ ಬಂದು 70 ವರ್ಷಗಳೇ ಕಳೆದಿವೆ. ಯಾವುದೇ ಅಭಿವೃದ್ಧಿ ಕಾರ್ಯಗಳು ನಡೆದಿಲ್ಲ ಎಂಬುದನ್ನು ನಾವು ಒಪ್ಪಿಕೊಳ್ಳೋಣವೇ. ಯಾವುದೇ ಹಿಂದುಳಿದ ವರ್ಗ ಮುಂದುವರಿದಿಲ್ಲ ಎನ್ನೋಣವೇ ಎಂದು ಪ್ರಶ್ನಿಸಿತು.

ಆಧಾರ: ವಿಜಯವಾಣಿ, ದಿನಾಂಕ:23.03.2021

# ಭಾಗ–8

# ಹೊರ ರಾಜ್ಯಗಳ ಸುದ್ದಿಗಳು

## 1. ಅಗ್ನಿ ಅವಘಡಕ್ಕೆ ಹತ್ತು ಕಂದಮ್ಮಗಳು ಬಲಿ

ಮಹಾರಾಷ್ಟ್ರದ ಭಂಡಾರ ನಗರದ ಸರ್ಕಾರಿ ಶಿಶು ಆಸ್ಪತ್ರೆಯಲ್ಲಿ ಘಟಿಸಿದ ಘೋರ ಅಗ್ನಿ ದುರಂತದಲ್ಲಿ ಹತ್ತು ಕಂದಮ್ಮಗಳು ಮೃತಪಟ್ಟಿವೆ. ಒಂದರಿಂದ ಮೂರು ತಿಂಗಳ ಅವಧಿಯ ಶಿಶುಗಳು ಇದರಲ್ಲಿ ಮೃತಪಟ್ಟಿವೆ. ಹತ್ತರ ಪೈಕಿ ಮೂರು ಹಸುಳೆಗಳು ಸುಟ್ಟ ಗಾಯಗಳಿಂದ ಹಾಗೂ ಏಳು ಶಿಶುಗಳು ಹೊಗೆಯಿಂದ ಉಸಿರುಗಟ್ಟಿ ಸತ್ತಿವೆ. ಇವರಲ್ಲಿ ಎಂಟು ಹೆಣ್ಣು ಮತ್ತು ಎರಡು ಗಂಡು ಶಿಶುಗಳು, ನವಜಾತ ಶಿಶುಗಳು ತೀವ್ರ ನಿಗಾ ಘಟಕದಲ್ಲಿ ರಾತ್ರಿ 1.30ರ ಸುಮಾರಿಗೆ ಈ ಅನಾಹುತ ಘಟಿಸಿದೆ. ಸಕಾಲದಲ್ಲಿ ಎಚ್ಚೆತ್ತ ಆಸ್ಪತ್ರೆಯ ಸಿಬ್ಬಂದಿ ಏಳು ಶಿಶುಗಳನ್ನು ರಕ್ಷಣೆ ಮಾಡುವಲ್ಲಿ ಯಶಸ್ವಿಯಾಗಿದ್ದಾರೆ.

**ತನಿಖೆಗೆ ಸಮಿತಿ:** ಸಂತ್ರಸ್ತ ಕುಟುಂಬಗಳಿಗೆ ರಾಜ್ಯ ಸರ್ಕಾರ ತಲಾ ರೂ. 5 ಲಕ್ಷ ಪರಿಹಾರ ಘೋಷಣೆ ಮಾಡಿದೆ. ಘಟನೆ ಬಗ್ಗೆ ತೀವ್ರ ಆಘಾತ ವ್ಯಕ್ತಪಡಿಸಿರುವ ಮುಖ್ಯಮಂತ್ರಿ ಉದ್ಧವ್ ಠಾಕ್ರೆ, ಉನ್ನತ ಮಟ್ಟದ ತನಿಖೆಗೆ ಆದೇಶ ನೀಡಿದ್ದಾರೆ. ರಾಜ್ಯದ ಎಲ್ಲಾ ಆಸ್ಪತ್ರೆಗಳ ವಿದ್ಯುತ್ ವ್ಯವಸ್ಥೆಯ ಸ್ಥಿತಿಗತಿ ಕುರಿತು ಸಮೀಕ್ಷೆ ನಡೆಸಿ ವರದಿ ಸಲ್ಲಿಸುವಂತೆ ಆದೇಶಿಸಿದ್ದಾರೆ. ಘಟನೆಯ ತನಿಖೆ ನಡೆಸಲು ಆರೋಗ್ಯ ಇಲಾಖೆಯ ಮೂವರು ಸದಸ್ಯರ ಸಮಿತಿ ರಚಿಸಿದ್ದು, ಮೂರು ದಿನಗಳಲ್ಲಿ ವರದಿ ಸಲ್ಲಿಸುವಂತೆ ಸೂಚಿಸಲಾಗಿದೆ.

**ರಾಷ್ಟ್ರಪತಿ ಸಂತಾಪ:** ಘಟನೆಯ ಬಗ್ಗೆ ಆಘಾತ ವ್ಯಕ್ತಪಡಿಸಿರುವ ರಾಷ್ಟ್ರಪತಿ ರಾಮನಾಥ್ ಕೋವಿಂದ್, ಪ್ರಧಾನಿ ನರೇಂದ್ರ ಮೋದಿ, ಕಾಂಗ್ರೆಸ್ ನಾಯಕ ರಾಹುಲ್ ಗಾಂಧಿ ಮತ್ತಿತರ ಗಣ್ಯರು ಶಿಶುಗಳ ಸಾವಿನ ಬಗ್ಗೆ  ತೀವ್ರ ಸಂತಾಪ ಸೂಚಿಸಿದ್ದಾರೆ. “ಇದು ತೀವ್ರ ನೋವಿನ ಸಂಗತಿ” ಎಂದು ಮಹಾರಾಷ್ಟ್ರ ಮಾಜಿ ಮುಖ್ಯಮಂತ್ರಿ ದೇವೇಂದ್ರ ಫಡ್ನವಿಸ್ ಟ್ವೀಟ್ ಮಾಡಿದ್ದಾರೆ. ಮಹಾರಾಷ್ಟ್ರದ ಭಂಡಾರ ಸರ್ಕಾರಿ ಆಸ್ಪತ್ರೆಯಲ್ಲಿ ತಮ್ಮ ಮಕ್ಕಳ ಮಾಹಿತಿ ತಿಳಿಯಲು ತಾಯಂದಿರು ದುಗುಡ ಹೊತ್ತು ನಿಂತಿದ್ದರು.

ಆಧಾರ: ಪ್ರಜಾವಾಣಿ, ದಿನಾಂಕ:10.01.2021

## 2. ಗುಜರಾತ್‌ನ ಮಾಜಿ ಸಿಎಂ ಮಾಧವಸಿನ್ಹ ಸೋಲಂಕಿ ನಿಧನ

4 ಬಾರಿ ಗುಜರಾತ್‌ನ ಸಿಎಂ ಆಗಿದ್ದು, ವಿದೇಶಾಂಗ ವ್ಯವಹಾರಗಳ ಮಾಜಿ ಸಚಿವ ಹಾಗೂ ಕಾಂಗ್ರೆಸ್ ಮುಖಂಡ ಮಾಧವಸಿನ್ಹ ಸೋಲಂಕಿ (93) ಶನಿವಾರ ಮುಂಜಾನೆ ವಿಧಿವಶರಾಗಿದ್ದಾರೆ. 1991 ಜೂನ್‌ನಿಂದ ಖಾತೆ ನಿರ್ವಹಿಸಿದ್ದ ಇವರು, ಬೋಫೋರ್ಸ್ ಹಗರಣದಲ್ಲಿ ಸಿಲುಕಿ ತಮ್ಮ ಹುದ್ದೆಗೆ ರಾಜೀನಾಮೆ ಸಲ್ಲಿಸಿದ್ದರು. ಗುಜರಾತ್‌ನಲ್ಲಿ ಕ್ಷತ್ರಿಯ, ‘ಹರಿಜನ, ಆದಿವಾಸಿ ಮತ್ತು ಮುಸ್ಲಿಮ್ (ಕೆಎಚ್‌ಎಎಂ) ಮತಗಳನ್ನು ಒಗ್ಗೂಡಿಸಿ, ಕಾಂಗ್ರೆಸ್ ಅನ್ನು ಅಧಿಕಾರಕ್ಕೆ ತಂದಿದ್ದರು. ನರೇಂದ್ರ ಮೋದಿಗೂ ಮೊದಲು ಗುಜರಾತ್ ಕಂಡ ದೀರ್ಘ ಕಾಲಾವಧಿಯ ಸಿಎಂ’ ಎಂಬ ಖ್ಯಾತಿಗೆ ಪಾತ್ರರಾಗಿದ್ದರು. ಸೋಲಂಕಿ ನಿಧನಕ್ಕೆ ಪ್ರಧಾನಿ ನರೇಂದ್ರ ಮೋದಿ, ವಿಪಕ್ಷನಾಯಕ ರಾಹುಲ್ ಗಾಂಧಿ ತೀವ್ರ ಸಂತಾಪ ಸೂಚಿಸಿದ್ದಾರೆ. ಗುಜರಾತ್ ಸಿಎಂ ವಿಜಯ್ ರೂಪಾಣಿ ರಾಜ್ಯದಲ್ಲಿ ಒಂದು ದಿನ ಶೋಕಾಚರಣೆಗೆ ಸೂಚಿಸಿದ್ದಾರೆ.

ಆಧಾರ: ಉದಯವಾಣಿ, ದಿನಾಂಕ:10.01.2021

## 3. 27ರಿಂದ ವಿಶೇಷ ಅಧಿವೇಶನ

ಪಶ್ಚಿಮ ಬಂಗಾಳ ವಿಧಾನಸಭೆಯ ಎರಡು ದಿನದ ವಿಶೇಷ ಅಧಿವೇಶನವು ಜನವರಿ 27ರಂದು ಪ್ರಾರಂಭವಾಗಲಿದ್ದು, ಈ ವೇಳೆ ಸರ್ಕಾರವು ಕೇಂದ್ರದ ಕೃಷಿ ಕಾಯ್ದೆಗಳ ವಿರುದ್ಧ ನಿರ್ಣಯ ಮಂಡಿಸಲಿದೆ. ಮಾಧ್ಯಮದವರ ಜೊತೆ ಮಾತನಾಡಿದ ರಾಜ್ಯ ಸಂಸದೀಯ ವ್ಯವಹಾರಗಳ ಸಚಿವ

ಪಾರ್ಥಾಚಟರ್ಜಿ 'ಸ್ಪೀಕರ್ ಬಿಮಾನ್ ಬಂಡೋಪಾಧ್ಯಾಯ ಅವರಿಗೆ ವಿಶೇಷ ಅಧಿವೇಶನ ಕರೆಯುವಂತೆ ಮನವಿ ಮಾಡಲಾಗಿದೆ' ಎಂದರು.

ಆಧಾರ: ಪ್ರಜಾವಾಣಿ, ದಿನಾಂಕ:10.01.2021

## 4. ಗವರ್ನರ್ ವಿರುದ್ಧವೇ ಮುಖ್ಯಮಂತ್ರಿ ಧರಣಿ

ಪುದುಚೇರಿ, ಉಪರಾಜ್ಯ ಪಾಲೆ ಕಿರಣ್ ಬೇಡಿ ವಜಾಕ್ಕೆ ಆಗ್ರಹಿಸಿ ಪುದುಚೇರಿ ಮುಖ್ಯಮಂತ್ರಿ ವಿ.ನಾರಾಯಣಸ್ವಾಮಿ ಬೀದಿಗೆ ಇಳಿದಿದ್ದಾರೆ. ಬೇಡಿ ಅವರ ವಜಾಕ್ಕೆ ಆಗ್ರಹಿಸಿ ರಾಜ್ಯಪಾಲರ ಅಧಿಕೃತ ನಿವಾಸವಾದ 'ರಾಜನಿವಾಸ'ದ ಎದುರು 3 ದಿನದಿಂದ ಆಡಳಿತರೂಢ ಕಾಂಗ್ರೆಸ್ ಹಾಗೂ ಮಿತ್ರ ಪಕ್ಷಗಳು ಪ್ರತಿಭಟನಾ ಸ್ಥಳದಲ್ಲೇ ಮಲಗಿದ್ದ ನಾರಾಯಣಸಾಮಿ ಪ್ರತಿಭಟನೆಯಲ್ಲಿ ಭಾಗಿಯಾದರು. 'ಬೇಡಿ.. ಗೋ ಬ್ಯಾಕ್' ಎಂಬ ಫಲಕ ಹಿಡಿದು ಗಮನ ಸೆಳೆದರು. ಇವರಿಗೆ ಸಚಿವ, ಶಾಸಕರೂ ಸಾಥ್ ನೀಡಿದರು. ಈ ಕಾರಣದಿಂದ ರಾಜನಿವಾಸಕ್ಕೆ ಕೇಂದ್ರೀಯ ಪಡೆಗಳಿಂದ ಭದ್ರತೆ ಒದಗಿಸಲಾಗಿದೆ.

'ಪುದುಚೇರಿಯ ಅಭಿವೃದ್ಧಿ ಯೋಜನೆಗಳು ಮತ್ತು ಕಾರ್ಯಗಳಿಗೆ ಕಿರಣ್ ಬೇಡಿ ಅಡ್ಡಗಾಲು ಹಾಕುತ್ತಿದ್ದಾರೆ' ಎಂಬುದು ಆಡಳಿತರೂಢ ಪಕ್ಷದ ಆರೋಪ. ಆದರೆ, ಬಿಜೆಪಿ ಹಾಗೂ ಅಣ್ಣಾ ಡಿಎಂಕೆ ಈ ಪ್ರತಿಭಟನೆಯನ್ನು ಖಂಡಿಸಿವೆ. 2016ರಲ್ಲಿ ಕಿರಣ್ ಬೇಡಿ ಅವರು ಲೆಫ್ಟಿನೆಂಟ್ ಗವರ್ನರ್ ಆಗಿ ನೇಮಕವಾದಾಗಿನಿಂದಲೂ ಮುಖ್ಯಮಂತ್ರಿ ಮತ್ತು ರಾಜ್ಯಪಾಲರ ನಡುವೆ ಮನಸ್ತಾಪ, ಜಟಾಪಟಿ ನಡೆದೇ ಇದೆ. ಮೇ ತಿಂಗಳಿನಲ್ಲಿ ವಿಧಾನಸಭಾ ಚುನಾವಣೆ ನಿಗದಿಯಾಗಿರುವಾಗಲೇ ಘಟಾನುಘಟಿ ನಾಯಕರಿಬ್ಬರ ನಡುವಿನ ವೈಮನಸ್ಸು ತಾರಕಕ್ಕೇರಿದೆ.

ಆಧಾರ: ಕನ್ನಡಪ್ರಭ, ದಿನಾಂಕ:11.01.2021

## 5. ಹರ್ಯಾಣ ಸಿಎಂ ಕೃಷಿ ಕಾರ್ಯಕ್ರಮ ವೇದಿಕೆ ರೈತರಿಂದ ಧ್ವಂಸ

ಕೃಷಿ ಕಾಯ್ದೆಗಳನ್ನು ವಾಪಸ್ ಪಡೆಯಬೇಕು ಎಂದು ಆಗ್ರಹಿಸಿ ದೆಹಲಿಯಲ್ಲಿ ಹರ್ಯಾಣ, ಪಂಜಾಬ್ ರೈತರು ಒಂದೂವರೆ ತಿಂಗಳಿನಿಂದ ಪ್ರತಿಭಟನೆ ನಡೆಸುತ್ತಿರುವಾಗಲೇ, ಕಾಯ್ದೆಯಿಂದ ಆಗುವ ಲಾಭಗಳನ್ನು ವಿವರಿಸಲು ಹರ್ಯಾಣ ಮುಖ್ಯಮಂತ್ರಿ ಮನೋಹರ ಲಾಲ್ ಖಟ್ಟರ್ ಅವರು ಆಯೋಜಿಸಿದ್ದ ಕಾರ್ಯಕ್ರಮ ರಾದ್ಧಾಂತದಲ್ಲಿ ಅಂತ್ಯವಾಗಿದೆ.

ಮುಖ್ಯಮಂತ್ರಿಗಳು ಆಗಮಿಸುವ ಮೊದಲೇ ಸ್ಥಳಕ್ಕೆ ಬಂದ ಕಾಯ್ದೆ ವಿರೋಧಿ ಹೋರಾಟಗಾರರು ಕಾರ್ಯಕ್ರಮ ಸ್ಥಳವನ್ನು ಸಂಪೂರ್ಣ ಧ್ವಂಸಗೊಳಿಸಿದ್ದಾರೆ. ಖಟ್ಟರ್ ಅವರ ಹೆಲಿಕಾಪ್ಟರ್ ಇಳಿಯಬೇಕಿದ್ದ ಸ್ಥಳವನ್ನು ವಶಕ್ಕೆ ತೆಗೆದುಕೊಂಡಿದ್ದಾರೆ. ಇದರಿಂದಾಗಿ ಈ ಕಾರ್ಯಕ್ರಮ ರದ್ದುಗೊಳ್ಳುವಂತಾಗಿದೆ.

ಉದ್ರಿಕ್ತ ರೈತರನ್ನು ತಡೆಯಲು ಪೊಲೀಸರು ಜಲ ಫಿರಂಗಿ ಹಾಗೂ ಅಶ್ರುವಾಯು ಸಿಡಿಸಿದರಾದರೂ ಯಾವುದೇ ಪ್ರಯೋಜನವಾಗಿಲ್ಲ. ಕಾರ್ಯಕ್ರಮಕ್ಕೆಂದು ಸಿದ್ಧಪಡಿಸಲಾಗಿದ್ದ ವೇದಿಕೆಗೆ ಹಾನಿ ಮಾಡಿದ ರೈತರು, ಕುರ್ಚಿ, ಟೇಬಲ್ ಹಾಗೂ ಹೂ ಕುಂಡಗಳನ್ನು ಒಡೆದು ತಮ್ಮ ಆಕ್ರೋಶ ಹೊರಹಾಕಿದ್ದಾರೆ.

**ಆಗಿದ್ದಿಷ್ಟು:** ಕೇಂದ್ರದ 3 ಕೃಷಿ ಕಾಯ್ದೆಗಳಿಂದ ಆಗುವ ಪ್ರಯೋಜನಗಳನ್ನು ವಿವರಿಸಲು ಮನೋಹರ ಲಾಲ್ ಖಟ್ಟರ್ ಅವರು ಕಾರ್ನಲ್ ಜಿಲ್ಲೆಯ ಕೈಮ್ಲಾ ಗ್ರಾಮದಲ್ಲಿ 'ಕಿಸಾನ್ ಮಹಾಪಂಚಾಯತ್' ಆಯೋಸಿದ್ದರು. ಆದರೆ, ಈ ಕಾರ್ಯಕ್ರಮಕ್ಕೆ ಅಡ್ಡಿಪಡಿಸಲು ರೈತರು ಆಗಮಿಸಿದರು. ಗ್ರಾಮದತ್ತ ಬರುತ್ತಿದ್ದ ರೈತರನ್ನು ಜಲಫಿರಂಗಿ, ಅಶ್ರುವಾಯು ಸಿಡಿಸಿ ನಿರ್ಬಂಧಿಸುವ ಪೊಲೀಸರ ಪ್ರಯತ್ನ ವಿಫಲವಾಯಿತು. ಪೊಲೀಸರ ಕೋಟೆಯನ್ನು ಭೇದಿಸಿದ ರೈತರು ಕಾರ್ಯಕ್ರಮ ನಡೆಯುವ ಸ್ಥಳಕ್ಕೆ ನುಗ್ಗಿದರು. ಮುಖ್ಯಮಂತ್ರಿಗಳ ಹೆಲಿಕಾಪ್ಟರ್ ಇಳಿಯಬೇಕಿದ್ದ ಹೆಲಿಪ್ಯಾಡ್ ಅನ್ನು ವಶಕ್ಕೆ ತೆಗೆದುಕೊಂಡರು. ಹೀಗಾಗಿ ಕಾರ್ಯಕ್ರಮವನ್ನು ರದ್ದುಗೊಳಿಸಲಾಯಿತು. ಸಿಎಂ ಅವರು ಕಾರ್ಯಕ್ರಮಕ್ಕೆ ಬರಲೇ ಇಲ್ಲ.

ಈ ನಡುವೆ ರೈತರ ಮೇಲೆ ಜಲಫಿರಂಗಿ ಹಾಗೂ ಆಶ್ರುವಾಯು ಸಿಡಿಸಿದ್ದಕ್ಕೆ ಕಾಂಗ್ರೆಸ್ ನಾಯಕ ರಣದೀಪ್ ಸಿಂಗ್ ಸುರ್ಜೇವಾಲಾ ಅವರು ಮುಖ್ಯಮಂತ್ರಿ ಖಟ್ಟರ್ ವಿರುದ್ಧ ಹರಿಹಾಯ್ದಿದ್ದಾರೆ.

ಆಧಾರ: ಕನ್ನಡಪ್ರಭ, ದಿನಾಂಕ:11.01.2021

## 6. ಸೀರಂ ಇನ್‌ಸ್ಟಿಟ್ಯೂಟ್‌ನಲ್ಲಿ ಅಗ್ನಿ ಅವಘಡ: 5 ಸಾವು

ಕೋವಿಶೀಲ್ಡ್ ಲಸಿಕೆ ತಯಾರಿಕಾ ಕಂಪನಿ ಸೀರಂ ಇನ್‌ಸ್ಟಿಟ್ಯೂಟ್ ಆಫ್ ಇಂಡಿಯಾದ ಪುಣೆಯ ಘಟಕದಲ್ಲಿ ಅಗ್ನಿ ದುರಂತ ಸಂಭವಿಸಿದೆ. ಈ ಅವಘಡದ ವೇಳೆ ಘಟಕದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಐವರು ಮೃತಪಟ್ಟಿದ್ದಾರೆ. 9 ಮಂದಿಯನ್ನು ರಕ್ಷಿಸಲಾಗಿದ್ದು, ಈ ಪೈಕಿ ಕೆಲವರ ಸ್ಥಿತಿ ಗಂಭೀರವಾಗಿದೆ ಎಂದು ಪೊಲೀಸರು ತಿಳಿಸಿದ್ದಾರೆ.

ಈ ಬಗ್ಗೆ ಸೀರಂ ಇನ್‌ಸ್ಟಿಟ್ಯೂಟ್ ಸಿಇಓ ಅಡಾರ್ ಪೂನವಾಲ ಆಘಾತ ವ್ಯಕ್ತಪಡಿಸಿದ್ದು, ಘಟನೆಯಿಂದ ಬಹಳ ದುಃಖಿತನಾಗಿದ್ದೇನೆ. ಆದರೆ, ಕೋವಿಶೀಲ್ಡ್ ಲಸಿಕೆ ತಯಾರಿ ಕಾರ್ಯ ನಿರಂತರವಾಗಿ ಸಾಗಿದ್ದು, ಅದಕ್ಕೆ ಯಾವುದೇ ಅಡ್ಡಿಯಾಗಿಲ್ಲ ಎಂದು ಸ್ಪಷ್ಟಪಡಿಸಿದ್ದಾರೆ.

ಪ್ರಧಾನಿ ನರೇಂದ್ರ ಮೋದಿ ಅವರೂ ಟ್ವೀಟ್ ಮೂಲಕ ಪ್ರತಿಕ್ರಿಯಿಸಿ, ಈ ದುರದೃಷ್ಟಕರ ಅಗ್ನಿ ಅನಾಹುತಕ್ಕೆ ಐದು ಜೀವಗಳು ಬಲಿಯಾಗಿರುವುದು ಬಹಳ ಬೇಸರ ತರಿಸಿದೆ. ಈ ನೋವಿನ ಸಮಯದಲ್ಲಿ ಮೃತರ ಕುಟುಂಬ ಸದಸ್ಯರಿಗೆ ಸಾಂತ್ವನ ಹೇಳಬಯಸುತ್ತೇನೆ. ಗಾಯಾಳುಗಳ ಬೇಗನೆ ಗುಣಮುಖರಾಗಲಿ ಎಂದು ಪ್ರಾರ್ಥಿಸುತ್ತೇನೆ ಎಂದು ಬರೆದುಕೊಂಡಿದ್ದಾರೆ. ಅಸುನೀಗಿದ ವ್ಯಕ್ತಿಗಳ ಕುಟುಂಬಕ್ಕೆ ಸಂಸ್ಥೆ ವತಿಯಿಂದ ತಲಾ ರೂ. 25 ಲಕ್ಷ ಪರಿಹಾರ ಪ್ರಕಟಿಸಲಾಗಿದೆ.

**ಮಂಜಾರಿ ಘಟಕದಲ್ಲಿ:** ಸೀರಂ ಇನ್‌ಸ್ಟಿಟ್ಯೂಟ್‌ನ ಮಂಜಾರಿ ಘಟಕದ 4 ಮತ್ತು 5ನೇ ಮಹಡಿಯಲ್ಲಿ ಮಧ್ಯಾಹ್ನ 2.45ಕ್ಕೆ ಏಕಾಏಕಿ ಬೆಂಕಿ ಕಾಣಿಸಿಕೊಂಡಿದೆ. ಕೂಡಲೇ ಅಗ್ನಿಶಾಮಕ ದಳವು ಕ್ಷಿಪ್ರ ಕಾರ್ಯಾಚರಣೆ ನಡೆಸಿ, 2 ಗಂಟೆಗಳೊಳಗಾಗಿ ಸಂಪೂರ್ಣವಾಗಿ ಬೆಂಕಿ ನಂದಿಸಿದೆ. ಕೋವಿಶೀಲ್ಡ್ ಲಸಿಕೆಯನ್ನು ಇದೇ ಘಟಕದಲ್ಲಿ ತಯಾರಿಸಲಾಗುತ್ತಿದೆ. ಆದರೆ, ಲಸಿಕೆ ತಯಾರಾಗುತ್ತಿರುವ ಪ್ರದೇಶದಿಂದ 1 ಕಿ.ಮೀ ದೂರದ ನಿರ್ಮಾಣ ಹಂತದ ಕಟ್ಟಡದಲ್ಲಿ ಈ ಅವಘಡ ಸಂಭವಿಸಿರುವ ಕಾರಣ, ಲಸಿಕೆ ತಯಾರಿಕೆ ಪ್ರಕ್ರಿಯೆಗೆ ತೊಂದರೆಯಾಗಿಲ್ಲ. ಆದರೆ, ಬೆಂಕಿ ಆಕಸ್ಮಿಕಕ್ಕೆ ನಿಖರ ಕಾರಣ ತಿಳಿದುಬಂದಿಲ್ಲ.

ಜಗತ್ತಿನ ಅತಿದೊಡ್ಡ ಲಸಿಕೆ ತಯಾರಿಕಾ ಕಂಪನಿ ಸೀರಂ ಇನ್‌ಸ್ಟಿಟ್ಯೂಟ್ 100 ಎಕರೆ ಪ್ರದೇಶದಲ್ಲಿ ವ್ಯಾಪಿಸಿದೆ. ಸೀರಂ ಸಾಮರ್ಥ್ಯ ಹೆಚ್ಚಿಸಿಕೊಳ್ಳುವ ಸಲುವಾಗಿ ಮಂಜಾರಿ ಕಾಂಪ್ಲೆಕ್ಸ್ ನಿರ್ಮಿಸಲಾಗುತ್ತಿದೆ. 24 ಗಂಟೆಗಳಲ್ಲಿ 15,223 ಮಂದಿಗೆ ಸೋಂಕು ದೃಢಪಟ್ಟು 151 ಮಂದಿ ಸಾವಿಗೀಡಾಗಿದ್ದಾರೆ. ದೇಶದ ಸಕ್ರಿಯ ಪ್ರಕರಣಗಳ ಪ್ರಮಾಣ ಶೇ. 1.18ಕ್ಕೆ ಇಳಿಕೆಯಾಗಿದೆ.

ಆಧಾರ: ಉದಯವಾಣಿ, ದಿನಾಂಕ:22.01.2021

## 7. ಮೇಲ್ವರ್ಗದ ಮೀಸಲು ನೀಡಲು ತೆಲಂಗಾಣ ಸಿಎಂ ಕೆಸಿಆರ್ ಸಮ್ಮತಿ

ಪ್ರತಿಭಟನೆಯ ಬೆದರಿಕೆಗೆ ಬಗ್ಗಿದ ತೆಲಂಗಾಣ ಸರ್ಕಾರ ರಾಜ್ಯದಲ್ಲಿ ಮೇಲ್ವರ್ಗದ ಬಡವರಿಗೆ ಶಿಕ್ಷಣ ಮತ್ತು ಉದ್ಯೋಗದಲ್ಲಿ ಶೇ.10ರಷ್ಟು ಮೀಸಲು ಖೋಟಾ ಜಾರಿಗೊಳಿಸಲು ಸಮ್ಮತಿ ಸೂಚಿಸಿದೆ. "ಈ ವಿಷಯಕ್ಕೆ ಸಂಬಂಧಿಸಿದಂತೆ ಒಂದೆರಡು ದಿನದಲ್ಲಿ ಉನ್ನತ ಮಟ್ಟದ ಸಭೆ ಕರೆದು ಚರ್ಚಿಸಿ, ಸೂಕ್ತ ಕ್ರಮ ಕೈಗೊಳ್ಳಲಾಗುವುದು," ಎಂದು ಮುಖ್ಯಮಂತ್ರಿ ಕೆ.ಸಿ.ಚಂದ್ರಶೇಖರ ರಾವ್ ಹೇಳಿದ್ದಾರೆ. "ಆರ್ಥಿಕವಾಗಿ ಹಿಂದುಳಿದ ಮೇಲ್ಜಾತಿಯ ಪ್ರತಿಭಾವಂತರಿಗೆ ಶಿಕ್ಷಣ ಮತ್ತು ಉದ್ಯೋಗದಲ್ಲಿ ಮೀಸಲು ಖೋಟಾ ಜಾರಿ ಮಾಡುವ ಅಗತ್ಯ ಖಂಡಿತ ಇದೆ. ಈ ದಿಸೆಯಲ್ಲಿ ಸರ್ಕಾರ ಚಿಂತನೆ ನಡೆಸಿದೆ. ಇದುವರೆಗೆ ರಾಜ್ಯದಲ್ಲಿನ ಮೀಸಲು ಪ್ರಮಾಣ ಶೇ.50 ರಷ್ಟಿದೆ. ಇದಕ್ಕೆ ಹೊಸದಾಗಿ 10 ಪರ್ಸೆಂಟ್ ಸೇರ್ಪಡೆ ಮಾಡುವುದರಿಂದ ಒಟ್ಟು ಪ್ರಮಾಣ ಶೇ.60ಕ್ಕೆ ಏರಿಕೆಯಾಗುತ್ತದೆ," ಎಂದು ತಿಳಿಸಿದರು. ಮೇಲ್ಜಾತಿ ಒಕ್ಕೂಟಗಳು ರಾಜ್ಯದಲ್ಲಿ ಮೀಸಲು ಖೋಟಾ ಜಾರಿಗೆ ಜನವರಿ 30ರ ಗಡುವು ನೀಡಿದ್ದವು.

ಆಧಾರ: ಕನ್ನಡಪ್ರಭ, ದಿನಾಂಕ:22.01.2021

## 8. Kerala Assembly rejects notice against Speaker

The Kerala Assembly witnessed an unusual procedure of discussions on notice of the Opposition seeking removal of the Speaker, while the speaker sat with the members and denied the series of charges ranging from nexus with gold smuggling case and corruption raised by the Opposition. With the ruling CPM-led Left Democratic Front, including Chief Minister Pinarayi Vijayan, strongly backing speaker P.Sreeramakrishnan, the House rejected the notice given by Opposition party Congress-led United Democratic Front.

The Opposition staged a walkout, protesting against the Speaker's reluctance to step down from the post.

Indian Union Muslim League MLA M Ummer gave the notice for removing the Speaker alleging his nexus with gold smuggling case accused, especially the UAE consulate ex-staff Swapna Suresh, alleged involvement in smuggling dollars and corruption in the renovation of the Legislative Assembly complex.

Courtesy:- Deccan Herald, dt:22.01.2021

## 9. ಪ್ರತಿಭಟನೆಗೆ ಮಹಾಪಂಚಾಯಿತಿ ಬಲ

ಭಾರತೀಯ ಕಿಸಾನ್ ಯೂನಿಯನ್ (ಬಿಕೆಯು) ನೇತೃತ್ವದಲ್ಲಿ ದೆಹಲಿಯ ಗಾಜಿಪುರ ಗಡಿಯಲ್ಲಿ ನಡೆಯುತ್ತಿರುವ ಪ್ರತಭಟನೆಗೆ ಬೆಂಬಲವಾಗಿ ಉತ್ತರ ಪ್ರದೇಶದ ಮುಜಫ್ಫರ್‌ನಗರದಲ್ಲಿ ಕರೆಯಲಾಗಿದ್ದ ಮಹಾ ಪಂಚಾಯಿತಿಯಲ್ಲಿ ಸಾವಿರಾರು ರೈತರು ಭಾಗವಹಿಸಿದ್ದಾರೆ.

ಬಿಕೆಯು ವಕ್ತಾರ ರಾಕೇಶ್ ಟಿಕಾಯತ್ ಅವರು ಗಾಜಿಪುರ ಪ್ರತಿಭಟನಾ ಸ್ಥಳದಲ್ಲಿ ಕಣ್ಣೀರು ಹಾಕಿದ್ದರು. ಎರಡು ತಿಂಗಳಿಂದ ಗಾಜಿಪುರದಲ್ಲಿ ಪ್ರತಿಭಟನೆ ನಡೆಸುತ್ತಿರುವ ರೈತರನ್ನು ಪೊಲೀಸರು ಬಲವಂತವಾಗಿ ತೆರವು ಮಾಡಲು ಮುಂದಾಗಿದ್ದು ಆತಂಕಕ್ಕೆ ಕಾರಣವಾಗಿತ್ತು. ಹಾಗಾಗಿ, ಮುಜಫ್ಫರ್ ನಗರದಲ್ಲಿ ನಡೆದ ಮಹಾಪಂಚಾಯಿತಿಗೆ ಉತ್ತರ ಪ್ರದೇಶದ ಪೂರ್ವ ಭಾಗದಿಂದ ಸಾವಿರಾರು ಜನರು ಬಂದರು.

ಮಹಾವೀರ ಚೌಕ ಸಮೀಪದ ಬಿಐಸಿ ಮೈದಾನವು ರೈತರಿಂದ ತುಂಬಿಹೋಗಿತ್ತು. ತ್ರಿವರ್ಣ ಧ್ವಜಗಳನ್ನು ಹೊಂದಿದ್ದ ನೂರಾರು ಟ್ರ್ಯಾಕ್ಟರ್‌ಗಳನ್ನು ರಸ್ತೆ ಬದಿಗಳಲ್ಲಿಯೇ ನಿಲ್ಲಿಸಲಾಗಿತ್ತು. ನಗರದಲ್ಲಿ ಸಂಚಾರ ಸಂಪೂರ್ಣವಾಗಿ ಅಸ್ತವ್ಯಸ್ತವಾಗಿತ್ತು.

ಬಲವಂತವಾಗಿ ತೆರವು ಮಾಡಲಾಗುವುದು ಎಂಬ ಎಚ್ಚರಿಕೆಯನ್ನು ಸರ್ಕಾರ ನೀಡಿದ್ದರೂ ಗಾಜಿಪುರ ಗಡಿಯಲ್ಲಿ ಪ್ರತಿಭಟನೆ ಮುಂದುವರೆಸಲು ರೈತರು ನಿರ್ಧರಿಸಿದ್ದಾರೆ. ರೈತರ ಮಹಾಪಂಚಾಯಿತಿಯಲ್ಲಿ ಈ ನಿರ್ಧಾರಕ್ಕೆ ಬರಲಾಗಿದೆ.

ಬಿಕೆಯು ಅಧ್ಯಕ್ಷ ನರೇಶ್ ಟಿಕಾಯತ್ ಅವರು ಮಹಾಪಂಚಾಯಿತಿಯಲ್ಲಿ ಮಾತನಾಡಿ ಗಾಜಿಪುರದಲ್ಲಿ ಪ್ರತಿಭಟನೆಯನ್ನು ಕೊನೆಗೊಳಿಸುವ ಪ್ರಶ್ನೆಯೇ ಇಲ್ಲ ಅಂದರು. ರೈತರು ಭಾರಿ ಸಂಖ್ಯೆಯಲ್ಲಿ ಪ್ರತಿಭಟನೆಗೆ ಸೇರಿಕೊಳ್ಳುವಂತೆ ಅವರು ಕರೆ ಕೊಟ್ಟರು,. 'ಗಣರಾಜ್ಯೋತ್ಸವ ದಿನ ದೆಹಲಿಯಲ್ಲಿ ನಡೆದ ಹಿಂಸಾಚಾರಕ್ಕೆ ಸಂಬಂಧಿಸಿ ರೈತರ ವಿರುದ್ಧ ಸುಳ್ಳು ಆರೋಪಗಳನ್ನು ಮಾಡಲಾಗುತ್ತಿದೆ. ರೈತರು ಎಂದಿಗೂ ತ್ರಿವರ್ಣ ಧ್ವಜಕ್ಕೆ ಅಗೌರವ ತೋರುವುದಿಲ್ಲ' ಎಂದರು.

ಸಮಾಜವಾದಿ ಮತ್ತು ಆಮ್ ಆದ್ಮಿ ಪಕ್ಷದ ನಾಯಕರು ಕೂಡ ಮಹಾಪಂಚಾಯಿತಿಯಲ್ಲಿ ಭಾಗಿಯಾಗಿದ್ದಾರೆ. 'ಕೇಂದ್ರ ಮತ್ತು ಉತ್ತರ ಪ್ರದೇಶದ ಬಿಜೆಪಿ ನೇತೃತ್ವದ ಸರ್ಕಾರಗಳು ರೈತರಿಗೆ ಕಿರುಕುಳ

ನೀಡುತ್ತಿವೆ. ಆದರೆ, ಇಡೀ ದೇಶ ರೈತರ ಪರವಾಗಿದೆ' ಎಂದು ಸಮಾಜವಾದಿ ಪಕ್ಷದ ಅಧ್ಯಕ್ಷ ಅಖಿಲೇಶ್ ಯಾದವ್ ಹೇಳಿದ್ದಾರೆ.

ಗಾಜಿಪುರದಲ್ಲಿ ಪ್ರತಿಭಟನೆ ನಡೆಯುತ್ತಿರುವ ಸ್ಥಳಕ್ಕೆ ಕೊಡಲಾಗಿದ್ದ ನೀರು ಮತ್ತು ವಿದ್ಯುತ್ ಸಂಪರ್ಕವನ್ನು ಗಾಜಿಯಾಬಾದ್ ಜಿಲ್ಲಾಡಳಿತವು ಕಡಿತಗೊಳಿಸಿದೆ. ರೈತರು ಅಲ್ಲಿಂದ ಹೋಗದಿದ್ದರೆ ಬಲವಂತವಾಗಿ ತೆರವು ಮಾಡುವ ಎಚ್ಚರಿಕೆಯನ್ನು ಕೊಟ್ಟಿದೆ.

ಮತ್ತಷ್ಟು ರೈತರು: ಹರಿಯಾಣ ನೂರಾರು ರೈತರು ದೆಹಲಿ ಗಡಿಯಲ್ಲಿ ನಡೆಯುತ್ತಿರುವ ಪ್ರತಿಭಟನೆಗೆ ಸೇರಿಕೊಳ್ಳಲು ನಿರ್ಧರಿಸಿದ್ದಾರೆ. ರೈತ ನಾಯಕರ ವಿರುದ್ಧ ಸರ್ಕಾರವು ಕೈಗೊಂಡ ಕ್ರಮಗಳಿಂದಾಗಿ ಹೋರಾಟವು ದುರ್ಬಲವಾಗುವುದಿಲ್ಲ ಎಂದು ಈ ರೈತರು ಹೇಳಿದ್ದಾರೆ.

ಜಿಂದ್, ರೋಹ್ಟಕ್, ಕೈಥಾಲ್, ಹಿಸಾರ್, ಭಿವಾನಿ ಮತ್ತು ಸೋನಿಪತ್‌ನಿಂದ ರೈತರು ದೆಹಲಿಯ ಸಿಂಘು, ಟಿಕ್ರಿ, ಗಾಜಿಪುರ ಗಡಿಗೆ ಬರಲಿದ್ದಾರೆ ಎಂದು ತಿಳಿದು ಬಂದಿದೆ.

ಆಧಾರ: ಪ್ರಜಾವಾಣಿ, ದಿನಾಂಕ:30.01.2021

## 10. ಏಪ್ರಿಲ್‌ನಲ್ಲಿ ಹೈಡೆನ್ಸಿಟಿ ಕಾರಿಡಾರ್ ಕಾಮಗಾರಿ

ನಗರದಲ್ಲಿ ಸಂಚಾರ ದಟ್ಟಣೆ ತಗ್ಗಿಸಿ ಸುಗಮ ವಾಹನ ಸಂಚಾರಕ್ಕೆ ಅನುಕೂಲ ಮಾಡಿಕೊಡಲು 190 ಕಿ.ಮೀ ಉದ್ದದ 12 ಹೈಡೆನ್ಸಿಟಿ ಕಾರಿಡಾರ್‌ಗಳ ಅಭಿವೃದ್ಧಿ ಮತ್ತು ನಿರ್ವಹಣೆ ಯೋಜನೆಯನ್ನು ಕೈಗೊಳ್ಳಲಾಗುತ್ತಿದೆ. ಇದಕ್ಕೆ ರೂ. 477 ಕೋಟಿ ವೆಚ್ಚ ಮಾಡುತ್ತಿದ್ದು, ಟೆಂಡರ್ ಪ್ರಕ್ರಿಯೆ ಚಾಲ್ತಿಯಲ್ಲಿದೆ. ಏಪ್ರಿಲ್ ತಿಂಗಳೊಳಗೆ ಟೆಂಡರ್ ಪೂರ್ಣಗೊಳಿಸಿ, ಕಾಮಗಾರಿ ಕೈಗೊಳ್ಳಬೇಕು," ಎಂದು ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ ಅಧಿಕಾರಿಗಳಿಗೆ ಸೂಚಿಸಿದರು.

ಬೆಂಗಳೂರು ಉಸ್ತುವಾರಿ ಸಚಿವರೂ ಆಗಿರುವ ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ ಅವರು ನಗರದಲ್ಲಿ ಪ್ರದಕ್ಷಿಣೆ ಹಾಕಿ ಟೆಂಡರ್ ಶ್ಯೂರ್ ಕಾಮಗಾರಿ ವೀಕ್ಷಿಸಿದರು. ಬಳಿಕ ವಿಧಾನಸೌಧದಲ್ಲಿ 'ಬೆಂಗಳೂರು ಮಿಷನ್ 2022'ರ ಪ್ರಗತಿ ಪರಿಶೀಲನಾ ಸಭೆ ನಡೆಸಿದರು. ನಂತರ ಸುದ್ದಿಗಾರರ ಜೊತೆ ಮಾತನಾಡಿದ ಅವರು, "ಹೈಡೆನ್ಸಿಟಿ ಕಾರಿಡಾರ್‌ನ ಸರ್ವೀಸ್ ರಸ್ತೆಗಳನ್ನು ಸಮರ್ಪಕವಾಗಿ ಅಭಿವೃದ್ಧಿಪಡಿಸಬೇಕು. ಹಾಳಾಗಿರುವ ಫುಟ್‌ಪಾತ್‌ಗಳನ್ನು ದುರಸ್ತಿ ಪಡಿಸಿ, ಅಗತ್ಯವಿರುವೆಡೆ ಹೊಸದಾಗಿ ನಿರ್ಮಿಸಬೇಕು. ರಸ್ತೆ ಬದಿಯ ಚರಂಡಿಗಳಲ್ಲಿ ಹೂಳು ತೆರವುಗೊಳಿಸಬೇಕು," ಎಂದು ಹೇಳಿದರು.

"ನಗರದ ಹೃದಯ ಭಾಗದಲ್ಲಿರುವ ರಸ್ತೆಗಳನ್ನು ಮೇಲ್ದರ್ಜೆಗೇರಿಸಲು ಬೆಂಗಳೂರು ಸ್ಮಾರ್ಟ್ ಸಿಟಿ ವತಿಯಿಂದ 482 ಕೋಟಿ ವೆಚ್ಚದಲ್ಲಿ 59 ಕಿ.ಮೀ ಉದ್ದದ 36 ರಸ್ತೆಗಳ ಅಭಿವೃದ್ಧಿಯನ್ನು ಕೈಗೊಂಡಿದ್ದು, ತ್ವರಿತವಾಗಿ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಸದ್ಯ 4 ರಸ್ತೆಗಳಲ್ಲಿ ಕಾಮಗಾರಿ ಪೂರ್ಣಗೊಂಡಿದೆ. ಉಳಿದ 32 ರಸ್ತೆಗಳ ಅಭಿವೃದ್ಧಿಯನ್ನು ಮೇ ಅಂತ್ಯದೊಳಗೆ ಮುಗಿಸಲಾಗುವುದು. ಈ ಕಾಮಗಾರಿ ಕೈಗೊಳ್ಳುವ ಸಂದರ್ಭದಲ್ಲಿ ಸುಸ್ಥಿತಿಯಲ್ಲಿರುವ ಪಾದಚಾರಿ ಮಾರ್ಗಗಳನ್ನು ಹಾಗೆಯೇ ಉಳಿಸಿಕೊಂಡು ರಸ್ತೆ ಅಭಿವೃದ್ಧಿಪಡಿಸಬೇಕು. ಅನಗತ್ಯವಾಗಿ ಹಣ ಪೋಲು ಮಾಡಬಾರದು," ಎಂದು ಅಧಿಕಾರಿಗಳಿಗೆ ತಾಕೀತು ಮಾಡಿದರು.

"ನಮ್ಮ ಮೆಟ್ರೊದ ಮೈಸೂರು ರಸ್ತೆಯಿಂದ ಕೆಂಗೇರಿವರೆಗಿನ ಮಾರ್ಗವನ್ನು ಜೂನ್ ತಿಂಗಳಲ್ಲಿ ಸಾರ್ವಜನಿಕ ಸಂಚಾರಕ್ಕೆ ಮುಕ್ತಗೊಳಿಸಬೇಕು. ವೈಟ್‌ಫೀಲ್ಡ್ ಮತ್ತು ಎಲೆಕ್ಟ್ರಾನಿಕ್ ಸಿಟಿ ಮಾರ್ಗ ನಿರ್ಮಾಣವನ್ನು ತ್ವರಿತವಾಗಿ ಮುಗಿಸಬೇಕು. ಇದಕ್ಕಿರುವ ತೊಡಕುಗಳನ್ನು ಕೂಡಲೇ ನಿವಾರಿಸಬೇಕು," ಎಂದು ಸೂಚನೆ ನೀಡಿದರು.

**ಆರು ತಿಂಗಳಲ್ಲಿ ಟೆಂಡರ್‌ಶ್ಯೂರ್ ಕಾಮಗಾರಿ ಪೂರ್ಣ:** ಸ್ಮಾರ್ಟ್‌ಸಿಟಿ ಯೋಜನೆಯಡಿ ನಗರದಲ್ಲಿ ಕೈಗೊಂಡಿರುವ ಟೆಂಡರ್‌ಶ್ಯೂರ್ ರಸ್ತೆ ಅಭಿವೃದ್ಧಿ ಕಾಮಗಾರಿಯನ್ನು 6 ತಿಂಗಳೊಳಗೆ ಪೂರ್ಣಗೊಳಿಸಿ ಸುಗಮ ವಾಹನ ಸಂಚಾರಕ್ಕೆ ಅನುವು ಮಾಡಿಕೊಳ್ಳಲಾಗುವುದು ಎಂದು ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ ವಿಶ್ವಾಸ ವ್ಯಕ್ತಪಡಿಸಿದರು.

"ಸ್ಮಾರ್ಟ್‌ಸಿಟಿ ಯೋಜನೆಯಡಿ ರೂ. 1939 ಕೋಟಿ ವೆಚ್ಚದಲ್ಲಿ ಒಟ್ಟು 43 ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ. ಇದರಲ್ಲಿ ನಾಲ್ಕೈದು ಕಾಮಗಾರಿಗಳು ಮುಗಿದಿವೆ. 29 ಕಾಮಗಾರಿಗಳು ಪ್ರಗತಿಯಲ್ಲಿದ್ದದು, ಪಿಪಿಪಿ ಯೋಜನೆಯಡಿ 4 ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗಿದೆ. ಈಗಾಗಲೇ ರೂ. 125–130 ಕೋಟಿ ಖರ್ಚಾಗಿದೆ," ಎಂದು ತಿಳಿಸಿದರು.

"ಟೆಂಡರ್‌ಶ್ಯೂರ್ ರಸ್ತೆಗಳ ಕಾಮಗಾರಿಯಲ್ಲಿ ಗುಣಮಟ್ಟ ಕಾಯ್ದುಕೊಳ್ಳಲಾಗಿದೆ. ಪಾದಚಾರಿಗಳಲ್ಲದೇ ಸೈಕಲ್ ಸವಾರರಿಗೂ ಪ್ರತ್ಯೇಕ ಪಥ ನಿರ್ಮಿಸಿ, ಸುರಕ್ಷಿತ ಸಂಚಾರಕ್ಕೆ ಅನುವು ಮಾಡಿಕೊಡಲಾಗಿದೆ. ಜೂನ್ ಅಥವಾ ಜುಲೈ ತಿಂಗಳೊಳಗೆ ಕೆಲವೊಂದು ರಸ್ತೆಗಳ ಅಭಿವೃದ್ಧಿ ಕಾಮಗಾರಿ ಮುಗಿಯಲಿದೆ. ಉಳಿದ ರಸ್ತೆಗಳನ್ನು 2022ರ ಮಾರ್ಚ್ ತಿಂಗಳೊಳಗೆ ಪೂರ್ಣಗೊಳಿಸಲಾಗುತ್ತದೆ," ಎಂದರು.

**ಅರ್ಧ ತಾಸು ಸಿಟಿ ರೌಂಡ್ಸ್:** ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ ಅವರು ಸಚಿವರು ಹಾಗೂ ನಾನಾ ಇಲಾಖೆಗಳ ಅಧಿಕಾರಿಗಳೊಂದಿಗೆ ವಿಧಾನಸೌಧದಿಂದ ನಗರ ಪ್ರದಕ್ಷಿಣೆ ಆರಂಭಿಸಿದರು. ಸುಮಾರು ಅರ್ಧ ತಾಸು ಕಾಲ ಮಾತ್ರ ಟೆಂಡರ್‌ಶ್ಯೂರ್ ರಸ್ತೆಗಳ ಕಾಮಗಾರಿ ಪರಿಶೀಲಿಸಿ ವಿಧಾನಸೌಧಕ್ಕೆ ವಾಪಸ್ಸಾದರು. ರೇಸ್‌ಕೋರ್ಸ್ ರಸ್ತೆ, ಹೇಯ್ಸ್ ರಸ್ತೆ, ವುಡ್ ಸ್ಟ್ರೀಟ್ ಮತ್ತು ಟಾಟಾ ಲೇನ್ ರಸ್ತೆಯಲ್ಲಿ ಮಾತ್ರ ಬಿಎಂಟಿಸಿ ವೋಲ್ವೊ ಬಸ್ಸಿನಿಂದ ಕೆಳಗಿಳಿದು ತಪಾಸಣೆ ನಡೆಸಿದರು. ರಾಜಾರಾಮ್ ಮೋಹನ್ ರಾಯ್ ರಸ್ತೆ, ರಾಜಭವನ ರಸ್ತೆ, ನೆಹರು ತಾರಾಲಯ ರಸ್ತೆಯಲ್ಲಿ ಕೈಗೊಂಡಿರುವ ಕಾಮಗಾರಿಗಳನ್ನು ಬಸ್ಸಿನಲ್ಲೇ ಕುಳಿತು ವೀಕ್ಷಿಸಿದರು. ಉಪ ಮುಖ್ಯಮಂತ್ರಿ ಡಾ. ಸಿ.ಎನ್.ಅಶ್ವತ್ಥ ನಾರಾಯಣ, ಸಚಿವರಾದ ಆರ್.ಅಶೋಕ್, ಭೈರತಿ ಬಸವರಾಜ್, ಕೆ.ಗೋಪಾಲಯ್ಯ, ಬಿಡಿಎ ಅಧ್ಯಕ್ಷ ಎಸ್.ಆರ್.ವಿಶ್ವನಾಥ್, ಸಂಸದ ಪಿ.ಸಿ.ಮೋಹನ್, ಶಾಸಕ ಎನ್.ಎ.ಹ್ಯಾರಿಸ್, ಸರ್ಕಾರದ ಮುಖ್ಯ ಕಾರ್ಯದರ್ಶಿ ಪಿ.ರವಿಕುಮಾರ್, ಬಿಬಿಎಂಪಿ ಆಡಳಿತಾಧಿಕಾರಿ ಗೌರವ್ ಗುಪ್ತ, ಆಯುಕ್ತ ಎನ್.ಮಂಜುನಾಥ ಪ್ರಸಾದ್ ಉಪಸ್ಥಿತರಿದ್ದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:31.01.2021

## 11. ಮಾರ್ಚ್ 1ರಂದು ಗುಜರಾತ್ ಅಸ್ಸಾಂ ರಾಜ್ಯಸಭಾ ಉಪ ಚುನಾವಣೆ

ಕಾಂಗ್ರೆಸ್‌ನ ನಾಯಕ ಅಹ್ಮದ್ ಪಟೇಲ್ ಅವರ ನಿಧನದಿಂದ ತೆರವುಗೊಂಡ ಸ್ಥಾನ ಸೇರಿದಂತೆ ಗುಜರಾತ್ ಮತ್ತು ಅಸ್ಸಾಂಗಳ 3 ರಾಜ್ಯಸಭಾ ಸ್ಥಾನಗಳಿಗೆ ಮಾರ್ಚ್ 1 ರಂದು ಉಪ ಚುನಾವಣೆ ನಡೆಯಲಿದೆ. ಫೆಬ್ರವರಿ 11ರಂದು ಅಧಿಸೂಚನೆ ಹೊರಬೀಳಲಿದ್ದು, ಚುನಾವಣೆ ದಿನವೇ ಮತ ಎಣಿಕೆ ನಡೆಯಲಿದೆ ಎಂದು ಆಯೋಗ ತಿಳಿಸಿದೆ. ಕಳೆದ ವರ್ಷ ನವೆಂಬರ್ 25ರಂದು ಅಹ್ಮದ್ ಪಟೇಲ್ ಹಾಗೂ ಡಿಸೆಂಬರ್ 1ರಂದು ಬಿಜೆಪಿ ಮುಖಂಡ ಅಭಯ್ ಭಾರದ್ವಾಜ್ ನಿಧನದ ಬಳಿಕ ಗುಜರಾತ್‌ನಲ್ಲಿ ರಾಜ್ಯಸಭಾ ಸ್ಥಾನಗಳು ತೆರವಾಗಿವೆ. ಕಳೆದ ನವೆಂಬರ್‌ನಲ್ಲಿ ಬೊಡೊ ಪೀಪಲ್ಸ್ ಫ್ರಾಂಟ್‌ನ ಏಕೈಕ ಸಂಸದ ಬಿಸ್ವಜಿತ್ ದೈಮರಿ ಅವರು ಮೇಲ್ಮನೆ ಸದಸ್ಯತ್ವಕ್ಕೆ ರಾಜೀನಾಮೆ ನೀಡಿದ ಬಳಿಕ ಅಸ್ಸಾಂನಲ್ಲೂ ಒಂದು ಸ್ಥಾನ ತೆರವಾಗಿದೆ. ಪಟೇಲ್ 2023ರ ಆಗಸ್ಟ್‌ನಲ್ಲಿ ಮತ್ತು ಭಾರದ್ವಾಜ್ ಅವರು 2026ರ ಜೂನ್‌ನಲ್ಲಿ ನಿವೃತ್ತಿ ಹೊಂದಲಿದ್ದರು. ಬಿಸ್ವಜಿತ್ ಅವರ ಸದಸ್ಯತ್ವ ಅವಧಿ 2026ರ ಏಪ್ರಿಲ್‌ವರೆಗೂ ಇತ್ತು.

ಆಧಾರ: ವಿಜಯ ಕರ್ನಾಟಕ, ದಿನಾಂಕ:05.02.2021

## 12. ಸರ್ಕಾರದ ಹುದ್ದೆ ಹೊಂದಿರುವವರು ಚುನಾವಣಾ ಆಯುಕ್ತರಾಗಬಾರದು

ಸರ್ವೋಚ್ಚ ನ್ಯಾಯಾಲಯ ಅತ್ಯಂತ ಮಹತ್ವ ಪೂರ್ಣವಾದ ತೀರ್ಪೊಂದನ್ನು ನೀಡಿದೆ. ಯಾವುದೇ ಸರ್ಕಾರಗಳು ಸರ್ಕಾರದ ಹುದ್ದೆ ಹೊಂದಿರುವ ವ್ಯಕ್ತಿಗಳನ್ನು ರಾಜ್ಯ ಚುನಾವಣಾ ಆಯುಕ್ತರನ್ನಾಗಿ ನೇಮಿಸಬಾರದು ಎಂದು ಆದೇಶ ನೀಡಿದೆ. ಗೋವಾ ಸರ್ಕಾರ ತನ್ನ ಕಾನೂನು ಕಾರ್ಯದರ್ಶಿಗೆ ರಾಜ್ಯ ಚುನಾವಣಾ ಆಯೋಗದ ಹೆಚ್ಚುವರಿ ಹೊಣೆಗಾರಿಕೆ ನೀಡಿತ್ತು. ಇದರ ವಿರುದ್ಧ ಗೋವಾ ಉಚ್ಚ ನ್ಯಾಯಾಲಯ ತೀರ್ಪು ನೀಡಿತ್ತು. ಇದನ್ನು ಪ್ರಶ್ನಿಸಿ ಗೋವಾ ಸರ್ಕಾರ ಸರ್ವೋಚ್ಚ ನ್ಯಾಯಾಲಯದ ಮೆಟ್ಟಿಲೇರಿತ್ತು. ಅಲ್ಲೂ ಅದಕ್ಕೆ ಸೋಲಾಗಿದೆ.

ಸಂವಿಧಾನದಲ್ಲಿ ಕಡ್ಡಾಯಪಡಿಸಿರುವಂತೆ, ರಾಜ್ಯ ಸರ್ಕಾರ ಚುನಾವಣಾ ಆಯೋಗದ ಕಾರ್ಯಚಟುವಟಿಕೆಯಲ್ಲಿ ಮಧ್ಯ ಪ್ರವೇಶಿಸಬಾರದು ಸರ್ಕಾರದ ಯಾವುದೇ ಹುದ್ದೆಯಲ್ಲಿರುವ ವ್ಯಕ್ತಿ ಚುನಾವಣಾ ಆಯೋಗದ ಹೊಣೆ ಹೊತ್ತುಕೊಳ್ಳಬಾರದು. ಒಂದು ವೇಳೆ ಜವಾಬ್ದಾರಿ ತೆಗೆದುಕೊಳ್ಳುವುದಾದರೆ ಅವರು ಮೊದಲು ಸರ್ಕಾರದ ಹುದ್ದೆಯಿಂದ ತೆರವುಗೊಳ್ಳಬೇಕು ಎಂದು ಸರ್ವೋಚ್ಚಪೀಠ ಸ್ಪಷ್ಟವಾಗಿ ಹೇಳಿದೆ.

ಮುಂದಿನ 10 ದಿನಗಳೊಳಗೆ ಗೋವಾದಲ್ಲಿ ಸ್ಥಳೀಯ ಸಂಸ್ಥೆಗಳ ಚುನಾವಣೆಗೆ ಸಂಬಂಧಿಸಿದಂತೆ, ಆದೇಶ ಹೊರಡಿಸಬೇಕು. ಏಪ್ರಿಲ್ 30 ರೊಳಗೆ ಚುನಾವಣಾ ಆಯೋಗಕ್ಕೆ ಸರ್ವೋಚ್ಚ ಪೀಠ ಸೂಚಿಸಿದೆ.

ಆಧಾರ: ಉದಯವಾಣಿ, ದಿನಾಂಕ:13.02.2021

## 13. ಮಹಾರಾಷ್ಟ್ರದಲ್ಲಿ 2 ಹೊಸ ಕೊರೋನಾ ಪ್ರಭೇದ ಪತ್ತೆ

ಕೊರೋನಾ ದ್ವಿತೀಯ ಅಲೆಯ ಆತಂಕಕ್ಕೆ ಒಳಗಾಗಿರುವ ಮಹಾರಾಷ್ಟ್ರದಿಂದ ಇನ್ನೊಂದು ಆತಂಕಕಾರಿ ಸಮಾಚಾರ ಹೊರಬಿದ್ದಿದೆ. ರಾಜ್ಯ ದಯನತ್ಮಾಳ್ ಹಾಗೂ ಅಮರಾವತಿ ಜಿಲ್ಲೆಗಳಲ್ಲಿ ಕೊರೋನಾದ 2 ಹೊಸ ರೂಪಾಂತರಿ ಪ್ರಭೇದಗಳು ಪತ್ತೆಯಾಗಿವೆ.

ಕೊರೋನಾ ಪ್ರತಿಕಾಯ ಶಕ್ತಿಗಳನ್ನು ಭೇದಿಸಿ ಹೋಗುವ ಸಾಮರ್ಥ್ಯ ಈ ಹೊಸ ತಳಿಗೆ ಇವೆ. ಇದು ಆತಂಕಕಾರಿ ವಿಷಯವಾಗಿದೆ. ಆದರೆ ಇವುಗಳ ಜೆನೆಟಿಕ್ ಸೀಕ್ವೆನ್ಸಿಂಗ್ ಮಾಡಿದಾಗ ಇವು ಬ್ರಿಟನ್, ಬ್ರೆಜಿಲ್ ಹಾಗೂ ದಕ್ಷಿಣ ಆಫ್ರಿಕಾದಲ್ಲಿ ಪತ್ತೆಯಾದ ಥರದ ಹೊಸ ಕೊರೋನಾ ವೈರಸ್ ತಳಿಗಳಲ್ಲ ಎಂದು ತಜ್ಞರು ಸ್ಪಷ್ಟಪಡಿಸಿದ್ದಾರೆ.

**ಎಲ್ಲಿ ಪತ್ತೆ:** ಅಮರಾವತಿ ಹಾಗೂ ದಯನತ್ಮಾಳ್‌ಗಳಲ್ಲಿ ಇತ್ತೀಚೆಗೆ ಕೊರೋನಾ ಪ್ರಕರಣಗಳು ದಿಢೀರ್ ಹೆಚ್ಚಾಗಿವೆ. ಈ ಹಿನ್ನೆಲೆಯಲ್ಲಿ 24 ಸ್ಯಾಂಪಲ್‌ಗಳನ್ನು ತಪಾಸಣೆ ಮಾಡಲಾಯಿತು. ಇವುಗಳಲ್ಲಿ ಅಮರಾವತಿ, ಯವತ್ಮಾಳ್, ಸತಾರಾ ಜಿಲ್ಲೆಗಳ ತಲಾ 4 ಹಾಗೂ ಪುಣೆಯಲ್ಲಿನ 12 ಸ್ಯಾಂಪಲ್‌ಗಳು ಸೇರಿದ್ದವು ಎಂದು ಪುಣೆ ಬಿಜೆ ಮೆಡಿಕಲ್ ಕಾಲೇಜಿನ ಮೈಕ್ರೋಬಯಾಲಜಿ ವಿಭಾಗದ ಮುಖ್ಯಸ್ಥ ಡಾ. ರಾಜೇಶ್ ಕಾರ್ಯಕರ್ತೆ ಹೇಳಿದ್ದಾರೆ.

ಎಲ್ಲ ಸ್ಯಾಂಪಲ್‌ಗಳಲ್ಲಿ ಡಿ 614 ಜಿ ಎಂಬ ಸಾಮಾನ್ಯ ಕೊರೋನಾ ಪ್ರಭೇದ ಪತ್ತೆಯಾಗಿದೆ. ಆದರೆ ಅಮರಾವತಿಯಲ್ಲಿ ಇ 484ಕೆ ಪ್ರಭೇದ ಪತ್ತೆಯಾಗಿದೆ. ಇದೂ ಕೂಡ ಸಾಮಾನ್ಯ ಪ್ರಭೇದ. ಆದರೂ, ಈ ಪ್ರಭೇದಕ್ಕೆ ಪ್ರತಿಕಾಯ ಶಕ್ತಿಗಳಲ್ಲೂ ಹಾದು ಹೋಗುವ ತಾಕತ್ತು ಇದೆ ಎಂಬ ಅಂಶ ದೃಢಪಟ್ಟಿದೆ. ಯವತ್ಮಾಳ್‌ನಲ್ಲಿ ಎನ್ 440 ಕೆ ಪ್ರಭೇದ ಸಿಕ್ಕಿದ್ದು, ಇದು ಆಂಧ್ರ ಪ್ರದೇಶದಲ್ಲಿನ ಸಾಮಾನ್ಯ ಪ್ರಭೇದವಾಗಿದ್ದು, ಇದರಿಂದ ಒಮ್ಮೆ ಗುಣಮುಖರಾದವರೂ ಪುನಃ ಸೋಂಕಿಗೆ ಒಳಗಾಗಬಹುದು ಎಂದು ಕಂಡುಬಂದಿದೆ.

**ಮಹಾರಾಷ್ಟ್ರ 4 ಸಚಿವರಿಗೆ ಕೊರೋನಾ:** ಕೊರೋನಾ ವೈರಸ್‌ನ 2ನೇ ಅಲೆಯ ಆತಂಕಕ್ಕೆ ಕಾರಣವಾಗಿರುವ ಮಹಾರಾಷ್ಟ್ರದಲ್ಲಿ ಮುಖ್ಯಮಂತ್ರಿ ಉದ್ಧವಠಾಕ್ರೆ ಅವರ ಮಂತ್ರಿ ಮಂಡಲದ ಅನೇಕ ಸಚಿವರಿಗೆ ಹಾಗೂ ರಾಜಕೀಯ ಮುಖಂಡರಾದ ಓಂಪ್ರಕಾಶ್ ಕಡು, ರಾಜೇಶ್‌ಟೋಪೆ, ಜಯಂತಪಾಟೀಲ್, ರಾಜೇಂದ್ರ ಶೀಂಗಣೆ ಅವರಿಗೆ ಕಳೆದ 2–3 ದಿನಗಳಲ್ಲಿ ಕೊರೋನಾ ಬಂದಿದೆ. ಇತ್ತೀಚೆಗೆ ಗೃಹ ಸಚಿವ ಅನಿಲ್ ದೇಶಮುಖ್ ಅವರಿಗೂ ಸೋಂಕು ತಗುಲಿದೆ. ಇನ್ನು ಎನ್‌ಸಿಪಿ ನಾಯಕ, ಏಕನಾಥ ಖಡ್ಸೆ, ಅವರ ಸೊಸೆ ಹಾಗೂ ಬಿಜೆಪಿ ಸಂಸದೆ ರಕ್ಷಾ ಖಡ್ಸೆ ಅವರೂ ತಮಗೆ ಕೊರೋನಾ ಸೋಂಕು ತಗುಲಿರುವುದನ್ನು ದೃಢಪಡಿಸಿದ್ದಾರೆ.

ಆಧಾರ: ಕನ್ನಡಪ್ರಭ, ದಿನಾಂಕ:20.02.2021

## 14. ಪುದುಚೇರಿಯ ಕಾಂಗ್ರೆಸ್ ನೇತೃತ್ವದ ಸರ್ಕಾರ ಪತನ

ದಕ್ಷಿಣ ಭಾರತದಲ್ಲಿದ್ದ ಏಕೈಕ ಕಾಂಗ್ರೆಸ್ ಸರ್ಕಾರ ಎನ್ನಿಸಿಕೊಂಡಿದ್ದ ಪುದುಚೇರಿಯಲ್ಲಿನ ವಿ.ನಾರಾಯಣಸ್ವಾಮಿ ನೇತೃತ್ವದ ಸರ್ಕಾರ ಪತನವಾಗಿದೆ. ಶಾಸಕರ ರಾಜೀನಾಮೆಯಿಂದಾಗಿ ಅಲ್ಪಮತಕ್ಕೆ ಕುಸಿದಿದ್ದ ಸರ್ಕಾರ, ವಿಶ್ವಾಸ ಮತಕ್ಕೆ ಮುನ್ನವೇ ಪತನಗೊಂಡಿತು. ನೇರವಾಗಿ ಲೆ. ಗವರ್ನರ್ ತಮಿಳುಸಾಯಿ ಸೌಂದರಾಜನ್‌ರನ್ನು ಭೇಟಿ ಮಾಡಿದ ನಾರಾಯಣಸ್ವಾಮಿ ಅವರು ರಾಜೀನಾಮೆ ಸಲ್ಲಿಸಿದರು.

ಒಂದೆರಡು ತಿಂಗಳಿನಲ್ಲಿ ಪುದುಚೇರಿಯಲ್ಲಿ ವಿಧಾನಸಭೆ ಚುನಾವಣೆ ನಡೆಯುವ ಸಾಧ್ಯತೆ ಇದೆ. ಹೀಗಾಗಿ ಹೊಸ ಸರ್ಕಾರ ರಚನೆಯಾಗುವ ಸಾಧ್ಯತೆ ಕಡಿಮೆ. ಆದರೂ ಸರ್ಕಾರ ರಚಿಸುವ ಬಗ್ಗೆ ಹೈಕಮಾಂಡ್ ನಿರ್ಧಾರ ಮಾಡಲಿದೆ ಎಂದು ಬಿಜೆಪಿ ಹೇಳಿದೆ.

ವಿಚಿತ್ರವೆಂದರೆ, ನಾರಾಯಣಸ್ವಾಮಿ ಸರ್ಕಾರ ಬೀಳಲು ಕಿರಣ್ ಬೇಡಿ ಅವರು ನಾಮನಿರ್ದೇಶನ ಮಾಡಿದ್ದ ಮೂವರು ಬಿಜೆಪಿ ಶಾಸಕರೇ ಕಾರಣವಾದರು. ಇವರಿಗೆ ವೋಟಿಂಗ್ ಹಕ್ಕು ಕೊಡಬಾರದು ಎಂಬುದು ಸಿಎಂ ವಾದವಾಗಿತ್ತು. ಆದರೆ, ಹಿಂದೆ ಸುಪ್ರೀಂಕೋರ್ಟ್ ಇವರಿಗೂ ಮತದಾನದ ಹಕ್ಕಿದೆ ಎಂದಿದ್ದರಿಂದ ಕಡೇ ಕ್ಷಣದಲ್ಲಿ ನಾರಾಯಣಸ್ವಾಮಿಯವರು ಕೈಚೆಲ್ಲಿದರು. ಹೀಗಾಗಿ ಕೇವಲ 11 ಶಾಸಕರ ಬಲ ಹೊಂದಿದ್ದ ಸರ್ಕಾರ ಕುಸಿದುಬಿದ್ದಿತು.

ಇದರಿಂದಾಗಿ ದೇಶದಲ್ಲಿ ಪಂಜಾಬ್, ರಾಜಸ್ಥಾನ ಮತ್ತು ಛತ್ತಿಸ್ ಗಡದಲ್ಲಿ ಮಾತ್ರ ಕಾಂಗ್ರೆಸ್ ಸ್ವತಂತ್ರವಾಗಿ ರಚಿಸಿರುವ ಸರ್ಕಾರವಿದೆ. ಮಹಾರಾಷ್ಟ್ರ ಸೇರಿದಂತೆ ಕೆಲವು ರಾಜ್ಯಗಳಲ್ಲಿ ಕಾಂಗ್ರೆಸ್ ಬೆಂಬಲ ನೀಡಿದೆ.

ಆಧಾರ: ಉದಯವಾಣಿ, ದಿನಾಂಕ:23.02.2021

## 15. ಗುಜರಾತ್: 2 ರಾಜ್ಯಸಭೆ ಸೀಟುಗಳು ಬಿಜೆಪಿ ಮಡಿಲಿಗೆ

ಕಾಂಗ್ರೆಸ್ ನಾಯಕ ಅಹ್ಮದ್ ಪಟೇಲ್ ಹಾಗೂ ಬಿಜೆಪಿ ಅಭಯ್ ಭಾರದ್ವಾಜ್ ಅವರ ನಿಧನದಿಂದ ತೆರವಾಗಿದ್ದ ರಾಜ್ಯಸಭೆಯ ಎರಡು ಸ್ಥಾನಗಳಿಗೆ ಬಿಜೆಪಿಯ ಅಭ್ಯರ್ಥಿಗಳಾದ ದಿನೇಶ್‌ಚಂದ್ರ ಅನಾವಾಡಿಯ ಹಾಗೂ ರಾಮ್‌ಭಾಯ್ ಮೊಕಾರಿಯಾ ಅವರು ಗುಜರಾತ್‌ನಿಂದ ಅವಿರೋಧವಾಗಿ ಆಯ್ಕೆಯಾಗಿದ್ದಾರೆ. ಬಿಜೆಪಿ ಅಭ್ಯರ್ಥಿಗಳಿಗೆ ಎದುರಾಗಿ ಕಾಂಗ್ರೆಸ್ ತನ್ನ ಅಭ್ಯರ್ಥಿಗಳನ್ನು ಕಣಕ್ಕಿಳಿಸದಿದ್ದ ಹಿನ್ನೆಲೆಯಲ್ಲಿ ಈ ಇಬ್ಬರು ಅವಿರೋಧವಾಗಿ ಆಯ್ಕೆಯಾಗಿರುವುದಾಗಿ ಚುನಾವಣಾ ನಿರ್ವಹಣೆ ಜವಾಬ್ದಾರಿ ಹೊತ್ತಿದ್ದ ಸಿ.ಬಿ. ಪಾಂಡ್ಯ ಪ್ರಕಟಿಸಿದ್ದಾರೆ. 1993ರಿಂದ ಸತತವಾಗಿ ಕಾಂಗ್ರೆಸ್ ವತಿಯಿಂದ ರಾಜ್ಯಸಭಾ ಸದಸ್ಯರಾಗಿದ್ದ ಅಹ್ಮದ್ ಪಟೇಲ್, ಕೊರೋನಾಕ್ಕೆ ತುತ್ತಾಗಿ ಕಳೆದ ವರ್ಷ ನವೆಂಬರ್‌ನಲ್ಲಿ ನಿಧನರಾಗಿದ್ದರು. 2019ರಲ್ಲಿ ರಾಜ್ಯಸಭೆಗೆ ಆಯ್ಕೆಯಾಗಿದ್ದ ಬಿಜೆಪಿಯ ಅಭಯ್ ಭಾರದ್ವಾಜ್ ಕೂಡ ಕಳೆದ ವರ್ಷ ಡಿಸೆಂಬರ್ 1ರಂದು ಕೊರೋನಾದಿಂದಾಗಿ ದಿವಂಗತರಾಗಿದ್ದರು.

ಆಧಾರ: ಉದಯವಾಣಿ, ದಿನಾಂಕ:23.02.2021

## 16.ಗವರ್ನರ್‌ರನ್ನು ಎಳೆದಾಡಿದ ಐವರು ಕಾಂಗ್ರೆಸ್ ಶಾಸಕರ ಅಮಾನತ್ತು

ಹಿಮಾಚಲ ಪ್ರದೇಶದ ವಿಧಾನಸಭೆ ಆವರಣದಲ್ಲಿ ರಾಜ್ಯಪಾಲ ಬಂಡಾರು ದತ್ತಾತ್ರೆಯ ಅವರನ್ನು ಎಳೆದಾಡಿ, ಅಪಮಾನಿಸಿದ ಪ್ರಕರಣಕ್ಕೆ ಸಂಬಂಧಿಸಿದಂತೆ ಐವರು ಕಾಂಗ್ರೆಸ್ ಶಾಸಕರನ್ನು ಬಜೆಟ್ ಅಧಿವೇಶನಮುಗಿಯುವವರೆಗೂ ಅಮಾನತುಗೊಳಿಸಲಾಗಿದೆ.

ಬಜೆಟ್ ಅಧಿವೇಶನದ ಆರಂಭದ ದಿನವೇ ರಾಜ್ಯಪಾಲರ ಭಾಷಣಕ್ಕೆ ಕಾಂಗ್ರೆಸ್ ಶಾಸಕರು ಅಡ್ಡಿಪಡಿಸಿ ಗದ್ದಲ ನಡೆಸಿದರು. ಇದರಿಂದಾಗಿ ದತ್ತಾತ್ರೇಯ ಅವರು ಭಾಷಣವನ್ನು ಅರ್ಧಕ್ಕೆ ಮೊಟಕುಗೊಳಿಸಿ ಮುಖ್ಯಮಂತ್ರಿ ಜೈರಾಮ್ ಠಾಕೂರ್ ಅವರ ಜೊತೆ ಸದನದಿಂದ ಹೊರಬಂದು, ರಾಜಭವನದತ್ತ ತೆರಳಲು ಮುಂದಾದರು. ಆಗ ಅವರನ್ನು ಹಿಂಬಾಲಿಸಿದ ಪ್ರತಿಪಕ್ಷ ಕಾಂಗ್ರೆಸ್ ಶಾಸಕರ

ದಂಡು, ಭಾಷಣದ ಪ್ರತಿಗಳನ್ನು ಹಿಡಿದು ರಾಜ್ಯಪಾಲರ ಬೆನ್ನಿಗೆ ತಿವಿದರು. ಎಳೆದಾಡಿ ಅಪಮಾನಿಸಿದರು. ಇದರಿಂದ ಕೆಲಹೊತ್ತು ಆತಂಕದ ಸ್ಥಿತಿ ನಿರ್ಮಾಣವಾಗಿತ್ತು. "ಹಿಮಾಚಲ ಪ್ರದೇಶದ ವಿಧಾನ ಸಭೆ ಇತಿಹಾಸದಲ್ಲಿಯೇ ಇದೊಂದು ಕಪ್ಪುಚುಕ್ಕೆ. ಹಲ್ಲೆಗೆ ಯತ್ನಿಸಿದ ಆರೋಪದ ಮೇರೆಗೆ ಕಾಂಗ್ರೆಸ್ ಶಾಸಕರಾದ ಮುಕೇಶ್ ಅಗ್ನಿಹೋತ್ರಿ, ಹರ್ಷವರ್ಧನ್ ಚೌಹಾಣ್, ಸುಂದರ್‌ಸಿಂಗ್ ಠಾಕೂರ್, ಸತ್ಪಾಲ್ ರಾಯ್‌ಜಾದಾ ಹಾಗೂ ವಿನಯ್ ಕುಮಾರ್ ಅವರನ್ನು ಬಜೆಟ್ ಅಧಿವೇಶನ ಮುಗಿಯುವವರೆಗೂ ಅಮಾನತ್ತುಗೊಳಿಸಲಾಗಿದೆ." ಎಂದು ಸ್ಪೀಕರ್ ವಿಪಿನ್ ಪಾರ್ಮಾರ್ ಹೇಳಿದ್ದಾರೆ. ಮಾರ್ಚ್ 20ರವರೆಗೆ ಅಧಿವೇಶನ ನಡೆಯಲಿದೆ.

ಆಧಾರ: ವಿಜಯ ಕರ್ನಾಟಕ, ದಿನಾಂಕ:23.02.2021

## 17.ಕಾಂಗ್ರೆಸ್ ಕೈಯಿಂದ ಜಾರಿದ ಪುದುಚೆರಿ

ಸರ್ಕಾರದ ಅಲ್ಪಮತಕ್ಕೆ ಕುಸಿದ ಹಿನ್ನೆಲೆಯಲ್ಲಿ ಪುದುಚೆರಿ ಮುಖ್ಯಮಂತ್ರಿ ವಿ. ನಾರಾಯಣಸ್ವಾಮಿ ಅವರು ರಾಜೀನಾಮೆ ನೀಡಿದ್ದು, ಕಾಂಗ್ರೆಸ್ ಆಡಳಿತದಿಂದ ಕೇಂದ್ರಾಡಳಿತ ಪ್ರದೇಶವು ಕೈತಪ್ಪಿದೆ. ವಿಧಾನ ಸಭೆಯ ವಿಶೇಷ ಅಧಿವೇಶನದಲ್ಲಿ ಬಹುಮತ ಸಾಬೀತುಪಡಿಸಲು ವಿಫಲರಾದ ಕಾರಣ ಮುಖ್ಯಮಂತ್ರಿ ನಾರಾಯಣಸ್ವಾಮಿ ಅವರು ಸಂಪುಟ ಸದಸ್ಯರ ಜೊತೆ 'ರಾಜ ನಿವಾಸ'ಕ್ಕೆ ತೆರಳಿ ಲೆಫ್ಟಿನೆಂಟ್ ಗವರ್ನರ್ ತಮಿಳಿಸಾಯಿ ಸೌಂದರರಾಜನ್ ಅವರಿಗೆ ರಾಜೀನಾಮೆ ಸಲ್ಲಿಸಿದರು. ಬಹುಮತ ಹೊಂದಿರುವ ಪ್ರತಿಪಕ್ಷಗಳ ಮೈತ್ರಿಕೂಟ ಸರ್ಕಾರ ರಚನೆ ಕುರಿತು ಯಾವುದೇ ತೀರ್ಮಾನ ಕೈಗೊಂಡಿಲ್ಲ. ಪುದುಚೆರಿ ವಿಧಾನ ಸಭೆಗೆ ಏಪ್ರಿಲ್ ಅಥವಾ ಮೇ ತಿಂಗಳಲ್ಲಿ ಚುನಾವಣೆ ನಡೆಯಬೇಕಿದೆ.

ತಮ್ಮದೇ ಪಕ್ಷದ ಒಬ್ಬರು ಹಾಗೂ ಮಿತ್ರಪಕ್ಷ ಡಿಎಂಕೆಯ ಒಬ್ಬ ಶಾಸಕರು ರಾಜೀನಾಮೆ ನೀಡಿದ್ದರಿಂದ ಕೇಂದ್ರಾಡಳಿತ ಪ್ರದೇಶ ಪುದುಚೆರಿಯಲ್ಲಿನ ಕಾಂಗ್ರೆಸ್ ಸರ್ಕಾರ ಅಲ್ಪಮತಕ್ಕೆ ಕುಸಿದಿತ್ತು. ತಿಂಗಳ ಅವಧಿಯಲ್ಲಿ ಕಾಂಗ್ರೆಸ್‌ನ ಒಟ್ಟು ಐವರು ಶಾಸಕರು ರಾಜೀನಾಮೆ ನೀಡಿದ್ದಾರೆ. ಒಬ್ಬ ಶಾಸಕರನ್ನು ಪಕ್ಷವಿರೋಧಿ ಚಟುವಟಿಕೆ ಹಿನ್ನೆಲೆಯಲ್ಲಿ ಅನರ್ಹಗೊಳಿಸಲಾಗಿದೆ. ಲೆಫ್ಟಿನೆಂಟ್ ಗವರ್ನರ್ ತಮಿಳಿಸಾಯಿ ಸೌಂದರರಾಜನ್ ಅವರು ವಿಧಾನ ಸಭೆಯಲ್ಲಿ ಬಹುಮತ ಸಾಬೀತುಪಡಿಸಲು ನಿರ್ದೇಶನ ನೀಡಿದ್ದರು. ವಿಧಾನ ಸಭೆಯಲ್ಲಿ ಕಾಂಗ್ರೆಸ್ ಮೈತ್ರಿಕೂಟವು 14 ಸದಸ್ಯ ಬಲ ಹೊಂದಿದೆ.

ಬೆಳಗ್ಗೆ ಸದನ ಸೇರುತ್ತಿದ್ದಂತೆಯೇ ಮುಖ್ಯಮಂತ್ರಿ ನಾರಾಯಣ ಸ್ವಾಮಿ ವಿಶ್ವಾಸಮತ ಕೋರುವ ನಿರ್ಣಯ ಮಂಡಿಸಿದರು. "ನಮ್ಮ ಸರ್ಕಾರ ಉರುಳಿಸಲು ಲೆಫ್ಟಿನೆಂಟ್ ಗವರ್ನರ್ ಆಗಿದ್ದ ಕಿರಣ್ ಬೇಡಿ ಪಿತೂರಿ ನಡೆಸಿದ್ದಾರೆ," ಎಂದು ಮುಖ್ಯಮಂತ್ರಿ ಆರೋಪಿಸುತ್ತಿದ್ದಂತೆ ಪ್ರತಿಪಕ್ಷಗಳು, "ಸದನದ ಸದಸ್ಯರಲ್ಲ ದವರ ಬಗ್ಗೆ ಮಾತನಾಡಬಾರದು," ಎಂದು ಆಕ್ಷೇಪಿಸಿದರು. ನಂತರ ಮುಖ್ಯಮಂತ್ರಿಯವರು ಬಿಜೆಪಿಯ ಮೂವರು ನಾಮನಿರ್ದೇಶಿತ ಸದಸ್ಯರಿಗೆ ಮತದಾನದ ಹಕ್ಕು ನೀಡಬಾರದು ಎಂದು ಅಗ್ರಹಿಸಿದರು. "ನಾಮನಿರ್ದೇಶಿತ ಸದಸ್ಯರಿಗೆ ಮತದಾನದ ಹಕ್ಕು ಇದೆ ಎಂಬುದನ್ನು ಸುಪ್ರೀಂಕೋರ್ಟ್ 2018ರ ತೀರ್ಪಿನಲ್ಲಿ ಸ್ಪಷ್ಟಪಡಿಸಿದೆ. ಈ ವಿಚಾರವನ್ನು ಮತ್ತೆ ಕೆದಕುವುದು ಬೇಡ," ಎಂದು ಪ್ರತಿಪಕ್ಷ ಸದಸ್ಯರು ಹೇಳಿದರು.

ಈ ಹಂತದಲ್ಲಿ ಸ್ಪೀಕರ್ ವಿ.ಪಿ.ಸಿವಕೋಲುಂದು ಅವರು ಮುಖ್ಯಮಂತ್ರಿ ಮಂಡಿಸಿದ ವಿಶ್ವಾಸಮತ ಕೋರುವ ನಿರ್ಣಯಕ್ಕೆ ಸೋಲಾಗಿದೆ ಎಂದು ಘೋಷಿಸಿದರು. ನಿರ್ಣಯವನ್ನು ಅವರು ಮತಕ್ಕೆ ಹಾಕಲೇ ಇಲ್ಲ. ಆಗ ನಾರಾಯಣ ಸ್ವಾಮಿ ಅವರು ಕಾಂಗ್ರೆಸ್, ಡಿಎಂಕೆ ಹಾಗೂ ತಮ್ಮ ಸರ್ಕಾರಕ್ಕೆ ಬೆಂಬಲ ನೀಡಿದ್ದ ಒಬ್ಬರು ಪಕ್ಷೇತರ ಶಾಸಕರೊಂದಿಗೆ ಸಭಾತ್ಯಾಗ ಮಾಡಿದರು.

ಪ್ರತಿಪಕ್ಷಗಳ ನಿರ್ಧಾರವಿಲ್ಲ: "ಸರ್ಕಾರ ರಚಿಸಲು ಹಕ್ಕು ಮಂಡಿಸುವ ಉದ್ದೇಶ ಸದ್ಯಕ್ಕಂತೂ ನಮಗೆ ಇಲ್ಲ. ಆದರೂ ಎಲ್ಲ ಪಕ್ಷಗಳು ಸಭೆ ನಡೆಸಿ ಮುಂದಿನ ತೀರ್ಮಾನ ಕೈಗೊಳ್ಳುತ್ತೇವೆ," ಎಂದು ಅಖಿಲ ಭಾರತ ಎನ್.ರಂಗಸ್ವಾಮಿ ಕಾಂಗ್ರೆಸ್ ಪಕ್ಷದ ಮುಖ್ಯಸ್ಥ ಎನ್.ರಂಗಸ್ವಾಮಿ ತಿಳಿಸಿದ್ದಾರೆ. ಲೆಫ್ಟಿನೆಂಟ್ ಗವರ್ನರ್ ಸಹ ಪ್ರತಿಪಕ್ಷ ಮೈತ್ರಿಕೂಟಕ್ಕೆ ಸರ್ಕಾರ ರಚಿಸುವ ಆಹ್ವಾನ ನೀಡಿಲ್ಲ. ಒಮ್ಮೆ ಪ್ರತಿಪಕ್ಷಗಳು

ಸರ್ಕಾರ ರಚಿಸಲು ಆಸಕ್ತಿ ತೋರಿಸದೇ ಇದ್ದರೆ ರಾಷ್ಟ್ರಪತಿ ಆಡಳಿತಕ್ಕೆ ಲೆಫ್ಟಿನೆಂಟ್ ಗವರ್ನರ್ ಶಿಫಾರಸ್ಸು ಮಾಡಬಹುದು.

ಆಧಾರ: ವಿಜಯ ಕರ್ನಾಟಕ, ದಿನಾಂಕ:23.02.2021

**18. Nominated MLAs topple Pondy govt**

PUDUCHERRY created history with and elected government being toppled by nominated legislators, who were allowed to participate in the trust vote against the Congress government. With number of legislators jumping ship, the floor strength of the congress DMK combine was reduced to a mere 12. The Opposition had 11 votes of elected members against the government, which went up to 14 when the three nominated members were also considered. Interestingly, all the nominated legislators are BJP functionaries.

Shortly after the vote, Chief Minister V Narayanasamy tendered his resignation to Lt-Governor Tamilisai Soundararajan. The Opposition has also decided not to stake claim to form a government, which means the Union Territory is headed for President's Rule. 'We will not try and form a government at this stage,'' said BJP state president V Saminathan. 'With the blessings of people, the NDA will form the next government in Puducherry after the elections,'' he added.

The Congress and its ally DMK termed the trust vote as a murder of democracy. Narayanasamy accused Speaker VP Shivakolunthu of having flouted the guidelines in declaring the confidence motion as defeated. After the Chief Minister moved the motion and addressed the House, the government whip RKR Anantharaman posed a question to the Speaker on whether the three nominated members had the right to vote. The whip pointed out that as nominated members could not vote in Presidential elections, they also could not take part in the trust vote.

As the Speaker did not respond to this, the Chief Minister said he would go to the Raj Nivas and resign, and the ruling MLAs walked out of the House. However, as they walked out, the Speaker announced that the confidence vote sought by Narayanasamy was defeated. "This is not proper, as per guidelines," Narayanasamy pointed out.

'The Speaker should have sent the motion for voting even if the Treasury Bench was absent. Hence, the Speaker's ruling is incorrect and invalid. This is a legal issue and legal experts are being consulted,'' he added.

Mean while, the Congress has suspended K Lakshminarayanan, Parliamentary Secretary to Chief Minister, for "violating " party discipline. Lakshminarayanan, who represented Raj Bhavan constituency in the Puducherry Assembly, quit as a legislator, citing lack of recognition by the Congress government and the party. Puducherry Pradesh Congress President AV Subramanian, in a statement, said Lakshminarayanan"violated party discipline" by tendering his resignation to the Speaker, and hence, was suspended from primary membership of the party.

In Chennai, the DMK suspended K Venkatesan, party MLA representing Thattanchavady constituency in Puducherry, who stepped down from his post. DMK general secretary DuraiMurugan, in a statement, said Venkatesan had been suspended from all positions he held, including primary membership, since he violated party discipline and

brought disrepute to the DMK. The resignation of both these legislators hurt the ruling front hard during the trust vote.

Courtsey:- Indian Express, dt:23.02.2021

## 19. ಚಿನ್ನ ಸ್ಮಗ್ಲಿಂಗ್‌ನಲ್ಲಿ ಕೇರಳದ ಸಿಎಂ ಪಿಣರಾಯಿ ಭಾಗಿ

ಕೇರಳ ರಾಜಕೀಯದಲ್ಲಿ ಸಂಚಲನ ಸೃಷ್ಟಿಸಿದ್ದ ಚಿನ್ನ ಕಳ್ಳಸಾಗಣೆ ಪ್ರಕರಣದಲ್ಲಿ ಸ್ವತಃ ಮುಖ್ಯಮಂತ್ರಿ ಪಿಣರಾಯಿ ವಿಜಯನ್, ವಿಧಾನ ಸಭಾ ಅಧ್ಯಕ್ಷ ಪಿ. ಶ್ರೀ ರಾಮಕೃಷ್ಣನ್ ಹಾಗೂ ಮೂವರು ಸಚಿವರು ಭಾಗಿಯಾಗಿದ್ದಾರೆ ಎಂದು ಪ್ರಕರಣದ ಮುಖ್ಯ ಆರೋಪಿ ಸ್ವಪ್ನಾ ಸುರೇಶ್ ಮತ್ತೊಂದು ಸ್ಫೋಟಕ ಹೇಳಿಕೆ ನೀಡಿದ್ದಾಳೆ.

ಕೇರಳ ಹೈಕೋರ್ಟ್‌ಗೆ ಸುಂಕ ಇಲಾಖೆ ಆಯುಕ್ತ ಸುಮಿತ್‌ಕುಮಾರ್ ಹೇಳಿಕೆಯೊಂದನ್ನು ಸಲ್ಲಿಸಿದ್ದು, ಅದರಲ್ಲಿ ಸ್ವಪ್ನಾ ಈ ಹೇಳಿಕೆಗಳನ್ನು ವಿಚಾರಣೆ ವೇಳೆ ನೀಡಿದ್ದಾಳೆ ಎಂದು ತಿಳಿಸಿದ್ದಾರೆ. ವಿಧಾನ ಸಭೆ ಚುನಾವಣೆ ಹೊಸ್ತಿಲಲ್ಲಿ ಕೇರಳ ಇರುವಾಗ ಸ್ವಪ್ನಾ ನೀಡಿದ ಈ ಹೇಳಿಕೆ ರಾಜಕೀಯ ಬಿರುಗಾಳಿ ಎಬ್ಬಿಸುವ ಸಾಧ್ಯತೆ ಇದೆ.

'ವಿಜಯನ್‌ಗೆ ಹಾಗೂ ಚಿನ್ನ ಕಳ್ಳಸಾಗಣೆ ನಡೆಯುತ್ತಿದ್ದ ಸಂಯುಕ್ತ ಅರಬ್ ಸಂಸ್ಥಾನ (ಯುಎಇ) ದೇಶದ ಕಾನ್ಸುಲ್ ಜನರಲ್‌ಗೂ ಸಂಪರ್ಕವಿತ್ತು. ಇವರ ನಡುವೆ ಅಕ್ರಮ ವ್ಯವಹಾರ ನಡೆಯುತ್ತಿತ್ತು. ಪಿಣರಾಯಿ, ಅವರ ಪ್ರಧಾನ ಕಾರ್ಯದರ್ಶಿ ಹಾಗೂ ಅವರ ಆಪ್ತ ಸಿಬ್ಬಂದಿಯ ಪರಿಚಯ ನನಗೆ ಚೆನ್ನಾಗಿ ಇತ್ತು. ಮುಖ್ಯಮಂತ್ರಿ ಹಾಗೂ ಸ್ಪೀಕರ್ ಸೂಚನೆಯ ಮೇರೆಗೆ ವಿದೇಶಿ ಕರೆನ್ಸಿಯ ಅಕ್ರಮ ಕಳ್ಳಸಾಗಣೆ ಕಾನ್ಸುಲೇಟ್ ಸಹಾಯದಿಂದ ನಡೆದಿತ್ತು.

ಮೂವರು ಸಚಿವರೂ ಇದರಲ್ಲಿ ಭಾಗಿಯಾಗಿದ್ದರು' ಎಂದು ಸ್ವಪ್ನಾ ತಿಳಿಸಿದ್ದಾಳೆ ಎಂದು ಆಯುಕ್ತರ ವರದಿಯಲ್ಲಿದೆ. 'ಮಧ್ಯ ಪ್ರಾಚ್ಯದ ವ್ಯಕ್ತಿಗಳಿಗೂ ಕೇರಳದ ಈ 'ಗಣ್ಯರ' ಮಧ್ಯೆಯೂ ನಡೆದ ವ್ಯವಹಾರಕ್ಕೆ ನಾನು ಸಾಕ್ಷಿಯಗಿದ್ದೆ. ಏಕೆಂದರೆ ನನಗೆ ಅರೇಬಿಕ್ ಭಾಷೆ ಗೊತ್ತಿದ್ದ ಕಾರಣಕ್ಕೆ ಮಧ್ಯವರ್ತಿಯಾಗಿ ಕೆಲಸ ಮಾಡುವಂತೆ ಒತ್ತಡ ಹಾಕಲಾಗುತ್ತಿತ್ತು. ಇಷ್ಟು ಮಾತ್ರವಲ್ಲ ಇನ್ನೂ ಕೆಲವು 'ದೊಡ್ಡ ವ್ಯಕ್ತಿಗಳು' ಅನೇಕ ಡೀಲ್‌ಗಳ ಮೂಲಕ ಲಂಚ ಸ್ವೀಕರಿಸುತ್ತಿದ್ದರು' ಎಂದೂ ಸ್ವಪ್ನಾ ಸುರೇಶ್ ತಿಳಿಸಿದ್ದಾಳೆ. ಕೇರಳದ ಯುಎಇ ಕಾನ್ಸುಲ್ ಜನರಲ್ ಕಚೇರಿಗೆ ಬರುತ್ತಿದ್ದ ಡಿಪ್ಲೋಮೆಟಿಕ್ ಸರಕಿನಲ್ಲಿ ಚಿನ್ನ ಸಾಗಿಸುವ ದಂಧೆ ಇದಾಗಿದ್ದು, 167 ಕೆ.ಜಿ. ಚಿನ್ನ ಕಳ್ಳಸಾಗಣೆ ನಡೆಸಲಾಗಿತ್ತು ಎಂಬ ಆರೋಪವಿದೆ. ಇದೇ ಪ್ರಕರಣಕ್ಕೆ ಸಂಬಂಧಿಸಿದಂತೆ ಕಳೆದ ವರ್ಷ ಸ್ವಪ್ನಾ ಸೇರಿ 15 ಮಂದಿ ಬಂಧಿತರಾಗಿದ್ದರು. ಡಿಪ್ಲೋಮೆಟಿಕ್ ಸರಕಿಗೆ ತಪಾಸಣಾ ವಿನಾಯಿತಿ ಇರುವ ಕಾರಣ ಆ ಸರಕಿನ ಮೂಲಕ ಕಳ್ಳಸಾಗಣೆ ನಡೆಸಲಾಗುತ್ತದೆ ಎಂದು ದೂರಲಾಗಿತ್ತು.

ಜಾಮೀನು ತೆರೆಗೆ ನಕಾರ: ಈ ನಡುವೆ, ಚಿನ್ನ ಕಳ್ಳಸಾಗಣೆ ಪ್ರಕರಣದಲ್ಲಿ ಕೇರಳದ ಸಸ್ಪೆಂಡ್ ಆದ ಐಎಎಸ್ ಅಧಿಕಾರಿ ಪಿ.ಶಿವಶಂಕರ ಅವರಿಗೆ ನೀಡಲಾಗಿದ್ದ ಜಾಮೀನಿಗೆ ತಡೆ ನೀಡಲು ಸುಪ್ರೀಂಕೋರ್ಟ್ ನಿರಾಕರಿಸಿದೆ.

**ಸಿಎಂ ಸೂಚನೆ ಮೇಲೆ ಸ್ಮಗ್ಲಿಂಗ್:** ಮುಖ್ಯಮಂತ್ರಿ ಪಿಣರಾಯಿ ವಿಜಯನ್, 3 ಸಚಿವರು, ವಿಧಾನ ಸಭೆ ಸ್ಪೀಕರ್‌ಗೆ ಕಳ್ಳಸಾಗಣೆ ನಂಟಿದೆ. ಇವರೆಲ್ಲರಿಗೆ ಯುಎಇ ಕಾನ್ಸುಲ್ ಜನರಲ್ ಜೊತೆ ನೇರ ಸಂಪರ್ಕವಿತ್ತು. ಮುಖ್ಯಮಂತ್ರಿ, ಸ್ಪೀಕರ್ ಸೂಚನೆ ಅನ್ವಯವೇ ಹಲವು ಬಾರಿ ಕಳ್ಳಸಾಗಣೆ ನಡೆದಿದೆ ಎಂದು ಪ್ರಕರಣ ಮುಖ್ಯ ಆರೋಪಿ ಸ್ವಪ್ನಾ ಸುರೇಶ್ ಹೇಳಿದ್ದಾಳೆ.

ಆಧಾರ: ಕನ್ನಡಪ್ರಭ, ದಿನಾಂಕ:06.03.2021

## 20. ಉತ್ತರಾಖಂಡ ಸಿಎಂ ರಾಜೀನಾಮೆ

ಉತ್ತರಾಖಂಡದಲ್ಲಿ ಮಹತ್ವದ ಬೆಳವಣಿಗೆಯೊಂದು ನಡೆದಿದ್ದು, ಮುಖ್ಯಮಂತ್ರಿ ತ್ರಿವೇಂದ್ರ ಸಿಂಗ್ ರಾವತ್ ಅವರು ರಾಜೀನಾಮೆ ನೀಡಿದ್ದಾರೆ. ಬಿಜೆಪಿ ಹೈಕಮಾಂಡ್ ನಿರ್ದೇಶನ ಮೇರೆಗೆ ಪದತ್ಯಾಗ ಮಾಡಿದ್ದು, ರಾಜ್ಯಪಾಲರು ಅಂಗೀಕರಿಸಿದ್ದಾರೆ.

ರಾಜ್ಯದೊಳಗಿನ ಪಕ್ಷದ ನಾಯಕರ ಜೊತೆಗೆ ಸಂಪರ್ಕ ಕಳೆದುಕೊಂಡಿರುವ ಆರೋಪ ಎದುರಿಸುತ್ತಿದ್ದ ರಾವತ್ ಅವರನ್ನು ಪಕ್ಷದ ವರಿಷ್ಠರು ದೆಹಲಿಗೆ ಕರೆಸಿಕೊಂಡಿದ್ದರು. ಡೆಹ್ರಾಡೂನ್‌ಗೆ ವಾಪಸ್ ಆದ ರಾವತ್ ಅವರು, ರಾಜ್ಯಪಾಲರ ಭವನಕ್ಕೆ ತೆರಳಿ ರಾಜೀನಾಮೆ ಸಲ್ಲಿಸಿದರು. ಮೂಲಗಳ ಪ್ರಕಾರ, ಸಚಿವ ಧನ್ ಸಿಂಗ್ ರಾವತ್ ಅವರೇ ಸಿಎಂ ಆಗಬಹುದು ಎಂದು ಹೇಳಲಾಗುತ್ತಿದೆ. ಅಜಯ್ ಭಟ್ ಮತ್ತು ಅನಿಲ್ ಬುಲಾನಿ ಅವರ ಹೆಸರೂ ಕೇಳಿಬರುತ್ತಿವೆ.

ಆಧಾರ: ಉದಯವಾಣಿ, ದಿನಾಂಕ:10.03.2021

## 21. ಟೀ ಶರ್ಟ್‌ನಲ್ಲಿ ಬಂದ ಶಾಸಕ ಸದನದಿಂದ ಹೊರಕ್ಕೆ

ಗುಜರಾತ್ ವಿಧಾನಸಭಾ ಅಧಿವೇಶನಕ್ಕೆ ಪದೇ ಪದೇ ಟೀ–ಶರ್ಟ್ ಧರಿಸಿ ಬರುತ್ತಿದ್ದ ಕಾಂಗ್ರೆಸ್‌ನ ಶಾಸಕ ವಿಮಲ್ ಚೂಡಾಸಮಾ ಅವರನ್ನು ಸ್ಪೀಕರ್ ರಾಜೇಂದ್ರ ತ್ರಿವೇದಿ ಸದನದಿಂದ ಹೊರಹಾಕಿದ ಘಟನೆ ನಡೆದಿದೆ. ಶಾಸಕರು ಸದನದ ಗೌರವ, ಘನತೆಯನ್ನು ಕಾಪಾಡಬೇಕು. ಟೀ–ಶರ್ಟ್ ಧರಿಸಿ ಅಧಿವೇಶನಕ್ಕೆ ಬರುವುದು ಶಿಷ್ಟಾಚಾರವಲ್ಲ ಎಂದು ಸ್ಪೀಕರ್ ಹೇಳಿದರು. ಆದರೆ, ಇದಕ್ಕೆ ಪ್ರತಿಪಕ್ಷ ಕಾಂಗ್ರೆಸ್ ವಿರೋಧ ವ್ಯಕ್ತಪಡಿಸಿತು. ಶಾಸಕರು ಸದನಕ್ಕೆ ಇಂಥದ್ದೇ ವಸ್ತ್ರ ಧರಿಸಿಬರಬೇಕೆಂಬ ನಿಯಮವೇನೂ ಇಲ್ಲ ಎಂದು ಕಾಂಗ್ರೆಸ್ ಸದಸ್ಯರು ವಾದಿಸಿದರು. ಸೋಮನಾಥದಿಂದ ಮೊದಲ ಬಾರಿಗೆ ಆಯ್ಕೆ ಆಗಿರುವ ವಿಮಲ್, ಕಳೆದ ವಾರ ಕೂಡ ಅಧಿವೇಶನಕ್ಕೆ ಟೀ ಶರ್ಟ್ ಧರಿಸಿ ಬಂದಿದ್ದರು. ಆಗ ಎಚ್ಚರಿಕೆ ನೀಡಿದ್ದ ಸ್ಪೀಕರ್, ಈ ರೀತಿಯ ಬಟ್ಟೆ ಧರಿಸಿ ಬರುವುದನ್ನು ಪುನರಾವರ್ತಿಸಬೇಡಿ. ಸಭ್ಯ ಉಡುಗೆಯಲ್ಲಿ ಬನ್ನಿ ಎಂದು ಹೇಳಿದ್ದರು. ಆದರೆ, ವಿಮಲ್ ಮತ್ತೆ ಟೀ ಶರ್ಟ್ ಹಾಕಿಕೊಂಡು ಸದನಕ್ಕೆ ಬಂದಿದ್ದರು.

ಆಧಾರ: ವಿಜಯವಾಣಿ, ದಿನಾಂಕ:16.03.2021

## 22. ರಾಜ್ಯಸಭೆ ಸದಸ್ಯತ್ವ ತೊರೆದ ಸ್ವಪನ್

ರಾಜ್ಯಸಭಾ ಸದಸ್ಯತ್ವ ಕುರಿತು ವಿವಾದ ಸೃಷ್ಟಿಯಾದ ಹಿನ್ನೆಲೆಯಲ್ಲಿ ಪಶ್ಚಿಮ ಬಂಗಾಳ ವಿಧಾನ ಸಭೆ ಚುನಾವಣೆಯಲ್ಲಿ ಬಿಜೆಪಿ ಅಭ್ಯರ್ಥಿಯಾಗಿರುವ ಸ್ವಪನ್ ದಾಸ್‌ಗುಪ್ತಾ ಸಂಸದ ಸ್ಥಾನಕ್ಕೆ ರಾಜೀನಾಮೆ ನೀಡಿದ್ದಾರೆ. (ಮಾರ್ಚ್ 17) ಅನ್ವಯವಾಗುವಂತೆ ಅಂಗೀಕರಿಸಬೇಕು ಎಂದು ಅವರು ರಾಜ್ಯಸಭೆ ಸಭಾಪತಿ ಎಂ.ವೆಂಕಯ್ಯ ನಾಯ್ಡು ಅವರಿಗೆ ಸಲ್ಲಿಸಿರುವ ರಾಜೀನಾಮೆ ಪತ್ರದಲ್ಲಿ ಕೋರಿದ್ದಾರೆ.

ಖ್ಯಾತ ಅಂಕಣ ಬರಹಗಾರರೂ ಆಗಿರುವ ಸ್ವಪನ್ ದಾಸ್‌ಗುಪ್ತಾ ಅವರು 2016ರ ಏಪ್ರಿಲ್ 25ರಂದು ರಾಜ್ಯಸಭೆಗೆ ನಾಮಕರಣಗೊಂಡಿದ್ದರು. ಇತ್ತೀಚೆಗೆ ಅವರು ಬಿಜೆಪಿ ಬಗ್ಗೆ ಬಹಿರಂಗ ಸಮರ್ಥನೆಗಿಳಿದಿದ್ದರು. ಪಕ್ಷವು ದಾಸ್‌ಗುಪ್ತಾ ಅವರಿಗೆ ತಾರಕೇಶ್ವರ ವಿಧಾನ ಸಭಾ ಕ್ಷೇತ್ರದ ಟಿಕೇಟ್ ನೀಡಿತ್ತು ಬಿಜೆಪಿ ಅಭ್ಯರ್ಥಿಯಾಗಿ ಸ್ವಪನ್ ದಾಸ್‌ಗುಪ್ತಾ ಹೆಸರು ಘೋಷಣೆಯಾಗುತ್ತಿದ್ದಂತೆಯೇ ಟಿಎಂಡಿ ಸಂಸದೆ ಮೊಹುವಾ ಮೊಯಿತ್ರಾ ಆಕ್ಷೇಪ ಎತ್ತಿದ್ದರು. "ಬಿಜೆಪಿಯಿಂದ ಚುನಾವಣೆಗೆ ಸ್ಪರ್ಧೆ ಮಾಡುವುದಾದರೆ ಅದಕ್ಕೂ ಮೊದಲು ರಾಜ್ಯಸಭೆ ಸ್ಥಾನಕ್ಕೆ ಅವರು ರಾಜೀನಾಮೆ ನೀಡಬೇಕು. ಇಲ್ಲವಾದರೆ ಅವರು ಪಕ್ಷಾಂತರ ಕಾರಣಕ್ಕಾಗಿ 10ನೇ ಷೆಡ್ಯೂಲ್ ಅಡಿಯಲ್ಲಿ ಸದಸ್ಯತ್ವದಿಂದ ಅನರ್ಹಗೊಳ್ಳುತ್ತಾರೆ," ಎಂದು ಎಚ್ಚರಿಸಿದ್ದರು.

"ರಾಜ್ಯಸಭೆ ಸದಸ್ಯತ್ವಕ್ಕೆ ರಾಜೀನಾಮೆ ನೀಡಿದ್ದೇನೆ. ಉತ್ತಮ ಬಂಗಾಳಕ್ಕಾಗಿ ಶ್ರಮಿಸಲು ನನ್ನನ್ನು ನಾನು ಅಣಿಗೊಳಿಸಿಕೊಳ್ಳುತ್ತಿದ್ದೇನೆ. ಒಂದೆರಡು ದಿನಗಳಲ್ಲಿ ತಾರಕೇಶ್ವರ ವಿಧಾನಸಭೆ ಕ್ಷೇತ್ರದಿಂದ ಬಿಜೆಪಿ ಅಭ್ಯರ್ಥಿಯಾಗಿ ನಾಮಪತ್ರ ಸಲ್ಲಿಸುತ್ತೇನೆ," ಎಂದು ಟ್ವೀಟ್ ಮಾಡಿದ್ದಾರೆ.

ಆಧಾರ: ವಿಜಯ ಕರ್ನಾಟಕ, ದಿನಾಂಕ:17.03.2021

## 23. ಹಲವು ನಗರಗಳಲ್ಲಿ ಮತ್ತೆ ರಾತ್ರಿ ಕರ್ಫ್ಯೂ

ನೈಟ್ ಕರ್ಫ್ಯೂ ಕೊರೋನಾ ಪುನಃ ಮೈಕೊಡವಿ ಎದ್ದೇಳುತ್ತಿದ್ದಂತೆಯೇ ದೇಶದಲ್ಲಿ 'ರಾತ್ರಿಕರ್ಫ್ಯೂ'ಗೆ ಮೊರೆ ಹೋಗುವ ಪ್ರಸಂಗಗಳು ಹೆಚ್ಚಾಗಿವೆ. ಮುಂಬೈ ಪುಣೆ ಬೆನ್ನಲ್ಲೇ ಈಗ ಮಧ್ಯಪ್ರದೇಶ ಮತ್ತು ಗುಜರಾತ್‌ನ ಕೆಲವು ಜಿಲ್ಲೆಗಳು ಕಟ್ಟುನಿಟ್ಟಾಗಿ ರಾತ್ರಿ ಕರ್ಫ್ಯೂ ಜಾರಿಗೊಳಿಸಿವೆ.

ಹೆಚ್ಚುತ್ತಿರುವ ಕೊರೋನಾವನ್ನು ಕಟ್ಟಿಹಾಕುವ ಸಲುವಾಗಿ ಭೋಪಾಲ್ ಮತ್ತು ಇಂದೋರ್‌ನಲ್ಲಿ ಮಾರ್ಚ್ 17ರಿಂದ ನೈಟ್‌ಕರ್ಫ್ಯೂ ಜಾರಿಗೊಳ್ಳಲಿದೆ. ರಾತ್ರಿ 10ರಿಂದ ಬೆಳಗ್ಗೆ 6 ರವರೆಗೆ ಜನ-ವಾಹನಗಳ ಅನಗತ್ಯ ಓಡಾಟಕ್ಕೆ ನಿರ್ಬಂಧ ವಿಧಿಸಲಾಗಿದೆ. ಸಿಎಂ ಶಿವರಾಜ್ ಸಿಂಗ್ ಚೌಹಾಣ್ ತುರ್ತು ಕ್ಯಾಬಿನೆಟ್ ಸಭೆ ಕರೆದು, ಈ ನಿಲುವು ಪ್ರಕಟಿಸಿದ್ದಾರೆ.

ಇತರೆ 8 ನಗರಗಳಾದ ಗ್ವಾಲಿಯರ್, ಜಬಲ್ಪುರ, ಉಜ್ಜೈನ್, ರಟ್ಲಾಮ್, ಛಿಂದ್ವಾರಾ, ಬುರ್ಹಾನ್‌ಪುರ್, ಬೆತುಲ್ ಮತ್ತು ಖಾರ್‌ಗೊನ್‌ಗಳಲ್ಲಿ ಬಿಗಿನಿಯಮ ಜಾರಿಗೊಂಡಿದೆ. ರಾತ್ರಿ 10ರ ನಂತರ ಎಲ್ಲ ರೀತಿಯ ಅಂಗಡಿ ಮುಚ್ಚಲು ಸೂಚಿಸಲಾಗಿದೆ.

**ನೈಟ್‌ಕರ್ಫ್ಯೂ ಕಾಲ ವಿಸ್ತರಣೆ:** ಇನ್ನೊಂದೆಡೆ, ಭಾಗಶಃ ನೈಟ್‌ಕರ್ಫ್ಯೂ ಜಾರಿಯಲ್ಲಿದ್ದ ಗುಜರಾತ್‌ನ 4 ನಗರಗಳಲ್ಲಿ ನೈಟ್‌ಕರ್ಫ್ಯೂ ಕಾಲಾವಧಿ ಹೆಚ್ಚಿಸಲಾಗಿದೆ. ಅಹ್ಮದಾಬಾದ್, ಸೂರತ್, ವಡೋದರಾ, ರಾಜ್‌ಕೋಟ್‌ನಲ್ಲಿ ರಾತ್ರಿ 10ರಿಂದ ಬೆಳಗ್ಗೆ 6ರ ವರೆಗೆ ನೈಟ್‌ಕರ್ಫ್ಯೂ ಇರಲಿದೆ.

24,492 ಹೊಸ ಕೇಸ್: ಸತತ 6ನೇ ದಿನ ಭಾರತದಲ್ಲಿ 20 ಸಾವಿರ ಸೋಂಕಿತರ ಗಡಿ ದಾಟಿದ್ದು, ಕಳೆದ 24 ಗಂಟೆಗಳಲ್ಲಿ 24,492 ಮಂದಿಗೆ ಕೊರೋನಾ ಪಾಸಿಟಿವ್ ದೃಢಪಟ್ಟಿದೆ. ಈ ನಡುವೆ 131 ಮಂದಿ ಸೋಂಕಿನಿಂದ ಜೀವ ತೆತ್ತಿದ್ದಾರೆ ಎಂದು ಆರೋಗ್ಯ ಸಚಿವಾಲಯ ತಿಳಿಸಿದೆ. ಮುಂಬೈ ಧಾರಾವಿ ಸ್ಲಮ್‌ನಲ್ಲಿ 5 ತಿಂಗಳ ಬಳಿಕ ಅತಿಹೆಚ್ಚು ಎಂಬಂತೆ 21 ಮಂದಿಗೆ ಸೋಂಕು ದೃಢಪಟ್ಟಿದೆ.

**ಇಂದು ಸಿಎಂಗಳ ಜೊತೆ ಪ್ರಧಾನಿ ಮೋದಿ ಸಭೆ**

ಪ್ರಧಾನಿ ಮೋದಿ ಮತ್ತು ಮುಖ್ಯ ಮಂತ್ರಿಗಳ ಸಭೆಯ ಬಳಿಕ ರಾಜಯದಲ್ಲಿ ಕಠಿಣ ನಿಯಮ ಜಾರಿ ಕುರಿತು ನಿರ್ಧಾರ ಕೈಗೊಳ್ಳಲಾಗುತ್ತದೆ ಎಂದು ಆರೋಗ್ಯ ಮತ್ತು ವೈದ್ಯಕೀಯ ಶಿಕ್ಷಣ ಸಚಿವ ಡಾ.ಕೆ.ಸುಧಾಕರ್ ತಿಳಿಸಿದರು.

ವಿವಿಧ ರಾಜ್ಯಗಳ ಮುಖ್ಯ ಮಂತ್ರಿಗಳ ಜೊತೆಗೆ ಪ್ರಧಾನಿ ಮೋದಿ ಸಭೆ ನಡೆಸಲಿದ್ದಾರೆ. ಆ ಸಭೆ ಬಳಿಕ ರಾಜ್ಯದಲ್ಲಿ ಎರಡನೇ ಅಲೆ ತಡೆಗಟ್ಟಲು ಕಠಿಣ ಕ್ರಮಗಳನ್ನು ಜಾರಿಗೊಳಿಸಲು ನಿರ್ಧರಿಸಲಾಗುತ್ತದೆ. ಬಹಿರಂಗ ಸಭೆ ಸಮಾರಂಭಗಳಿಗೆ ಕಠಿಣ ನಿಯಮ ಜಾರಿ ವಿಚಾರ ಕೂಡ ಆ ಬಳಿಕ ನಿರ್ಧಾರ ಆಗಲಿದೆ ಎಂದರು.

**ಸಾವಿರ ದಾಟಿದ ಸೋಂಕು**

ಮೂರು ತಿಂಗಳಲ್ಲಿ ಕಡಿಮೆಯಾಗಿದ್ದ ಕೊರೋನಾ ಸೋಂಕು ಒಂದು ಸಾವಿರ ಗಡಿದಾಟಿದೆ. 1.135 ಮಂದಿಗೆ ಸೋಂಕು ತಗುಲಿದ್ದು, ಆರು ಸೋಂಕಿತರು ಚಿಕಿತ್ಸೆ ಫಲಕಾರಿಯಾಗದೇ ಮೃತಪಟ್ಟಿದ್ದಾರೆ. ಕಳೆದ ವರ್ಷ ಡಿಸೆಂಬರ್ 25ರಂದು 1,005 ಹೊಸ ಪ್ರಕರಣಗಳು ಇಳಿಮುಖವಾಗಿ ಸಾಗಿ, 200 ಆಸುಪಾಸಿಗೆ ತಲುಪಿದ್ದವು. ಅತಿ ಹೆಚ್ಚು ಪ್ರಕರಣಗಳು ಬೆಂಗಳೂರಿನಲ್ಲಿ 710, ಮೈಸೂರು 58, ದಕ್ಷಿಣ ಕನ್ನಡ 50ರಷ್ಟು ದಾಖಲಾಗಿದೆ.

ಕೊರೋನಾ ಸೋಂಕಿನ ಅಬ್ಬರ ಹೆಚ್ಚಿರುವ ಹಿನ್ನೆಲೆಯಲ್ಲಿ ಮಹಾರಾಷ್ಟ್ರದ ನಾಗ್ಪುರದಲ್ಲಿ ಸಂಪೂರ್ಣ ಲಾಕ್‌ಡೌನ್ ಹೇರಲಾಗಿದ್ದು, ಜನ ಸಂದಣಿ ವಾಹನ ದಟ್ಟಣೆಯಿಂದ ಸದಾ ತುಂಬಿ ತುಳುಕಿರುತ್ತಿದ್ದ ಬರ್ಡೀ ಫ್ಲೈಓವರ್ ಬಿಕೋ ಎನ್ನುತ್ತಿತ್ತು.

ಆಧಾರ: ಉದಯವಾಣಿ, ದಿನಾಂಕ:17.03.2021

## 24. ಹಿಮಾಚಲ ಪ್ರದೇಶದ ಬಿಜೆಪಿ ಸಂಸದ ರಾಮ್ ಸ್ವರೂಪ್ ಶರ್ಮಾ ಆತ್ಮಹತ್ಯೆ

ಹಿಮಾಚಲ ಪ್ರದೇಶದ ಬಿಜೆಪಿ ಸಂಸದ ರಾಮ್ ಸ್ವರೂಪ್ ಶರ್ಮಾ (62) ಅವರು ದಿಲ್ಲಿಯ ನಿವಾಸದಲ್ಲಿ ನೇಣು ಬಿಗಿದ ಸ್ಥಿತಿಯಲ್ಲಿ ಮೃತಪಟ್ಟಿದ್ದು, ಆತ್ಮಹತ್ಯೆಗೆ ಶರಣಾಗಿರಬಹುದೆಂದು ಶಂಕಿಸಲಾಗಿದೆ.

ಸೀಲಿಂಗ್ ಫ್ಯಾನ್‌ಗೆ ನೇತಾಡುತ್ತಿದ್ದ ಶರ್ಮಾ ಅವರನ್ನು ಕೂಡಲೇ ಆಸ್ಪತ್ರೆಗೆ ಸಾಗಿಸಲಾಯಿತಾದರೂ, ಆಸ್ಪತ್ರೆಗೆ ಕರೆತರುವ ಮೊದಲೇ ಮೃತಪಟ್ಟಿದ್ದಾರೆ ಎಂದು ವೈದ್ಯರು ತಿಳಿಸಿದ್ದಾರೆ. ಸಾವಿಗೆ ನಿಖರ ಕಾರಣ ತಿಳಿದು ಬಂದಿಲ್ಲ. ಮೃತದೇಹವನ್ನು ಮರಣೋತ್ತರ ಪರೀಕ್ಷೆಗಾಗಿ ಕಳುಹಿಸಲಾಗಿದೆ. ತೀವ್ರ ಅನಾರೋಗ್ಯ ಸಮಸ್ಯೆಗಳಿಂದ ಶರ್ಮಾ ಬಳಲುತ್ತಿದ್ದರು ಎಂದು ಕುಟುಂಬ ಮೂಲಗಳು ತಿಳಿಸಿವೆ. ಶರ್ಮಾ ಅವರ ಸಾವಿನ ಹಿನ್ನೆಲೆಯಲ್ಲಿ ನಿಗದಿಯಾಗಿದ್ದ ಬಿಜೆಪಿ ಸಂಸದೀಯ ಪಕ್ಷದ ಸಭೆಯನ್ನು ಮುಂದೂಡಲಾಗಿದೆ.

ಶರ್ಮಾ ಅವರು ದಿಲ್ಲಿ ನಿವಾಸದಲ್ಲಿ ಒಂಟಿಯಾಗಿದ್ದರು. ಅವರ ಪತ್ನಿ ತೀರ್ಥಯಾತ್ರೆಗೆ ತೆರಳಿದ್ದರು. ಕಳೆದ ಆರು ತಿಂಗಳಿನಿಂದ ಅವರು ತೀವ್ರ ಖಿನ್ನತೆಯಿಂದ ಬಳಲುತ್ತಿದ್ದರು ಮತ್ತು ಚಿಕಿತ್ಸೆ ಪಡೆಯುತ್ತಿದ್ದರು ಎನ್ನಲಾಗಿದೆ.

ಪ್ರಧಾನಿ ಮೋದಿ ಅವರು ರಾಮ್ ಸ್ವರೂಪ್ ಶರ್ಮಾ ಅವರ ನಿಧಾನಕ್ಕೆ ಸಂತಾಪ ಸೂಚಿಸಿದ್ದಾರೆ. ಹಿಮಾಚಲ ಪ್ರದೇಶದ ಮಂಡಿ ಜಿಲ್ಲೆಯಲ್ಲಿ 1958ರಲ್ಲಿ ಜನಿಸಿದ್ದ ಶರ್ಮಾ, 2014ರಲ್ಲಿ ಮೊದಲ ಬಾರಿ ಸಂಸತ್ತಿಗೆ ಆಯ್ಕೆಯಾಗಿದ್ದರು. 2019ರ ಚುನಾವಣೆಯಲ್ಲಿ ಅವರು ಮಂಡಿಯಿಂದ ಎರಡನೆ ಬಾರಿ ಚುನಾಯಿತರಾಗಿದ್ದರು. ವಿದೇಶಾಂಗ ವ್ಯವಹಾರಗಳ ಸಂಸದೀಯ ಸ್ಥಾಯಿ ಸಮಿತಿಯಲ್ಲಿ ಅವರು ಕಾರ್ಯನಿರ್ವಹಿಸಿದ್ದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:18.03.2021

## 25. ಕೋವಿಡ್: ಸಕ್ರಿಯ ಪ್ರಕರಣ ಮತ್ತಷ್ಟು ಏರಿಕೆ

ರಾಜ್ಯದಲ್ಲಿ ಸತತ ಆರನೇ ದಿನ ಕೂಡ ಹೊಸ ಪ್ರಕರಣಗಳ ಸಂಖ್ಯೆ ಸಾವಿರದ ಗಡಿ ದಾಟಿದ್ದು, 1,715 ಮಂದಿ ಸೋಂಕಿತರಾಗಿರುವುದು ದೃಢಪಟ್ಟಿದೆ. ಇದರಿಂದಾಗಿ ಸಕ್ರಿಯ ಪ್ರಕರಣಗಳ ಸಂಖ್ಯೆ 13,493ಕ್ಕೆ ಏರಿಕೆಯಾಗಿದೆ.

ಕಳೆದ ತಿಂಗಳು ಈ ವೇಳೆಗೆ ಸಕ್ರಿಯ ಪ್ರಕರಣಗಳ ಸಂಖ್ಯೆ 6,036ಕ್ಕೆ ಇಳಿಕೆಯಾಗಿತ್ತು. ಕೋವಿಡ್ ಪ್ರಕರಣಗಳ ಸಂಖ್ಯೆ ದುಪ್ಪಟ್ಟಾಗಿದೆ. ಆರು ದಿನಗಳಲ್ಲಿ 9,000 ಮಂದಿ ಸೋಂಕಿತರಾಗಿದ್ದಾರೆ. ಸೋಂಕಿತರಾಗಿರುವುದು ಖಚಿತಪಟ್ಟಿದೆ. ಈ ತಿಂಗಳು 21 ದಿನಗಳಲ್ಲಿ 19,077 ಮಂದಿ ಕೊರೋನ ಸೋಂಕಿತರಾಗಿದ್ದಾರೆ. ಸೋಂಕಿತರಲ್ಲಿ ಸದ್ಯ 137 ಮಂದಿ ತೀವ್ರ ನಿಗಾಘಟಕದಲ್ಲಿ ಇದ್ದಾರೆ. ಈವರೆಗೆ ಸೋಂಕಿತರಾದವರ ಸಂಖ್ಯೆ 9.70 ಲಕ್ಷ ದಾಟಿದೆ.

ಕೋವಿಡ್ ಪೀಡಿತರಲ್ಲಿ ಬೆಂಗಳೂರಿನಲ್ಲಿ ಹಾಗೂ ಬೀದರ್‌ನಲ್ಲಿ ತಲಾ ಒಬ್ಬರು ಮೃತಪಟ್ಟಿದ್ದಾರೆ. ಈವರೆಗೆ ಸಾವಿಗೀಡಾದವರ ಸಂಖ್ಯೆ 12,434ಕ್ಕೆ ತಲುಪಿದೆ. ಸೋಂಕಿತರಲ್ಲಿ ಮತ್ತೆ 1,048 ಮಂದಿ ಚೇತರಿಸಿಕೊಂಡಿದ್ದಾರೆ. ಗುಣಮುಖರಾದವರ ಒಟ್ಟು ಸಂಖ್ಯೆ 9.44 ಲಕ್ಷ ದಾಟಿದೆ. ಕೋವಿಡ್ ಪರೀಕ್ಷೆಗಳ ಸಂಖ್ಯೆ ಏರಿಕೆ ಕಂಡಿದ್ದು, ಒಂದು ದಿನದ ಅವಧಿಯಲ್ಲಿ 1.01 ಲಕ್ಷ ಮಂದಿಗೆ ಪರೀಕ್ಷೆ ಮಾಡಲಾಗಿದೆ. ಈವರೆಗೆ ನಡೆಸಲಾದ ಪರೀಕ್ಷೆಗಳ ಸಂಖ್ಯೆ 2.03 ಕೋಟಿ ಗಡಿ ದಾಟಿದೆ.

**29 ಜಿಲ್ಲೆಗಳಲ್ಲಿ ಪ್ರಕರಣ:** ಕೊಪ್ಪಳ ಹೊರತುಪಡಿಸಿ ರಾಜ್ಯದ ಎಲ್ಲ ಜಿಲ್ಲೆಗಳಲ್ಲಿ ಹೊಸದಾಗಿ ಪ್ರಕರಣಗಳು ವರದಿಯಾಗಿವೆ. ಬೆಂಗಳೂರಿನಲ್ಲಿ ಸೋಂಕಿತರ ಸಂಖ್ಯೆ ಏರುಗತಿ ಪಡೆದುಕೊಂಡಿದೆ. ಹೊಸದಾಗಿ 1,039 ಪ್ರಕರಣಗಳು ವರದಿಯಾಗಿವೆ. ಮೂರು ದಿನಗಳ ಅವಧಿಯಲ್ಲಿ 3,262 ಮಂದಿ ಸೋಂಕಿತರಾಗಿದ್ದಾರೆ. ಈವರೆಗೆ ಕೋವಿಡ್ ಪೀಡಿತರಾದವರ ಸಂಖ್ಯೆ 4.17 ಲಕ್ಷ ದಾಟಿದೆ.

ಉಡುಪಿಯಲ್ಲಿ ಕೂಡ ಸೋಂಕಿತರ ಸಂಖ್ಯೆ ಏರುಗತಿ ಪಡೆದುಕೊಂಡಿದ್ದು, ಹೊಸದಾಗಿ 170 ಪ್ರಕರಣಗಳು ದೃಢಪಟ್ಟಿವೆ. ಮೈಸೂರಿನಲ್ಲಿ ಮತ್ತೆ 70 ಪ್ರಕರಣಗಳು ದೃಢಪಟ್ಟಿವೆ. ಅಲ್ಲಿ ಕೋವಿಡ್ ಪೀಡಿತರಾದವರ ಒಟ್ಟು ಸಂಖ್ಯೆ 54,811ಕ್ಕೆ ತಲುಪಿದೆ. ಬೀದರ್‌ನಲ್ಲಿ 61, ದಕ್ಷಿಣ ಕನ್ನಡದಲ್ಲಿ 54, ಕಲಬುರ್ಗಿಯಲ್ಲಿ 41, ಹಾಸನದಲ್ಲಿ 40 ಪ್ರಕರಣಗಳು ಹೊಸದಾಗಿ ವರದಿಯಾಗಿವೆ.

ರಾಜ್ಯದಲ್ಲಿ 781 ಕೇಂದ್ರಗಳಲ್ಲಿ ಕೋವಿಡ್ ಲಸಿಕೆ ವಿತರಣೆ ಅಭಿಯಾನ ನಡೆದಿದ್ದು, 11,948 ಮಂದಿಗೆ ಲಸಿಕೆ ವಿತರಣೆ ಮಾಡಲಾಗಿದೆ. ಲಸಿಕೆ ಪಡೆದವರಲ್ಲಿ 7,933 ಮಂದಿ ಹಿರಿಯ ನಾಗರಿಕರಾಗಿದ್ದಾರೆ. ಈವರೆಗೆ 24.67 ಲಕ್ಷ ಡೋಸ್ ಲಸಿಕೆಯನ್ನು ಫಲಾನುಭವಿಗಳಿಗೆ ನೀಡಲಾಗಿದೆ. 5.21 ಲಕ್ಷ ಆರೋಗ್ಯ ಕಾರ್ಯಕರ್ತರು ಮೊದಲ ಡೋಸ್ ಲಸಿಕೆ ಪಡೆದುಕೊಂಡಿದ್ದಾರೆ. ಇವರಲ್ಲಿ 3.17 ಲಕ್ಷ ಮಂದಿ ಎರಡನೇ ಡೋಸ್ ಪೂರ್ಣಗೊಳಿಸಿದ್ದಾರೆ. ಲಸಿಕೆ ಪಡೆದುಕೊಂಡ ಹಿರಿಯ ನಾಗರಿಕರ ಸಂಖ್ಯೆ 10.90 ಲಕ್ಷ ತಲುಪಿದೆ.

ಆಧಾರ: ವಿಜಯವಾಣಿ, ದಿನಾಂಕ:22.03.2021

## 26. ಬಿಹಾರದಲ್ಲಿ ಪೊಲೀಸ್ ಬಿಲ್ ಗದ್ದಲ

ಪೊಲೀಸ್ ವ್ಯವಸ್ಥೆಗೆ ಬಲತುಂಬುವ ಬಿಹಾರ ವಿಶೇಷ ಸಶಸ್ತ್ರ ಪೊಲೀಸ್ ಮಸೂದೆ 2021 ಅನ್ನು ಸರ್ಕಾರ ವಿಧಾನ ಸಭೆಯಲ್ಲಿ ಮಂಡಿಸಿದೆ. ಇದನ್ನು ಕರಾಳ ಮಸೂದೆ ಎಂದು ಬಣ್ಣಿಸಿರುವ ಆರ್‌ಜೆಡಿ, ಕಾಂಗ್ರೆಸ್ ಮತ್ತು ಇತರೆ ಪಕ್ಷಗಳನ್ನು ಒಳಗೊಂಡ ಮಹಾಮೈತ್ರಿ ನಾಯಕರು ಸದನದ ಒಳಗೆ ಮತ್ತು ಹೊರಗೆ ತೀವ್ರ ಪ್ರತಿಭಟನೆ ನಡೆಸಿದರು. ಇದರ ನಡುವಿನ ನಾಟಕೀಯ ಬೆಳವಣಿಗೆಯಲ್ಲಿ ಪ್ರತಿಪಕ್ಷ ಸದಸ್ಯರು  ಸ್ಪೀಕರ್ ವಿಜಯ ಕುಮಾರ್ ಸಿನ್ಹಾ ಅವರನ್ನೇ ಒತ್ತೆಯಾಳನ್ನಾಗಿರಿಸಿದ ವಿಲಕ್ಷಣ ಸನ್ನಿವೇಶವೂ ಕಂಡುಬಂತು.

ಆರ್‌ಜೆಡಿ ನಾಯಕ ತೇಜಸ್ವಿ ಯಾದವ್ ನೇತೃತ್ವದಲ್ಲಿ ದಿಢೀರ್ ಪ್ರತಿಭಟನಾ ಮೆರವಣಿಗೆ ನಡೆಸಲಾಗಿತ್ತು. ಇದಕ್ಕೆ ಪೊಲೀಸ್ ಅನುಮತಿ ಪಡೆದಿರಲಿಲ್ಲ. ಪ್ರತಿಭಟನಾಕಾರರನ್ನು ತಡೆಯಲು ಪೊಲೀಸರು ಮುಂದಾದಾಗ ಕಲ್ಲೆಸತವೂ ಉಂಟಾಗಿತ್ತು. ಬಳಿಕ ಜಲಫಿರಂಗಿ ಬಳಸಿ ಪರಿಸ್ಥಿತಿ ನಿಯಂತ್ರಿಸಿದ ಪೊಲೀಸರು ನಾಯಕರನ್ನು ಬಂಧಿಸಿ, ಕೆಲಹೊತ್ತಿನ ಬಳಿಕ ಬಿಡುಗಡೆ ಮಾಡಿದರು. ವಿಧಾನ ಸೌಧದೊಳಗೆ ಮಾರ್ಷಲ್‌ಗಳಿಗೆ ಪರಿಸ್ಥಿತಿ ನಿಯಂತ್ರಿಸುವುದು ಕಷ್ಟವಾಗುತ್ತಿದೆ ಎಂಬ ಮಾಹಿತಿ ಲಭಿಸುತ್ತಲೇ, ಜಿಲ್ಲಾಧಿಕಾರಿ ಚಂದ್ರಶೇಖರ್ ಸಿಂಗ್, ಹಿರಿಯ ಜಿಲ್ಲಾ ಪೊಲೀಸ್ ಪರಿಷ್ಠಾಧಿಕಾರಿ ಉಪೇಂದ್ರ ಶರ್ಮಾ ವಿಧಾನ ಸೌಧಕ್ಕೆ ಆಗಮಿಸಿ ಪರಿಸ್ಥಿತಿ ನಿಯಂತ್ರಿಸಲು ಸಹಕರಿಸಿದರು.

ಆಧಾರ: ವಿಜಯವಾಣಿ, ದಿನಾಂಕ:24.03.2021

## 27. ಪಂಚರಾಜ್ಯ ಮತಸಮರ

ದೇಶದಾದ್ಯಂತ ತೀವ್ರ ಕುತೂಹಲ ಕೆರಳಿಸಿರುವ ನಾಲ್ಕು ರಾಜ್ಯಗಳು ಹಾಗೂ ಒಂದು ಕೇಂದ್ರಾಡಳಿತ ಪ್ರದೇಶದ ವಿಧಾನ ಸಭೆ ಚುನಾವಣೆಗೆ ಮುಹೂರ್ತ ನಿಗದಿಯಾಗಿದೆ. ಅಸ್ಸಾಂ, ಪಶ್ಚಿಮ ಬಂಗಾಳ, ಕೇರಳ, ತಮಿಳುನಾಡು ಮತ್ತು ಪುದುಚೇರಿಗಳ ಒಟ್ಟು 824 ವಿಧಾನ ಸಭಾ ಕ್ಷೇತ್ರಗಳಿಗೆ ಮಾರ್ಚ್ 27ರಿಂದ ಏಪ್ರಿಲ್ 29ರವರೆಗೆ ಗರಿಷ್ಠ 8 ಹಂತಗಳಲ್ಲಿ ಮತದಾನ ನಡೆಯಲಿದ್ದು, ಮೇ 2ಕ್ಕೆ ಫಲಿತಾಂಶ ಹೊರಬೀಳಲಿದೆ. ಈ ನಾಲ್ಕು ರಾಜ್ಯ ಮತ್ತು ಒಂದು ಕೇಂದ್ರಾಡಳಿತ ಪ್ರದೇಶದ ವ್ಯಾಪ್ತಿಯಲ್ಲಿ 18.68 ಕೋಟಿ ಅರ್ಹ ಮತದಾರರಿದ್ದಾರೆ. ಮತದಾನಕ್ಕಾಗಿ 2.7ಲಕ್ಷ ಮತಗಟ್ಟೆ ಸ್ಥಾಪಿಸಲಾಗುತ್ತಿದೆ ಎಂದು ಕೇಂದ್ರ ಚುನಾವಣಾ ಆಯೋಗದ ಮುಖ್ಯ ಚುನಾವಣಾ ಆಯುಕ್ತ ಸುನೀಲ್ ಅರೋರಾ ಸುದ್ದಿಗೋಷ್ಠಿಯಲ್ಲಿ ತಿಳಿಸಿದರು. ಪಶ್ಚಿಮ ಬಂಗಾಳದಲ್ಲಿ ಹೆಚ್ಚುತ್ತಿರುವ ರಾಜಕೀಯ ಹಿಂಸಾಚಾರದ ವಿಚಾರವಾಗಿ ಪ್ರತಿಕ್ರಿಯಿಸಿದ ಅವರು, ಬಂಗಾಳ ಚುನಾವಣೆಗೆ ಇಬ್ಬರು ವಿಶೇಷ ವೀಕ್ಷಕರನ್ನು ನೇಮಕ ಮಾಡಲಾಗುತ್ತದೆ. ಅವಶ್ಯಕತೆ ಇದ್ದರೆ ಮೂರನೇ ವೀಕ್ಷಕರೂ ನೇಮಕವಾಗಲಿದ್ದಾರೆ ಎಂದರು.

ಆಧಾರ: ಉದಯವಾಣಿ, ದಿನಾಂಕ:24.03.2021

## 28. ಎರಡು ಬಾರಿ ರೂಪಾಂತರಿತ ವೈರಸ್ ಪತ್ತೆ

ಎರಡು ಬಾರಿ ರೂಪಾಂತರಗೊಂಡಿರುವ ಕೊರೋನಾ ವೈರಸ್‌ನ ತಳಿಗಳು ಮಹಾರಾಷ್ಟ್ರದಲ್ಲಿ ಪತ್ತೆಯಾಗಿವೆ ಎಂದು ಕೇಂದ್ರ ಆರೋಗ್ಯ ಸಚಿವಾಲಯ ದೃಢಪಡಿಸಿದೆ. ಎರಡು ಬಾರಿ ರೂಪಾಂತರಗೊಂಡಿರುವ ಕಾರಣ, ವ್ಯಕ್ತಿಯ ದೇಹದಲ್ಲಿರುವ ರೋಗ ನಿರೋಧಕ ಶಕ್ತಿಗೂ ಈ ವೈರಸ್ ಮಣಿಯುವುದಿಲ್ಲ. ರೋಗನಿರೋಧಕ ಶಕ್ತಿಯು ಹೆಚ್ಚು ನಿಷ್ಕ್ರಿಯಗೊಳ್ಳಲು ಸಹ ರೂಪಾಂತರಿತ ವೈರಸ್ ಕಾರಣವಾಗುವುದು ಎಂದೂ ಸಚಿವಾಲಯ ವಿಶ್ಲೇಷಿಸಿದೆ.

ಮಹಾರಾಷ್ಟ್ರದಲ್ಲಿ ಕಳೆದ ಕೆಲವು ದಿನಗಳಿಂದ ಕೋವಿಡ್ ಪ್ರಕರಣಗಳು ಹೆಚ್ಚಾಗಲು, ಎರಡು ಬಾರಿ ರೂಪಾಂತರಗೊಂಡಿರುವ ಈ ವೈರಸ್ ಕಾರಣ ಎಂದು ಸಚಿವಾಲಯ ಹೇಳಿಲ್ಲ. ಇಂಥ ನಿರ್ಧಾರಕ್ಕೆ ಬರಲು ಸಾಕಷ್ಟು ವೈಜ್ಞಾನಿಕ ಪುರಾವೆಗಳು ಇಲ್ಲ ಎಂದು ಹೇಳಿದೆ.

'ಮಹಾರಾಷ್ಟ್ರದಲ್ಲಿ ಈಗ ವರದಿಯಾಗಿರುವ ಪ್ರಕರಣಗಳ ಪೈಕಿ, ವಿಶ್ಲೇಷಣೆಗೆ ಒಳಪಡಿಸಿರುವ ಶೇ. 15–20ರಷ್ಟು ಮಾದರಿಗಳಲ್ಲಿ ಮಾತ್ರ ಎರಡು ಬಾರಿ ರೂಪಾಂತರಿತ ವೈರಸ್ ಕಂಡು ಬಂದಿದೆ' ಎಂದು ನ್ಯಾಷನಲ್ ಸೆಂಟರ್ ಫಾರ್ ಡಿಸೀಸ್ ಕಂಟ್ರೋಲ್‌ನ ನಿರ್ದೇಶಕ ಸುಜಿತ್ ಸಿಂಗ್ ಹೇಳಿದರು. ಇಷ್ಟು ಅಲ್ಪ ಪ್ರಮಾಣದ ಮಾದರಿ ವಿಶ್ಲೇಷಣೆಯನ್ನು ಆಧಾರವಾಗಿಟ್ಟುಕೊಂಡು, ಕೋವಿಡ್ ಪ್ರಕರಣಗಳ ಹೆಚ್ಚಳಕ್ಕೆ ರೂಪಾಂತರಿತ ವೈರಸ್ ಕಾರಣ ಎಂದು ಹೇಳಲಾಗದು' ಎಂದು ಹೇಳಿದರು.

ನಾಗಪುರದ ಎಂಟು ವಾರ್ಡ್‌ಗಳಿಗೆ ಸಂಬಂಧಿಸಿದ ಮಾದರಿಗಳ ಪೈಕಿ ಶೇ.20 ಮಾದರಿಗಳಲ್ಲಿ ಈ ರೂಪಾಂತರಿತ ವೈರಸ್ ಪತ್ತೆಯಾಗಿದೆ ಎಂದು ಸಚಿವಾಲಯ ಹೇಳಿದೆ.

ಆಧಾರ: ಪ್ರಜಾವಾಣಿ, ದಿನಾಂಕ:25.03.2021

# ಭಾಗ-9

# ಅಂತರರಾಷ್ಟ್ರೀಯ ಸುದ್ದಿಗಳು

## 1. ಸ್ಪೀಕರ್ ಸ್ಥಾನಕ್ಕೆ ನ್ಯಾನ್ಸಿ ಪೆಲೂಸಿ ಆಯ್ಕೆ

ಡೆಮಾಕ್ರಟಿಕ್ ಪಕ್ಷದ ಹಿರಿಯ ಸಂಸದೆ ನ್ಯಾನ್ಸಿ ಪೆಲೂಸಿ ಅವರು ನಾಲ್ಕನೇ ಬಾರಿಗೆ ಅಮೆರಿಕದ ಸಂಸತ್‌ನ ಹೌಸ ಆಫ್ ರೆಪ್ರಸೆಂಟೇಟಿವ್‌ನ (ಕೆಳಮನೆ) ಸ್ಪೀಕರ್ ಆಗಿ ಪುನರಾಯ್ಕೆಯಾಗಿದ್ದಾರೆ.

ಪೆಲೂಸಿ ಅವರು ಅಧಿಕಾರ ಸ್ವೀಕರಿಸಿದ್ದಾರೆ. 80ರ ಹರೆಯದ ಪೆಲೂಸಿ, 216ರ ಮತಗಳನ್ನು ಪಡೆಯುವ ಮೂಲಕ, ತನ್ನ ಪ್ರತಿಸ್ಪರ್ಧಿ ರಿಪಬ್ಲಿಕನ್ ಪಕ್ಷದ ಕೆವಿನ್ ಮೆಕ್‌ಕಾರ್ತಿ ಅವರ ವಿರುದ್ಧ ವಿಜೇತರಾಗಿದ್ದಾರೆ. ಹೌಸ್ ಅಪಕ್ಲರ್ಕ್ ಪ್ರಕಾರ, ಒಟ್ಟು 427 ಮತಗಳು ಚಲಾವಣೆಯಾಗಿವೆ. ಇದನ್ನು ಗೌರವವೆಂದು ಭಾವಿಸುತ್ತೇನೆ. ಜನರಿಗಾಗಿ ನನ್ನ ಕೆಲಸ ಮುಂದುವರಿಯಲಿದೆ' ಎಂದು ಪೆಲೂಸಿ ಟ್ವೀಟ್ ಮಾಡಿದ್ದಾರೆ.

ಆಧಾರ: ಪ್ರಜಾವಾಣಿ, ದಿನಾಂಕ:05.01.2021.

## 2. ಅಮೆರಿಕ ಶೇಮ್

ಅಮೆರಿಕದ ಇತಿಹಾಸದಲ್ಲೇ ಕಂಡು ಕೇಳರಿಯದಂತಹ ರಾಜಕೀಯ ಸಂಘರ್ಷದ ನಡುವೆಯೇ ನಿಯೋಜಿತ ಅಧ್ಯಕ್ಷ ಜೋ ಬೈಡನ್ ಅವರ ಚುನಾವಣಾ ಗೆಲುವನ್ನು ಯುಎಸ್ ಕಾಂಗ್ರೆಸ್ ಅಧಿಕೃತವಾಗಿ ಪ್ರಮಾಣೀಕರಿಸಿದೆ.

ಚುನಾವಣಾ ಫಲಿತಾಂಶದ ವಿರುದ್ಧ ಸೆಡ್ಡು ಹೊಡೆದು ಹಿಂಸಾಚಾರಕ್ಕೆ ಕುಮ್ಮಕ್ಕು ನೀಡಿದ್ದ ಅಧ್ಯಕ್ಷ ಡೋನಾಲ್ಡ್ ಟ್ರಂಪ್, ಈ ಎಲ್ಲಾ ಕೋಲಾಹಲದ ಬಳಿಕ ಸುಗಮವಾಗಿ ಅಧಿಕಾರ ಹಸ್ತಾಂತರ ಮಾಡಲು ಒಪ್ಪಿಕೊಂಡಿದ್ದಾರೆ. ಎಲ್ಲವೂ ಅಂದುಕೊಂಡಂತೆ ನಡೆದರೆ, ಜನವರಿ 20ರಂದು ಅಧ್ಯಕ್ಷರಾಗಿ ಬೈಡನ್, ಉಪಾಧ್ಯಕ್ಷರಾಗಿ ಕಮಲಾ ಹ್ಯಾರಿಸ್ ಪ್ರಮಾಣ ಸ್ವೀಕರಿಸಲಿದ್ದಾರೆ, ಆದರೆ ಬುಧವಾರ ರಾತ್ರಿ ನಡೆದ ಘಟನೆಯು ಅಮೆರಿಕ ಇತಿಹಾಸದ ಪುಟಗಳಲ್ಲಿ ಕರಾಳ ಅಧ್ಯಾಯವಾಗಿ ಸೇರ್ಪಡೆಗೊಂಡಿದೆ.

**ಸಂಸತ್ ಭವನಕ್ಕೆ ಮುತ್ತಿಗೆ:** ಬೈಡನ್ ಎಲೆಕ್ಟೋರಲ್ ಕಾಲೇಜಿನ ಮತಗಳಿಕೆಯನ್ನು ಅಧಿಕೃತವಾಗಿ ಘೋಷಿಸಿ ಗೆಲುವನ್ನು ಪ್ರಮಾಣೀಕರಿಸಲೆಂದು ಅಮೆರಿಕ ಕಾಂಗ್ರೆಸ್‌ನ ಜಂಟಿ ಅಧಿವೇಶನ ಆಯೋಜಿಸಲಾಗಿತ್ತು. ಆದರೆ, ಅಧಿವೇಶನ ಆರಂಭವಾಗುತ್ತಲೇ, ಏಕಾಏಕಿ ಸಾವಿರಾರು ಸಂಖ್ಯೆಯಲ್ಲಿ ಟ್ರಂಪ್ ಬೆಂಬಲಿಗರು ಸಂಸತ್ ಭವನ(ಕ್ಯಾಪಿಟಲ್ ಹಿಲ್)ಕ್ಕೆ ಮುತ್ತಿಗೆ ಹಾಕಿದರು. ಫಲಿತಾಂಶದ ಪ್ರಮಾಣೀಕರಣವನ್ನು ತಡೆಯುವುದೇ ಇವರ ಉದ್ದೇಶವಾಗಿತ್ತು. ಸೆನೆಟ್ ಚೇಂಬರ್‌ನ ಬಲಭಾಗದ ಕಟ್ಟಡವನ್ನು ಏರಿದ ಕಿಡಿಗೇಡಿಗಳು, ಅಲ್ಲಿದ್ದ ಭದ್ರತಾ ಅಧಿಕಾರಿಗಳನ್ನೂ ಲೆಕ್ಕಿಸದೇ ಚೇಂಬರ್‌ನೊಳಕ್ಕೆ ನುಗ್ಗಿದರು. ಕಿಟಕಿ-ಗಾಜುಗಳನ್ನು ಪುಡಿಗೈದು, ಡಯಾಸ್ ಮೇಲೆ ಹತ್ತಿ ಗೆದ್ದಿದ್ದು ಟ್ರಂಪ್ ಅಲ್ಲದೇ ಬೇರಾರೂ ಅಲ್ಲ, ಎಂದೂ ಕೂಗಿದರು. ಒಳಗಿದ್ದ ಕಚೇರಿಗಳನ್ನು ಲೂಟಿ ಮಾಡಿದರು. ಈ ಅನಿರೀಕ್ಷಿತ ಘಟನೆಯಿಂದ ಬೆಚ್ಚಿಬಿದ್ದಿದ್ದ ಸಂಸತ್ ಸದಸ್ಯರನ್ನು ಸಮಯಕ್ಕೆ ಸರಿಯಾಗಿ ಸುರಕ್ಷಿತ ಪ್ರದೇಶಕ್ಕೆ ಸ್ಥಳಾಂತರಿಸಲಾಗಿತ್ತು.

ಇಷ್ಟೆಲ್ಲ ಭಯಭೀತ ವಾತಾವರಣದ ನಡುವೆಯೂ, ಎದೆಗುಂದದ ಅಮೆರಿಕ ಕಾಂಗ್ರೆಸ್ ಸದಸ್ಯರು ಮತ್ತೆ ಸಭೆ ಸೇರಿ ಜೋ ಬೈಡನ್ ಅವರ ಚುನಾವಣಾ ಗೆಲುವನ್ನು ಅಧಿಕೃತವಾಗಿ ಪ್ರಮಾಣೀಕರಿಸಿದ್ದಾರೆ. ಮುಂಜಾವಿನವರೆಗೂ ನಡೆದ ಚರ್ಚೆಯ ಬಳಿಕ, ಎರಡು ಅಕ್ಷೇಪಗಳನ್ನು ತಿರಸ್ಕರಿಸಿ, ಅಂತಿಮ ಎಲೆಕ್ಟೋರಲ್ ಕಾಲೇಜು ಮತ( ಬೈಡನ್-306,ಟ್ರಂಪ್-232)ಗಳನ್ನು ಔಪಚಾರಿಕವಾಗಿ ಪ್ರಮಾಣೀಕರಿಸಿ, ಅಧಿಕಾರದೆಡೆಗಿನ ಬೈಡನ್ ಹಾದಿಯನ್ನು ಸುಗಮಗೊಳಿಸಿದ್ದಾರೆ.

ಆಧಾರ: ಉದಯವಾಣಿ, ದಿನಾಂಕ:08.01.2021.

## 3. ಶ್ವೇತಭವನಕ್ಕೆ ಕಪ್ಪು ಕಲೆ

ಜಗತ್ತಿನ ಅತಿ ಹಳೆಯ ಪ್ರಜಾಪ್ರಭುತ್ವ ಎನಿಸಿಕೊಂಡ ಅಮೆರಿಕದಲ್ಲಿ ಪ್ರಜಾಪ್ರಭುತ್ವಕ್ಕೆ ಅಪಚಾರ ಎಸಗುವಂಥ ಘಟನೆ ನಡೆದಿದೆ. ಅಮೇರಿಕದ ಇತಿಹಾಸದಲ್ಲೇ ಕಂಡಿರದ ಲಗ್ಗೆ, ಹಿಂಸಾಚಾರ ಮತ್ತು ಆತಂಕದ ವಾತಾವರಣವನ್ನು ನಿರ್ಗಮಿತ ಅಧ್ಯಕ್ಷ ಡೋನಾಲ್ಡ್ ಟ್ರಂಪ್ ಅವರ ಕರೆ ಮೇರೆಗೆ ಅವರ ಬೆಂಬಲಿಗರು ಸೃಷ್ಟಿಸಿದರು. ಸಂಸತ್ ಭವನಕ್ಕೆ ಏಕಾಏಕಿ ಸಾವಿರಾರು ಟ್ರಂಪ್ ಬೆಂಬಲಿಗರು ನುಗ್ಗಿ ದೊಂಬಿ ಮಾಡಿದರು. ರಾಷ್ಟ್ರಧ್ವಜಗಳನ್ನು ಹರಿದು ಹಾಕಿ ಕಿಟಕಿಗಳನ್ನು ಜಖಂಗೊಳಿಸಿ ಸಂಸದರ ಕಚೇರಿಗೆ ನುಗ್ಗಿದರು. ಹಿಂಸಾಚಾರವನ್ನು ತಡೆಯುವ ಯತ್ನದಲ್ಲಿ ಪೊಲೀಸರ ಗುಂಡಿಗೆ ನಾಲ್ಕು ಮಂದಿ ಮೃತರಾಗಿದ್ದರೆ. ಜೋ ಬೈಡೆನ್, ಕಮಲಾ ಹ್ಯಾರಿಸ್ ಅವರನ್ನು ನೂತನ ಅಧ್ಯಕ್ಷ ಹಾಗೂ ಉಪಾಧ್ಯಕ್ಷೆಯಾಗಿ ಸಂಸತ್ ಸದಸ್ಯರ ಎದುರು ಅಧಿಕೃತವಾಗಿ ಆಯ್ಕೆ ಮಾಡುವುದಕ್ಕಾಗಿ ರಿಪಬ್ಲಿಕನ್ ಮತ್ತು ಡೆಮಾಕ್ರಟಿಕ್ ಸಂಸದರು ಜಮಾವಣೆಯಾದ ಸಂದರ್ಭದಲ್ಲಿ ಇದು ನಡೆದಿದೆ. ಸಂಸದರನ್ನು ರಕ್ಷಿಸಲಾಗಿದೆ.

ಇದು ಅಮೆರಿಕದ ಪ್ರಜಾಪ್ರಭುತ್ವಕ್ಕೆ ಮಾತ್ರವಲ್ಲ; ಜಾಗತಿಕ ಇತಿಹಾಸದಲ್ಲೂ ಕಪ್ಪುಚುಕ್ಕೆ ಎನಿಸುವಂಥ ಘಟನೆ. ಡೋನಾಲ್ಡ್ ಟ್ರಂಪ್ ಅವರು ತಮ್ಮ ಬೆಂಬಲಿಗರ ದುಂಡಾವರ್ತಿಯನ್ನು ಖಂಡಿಸುವ ಗೋಜಿಗೂ ಹೋಗಿಲ್ಲ. ಹಲವಾರು ದಿನಗಳಿಂದ ಈ ದೊಂಬಿಯನ್ನು ಪ್ರಚೋದಿಸುವಂತ ಟ್ವೀಟ್‌ಗಳನ್ನು ಮಾಡುತ್ತಿರುವ ಅವರು, ಹಿಂಸೆಯನ್ನು ಸೃಷ್ಟಿಸಲು ಕಾರಣರಾಗಿದ್ದಾರೆ. ನವೆಂಬರ್‌ನಲ್ಲಿ ನಡೆದ ಅಧ್ಯಕ್ಷ ಚುನಾವಣೆಯಲ್ಲಿ ಅವರ ಎದುರಾಳಿ ಡೆಮೊಕ್ರಾಟ್ ಪಕ್ಷದ ಜೋಬೈಡೆನ್ ಅವರು ಸ್ಪಷ್ಟ ಎಲೆಕ್ಟೋರಲ್ ಬಹುಮತಗಳನ್ನು ಪಡೆದು ಗೆದ್ದಿದ್ದರೂ, ಅದನ್ನು ಒಪ್ಪಿಕೊಳ್ಳಲು ಅವರು ಸಿದ್ದರಿಲ್ಲ. ಕೋರ್ಟ್‌ಗಳು, ಅವರ ಮನವಿಯನ್ನು ತಿರಸ್ಕರಿಸಿದ್ದು, ಚುನಾವಣೆಯ ಸಾಚಾತನವನ್ನು ಎತ್ತಿ ಹಿಡಿದಿವೆ. ಜನಾದೇಶ ಹಾಗೂ ನ್ಯಾಯಾಂಗ ಆದೇಶಗಳು ತಮ್ಮ ವಿರುದ್ಧವಾಗಿದ್ದರೂ ಅವರು ಮೊಂಡುತನ ಬಿಟ್ಟಿಲ್ಲ. ಅಮೆರಿಕದ ಶ್ವೇತಭವನ ಜಗತ್ತಿನ ಅನೇಕ ಮಹಾ ಮುತ್ಸದ್ದಿ, ದಾರ್ಶನಿಕರೆನಿಸುವಂಥ ಅಧ್ಯಕ್ಷರನ್ನು ನೀಡಿದೆ. ವಸಾಹತು ಶಾಹಿ ಹಿಡಿತದಿಂದ ಬಿಡಿಸಿ ಅಮೆರಿಕದ ಸಂವಿಧಾನವನ್ನು ರೂಪಿಸಿ ಕಾರ್ಯಗತಗೊಳಿಸಿ ಮೊದಲ ಅಧ್ಯಕ್ಷರಾದ ಜಾರ್ಜ್ ವಾಷಿಂಗ್ಟನ್, ಕರಿಯರ ಜೀತಪದ್ಧತಿಯನ್ನು ತೊಡೆದು ಹಾಕಿ ಅಂತರ್ಯುದ್ಧವನ್ನು ಹತ್ತಿಕ್ಕಿ ಎಲ್ಲ ಪ್ರಜೆಗಳಿಗೆ ಸಮಾನ ಹಕ್ಕುಗಳನ್ನು ನೀಡಲು ಜೀವ ತೇಯ್ದ ಅಬ್ರಹಾಂ ಲಿಂಕನ್, ಯುದ್ಧಕಾಲದಲ್ಲಿ ದೇಶವನ್ನು ಮುನ್ನೆಡೆಸಿದ ಫ್ರಾಂಕ್ಲಿನ್ ರೂಸ್ವೆಲ್ಟ ಮುಂತಾದವರು ಇಲ್ಲಿ ಆಗಿಹೋಗಿದ್ದರೆ. ಇಂತಹ ಮುತ್ಸದ್ದಿಗಳನ್ನು ಪಡೆದ ಅಧ್ಯಕ್ಷ ಪೀಠದಲ್ಲಿ ಕುಳಿತ ಟ್ರಂಪ್ ತಮ್ಮ ಕ್ಷುಲ್ಲಕ ವರ್ತನೆ, ಚೀನಾ–ಇರಾನ್ ಮುಂತಾದ ದೇಶಗಳ ಜೊತೆ ನಿರಂತರ ಜಗಳಗಂಟತನ, ಗೋಡೆ ಕಟ್ಟುವಂಥ ತಿಕ್ಕಲುತನದ ನಿರ್ಧಾರಗಳು, ಮೆಕ್ಸಿಕನ್ನರು–ಕರಿಯರ ಮೇಲೆ ಸದಾ ದ್ವೇಷ ಸಾಧಿಸುವ ನಡೆ ಇತ್ಯಾದಿಗಳ ಮೂಲಕ ದೇಶ ಕಂಡ ವಿಕೃತ ಅಧ್ಯಕ್ಷರೆನಿಸಿದ್ದಾರೆ. ಶತಾಯಗತಾಯ ಅಧಿಕಾರ ಉಳಿಸಿಕೊಳ್ಳಲು ಹೋರಾಟ ಅವರ ಸರ್ವಾಧಿಕಾರ ಮನೋಭಾವ ಕೊನೆಗೂ ಸೋಲೊಪ್ಪುವಂತಾಗಿದೆ.

ಅಮೆರಿಕ ಶತಮಾನಗಳಿಂದ ಪ್ರಜಾಪ್ರಭುತ್ವವನ್ನು ಜತನವಾಗಿ ಕಾಯ್ದುಕೊಂಡಿದೆ. ಇಲ್ಲಿನ ಪ್ರಜಾಸತ್ತೆಯನ್ನು ಕಾಪಾಡಲು ಹೆಚ್ಚಿನ ನಿಯಂತ್ರಣಗಳು (checks and balances) ಇವೆ. ಆದರೂ ಇಂತಹ ಘಟನೆ ನಡೆದಿದೆ ಎಂದಾದರೆ, ನಾವು ನಮ್ಮ ಪ್ರಜಾಪ್ರಭುತ್ವವನ್ನು ಕಾಪಾಡಿಕೊಳ್ಳುವಲ್ಲಿ ಎಷ್ಟು ಎಚ್ಚರವಾಗಿದ್ದರೂ ಸಾಲದು ಎಂಬುದೇ ನೀತಿಯಾಗಿ ಕಾಣಿಸುತ್ತದೆ. ಜಗತ್ತಿಗೆ ಬುದ್ಧಿಹೇಳುವ ದೊಡ್ಡಣ್ಣನ ಸ್ಥಾನದಲ್ಲಿರುವ ಅಮೆರಿಕದಲ್ಲಿ ಹೀಗಾಗಿದ್ದು ಈ ದೊಡ್ಡ ದೇಶ ತಲೆತಗ್ಗಿಸಬೇಕಾದ ವಿಚಾರವೇ, ನಿರಂಕುಶ ಆಡಳಿತ ಪ್ರವೃತ್ತಿಗಳು ತಮಗೆ ಸೋಲುಂಟಾಗಲಿದೆ ಎಂಬುದು ಗೊತ್ತಾದಾಗ ಹಿಂಸೆಯ ಹಾದಿ ಹಿಡಿಯುತ್ತವೆ. ಜನಾದೇಶವನ್ನು ಒಪ್ಪಿ ನಡೆಯುವುದರಲ್ಲಿ ಘನತೆಯಿದೆ. ಆದರೆ ಟ್ರಂಪ್ ವರ್ತನೆ ಅಮೆರಿಕಕ್ಕೆ ಒಂದು ಕಳಂಕವಾಗಿ ಉಳಿಯಲಿದೆ. ಮುಂದೆಂದೂ ಯಾವ ನಾಯಕನೂ ಇಂಥ ಗೌರವರಹಿತ ವರ್ತನೆ ತೋರಬಾರದು ಎಂಬುದನ್ನು ಕಲಿಸಿದೆ.

ಆಧಾರ: ವಿಜಯ ಕರ್ನಾಟಕ, ದಿನಾಂಕ:08.01.2021.

## 4. ಸ್ಯಾನ್ ಫ್ರಾನ್ಸಿಸ್ಕೊ–ಬೆಂಗಳೂರು ನಾನ್ ಸ್ಟಾಪ್ ಏರ್ ಇಂಡಿಯಾ ವಿಮಾನ ಹಾರಾಟ

ಭಾರತೀಯ ವಿಮಾನಯಾನ ಇತಿಹಾಸದಲ್ಲಿ ಇದು ವಿಶೇಷ ದಾಖಲೆ ಎನ್ನಲೇಬೇಕು ಎಂಬಂತಿದ್ದ ಕಾಲಮಾನವೀಗ ಬದಲಾಗಿದ್ದು, ಈಗ ಮಹಿಳೆಯರೇ ವಿಮಾನವನ್ನು ಸತತ ಹದಿನಾಲ್ಕು ಗಂಟೆಗಳಷ್ಟು ದೂರದೂರಿಗೆ ಹಾರಿಸಿಕೊಂಡು ಬರಲಿದ್ದಾರೆ.

ಅಮೆರಿಕದ ಸ್ಯಾನ್‌ಫ್ರಾನ್ಸಿಸ್ಕೋದಿಂದ ಏರ್‌ಇಂಡಿಯಾ ವಿಮಾನ ಹೊರಟಿದ್ದು, ಉತ್ತರ ಧ್ರುವದ ಭಾಗದಿಂದ ಅಟ್ಲೆಂಟಿಕ್ ಸಾಗರದ ಮೂಲಕ ಮುಖಾಂತರ ಬೆಂಗಳೂರಿಗೆ ಹಾರಿಬರುತ್ತಿದೆ.

ಈ ಪ್ರಯಾಣವು ಪ್ರಯಾಣಿಕರನ್ನು ಹೊತ್ತು ತರುವ ವಿಶ್ವದ ಅತ್ಯಂತ ದೂರದ ಯಾನ ಎಂಬ ಹಿರಿಮೆಗೆ ಪಾತ್ರವಾಗಿದೆ. ಈ ವಿಮಾನವು, ಭಾರತೀಯ ವಿಮಾನ ಸಂಸ್ಥೆಯೊಂದು ಇಲ್ಲವೇ ಏರ್ ಇಂಡಿಯಾ ನಡೆಸುತ್ತಿರುವ ಅತಿ ದೂರದ ವಿಮಾನಯಾನವೆಂಬ ಹೆಗ್ಗಳಿಕೆಗೂ ಪಾತ್ರವಾಗಿದೆ.

ಈ ಯಾನವು 17 ಗಂಟೆಗಳನ್ನು ಮೀರಬಹುದು ಎಂದು ಅಂದಾಜಿಸಿದ್ದು, ಗಾಳಿಯ ವೇಗ ಮತ್ತು ಗಾಳಿ ಬೀಸುವ ದಿಕ್ಕಿನ ಮೇಲೆಯೂ ವಿಮಾನದ ವೇಗ ಅವಲಂಬಿತವಾಗಿದೆ. ವಿಮಾನದ ಪೈಲಟ್‌ಗಳೆಲ್ಲರೂ ಮಹಿಳೆಯರು ಎಂಬುದು ಈ ಯಾನದ ಪ್ರಮುಖ ವಿಶೇಷಗಳಲ್ಲೊಂದು. ಈ ವಿಮಾನದಲ್ಲಿ ಒಟ್ಟು 238 ಜನರು ಪ್ರಯಾಣಿಕರಿದ್ದು, ಒಟ್ಟು 12 ಸಿಬ್ಬಂದಿಯೂ ಇರಲಿದ್ದಾರೆ.

ಆಧಾರ: ವಿಶ್ವ ವಾಣಿ, ದಿನಾಂಕ:10.01.2021.

## 5. ಟ್ರಂಪ್‌ಗೆ ವಾಗ್ದಂಡನೆ ಕೂಡಲೇ ರಾಜೀನಾಮೆ ನೀಡಲು ಸ್ಪೀಕರ್ ಪೆಲೂಸಿ ಒತ್ತಡ

ಅಧ್ಯಕ್ಷ ಡೊನಲ್ಡ್ ಟ್ರಂಪ್ ಅವರು ಕೂಡಲೇ ರಾಜೀನಾಮೆ ನೀಡಿ ಹೊರನಡೆಯದೇ ಇದ್ದರೆ, ಅವರನ್ನು ವಾಗ್ದಂಡನೆಗೆ ಗುರಿಪಡಿಸಲಾಗುತ್ತದೆ.

ಅಮೆರಿಕದ ಸಂಸತ್ ಭವನದ(ಕ್ಯಾಪಿಟಲ್ ಹಿಲ್) ಮೇಲೆ ಟ್ರಂಪ್ ಬೆಂಬಲಿಗರು ಮುತ್ತಿಗೆ ಹಾಕಿ, ಹೈಡ್ರಾಮ ನಡೆಸಿದ ಬೆನ್ನಲ್ಲೇ ಹೌಸ್ ಆಫ್ ರೆಪ್ರಸೆಂಟೇಟೀವ್ಸ್ ಸ್ಪೀಕರ್ ನ್ಯಾನ್ಸಿ ಪೆಲೂಸಿ ಇಂತಹದೊಂದು ಎಚ್ಚರಿಕೆಯ ಸಂದೇಶ ರವಾನಿಸಿದ್ದಾರೆ.

ಟ್ರಂಪ್ ಕೂಡಲೇ ರಾಜೀನಾಮೆ ಸಲ್ಲಿಸಬೇಕು ಎಂದು ಹೌಸ್‌ನ ಎಲ್ಲ ಸದಸ್ಯರೂ ಬಯಸುತ್ತಿದ್ದಾರೆ. ಒಂದು ವೇಳೆ ಅವರು ರಾಜೀನಾಮೆಗೆ ಹಿಂದೇಟು ಹಾಕಿದರೆ, ಮಹಾಭಿಯೋಗ (ವಾಗ್ದಂಡನೆ)ದ ಪ್ರಕ್ರಿಯೆ ಅರಂಭಿಸುವಂತೆ ನಾನೂ ರೂಲ್ಸ್ ಕಮಿಟಿಗೆ ಸೂಚಿಸಿದ್ದೇನೆ. ಎಲ್ಲ ಆಯ್ಕೆಗಳನ್ನೂ ಹೌಸ್ ಸಿದ್ಧವಾಗಿರಿಸಿಕೊಂಡಿದೆ ಎಂದು ಪೆಲೋಸಿ ಖಡಕ್ಕಾಗಿ ಹೇಳಿದ್ದಾರೆ.

ಇದೇ ವೇಳೆ, ಭಾರತೀಯ–ಅಮೆರಿಕನ್ ಕಾಂಗ್ರೆಸ್ ಸದಸ್ಯೆ ಪ್ರಮೀಳಾ ಜಯಪಾಲ್ ಅವರು **'ಈಗಲೇ ಟ್ರಂಪ್ ವಿರುದ್ಧ ವಾಗ್ದಂಡನೆ ಶುರು ಮಾಡಬೇಕು'** ಎಂದು ಒತ್ತಾಯಿಸಿದ್ದಾರೆ. ಶ್ವೇತ ಭವನದಲ್ಲಿ ಟ್ರಂಪ್ ಇರುವ ಪ್ರತಿಯೊಂದು ಹೆಚ್ಚುವರಿ ದಿನವೂ ಅಮೆರಿಕ ಅಸುರಕ್ಷಿತವಾಗಿದೆ ಎಂಬುದರ ಪ್ರತೀಕವಾಗುತ್ತದೆ ಎಂದು ಮತ್ತೊಬ್ಬ ಸಂಸದ ಕೈಯಾಲಿ ಕಹೀಲೆ ಅಭಿಪ್ರಾಯಪಟ್ಟಿದ್ದಾರೆ. ಒಟ್ಟಿನಲ್ಲಿ ಅಮೆರಿಕ ಕಾಂಗ್ರೆಸ್ ಬಹುತೇಕ ಸದಸ್ಯರು ಟ್ರಂಪ್ ವಾಗ್ದಂಡನೆಗೆ ಆಗ್ರಹಿಸಿದ್ದಾರೆ. ಈ ನಡುವೆ, ಭಾರತೀಯ ಅಮೇರಿಕನ್ ಸಬ್ರೀನಾ ಸಿಂಗ್ ಅವರು ಶ್ವೇತಭವನದಲ್ಲಿ ಉಪಾಧ್ಯಕ್ಷೆ ಕಮಲಾ ಹ್ಯಾರಿಸ್ ಅವರ ಉಪ ಮಾಧ್ಯಮ ಕಾರ್ಯದರ್ಶಿಯಾಗಿ ನೇಮಕಗೊಂಡಿದ್ದಾರೆ.

**ವಲಸೆ ವಿಧೇಯಕದ ಬಗ್ಗೆ ಪುನರುಚ್ಚಾರ:** ತಾವು ಅಧಿಕಾರ ಸ್ವೀಕರಿಸಿದ ಕೂಡಲೇ ಟ್ರಂಪ್ ಆಡಳಿತದ ನಿಯಮಗಳಿಗೆ ವಿರುದ್ಧವಾದ ವಲಸೆ ನಿಯಮಗಳನ್ನು ಜಾರಿಗೆ ತರುವುದಾಗಿ ನಿಯೋಜಿತ ಅಧ್ಯಕ್ಷ ಜೋಬೈಡನ್ ಪುನರುಚ್ಚರಿಸಿದ್ದಾರೆ. ಅಧಿಕಾರ ಸ್ವೀಕರಿಸಿದ ಕೂಡಲೇ ನೀವು ಮಾಡುವ ಕೆಲಸವೇನು ಎಂಬ ಪ್ರಶ್ನೆಗೆ ಉತ್ತರಿಸಿರುವ ಅವರು, ಟ್ರಂಪ್ ಆಡಳಿತದ ಕ್ರೂರ ವಲಸೆ ನೀತಿಗಳನ್ನು ರದ್ದು ಮಾಡುವುದು' ಎಂದು ಹೇಳಿದ್ದಾರೆ.

**ವಿನ್ಸೆಂಟ್ ವಿರುದ್ದ ದೂರು:** ಅಮೆರಿಕದ ಕ್ಯಾಪಿಟಲ್ ಹಿಲ್ ಹಿಂಸಾಚಾರದ ವೇಳೆ ಟ್ರಂಪ್ ಬೆಂಬಲಿಗರೊಂದಿಗೆ ಭಾರತದ ತ್ರಿವರ್ಣಧ್ವಜ ಹಿಡಿದುಕೊಂಡಿದ್ದ ಕೇರಳ ಮೂಲದ ವಿನ್ಸೆಂಟ್ ಕ್ಸೇವಿಯರ್ ವಿರುದ್ಧ ದೆಹಲಿಯ ಕಲ್ಕಾಜಿ ಪೋಲಿಸ್ ಠಾಣೆಯಲ್ಲಿ ದೂರು ದಾಖಲಾಗಿದೆ.

ಆಧಾರ: ಉದಯ ವಾಣಿ, ದಿನಾಂಕ:10.01.2021.

## 6. ಸೋಂಕು ಹೆಚ್ಚಳ : ಬೀಜಿಂಗ್‌ನಲ್ಲಿ ಹೈ ಅಲರ್ಟ್

ಕೊರೋನಾ ಜನ್ಮ ಸ್ಥಾನ ಚೀನಾದಲ್ಲಿ ಈಗ ಮತ್ತೊಮ್ಮೆ ಸೋಂಕಿನ ಭೀತಿ ಆರಂಭವಾಗಿದೆ. ಹೆಬ್ಬೆ ಪ್ರಾಂತ್ಯದಲ್ಲಿ ಒಂದೇ ದಿನ 33 ಮಂದಿಗೆ ಸೋಂಕು ತಗುಲಿರುವುದು ದೃಢಪಟ್ಟಿದ್ದು, ನೆರೆಯ ಬೀಜಿಂಗ್‌ನಲ್ಲಿ ಹೈಅಲರ್ಟ್ ಘೋಷಿಸಲಾಗಿದೆ.

ಬೀಜಿಂಗ್‌ನಲ್ಲಿ ವಾರ್ಷಿಕ ಸಂಸತ್ ಅಧಿವೇಶನ ನಡೆಯಲಿದ್ದು, 5 ಸಾವಿರಕ್ಕೂ ಅಧಿಕ ಗಣ್ಯರು ಪಾಲ್ಗೊಳ್ಳಲಿದ್ದಾರೆ. ಈ ಸಮಯದಲ್ಲೇ ಸೋಂಕು ಹೆಚ್ಚಿದರೆ ಎಂಬ ಆತಂಕ ಬೀಜಿಂಗ್‌ನದ್ದು, ಚೀನಾದಲ್ಲಿ ಈಗಾಗಲೇ ಲಸಿಕೆ ವಿತರಣೆ ಆರಂಭವಾಗಿದ್ದು ಈವರೆಗೆ 90 ಲಕ್ಷ ಲಸಿಕೆ ವಿತರಿಸಲಾಗಿದೆ.

ಕೊರೋನಾ ಮೂಲದ ಕುರಿತು ತನಿಖೆ ನಡೆಸಲು ಚೀನಾಗೆ ತೆರಳಲು ಉದ್ದೇಶಿಸಿರುವ ವಿಶ್ವ ಆರೋಗ್ಯ ಸಂಸ್ಥೆಯ ತಜ್ಞರ ತಂಡಕ್ಕೆ ಅನುಮತಿ ನೀಡದೇ ಸತಾಯಿಸುತ್ತಿರುವ ಚೀನಾ, ಈಗ ತಂಡವನ್ನು ಸ್ವಾಗತಿಸಲು ಸಿದ್ದ ಎಂದು ಹೇಳಿದೆ. ಅದರೆ, ಅವರ ಭೇಟಿಗೆ ದಿನಾಂಕ ಮಾತ್ರ ಇನ್ನೂ ಘೋಷಿಸಿಲ್ಲ.

ಆಧಾರ: ಉದಯವಾಣಿ, ದಿನಾಂಕ:10.01.2021.

## 7. ಬ್ರಿಟನ್ ಸಂಸತ್ತಿನಲ್ಲಿ ಕಾಶ್ಮೀರ ವಿಷಯ ಚರ್ಚೆ: ಭಾರತ ಆಕ್ಷೇಪ

ಬ್ರಿಟನ್ ಸಂಸತ್ತಿನಲ್ಲಿ ನಡೆದ ಕಾಶ್ಮೀರದ ವಿಚಾರಕ್ಕೆ ಸಂಬಂಧಿಸಿದಂತೆ ಚರ್ಚೆಯಲ್ಲಿ ಕೆಲವು ಸಂಸದರು ಮಂಡಿಸಿರುವ ವಿಚಾರಗಳ ಬಗ್ಗೆ ಭಾರತ ತೀವ್ರ ಬೇಸರ ವ್ಯಕ್ತಪಡಿಸಿದೆ.

ಈ ಚರ್ಚೆಯಲ್ಲಿ ಆಧಾರ ರಹಿತವಾದ ಸುಳ್ಳು ವಿಚಾರಗಳನ್ನು ಪ್ರತಿಪಾದಿಸಲಾಗಿದೆ ಎಂದು ಭಾರತ ಹೇಳಿದೆ.

ಹೌಸ್ ಅಫ್ ಕಾಮನ್ಸ್‌ನ ವೆಸ್ಟ್ ಮಿನಿಸ್ಟರ್ ಹಾಲ್‌ನಲ್ಲಿ ಬ್ರಿಟಿಷ್ ಸಂಸದರು ಆಯೋಜಿಸಿದ್ದ ಈ ಚರ್ಚೆಗೆ ಕಾಶ್ಮೀರದ ರಾಜಕೀಯ ಪರಿಸ್ಥಿತಿ ಎಂಬ ಶೀರ್ಷಿಕೆಯೇ ಇಡಲಾಗಿದ್ದು, ಈ ಶೀರ್ಷಿಕೆಯೇ ಸಮಸ್ಯಾತ್ಮಕವಾಗಿದೆ ಎಂದು ಲಂಡನ್‌ನಲ್ಲಿರುವ ಭಾರತೀಯ ಹೈಕಮೀಷನ್ ಹೇಳಿದೆ.

ಜಮ್ಮು ಕಾಶ್ಮೀರ ಮತ್ತು ಕಾಶ್ಮೀರ ಕೇಂದ್ರಾಡಳಿತ ಪ್ರದೇಶದಲ್ಲಿರುವ ವಾಸ್ತವ ಅಂಶಗಳನ್ನು ಕೈಬಿಟ್ಟು ಸುಳ್ಳು ವಿಚಾರಗಳನ್ನು ಬ್ರಿಟನ್ ಸಂಸದರು ಚರ್ಚೆಯಲ್ಲಿ ಪ್ರತಿಪಾದಿಸಿದ್ದಾರೆ ಎಂದು ಹೈಕಮೀಷನ್ ಆಕ್ಷೇಪಿಸಿದೆ.

ಆಧಾರ: ವಿಜಯವಾಣಿ, ದಿನಾಂಕ:15.01.2021.

## 8. ಬೈಡೆನ್ ಸರ್ಕಾರದಲ್ಲಿ 2 ಕನ್ನಡಿಗರು ಸೇರಿ 20 ಮಂದಿ ಭಾರತೀಯರು

ಅಮೆರಿಕ ಅಧ್ಯಕ್ಷರಾಗಿ ಅಧಿಕಾರ ಸ್ವೀಕರಿಸಲಿರುವ ಜೋ ಬೈಡೆನ್ ಅವರ ಸರ್ಕಾರದಲ್ಲಿ ಇಬ್ಬರು ಕನ್ನಡಿಗರು ಸೇರಿ ಭಾರತೀಯ ಮೂಲದ 20 ಜನ ಸ್ಥಾನ ಪಡೆಯಲಿದ್ದಾರೆ. ಈ ಪೈಕಿ 17 ಮಂದಿಗೆ ಉನ್ನತ ಹುದ್ದೆ ದೊರೆಯಲಿದೆ. ಅಮೆರಿಕದ ಸರ್ಜನ್ ಜನರಲ್ ಹುದ್ದೆಗೆ ಮಂಡ್ಯದ ವಿವೇಕ್ ಮೂರ್ತಿ ಹಾಗೂ ಪ್ರಥಮ ಮಹಿಳೆ ಆಗಲಿರುವ ಜಿಲ್ ಬೈಡೆನ್ ಅವರಿಗೆ ಯೋಜನೆ ನಿರ್ದೇಶಕರಾಗಿ ಆಯ್ಕೆಯಾಗಿರುವ ಉಡುಪಿಯ ಕಮಲಾ ಅಡಿಗ, ಸರ್ಕಾರದಲ್ಲಿ ಸ್ಥಾನ ಪಡೆದ ಕನ್ನಡಿಗರಾಗಿದ್ದಾರೆ. ಶ್ವೇತ ಭವನದ ಕಚೇರಿ ನಿರ್ವಹಣೆ ಹಾಗೂ ಬಜೆಟ್‌ನ ನಿರ್ದೇಶಕರಾಗಿ ನೀರಾಟಂಡನ್, ಸಹಾಯಕ ಅಟಾರ್ನಿ ಜನರಲ್ ಆಗಿ ವಿನುತಾ ಗುಪ್ತಾ, ಶ್ವೇತಭವನದ ಕಚೇರಿಗೆ ನೇಮಕಗೊಂಡಿರುವ ಆಷಿಯಾ ಶಾ,

ರಾಷ್ಟ್ರೀಯ ಆರ್ಥಿಕ ಮಂಡಳಿಯಲ್ಲಿ ಉಪ ನಿರ್ದೇಶಕರಾಗಿ ಸ್ಥಾನ ಪಡೆದ ಸಮೀರಾ ಫಾಜಿಲಿ ಅವರು ಮೂಲತಃ ಕಾಶ್ಮೀರದವರಾಗಿದ್ದಾರೆ.

ಆಧಾರ: ಕನ್ನಡಪ್ರಭ, ದಿನಾಂಕ:18.01.2021.

## 9. ಬೈಡೆನ್ ಈಗ ಅಮೆರಿಕ ಅಧ್ಯಕ್ಷ

ಅಮೆರಿಕದ 46ನೇ ಅಧ್ಯಕ್ಷರಾಗಿ ಡೆಮಾಕ್ರಟಿಕ್ ಪಕ್ಷದ ಜೋ ಬೈಡೆನ್ ಮತ್ತು ಉಪಾಧ್ಯಕ್ಷೆಯಾಗಿ ಭಾರತ ಮೂಲದ ಕಮಲಾ ಹ್ಯಾರಿಸ್ ಅವರು ಪ್ರಮಾಣ ವಚನ ಸ್ವೀಕರಿಸಿದ್ದಾರೆ. ನಿರ್ಗಮಿತ ಅಧ್ಯಕ್ಷ ಡೊನಾಲ್ಡ್ ಟ್ರಂಪ್ ಅವರ ಬೆಂಬಲಿಗರು ದಾಂಧಲೆ ನಡೆಸಬಹುದು ಎಂಬ ಭೀತಿಯಿಂದಾಗಿ ಸಂಸತ್ ಭವನ ಪ್ರದೇಶವನ್ನು (ಕ್ಯಾಪಿಟಲ್)ಭದ್ರತಾ ಸಿಬ್ಬಂದಿ ಭದ್ರಕೋಟೆಯಾಗಿ ಪರಿವರ್ತಿಸಿದ್ದರು. ಐತಿಹಾಸಿಕ ಕಾರ್ಯಕ್ರಮವು ಸರಳವಾಗಿ ನಡೆಯಿತು.

ಮುಖ್ಯ ನ್ಯಾಯಮೂರ್ತಿ ಜಾನ್ ರಾಬರ್ಟ್ ಅವರು 78 ವರ್ಷದ ಬೈಡೆನ್‌ಗೆ ಕ್ಯಾಪಿಟಲ್‌ನ ವೆಸ್ಟ್ ಫ್ರಂಟ್‌ನಲ್ಲಿ ಪ್ರಮಾಣ ವಚನ ಬೋಧಿಸಿದರು. ಸೇನೆಯ(ನ್ಯಾಷನಲ್ ಗಾರ್ಡ್ಸ್)25 ಸಾವಿರಕ್ಕೂ ಹೆಚ್ಚು ಯೋಧರು ಕಾರ್ಯಕ್ರಮಕ್ಕೆ ಭದ್ರತೆ ಒದಗಿಸಿದ್ದರು.

1869ರಲ್ಲಿ ಆ್ಯಂಡ್ರ್ಯೂ ಜಾನ್ಸನ್ ಅವರು ತಮ್ಮ ಉತ್ತರಾಧಿಕಾರಿಯ ಪ್ರಮಾಣ ವಚನ ಕಾರ್ಯಕ್ರಮದಲ್ಲಿ ಭಾಗವಹಿಸಿರಲಿಲ್ಲ. ಅದಾದ ಬಳಿಕ ಇದೇ ಮೊದಲಿಗೆ ಟ್ರಂಪ್ ಅವರು ಅದನ್ನು ಅನುಸರಿಸಿದ್ದಾರೆ.

ಅಮೆರಿಕ ಇತಿಹಾಸದಲ್ಲಿ ಅತ್ಯಂತ ಹಿರಿಯ ಅಧ್ಯಕ್ಷರಾಗಿ ಬೈಡೆನ್ ಅವರು ದಾಖಲೆ ಸೇರಿದ್ದಾರೆ. ಅವರು ತಮ್ಮ ಕುಟುಂಬದ 127 ವರ್ಷ ಹಳೆಯ ಬೈಬಲ್ ಪ್ರತಿಯ ಮೇಲೆ ಎಡಕೈಯನ್ನು ಇರಿಸಿ ಪ್ರಮಾಣವಚನ ಉಚ್ಛರಿಸಿದರು. ಉಪಾಧ್ಯಕ್ಷರಾಗಿ ಮತ್ತು ಏಳು ಬಾರಿ ಸೆನೆಟರ್ ಆಗಿದ್ದಾಗಲೂ ಅವರು ಈ ಬೈಬಲ್‌ನ ಮೇಲೆ ಕೈ ಇರಿಸಿಯೇ ಪ್ರಮಾಣ ವಚನ ಸ್ವೀಕರಿಸಿದ್ದರು.

ಮಾಜಿ ಅಧ್ಯಕ್ಷರಾದ ಬರಾಕ್ ಒಬಾಮ, ಜಾರ್ಜ್ ಡಬ್ಲ್ಯು ಬುಷ್ ಮತ್ತು ಬಿಲ್ ಕ್ಲಿಂಟನ್ ಕಾರ್ಯಕ್ರಮದಲ್ಲಿ ಹಾಜರಿದ್ದರು.

ಆಧಾರ: ಪ್ರಜಾವಾಣಿ, ದಿನಾಂಕ:21.01.2021.

## 10.ಟ್ರಂಪ್ ನೀತಿ ಮುಕ್ತಾಯ

ಅಮೆರಿಕದಲ್ಲಿ ಎಲ್ಲವೂ ನಿರೀಕ್ಷೆಯಂತೆಯೇ ನಡೆಯುತ್ತಿದೆ. ನೂತನ ಅಧ್ಯಕ್ಷ ಜೋ ಬೈಡೆನ್ ನಿಕಟ ಪೂರ್ವ ಅಧ್ಯಕ್ಷ ಡೊನಾಲ್ಡ್ ಟ್ರಂಪ್ ಕೈಗೊಂಡಿದ್ದ ಹದಿನೈದು ಪ್ರಮುಖ ನಿರ್ಧಾರಗಳನ್ನು ಬದಲಾಯಿಸುವ ಆದೇಶಕ್ಕೆ ಸಹಿ ಹಾಕಿದ್ದಾರೆ. ಈ ಮೂಲಕ ಭರ್ಜರಿಯಾಗಿಯೇ ಅಧಿಕಾರ ಶುರು ಮಾಡಿದ್ದಾರೆ.

**ಡಬ್ಲ್ಯೂಎಚ್‌ಓಗೆ ಮರು ಸೇರ್ಪಡೆ:** ಟ್ರಂಪ್ ಅಧಿಕಾರದಲ್ಲಿದ್ದಾಗ ಕೊರೋನಾ ಜಗತ್ತಿಗೆ ಹಬ್ಬಲು ಡಬ್ಲ್ಯೂಎಚ್‌ಓ ಕಾರಣ. ಅದರಿಂದ ಹೊರಬರುವ ನಿರ್ಧಾರ ಘೋಷಿಸಿದ್ದರು, ಮತ್ತೆ ಆರೋಗ್ಯ ಸಂಸ್ಥೆಗೆ ಸೇರ್ಪಡೆಯಾಗುವ ಬಗ್ಗೆ ನಿರ್ಧರಿಸಲಾಗಿದೆ. ಬೈಡೆನ್ ತಮ್ಮ ಸಲಹೆಗಾರ ಡಾ.ಆ್ಯಂಟೋನಿ ಫೌಸಿ ಅವರನ್ನು ಡಬ್ಲ್ಯೂಎಚ್‌ಓ ಸಭೆಗೆ ಕಳುಹಿಸಿ ಕೊಟ್ಟಿದ್ದಾರೆ. ಈ ಸಂದರ್ಭದಲ್ಲಿ ಮಾತನಾಡಿದ ಅವರು, ಹೊಸ ಸರ್ಕಾರದ ಬೆಂಬಲ ಡಬ್ಲ್ಯೂಎಚ್‌ಓಗೆ ಇದೆ ಎಂದರು.

**ಹವಾಮಾನ ಒಪ್ಪಂಧಕ್ಕೆ ಸಹಮತ:** ನಿಕಟ ಪೂರ್ವ ಅಧ್ಯಕ್ಷರ ಅವಧಿಯಲ್ಲಿ ಪ್ಯಾರಿಸ್‌ನಲ್ಲಿ ಜಗತ್ತಿನ ರಾಷ್ಟ್ರಗಳು ಸಹಿ ಹಾಕಿದ್ದ ಒಪ್ಪಂದದಿಂದ ಲಾಭವಾಗುತ್ತದೆ ಎಂದಿದ್ದರು. ಟ್ರಂಪ್ ಹೊಸ ಸರ್ಕಾರದ ಅವಧಿಯಲ್ಲಿ ಮತ್ತೆ ಬೆಂಬಲ ವ್ಯಕ್ತಪಡಿಸುವ ಬಗ್ಗೆ ಬೈಡೆನ್ ಸಹಿ ಹಾಕಿದ್ದಾರೆ. ಜಾಗತಿಕ ತಾಪಮಾನವನ್ನು ತಗ್ಗಿಸುವ ಬಗ್ಗೆ ಅದರಲ್ಲಿ ಪ್ರಸ್ತಾಪಿಸಲಾಗಿದೆ.

**ಮಾಸ್ಕ್ ಕಡ್ಡಾಯ:** ಕೊರೋನಾ ಹಿನ್ನೆಲೆಯಲ್ಲಿ ಮಾಸ್ಕ್ ಧರಿಸುವುದು ಕಡ್ಡಾಯ ಮತ್ತು ಇತರ ಮುನ್ನೆಚ್ಚರಿಕೆಗಳನ್ನು ಕೈಗೊಳ್ಳುವ ಬಗ್ಗೆ ಆದ್ಯತೆ ನೀಡಿದ್ದಾರೆ. ಸೋಂಕು ತಡೆಗಟ್ಟುವ ನಿಟ್ಟಿನಲ್ಲಿ ಸಾಮಾಜಿಕ ಅಂತರ ಕಾಯ್ದುಕೊಳ್ಳುವ ಬಗ್ಗೆಯೂ ಅವರು ಪ್ರಸ್ತಾಪಿಸಿದ್ದಾರೆ. ಜೊತೆಗೆ ಸವಾಲಿನ 100 ದಿನಗಳು' ಎಂಬ ಅಭಿಯಾನವನ್ನು ಶುರು ಮಾಡಿದ್ದಾರೆ. ಟ್ರಂಪ್' ನಾನು ಮಾಸ್ಕ್ ಧರಿಸುವುದಿಲ್ಲ' ಎಂದು ಬಹಿರಂಗವಾಗಿಯೇ ಹೇಳಿದ್ದರು.

**ಮೊರಟೋರಿಯಂ ವಿಸ್ತರಣೆ:** ಮಾರ್ಚ್ 31ರವರೆಗೆ ಮೊರಟೋರಿಯಂ ವ್ಯವಸ್ಥೆಯನ್ನು ವಿಸ್ತರಿಸುವ ಬಗ್ಗೆ ಬೈಡೆನ್ ಸಹಿ ಹಾಕಿದ್ದರೆ. ಟ್ರಂಪ್ ಅವಧಿಯಲ್ಲಿ ಬಾಡಿಗೆದಾರರನ್ನು ಬಲವಂತವಾಗಿ ತೆರವುಗೊಳಿಸುವ ಬಗ್ಗೆ ಆದೇಶ ಹೊರಡಿಸಲಾಗಿತ್ತು.

**ಕೀಸ್ಟೋನ್ ಪೈಪ್ ಲೈನ್ ರದ್ದು:** ಕೆನಡಾ ಮತ್ತು ಅಮೆರಿಕ ನಡುವೆ ತೈಲ ಸಾಗಣೆಗಾಗಿ ಕೀಸ್ಟೋನ್ ಪೈಪ್ ಲೈನ್ ಎಂಬ ಯೋಜನೆಗೆ ಹಿಂದಿನ ಸರ್ಕಾರ ಅನುಮೋದನೆ ನೀಡಿತ್ತು. ಒಬಾಮಾ ಅವಧಿಯಲ್ಲಿಯೂ ಈ ಯೋಜನೆ ಪ್ರಸ್ತಾಪವಾಗಿ ತಿರಸ್ಕೃತಗೊಂಡಿತ್ತು.

**ಸರ್ಕಾರಿ ಆಸ್ತಿ ಮರುವಶ:** ಹಿಂದಿನ ಸರ್ಕಾರದ ಅವಧಿಯಲ್ಲಿ ಸರ್ಕಾರಿ ಆಸ್ತಿಯನ್ನು ವಾಣಿಜ್ಯಕವಾಗಿ ಬಳಕೆಗೆ ಅನುಮೋದನೆ ನೀಡಲಾಗಿತ್ತು. ಅಮೆರಿಕದಲ್ಲಿ ಕಾರುಗಳು ಎಷ್ಟು ಪ್ರಮಾಣದಲ್ಲಿ ಇಂಧನ ಮಿತವ್ಯಯತೆ ಹೊಂದಿರಬೇಕು ಎಂಬುದರ ಮರು ಜಾರಿಗೆ ಆದೇಶ.

**ನಿಯಂತ್ರಣ ಕ್ರಮಗಳ ಪರಿಶೀಲನೆ:** ಟ್ರಂಪ್ ಸರ್ಕಾರ 100ಕ್ಕೂ ಅಧಿಕ ಸಂಸ್ಥೆಗಳ ವಿರುದ್ಧ ಹಲವು ಕಾರಣಕ್ಕೆ ಕ್ರಮ ಕೈಗೊಳ್ಳಲು ಆದೇಶಿಸಿದ್ದರು. ಅವುಗಳನ್ನೆಲ್ಲ ಮರು ಪರಿಶೀಲಿಸುವ ಬಗೆಗಿನ ಆದೇಶಕ್ಕೆ ಬೈಡೆನ್ ಸಹಿ ಹಾಕಿದ್ದಾರೆ.

**ವಲಸಿಗರ ತಡೆಗೋಡೆ ರದ್ದು:** ಮೆಕ್ಸಿಕೋದಿಂದ ಅಕ್ರಮವಾಗಿ ದೇಶಕ್ಕೆ ವಲಸಿಗರ ಪ್ರವೇಶ ತಡೆ ಟ್ರಂಪ್ ಗೋಡೆ ನಿರ್ಮಾಣಕ್ಕೆ ಚಾಲನೆ ನೀಡಿದ್ದರು. ಜೊತೆಗೆ ವಿತ್ತೀಯ ನೆರವು ಪ್ರಕಟಿಸಿದ್ದರು. ಇದೀಗ ಆ ಯೋಜನೆ ರದ್ದುಗೊಳಿಸಲಾಗಿದೆ.

**ಸಮೀಕ್ಷೆಗೆ ಚಿಂತನೆ:** ಅಮೆರಿಕದಲ್ಲಿ ಕೈಗೊಳ್ಳುವ ಜನಗಣತಿಯಲ್ಲಿ ಪ್ರಜೆಗಳಲ್ಲದವರನ್ನೂ ಸೇರಿಸಲೂ ಬೈಡೆನ್ ನಿರ್ಧರಿಸಿದ್ದಾರೆ. ನಿಕಟ ಪೂರ್ವ ಸರ್ಕಾರದ ಅವಧಿಯಲ್ಲಿ ಈ ಅಂಶವನ್ನು ಕೈ ಬಿಡಲಾಗಿತ್ತು.

**ಅಮೆರಿಕದಲ್ಲಿಯೇ ಜನನ ಪ್ರಕ್ರಿಯೆಗೆ ತಡೆ:** ಇತರ ದೇಶಗಳಲ್ಲಿ ಗರ್ಭಧರಿಸಿ ಅಮೆರಿಕದಲ್ಲಿ ಮಕ್ಕಳನ್ನು ಹಡೆಯುವುದರ ಮೇಲೆ ಟ್ರಂಪ್ ನಿಷೇಧ ಹೇರಿದ್ದರು. ಅಲ್ಲಿ ಜನಿಸುವ ಮಕ್ಕಳು ಸ್ವಾಭಾವಿಕವಾಗಿಯೇ ಪೌರತ್ವ ಪಡೆಯುತ್ತಾರೆ. ಇದೀಗ ಬೈಡೆನ್ ಆ ನೀತಿ ಜಾರಿಗೆ ಸಮ್ಮತಿಸಿದ್ದಾರೆ.

**ಲೈಬೀರಿಯದವರಿಗೆ ರಕ್ಷಣೆ:** ಲೈಬೀರಿಯಾ ಮೂಲದವರನ್ನು ಆ ದೇಶಕ್ಕೆ ಗಡೀಪಾರು ಮಾಡುವ ಪ್ರಕ್ರಿಯೆಯನ್ನು ಮುಂದೂಡುವ ಬಗ್ಗೆ ಸಹಮತ. 1991ರಲ್ಲಿ ಅಮೆರಿಕ ಸರ್ಕಾರ ಈ ಬಗ್ಗೆ ನಿರ್ಧಾರ ಕೈಗೊಂಡಿತ್ತು. ಒಟ್ಟು 4 ಸಾವಿರ ಮಂದಿ ಲೈಬೀರಿಯಾದವರು ಅಲ್ಲಿ ಇದ್ದಾರೆ.

**1776 ಆಯೋಗ ರದ್ದು:** ಅಮೆರಿಕದ ಮಕ್ಕಳಲ್ಲಿ ದೇಶಭಕ್ತಿಯ ಕಾವು ಹೆಚ್ಚಿಸುವ ನಿಟ್ಟಿನಲ್ಲಿ ನಿಕಟ ಪೂರ್ವ ಅಧ್ಯಕ್ಷ ಡೋನಾಲ್ಡ್ ಟ್ರಂಪ್ ಕಳೆದ ವರ್ಷದ ಸೆಪ್ಟೆಂಬರ್‌ನಲ್ಲಿ ಆಯೋಗ ರಚನೆಗೆ ಸಹಿ ಹಾಕಿದ್ದರು. ಇಂಥ ಕ್ರಮದ ಮೂಲಕ ಬಲಪಂಥೀಯ ವಿಚಾರ ಧಾರೆ ಪ್ರಚಾರಕ್ಕೆ ಅವರು ನಿರ್ಧರಿಸಿದ್ದರು.

**ವಿದ್ಯಾರ್ಥಿ ಸಾಲದ ಹೊರೆ:** ದೇಶದಲ್ಲಿ ವಿದ್ಯಾರ್ಥಿಗಳಿಗೆ ನೀಡಲಾಗಿರುವ ಸಾಲದ ಮೇಲೆ ವಿಧಿಸಲಾಗುತ್ತಿರುವ ಬಡ್ಡಿಯನ್ನು ಮತ್ತು ಅಸಲು ಪಾವತಿ ಮಾಡುವುದರ ಮೇಲೆ ಸೆಪ್ಟೆಂಬರ್ 30ರವರೆಗೆ ವಿನಾಯಿತಿ ಘೋಷಣೆ.

ಆಧಾರ: ವಿಜಯವಾಣಿ, ದಿನಾಂಕ:22.01.2021.

## 11. ಕಡಿಮೆ ವೇತನ ಇದ್ರೂ ಸಿಗುತ್ತೆ ಗ್ರೀನ್ ಕಾರ್ಡ್:ವಲಸೆ ವಿಧೇಯಕದಲ್ಲಿದೆ ಅನುಕೂಲ

ಡೆಮಾಕ್ರಾಟ್‌ನ ಜೋ ಬೈಡೆನ್ ಅವರು ಅಧ್ಯಕ್ಷರಾಗಿ ಅಧಿಕಾರ ಸ್ವೀಕರಿಸುತ್ತಲೇ ಅಮೆರಿಕದಲ್ಲಿ ವಲಸಿಗರಿಗೆ ಕೆಂಪುಹಾಸಿನ ಸ್ವಾಗತ ಸಿಗುವ ಎಲ್ಲ ಲಕ್ಷಣಗಳು ಗೋಚರಿಸಿವೆ. ಅಮೆರಿಕದಲ್ಲಿರುವ ಸಾವಿರಾರು ಭಾರತೀಯ ಐಟಿ ವೃತ್ತಿಪರರು, ಹಲವು ದಶಕಗಳಿಂದಲೂ ಕಾನೂನಾತ್ಮಕ ಖಾಯಂ ವಾಸ ಪ್ರಮಾಣಪತ್ರಕ್ಕಾಗಿ ಕಾಯುತ್ತಿರುವವರಿಗೂ ಹೊಸ ಆಶಾಕಿರಣ ಮೂಡಿದೆ.

46ನೇ ಅಧ್ಯಕ್ಷರಾಗಿ ಪ್ರಮಾಣ ಸ್ವೀಕರಿಸಿದ ಕೆಲವೇ ಗಂಟೆಗಳಲ್ಲಿ ಬೈಡೆನ್, ತಮ್ಮ ಮಹತ್ವಾಕಾಂಕ್ಷಿ ವಲಸೆ ಸುಧಾರಣಾ ವಿಧೇಯಕವನ್ನು ಕಾಂಗ್ರೆಸ್‌ನ ಅನುಮೋದನೆಗೆ ಕಳುಹಿಕೊಟ್ಟಿದ್ದಾರೆ. ಯುಎಸ್ ನಾಗರಿಕತ್ವ ಕಾಯ್ದೆ 2021 ಎಂಬ ಹೆಸರಿನ ವಿಧೇಯಕ ಇದಾಗಿದೆ.

**ಕಡಿಮೆ ವೇತನವಿದ್ರೂ ಗ್ರೀನ್ ಕಾರ್ಡ್:** ಹೊಸ ವಿಧೇಯಕದಿಂದಾಗಿ ಕುಟುಂಬ ಆಧಾರಿತ ವಲಸೆ ವ್ಯವಸ್ಥೆಯಲ್ಲಿ ಭಾರೀ ಸುಧಾರಣೆಯಾಗಲಿದೆ. ವೀಸಾಗಾಗಿ ದೀರ್ಘಾವಧಿಯ ಕಾಯುವಿಕೆ ತಪ್ಪಲಿದೆ.

ಪ್ರತಿ ದೇಶಕ್ಕೆ ವಿಧಿಸಲಾಗುತ್ತಿದ್ದ ವೀಸಾ ಮಿತಿಯೂ ಏರಿಕೆಯಾಗಲಿದೆ ಎಂದು ಶ್ವೇತಾಭವನದ ಅಧಿಕಾರಿಯೊಬ್ಬರು ಮಾಹಿತಿ ನೀಡಿದ್ದಾರೆ. ಅಲ್ಲದೆ, ವಿಜ್ಞಾನ, ತಂತ್ರಜ್ಞಾನ, ಎಂಜಿನಿಯರಿಂಗ್, ಗಣಿತ ಮತ್ತಿತರ ಕ್ಷೇತ್ರಗಳಲ್ಲಿ ಪದವಿಯನ್ನು ಅಮೆರಿಕದ ವಿವಿಗಳಲ್ಲಿ ಪೂರೈಸಿದವರು ಅಮೆರಿಕದಲ್ಲೇ ಉಳಿಯಲೂ ಅವಕಾಶ ಸಿಗಲಿದೆ. ಕಡಿಮೆ ವೇತನ ಹೊಂದಿರುವವರೂ ಗ್ರೀನ್ ಕಾರ್ಡ್ ಹೊಂದುವ ಅವಕಾಶವನ್ನು ಪಡೆಯಲಿದ್ದಾರೆ. ಇದೇ ವೇಳೆ, ಈ ವಿಧೇಯಕದ ಕುರಿತು ರಿಪಬ್ಲಿಕನ್ ಪಕ್ಷದ ಕೆಲವು ಸಂಸದರು ಆಕ್ಷೇಪವನ್ನು ವ್ಯಕ್ತಪಡಿಸಿದ್ದು, ವಿಧೇಯಕವು ಸಾಕಷ್ಟು ಗಡಿ ಭದ್ರತಾ ನಿಯಮಗಳನ್ನು ಒಳಗೊಂಡಿಲ್ಲ ಎಂದು ಆರೋಪಿಸಿದ್ದಾರೆ.

ಆಧಾರ: ಉದಯವಾಣಿ, ದಿನಾಂಕ:23.01.2021.

## 12. ಮಾನವಕುಲಕ್ಕೆ ಕಂಟಕವಾಗಲಿದೆಯೇ ಶಿಥಿಲ ಕಟ್ಟಡಗಳು

ಇನ್ನು ನಾಲ್ಕು ವರ್ಷಗಳಲ್ಲಿ ಭಾರತದ ಸಾವಿರಕ್ಕೂ ಅಧಿಕ ಅಣೆಕಟ್ಟುಗಳಿಗೆ 50ವರ್ಷ ತುಂಬಲಿದ್ದು, ಇವುಗಳೇನಾದರೂ ಕುಸಿದು ಬಿದ್ದರೆ ಭಾರೀ ಪ್ರಮಾಣದ ಜೀವಹಾನಿ ಖಚಿತ.

ಇಂಥದ್ದೊಂದು ಎಚ್ಚರಿಕೆಯ ಸಂದೇಶ ನೀಡಿರುವುದು ವಿಶ್ವಸಂಸ್ಥೆ. ಜಗತ್ತಿನಾದ್ಯಂತ ಬಾಳಿಕೆಯ ಅವಧಿ ಪೂರ್ಣಗೊಳ್ಳುತ್ತಿರುವ ಸಾವಿರಾರು ಅಣೆಕಟ್ಟುಗಳಿದ್ದು, ಇವುಗಳಿಂದ ಅಪಾಯ ಕಟ್ಟಿಟ್ಟ ಬುತ್ತಿ ಎಂದು ವಿಶ್ವಸಂಸ್ಥೆಯ ವಿವಿಯೊಂದರ ವರದಿ ಹೇಳಿದೆ.

ಜಗತ್ತಿನಲ್ಲಿರುವ 58,700 ಬೃಹತ್ ಅಣೆಕಟ್ಟುಗಳ ಪೈಕಿ ಬಹುತೇಕ ಡ್ಯಾಂಗಳನ್ನು 1930 ರಿಂದ 1970ರ ಅವಧಿಯಲ್ಲಿ ನಿರ್ಮಿಸಲಾಗಿದ್ದು, ಇವುಗಳ ಬಾಳಿಕೆ 50–100 ವರ್ಷಗಳು. 20ನೇ ಶತಮಾನದಲ್ಲಿ ಸಾವಿರಾರು ಡ್ಯಾಂಗಳು ನಿರ್ಮಾಣವಾಗಿದ್ದು 2050ರ ವೇಳೆಗೆ ಇವುಗಳಿಗೇನಾದರೂ ಹಾನಿಯಾದರೆ, ಲಕ್ಷಾಂತರ ಜನರು ಜಲಸಮಾಧಿಯಾಗುವ ಆತಂಕವಿದೆ ಎಂದಿದೆ.

ಅಮೆರಿಕ, ಫ್ರಾನ್ಸ್, ಕೆನಡಾ, ಭಾರತ, ಜಪಾನ್, ಝೂಂಬಿಯ, ಜಿಂಬಾಬ್ವೆಯಲ್ಲಿನ ಅಣೆಕಟ್ಟುಗಳನ್ನು ಅಧ್ಯಯನ ಮಾಡಿ ಈ ವರದಿ ತಯಾರಿಸಲಾಗಿದೆ. ಜಲಸಂಗ್ರಹ ಮೂಲಸೌಕರ್ಯಗಳು ಶಿಥಿಲಗೊಳ್ಳುತ್ತಿರುವ ಬಗ್ಗೆ ದೇಶಗಳ ಗಮನ ಸೆಳೆಯುವುದು ಮತ್ತು ಈ ಜಲ ಕಂಟಕವನ್ನು ಸಮರ್ಥವಾಗಿ ನಿಭಾಯಿಸಲು ಪ್ರೇರೇಪಿಸುವುದೇ ಈ ವರದಿಯ ಉದ್ದೇಶ ಎಂದು ಹೇಳಲಾಗಿದೆ.

ಆಧಾರ: ಉದಯವಾಣಿ, ದಿನಾಂಕ:25.01.2021.

## 13. Tech giants, big biz groups laud Biden's immigration reforms

US IT sector and business groups, including technology giants Google and Apple, have applauded President Joe Biden's steps to initiate immigration reforms, underlining that

the move would boost American economy, create jobs and attract and retain the best talent from across the world.

On the day one of his presidency, Biden sent a comprehensive immigration bill to Congress which proposes major overhauls to the system, including granting legal status and a path to citizenship to tens of thousands of undocumented immigrants and other groups and reduce the time that family members must wait outside the US for green cards.

Called the US Citizenship Act of 2021, the legislation modernizes the immigration system, and also proposes to eliminate the per country cap for employment-based green cards, a move that would benefit thousands of Indian IT professionals whose current wait period for legal permanent residency runs into several decades.

Apple CEO Tim welcomed president Bidden's commitment to pursuing comprehensive immigration reform that reflects the American values of justice, fairness and dignity'. This effort will strengthen American communities and the path ways to opportunity this country has long fostered," he said in a statement late.

Google CEO Sundar Pichai in a tweet applauded Biden's quick action on Covid relief, Paris climate accord and immigration reform."Google has supported action on these important issues & we look forward to working with the new administration to help the US recover from the pandemic+grow our economy," said India-born Pichai.

US tech companies like Apple, Google and Microsoft employ a huge number of IT professionals from countries like India and China.

Biden also issued a series of executive orders, ranging from rejoining the Paris agreement on climate change, halting America's withdrawal from the World Health Organization, revoking Muslim travel ban, stopping immediate construction of Mexico border wall and extending the deferred Action for Childhood Arrivals (DACA) Programme for another four Years. "The Biden-Harris administration's planned actions make important and overdue investments in immigration reforms that can successfully meet the demands of a globally competitive, digital economy, including expand programmers for high skilled workers and families," said Jason Oxman, president and chief executive officer of the Information Technology Industry Council(ITI).

ITI is the global trade association for the tech sector, representing nearly 70 of the world's most innovative companies.

The trump administration had extended the freeze on H1-B visas along with other types of work visas and green cards until March 31.

The H-1B visa is a non-immigrant visa that allows US companies to employ foreign workers in specialty occupations that require theoretical or technical expertise.

Biden is also following through on his commitment to giving Dreamers a path to citizenship and to welcoming immigrants- regardless of their country of origin – seeking to come to the US from abroad, Oxman said.

Oxman said as America continues its economic recovery from Covid-19, ensuring US employers can attract and retain the best talent from around the world is paramount. "we commend President Biden for his swift and decisive actions, and for prioritizing this critical issue, he said.

The US Citizenship Act of 2021 will create an earned path to citizenship for Dreamers, undocumented immigrants living in the US, and the essential workers who have risked their lives to serve America, the White House had said. It is estimated that some 11 million undocumented people are living in the US. "We are encouraged that the Biden-Harris Administration is following through on their commitment to send meaningful immigration legislation to Congress that establishes a well-deserved pathway to citizenship for millions of undocumented people like us and our families," said FWD.Org, an advocacy group representing top Silicon valley firms, including Face book, Google, Microsoft and Drop Box.

**Joe Biden's Policy on immigration Reforms:**

- Pauses deportation of illegal migrants for 100 days
- Reverses travel ban on 13 Muslim-majority and African countries
- Relaxes H-1B visa regulations which will Benefit Indian it professionals
- Grants protection for DACA (undocumented migrants) program
- Hals construction of Turmp's US-Mexico border wall

**Meanwhile:**

Anticipating a "softer" Biden administration, a second migrant caravan of 3,000 is set to depart Honduras bound for the US just days after 2021's first caravan of nearly 8,000 migrants was violently broken up by Guatemalan forces. To deter migrants, the US, Mexico and Guatemala agreed on January 22, 2021, to bar migrant caravans from passing through their territories citing the Covid Pandemic.

**US Citizenship Act of 2021 Bill:**

(Requires approval of Congress)

- The proposed law will eliminate per-country cap for employment –based green cards. The bill, if passed, will bring relief for thousands of Indian It professionals who come to the US mainly on the **H-1B** work visas.
- To keep families together by recapturing unused visas to clear the backlog thereby eliminating lengthy waits.
- Increase in diversity visa programme from 55,000 visas to 80,000 per year.
- Make it easier for US-educated graduates with advanced Science, Technology, Engineering and Mathematics degrees to stay in the country.
- To provide dependents of H-1B visa holders work authorization
- To allow USCIS to adjust green cards based on macroeconomic conditions
- Incentivise higher wages for non-immigrant, high-skilled visas(like H-1B) to prevent unfair competition with American workers

**Executive rders (Effective immediately):**

- Freezes the rule requiring selection of H-1B workers based upon the highest salary for 60 days (until March 21,2021).
- Withdraws the rule redefining employer-employee relationships for H-1B purposes.
- The Department of Labour's policy requiring end clients to be involved in and take responsibility for the H-1B process has been withdrawn.

Courtesy:- Deccan Herald, dt:24.01.2021

## 14.ಆಡಳಿತಾರೂಢ ಪಕ್ಷದಿಂದಲೇ ನೇಪಾಳ ಪ್ರಧಾನಿಯ ಉಚ್ಚಾಟನೆ

ನೇಪಾಳ ಕಮ್ಯುನಿಸ್ಟ್ ಪಕ್ಷದಿಂದ (ಎನ್‌ಸಿಪಿ) ಪ್ರಧಾನಿ ಕೆ.ಪಿ.ಶರ್ಮಾ ಓಲಿ ಅವರನ್ನು ಉಚ್ಚಾಟಿಸಲಾಗಿದೆ. ಪಕ್ಷದ ಭಿನ್ನಮತೀಯ ಗುಂಪು ಕೇಂದ್ರೀಯ ಸಮಿತಿ ಸಭೆ ನಡೆಸಿ ಈ ತೀರ್ಮಾನ ಕೈಗೊಂಡಿದೆ.

"ಓಲಿ ಅವರ ಪಕ್ಷದ ಸದಸ್ಯತ್ವವನ್ನು ರದ್ದುಪಡಿಸಲಾಗಿದೆ," ಎಂದು ಎನ್‌ಸಿಪಿ ವಕ್ತಾರ ನಾರಾಯಣ್ ಕಾಜಿ ಶ್ರೇಷ್ಠ ಸುದ್ದಿಗಾರರಿಗೆ ತಿಳಿಸಿದ್ದಾರೆ. "ಎನ್‌ಸಿಪಿಯ ಸದಸ್ಯರಾಗಲು ಓಲಿಗೆ ಅರ್ಹತೆ ಇಲ್ಲ. ಅವರನ್ನು ಉಚ್ಚಾಟಿಸಿ ಶಿಸ್ತಿನ ಕ್ರಮಕ್ಕೆ ಮುಂದಾಗುತ್ತಿದ್ದೇವೆ. ಅವರ ಪಕ್ಷ ವಿರೋಧಿ ಚಟುವಟಿಕೆಗಳ ಪಟ್ಟಿ ಮಾಡಿ ಅದಕ್ಕೆ ಸೂಕ್ತ ಸ್ಪಷ್ಟನೆ ನೀಡುವಂತೆಯೂ ಸೂಚಿಸಿದ್ದೇವೆ. ಆದರೆ ಯಾವುದೇ ಪ್ರತಿಕ್ರಿಯೆ ಇನ್ನು ಬಂದಿಲ್ಲ," ಎಂದು ಎನ್‌ಸಿಪಿ ಭಿನ್ನಮತೀಯ ಗುಂಪಿನ ಮುಖಂಡ ಮಾಧವ್ ಕುಮಾರ್ ನೇಪಾಳ್ ಹೇಳಿದ್ದಾರೆ. ನೇಪಾಳದಲ್ಲಿ ಸಂಸತ್ ವಿಸರ್ಜನೆಯ ನಂತರ ರಾಜಕೀಯ ಬಿಕ್ಕಟ್ಟು ಉಲ್ಬಣವಾಗುತ್ತಿದೆ.

ಆಧಾರ: ವಿಜಯ ಕರ್ನಾಟಕ, ದಿನಾಂಕ:25.01.2021.

## 15.ಸಂಗಾತಿ ವೀಸಾ ನಿಷೇಧ ಹಿಂದಕ್ಕೆ

ಎಚ್–1 ಬಿ ವೀಸಾ ಅಡಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಉದ್ಯೋಗಿಯ ಪತ್ನಿ ಅಥವಾ ಪತಿ ಸಂಗಾತಿ ವೀಸಾ(ಎಚ್–14ವೀಸಾ) ಅಡಿಯಲ್ಲಿ ಅಮೆರಿಕದಲ್ಲಿ ಕೆಲಸ ಮಾಡುವುದಕ್ಕೆ ವಿಧಿಸಿದ್ದ ನಿಷೇಧವನ್ನು ಅಧ್ಯಕ್ಷ ಬೈಡೆನ್ ಹಿಂಪಡೆದಿದ್ದಾರೆ. ಇದರಿಂದ ಅಮೆರಿಕದಲ್ಲಿ ಕಾರ್ಯನಿರ್ವಹಿಸುತ್ತಿರುವ ಸುಮಾರು 1 ಲಕ್ಷ ಭಾರತೀಯ ಸಂಗಾತಿಗಳು ಅದರಲ್ಲೂ ಬಹುತೇಕ ಮಹಿಳೆಯರಿಗೆ ಅನುಕೂಲವಾಗಲಿದೆ.

ಈ ಸಂಬಂಧ ಟ್ವೀಟ್ ಮಾಡಿರುವ ಉಪಾಧ್ಯಕ್ಷೆ ಕಮಲಾ ಹ್ಯಾರಿಸ್, 'ಟ್ರಂಪ್ ಆಡಳಿತ ಕೈಗೊಂಡ ಕ್ರಮದಿಂದಾಗಿ ವೈದ್ಯೆ, ನರ್ಸ್, ವಿಜ್ಞಾನಿಗಳು, ಶಿಕ್ಷಣ ತಜ್ಞರು ಹಾಗೂ ಇನ್ನಿತರ ವೃತ್ತಿಯನ್ನು ಮಾಡುತ್ತಿರುವ ವಲಸೆ ಮಹಿಳೆಯರು ತಮ್ಮ ವೃತ್ತಿಯನ್ನು ತ್ಯಜಿಸಬೇಕಾಗಿ ಬಂದಿತ್ತು. ಸಂಗಾತಿ ವೀಸಾಕ್ಕೆ ವಿಧಿಸಿದ್ದ ನಿಷೇಧ ಕೊನೆಗೊಂಡಿದೆ' ಎಂದು ಹೇಳಿದ್ದಾರೆ.

ಅಮೆರಿಕದಲ್ಲಿ 6 ಅಥವಾ ಅದಕ್ಕಿಂತ ಹೆಚ್ಚು ವರ್ಷ ಕಾರ್ಯನಿರ್ವಹಿಸುವುದಕ್ಕೆ ಅನುಮತಿ ಪಡೆದ ಉದ್ಯೋಗಿಗಳ ಪತ್ನಿ/ಪತಿ ಎಚ್–4 ವೀಸಾ (ಸಂಗಾತಿ ವೀಸಾ)ಕ್ಕೆ ಅರ್ಜಿ ಸಲ್ಲಿಸಿ ಉದ್ಯೋಗ ನಿರ್ವಹಿಸಲು ಒಬಾಮ ಸರ್ಕಾರ 2015ರಲ್ಲಿ ಅವಕಾಶ ನೀಡಿತ್ತು ಆದರೆ, ಇದರಿಂದ ಅಮೆರಿಕನ್ನರ ಉದ್ಯೋಗಕ್ಕೆ ಕುತ್ತು ಬರುತ್ತಿದೆ ಎಂಬ ಕಾರಣಕ್ಕೆ ಟ್ರಂಪ್ ಆಡಳಿತ 2019ರಲ್ಲಿ ಸಂಗಾತಿ ವೀಸಾದ ಅಡಿ ವೃತ್ತಿ ಕೈಗೊಳ್ಳುವುದಕ್ಕೆ ನೀಡಿದ್ದ ಅನುಮತಿಯನ್ನು ಹಿಂಪಡೆದು ಕೊಂಡಿತ್ತು.

ಪತಿಯ ಜೊತೆ ಅಮೆರಿಕಕ್ಕೆ ತೆರಳಿದ ಬಹುತೇಕ ಮಹಿಳೆಯರು ತಮಗೆ ಕೆಲಸ ನಿರ್ವಹಿಸುವ ಸಾಮರ್ಥ್ಯ ಇದ್ದರೂ, ವೃತ್ತಿಯನ್ನು ಅನಿವಾರ್ಯವಾಗಿ ತ್ಯಜಿಸಬೇಕಾಗಿತ್ತು. ಎಚ್–14 ವೀಸಾದ ಮೇಲಿನ ನಿಷೇಧಕ್ಕೆ ಸದ್ಯ 60 ದಿನಗಳ ಮಟ್ಟಿಗೆ ಹಿಂಪಡೆಯಲಾಗಿದ್ದು, ಕಾಯಂ ಆಗಿ ವಿಸ್ತರಿಸುವ ನಿರೀಕ್ಷೆ ಇದೆ.

ಆಧಾರ: ಕನ್ನಡ ಪ್ರಭ, ದಿನಾಂಕ:28.01.2021.

# ಭಾಗ–10

# ಪ್ರಶಸ್ತಿಗಳು

## 1. ಸಂಗೀತ ನೃತ್ಯ ಅಕಾಡೆಮಿ ಪ್ರಶಸ್ತಿ ಪ್ರಕಟ

ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯು 2020–21ನೇ ಸಾಲಿನ ಕರ್ನಾಟಕ ಕಲಾಶ್ರೀ ಪ್ರಶಸ್ತಿಯನ್ನು ಪ್ರಕಟಿಸಿದೆ. ಸಂಗೀತ ಮತ್ತು ನೃತ್ಯ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿದ ಕಲಾವಿದರಿಗೆ ಈ ಪ್ರಶಸ್ತಿಯನ್ನು ನೀಡಲಾಗುತ್ತಿದ್ದು, ಅಕಾಡೆಮಿಯ ಅಧ್ಯಕ್ಷ ಪಂಡಿತ್ ಅನೂರು ಅನಂತ ಕೃಷ್ಣ ಶರ್ಮ ಅಧ್ಯಕ್ಷತೆಯಲ್ಲಿ ನಡೆದ ಸರ್ವಸದಸ್ಯರ ಸಭೆಯಲ್ಲಿ ಸಾಧಕರನ್ನು ಆಯ್ಕೆ ಮಾಡಲಾಗಿದೆ.

ಈ ಬಾರಿಯ ಗೌರವ ಪ್ರಶಸ್ತಿಗೆ ಹಿಂದೂಸ್ತಾನಿ ಸಂಗೀತದ ಹಿರಿಯ ಗಾಯಕ ಧಾರವಾಡದ ಆರ್.ಪಿ.ಅಸುಂಡಿ ಹಾಗೂ ಸುಗಮ ಸಂಗೀತ ಕಲಾವಿದೆ ಹರಿಹರಪುರದ ರಮಾ ಅರವಿಂದ ಅವರನ್ನು ಆಯ್ಕೆ ಮಾಡಲಾಗಿದೆ. ಆರ್.ಪಿ.ಅಸುಂಡಿಯವರು 16ನೇ ವಯಸ್ಸಿನಿಂದಲೇ ಸಂಗೀತದತ್ತ ಆಸಕ್ತಿ ಬೆಳೆಸಿಕೊಂಡು ಗಾಯಕರಾಗಿ ಶಿಕ್ಷಕರಾಗಿ ಸಾವಿರಾರು ಶಿಷ್ಯಂದಿರನ್ನು ಬೆಳೆಸಿದವರು. ರಾಜಗುರು ಸಂಗೀತ ಪ್ರತಿಷ್ಠಾನದಲ್ಲಿ ಸಂಗೀತ ಶಿಕ್ಷಕರಾಗಿ ಸೇವೆ ಸಲ್ಲಿಸಿರುವ ಇವರು ಆಕಾಶವಾಣಿ ಕಲಾವಿದರೂ ಹೌದು. ರಮಾ ಅರವಿಂದರು ಸುಗಮ ಸಂಗೀತ ಕಲಾವಿದೆ ಮಾತ್ರವಲ್ಲ ಕನ್ನಡ ಚಿತ್ರರಂಗದಲ್ಲಿ ಹಿನ್ನೆಲೆ ಗಾಯಕಿಯಾಗಿಯೂ ಕೆಲಸ ಮಾಡಿದ್ದಾರೆ. ಈ ವರ್ಷದ ವಿಶೇಷ ಪ್ರಶಸ್ತಿಗೆ ಮೈಸೂರಿನ ಗಣೇಶ್ ಭಟ್ (ಕೀಬೋರ್ಡ್) ಅವರು ಆಯ್ಕೆಯಾಗಿದ್ದಾರೆ.

ಪ್ರಶಸ್ತಿ ಪ್ರದಾನ ಸಮಾರಂಭವು ಫೆಬ್ರವರಿ 6 ರಂದು ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿ ನಡೆಯಲಿದೆ. ಗೌರವ ಪ್ರಶಸ್ತಿಗೆ ರೂ.50,000 ಹಾಗೂ ವಾರ್ಷಿಕ ಪ್ರಶಸ್ತಿಗೆ ರೂ.25,000 ಗೌರವಧನ ನೀಡಲಾಗುತ್ತದೆ ಎಂದು ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ ಪತ್ರಿಕಾ ಪ್ರಕಟಣೆಯಲ್ಲಿ ತಿಳಿಸಿದೆ.

ಆಧಾರ:–ವಿಜಯ ಕರ್ನಾಟಕ, ದಿನಾಂಕ: 01.01.2021

## 2. 121 ಪೊಲೀಸರಿಗೆ ಮುಖ್ಯಮಂತ್ರಿ ಪದಕ

2019ನೇ ಸಾಲಿನ ಮುಖ್ಯಮಂತ್ರಿ ಪದಕ ಪುರಸ್ಕೃತರ ಪಟ್ಟಿ ಪ್ರಕಟಗೊಂಡಿದ್ದು, ಐವರು ಐಪಿಎಸ್ ಅಧಿಕಾರಿಗಳು ಸೇರಿ 121 ಮಂದಿ ಪೊಲೀಸರು ಮುಖ್ಯಮಂತ್ರಿ ಪದಕಕ್ಕೆ ಭಾಜನರಾಗಿದ್ದಾರೆ. ಐಪಿಎಸ್ ಅಧಿಕಾರಿಗಳಾದ ಉತ್ತರ ವಲಯ ಐಜಿಪಿ ಹೆಚ್.ಜಿ.ರಾಘವೇಂದ್ರ ಸುಹಾಸ್, ಬೆಳಗಾವಿ ಎಸ್ಪಿ ಲಕ್ಷ್ಮಣ ನಿಂಬರಗಿ, ಬಾಗಲಕೋಟೆ ಎಸ್ಪಿ ಲೋಕೇಶ್ ಜಗಲಾಸರ್, ಚಿಕ್ಕಬಳ್ಳಾಪುರ ಎಸ್ಪಿ ಜಿ.ಕೆ.ಮಿಥುನ್, ಶಿವಮೊಗ್ಗ ಎಸ್ಪಿ ಕೆ.ಎಂ.ಶಾಂತರಾಜು, ಡಿವೈಎಸ್ಪಿಗಳಾದ ಪರಮೇಶ್ವರ್ ಹೆಗಡೆ, ಕೆ.ವಿ.ಶ್ರೀಧರ್, ಬಿ.ಲಕ್ಕೇಗೌಡ, ಡಾ:ರಾಮ ಎಲ್.ಅರಸಿದ್ದಿ, ಪ್ರತಾಪ್ ಸಿಂಗ್ ಥೋರಟ್, ಮಂಜುನಾಥ್, ಬಿ.ಕಾವಡಿ, ಹೆಚ್.ಎನ್.ಸಿದ್ದಯ್ಯ, ವಿದ್ಯಾನಂದ ವಿ.ನಾಯಕ್, ಜಿ.ಎಂ.ತಿಪ್ಪೇಸ್ವಾಮಿ ಹಾಗೂ ಇನ್ಸ್‌ಪೆಕ್ಟರುಗಳಾದ ಜಿ.ಪ್ರವೀಣ್ ಬಾಬು, ಬಿ.ಭರತ್, ಎಂ.ಪ್ರಶಾಂತ್, ಎಸ್.ಆರ್. ವೀರೇಂದ್ರ ಪ್ರಸಾದ್ ಅವರು ಮುಖ್ಯಮಂತ್ರಿಗಳ ಪದಕಕ್ಕೆ ಭಾಜನರಾಗಿದ್ದಾರೆ.

ಆಧಾರ: ಕನ್ನಡಪ್ರಭ, ದಿನಾಂಕ 01.01.2021

## 3. ಜಾನಪದ ಅಕಾಡೆಮಿ ಪ್ರಶಸ್ತಿ ಪ್ರಕಟ

ಜಾನಪದ ಅಕಾಡೆಮಿಯ ವಾರ್ಷಿಕ ಗೌರವ ಪ್ರಶಸ್ತಿಗೆ ಜಾನಪದ ತಜ್ಞರಾದ ದಕ್ಷಿಣ ಕನ್ನಡ ಜಿಲ್ಲೆಯ ಡಾ:ಗಾಯತ್ರಿ ನಾವಡ, ಕಲಬುರ್ಗಿ ಜಿಲ್ಲೆಯ ಬಸವರಾಜು ಸಬರದ ಭಾಜನರಾಗಿದ್ದಾರೆ.

ಡಾ:ಜೀ.ಶಂ. ಪ್ರಶಸ್ತಿಗೆ ಗಾಯಿತ್ರಿ ನಾವಡ ಮತ್ತು ಬಸವರಾಜು ಸಬರದ ಅವರಿಗೆ ಡಾ:ಗದ್ದಗೀಮಠ ಪ್ರಶಸ್ತಿಗೆ ಆಯ್ಕೆಗೊಂಡಿದ್ದಾರೆ. ಸುದ್ದಿಗೋಷ್ಠಿಯಲ್ಲಿ ಕರ್ನಾಟಕ ಜಾನಪದ ಅಕಾಡೆಮಿಯ ಅಧ್ಯಕ್ಷೆ ಮಾತಾ ಬಿ.ಮಂಜಮ್ಮ ಜೋಗತಿ ಪ್ರಶಸ್ತಿ ವಿಜೇತರ ಪಟ್ಟಿ ಪ್ರಕಟಿಸಿದರು.

**ಪ್ರಶಸ್ತಿ ಪುರಸ್ಕೃತರು**

ಎಂ.ಕೆ.ಸಿದ್ದರಾಜು–ಜಾನಪದ ಗಾಯನ (ಬೆಂಗಳೂರು), ಹೊನ್ನಗಂಗಮ್ಮ–ಸೋಭಾನೆ ಪದ (ಬೆಂಗಳೂರು ಗ್ರಾಮಾಂತರ), ತಿಮ್ಮಯ್ಯ–ತಮಟೆ ವಾದನ (ರಾಮನಗರ), ಕೆ.ಎನ್.ಚಂಗಪ್ಪ–ಭಜನೆ ತತ್ವಪದ (ಕೋಲಾರ), ನಾರಾಯಣಪ್ಪ–ಕೀಲುಕುದುರೆ (ಚಿಕ್ಕಬಳ್ಳಾಪುರ), ಸಿ.ವಿ.ವೀರಣ್ಣ–ವೀರಭದ್ರನಕುಣಿತ (ತುಮಕೂರು), ಭಾಗ್ಯಮ್ಮ_ಸೋಬಾನೆ ಹಾಡುಗಾರಿಕೆ (ದಾವಣಗೆರೆ), ಕೆಂಚಮ್ಮ–ಮದುವೆ ಹಾಡು (ಚಿತ್ರದುರ್ಗ), ಕೆ.ಯುವರಾಜು–ಜಾನಪದ ಹಾಡುಗಾರಿಕೆ (ಶಿವಮೊಗ್ಗ), ಕುಮಾರಸ್ವಾಮಿ–ಕಂಸಾಳೆ ಹಾಡುಗಾರಿಕೆ (ಮೈಸೂರು), ಭೂಮಿಗೌಡ–ಕೋಲಾಟ (ಮಂಡ್ಯ), ಗ್ಯಾರಂಟಿ ರಾಮಣ್ಣ–ಹಾಡುಗಾರಿಕೆ (ಹಾಸನ), ಎಂ.ಸಿ.ಭೋಗಪ್ಪ–ಚೌಡಿಕೆಪದ (ಚಿಕ್ಕಮಗಳೂರು), ಗೋಪಾಲಕೃಷ್ಣ ಬಂಗೇರಾಮದ್ವ–ಗೊಂಬೆಕುಣಿತ (ದಕ್ಷಿಣ ಕನ್ನಡ), ರಮೇಶ್ ಕಲ್ಮಾಡಿ–ಕರಗ ಕೋಲಾಟ (ಉಡುಪಿ), ಕೆ.ಕೆ.ಪೊನ್ನಪ್ಪ–ಬೋಳೋಪಾಟ್ (ಕೊಡಗು, ಹೊನ್ನಮ್ಮ–ಸೋಬಾನೆಪದ (ಚಾಮರಾಜನಗರ), ಮುತ್ತಪ್ಪ ಅಲ್ಲಪ್ಪ ಸವದಿ–ತತ್ವಪದ (ಬೆಳಗಾವಿ), ಮಲ್ಲೇಶಪ್ಪ ಫಕೀರಪ್ಪ ತಡಸದ–ತತ್ವಪದ (ಧಾರವಾಡ), ಸುರೇಶ ರಾಮಚಂದ್ರ ಜೋಶಿ–ಡೊಳ್ಳಿನ ಹಾಡುಗಾರಿಕೆ (ವಿಜಯಪುರ), ಕೃಷ್ಣಪ್ಪ ಮಲ್ಲಪ್ಪ ಬೆಣ್ಣೂರ–ತತ್ವಪದ ಮತ್ತು ಭಜನೆ (ಬಾಗಲಕೋಟೆ), ಸಹದೇವಪ್ಪ ಈರಪ್ಪ ನಡಗೇರಾ–ಲಾವಣಿಪದ (ಉತ್ತರಕನ್ನಡ), ಬಸವರಾಜ ತಿರುಕಪ್ಪ ಶಿಗ್ಗಾಂವಿ–ತತ್ವಪದ (ಹಾವೇರಿ), ಮುತ್ತಪ್ಪ ರೇವಣಪ್ಪ ರೋಣದ–ಪುರುವಂತಿಕೆ (ಗದಗ), ಸಾಯಬಣ್ಣ–ಹಲಗೆವಾದನ (ಕಲಬುರಗಿ), ವೈಜಿನಾಥಯ್ಯ ಸಂಗಯ್ಯಸ್ವಾಮಿ–ಚಕ್ರಿ ಭಜನೆ (ಬೀದರ್), ಜಂಬಣ್ಣ–ಹಗಲುವೇಷ (ರಾಯಚೂರು), ತಿಪ್ಪಣ್ಣ ಅಂಬಾಜಿ ಸುಗತೇಕರ–ಗೊಂದಲಿಗರು (ಕೊಪ್ಪಳ), ಗೋಂದಳಿ ರಾಮಪ್ಪ–ಗೊಂದಳಿಪದ (ಬಳ್ಳಾರಿ), ಗೋಗಿ ಬಸವ ಲಿಂಗಮ್ಮ–ಮದುವೆ ಹಾಡು (ಯಾದಗಿರಿ), ಜಾನಪದ ಅಕಾಡೆಮಿ ಪ್ರಶಸ್ತಿಗೆ ಆಯ್ಕೆಯಾಗಿದ್ದಾರೆ.

ಕಲಾವಿದರಿಗೆ ತಲಾ ರೂ.25 ಸಾವಿರ ಮೊತ್ತದ ಜೊತೆಗೆ ಸ್ಮರಣಿಕೆ ನೀಡಲಾಗುತ್ತದೆ. ತಜ್ಞ ಪ್ರಶಸ್ತಿ ಪುರಸ್ಕೃತರಿಗೆ ತಲಾ ರೂ.50 ಸಾವಿರ ಪ್ರಶಸ್ತಿ ಮೊತ್ತದ ಜೊತೆಗೆ ಸ್ಮರಣಿಕೆ ನೀಡಿ ಗೌರವಿಸಲಾಗುತ್ತದೆ.

ಆಧಾರ:– ಸಂಯುಕ್ತ ಕರ್ನಾಟಕ, ದಿನಾಂಕ: 05.01.2021

## 4. ಹಿರಿಯ ಕವಿ ಪ್ರೊ. ಶಿವಪ್ರಕಾಶಗೆ ಅಂಬಿಕಾತನಯದತ್ತ ಪ್ರಶಸ್ತಿ

ವರಕವಿ ಡಾ:ದ.ರಾ.ಬೇಂದ್ರೆ ಅವರ 125ನೇ ಜನ್ಮ ದಿನಾಚರಣೆ ಪ್ರಯುಕ್ತ ಕೊಡುವ ಅಂಬಿಕಾತಯನದತ್ತ ರಾಷ್ಟ್ರೀಯ ಪ್ರಶಸ್ತಿಗೆ ಹಿರಿಯ ಕವಿ, ವಿಮರ್ಶಕ ಪ್ರೊ. ಹೆಚ್.ಎಸ್.ಶಿವಪ್ರಕಾಶ ಅವರನ್ನು ಆಯ್ಕೆ ಮಾಡಲಾಗಿದೆ ಎಂದು ಡಾ: ದ.ರಾ.ಬೇಂದ್ರ ರಾಷ್ಟ್ರೀಯ ಸ್ಮಾರಕ ಟ್ರಸ್ಟ್ ಅಧ್ಯಕ್ಷ ಡಾ: ಡಿ.ಎಂ.ಹಿರೇಮಠ ಹೇಳಿದರು. ಸುದ್ದಿಗೋಷ್ಠಿಯಲ್ಲಿ ಮಾತನಾಡಿ, ಡಾ:ಗುರುಪಾದಮರೆಗುದ್ದಿ ಅಧ್ಯಕ್ಷರಾದ ಹಾಗೂ ಪ್ರೊ: ಶಿವಾನಂದ ಕೆಳಗಿನಮನಿ ಹಾಗೂ ಡಾ:ತಾರಿಣಿ ಶುಭದಾಯಿನಿ ಸದಸ್ಯರಾದ ಪ್ರಶಸ್ತಿ ಆಯ್ಕೆ ಸಮಿತಿಯು ಮೂವರ ಹೆಸರನ್ನು ಸಲ್ಲಿಸಿತ್ತು. ಅದರ ಅನ್ವಯ ಟ್ರಸ್ಟ್ ಮಂಡಳಿ ಸಭೆಯಲ್ಲಿ ಮೊದಲ ಹೆಸರನ್ನು ಸರ್ವಾನುಮತದಿಂದ ಪರಿಗಣಿಸಿ ಆಯ್ಕೆ ಮಾಡಲಾಗಿದೆ ಎಂದರು. ಪ್ರಶಸ್ತಿಯು ಒಂದು ಲಕ್ಷ ರೂ. ನಗದು ಹಾಗೂ ಫಲಕ ಒಳಗೊಂಡಿದ್ದು, ಜನವರಿ 31 ರಂದು ಬೇಂದ್ರೆ ಭವನದಲ್ಲಿ ಪ್ರೊ. ಹೆಚ್.ಎಸ್. ಶಿವಪ್ರಕಾಶ ಅವರಿಗೆ ಪ್ರದಾನ ಮಾಡಲಾಗುವುದು. ಅವರ ಸಾಹಿತ್ಯ ಪರಿಚಯಿಸುವ ಗೋಷ್ಠಿ ಸಂವಾದಗಳು ನಡೆಯಲಿವೆ. ಈ ಸಲ ಟ್ರಸ್ಟ್‌ಗೆ ನಿರೀಕ್ಷೆಗೆ ತಕ್ಕಂತೆ ಅನುದಾನ ಲಭಿಸಿದ ಕಾರಣ ಕಾರ್ಯಚಟುವಟಿಕೆಗಳು ಸುಗಮವಾಗಿ ಸಾಗುವಂತಾಗಿದೆ ಎಂದು ಹೇಳಿದರು. ಪತ್ರಿಕಾಗೋಷ್ಠಿಯಲ್ಲಿ ಟ್ರಸ್ಟ್ ಸದಸ್ಯ ಕಾರ್ಯದರ್ಶಿ ಡಾ:ಗೋಪಾಲಕೃಷ್ಣ ಬಿ. ಸದಸ್ಯ ಡಾ:ರಾಜೇಂದ್ರ ನಾಯಕ್ ಇದ್ದರು.

ಆಧಾರ:–ವಿಜಯವಾಣಿ , ದಿನಾಂಕ: 20.01.2021

## 5. ರಾಜ್ಯದ ಇಬ್ಬರಿಗೆ ಬಾಲ ಪುರಸ್ಕಾರ

ಕರ್ನಾಟಕದ ಇಬ್ಬರು ಬಾಲಕರು ಸೇರಿ 32 ಮಕ್ಕಳು ಕೇಂದ್ರ ಸರ್ಕಾರ ನೀಡುವ 2021ನೇ ಸಾಲಿನ ಪ್ರಧಾನಮಂತ್ರಿ ರಾಷ್ಟ್ರೀಯ ಬಾಲ ಪುರಸ್ಕಾರ ಪ್ರಶಸ್ತಿಗೆ ಭಾಜನರಾಗಿದ್ದಾರೆ. ಕೆ.ರಾಕೇಶ್‌ಕೃಷ್ಣ

ಮತ್ತು ವೀರ್ ಕಶ್ಯಪ್ ಪ್ರಶಸ್ತಿಗೆ ಆಯ್ಕೆಯಾದ ರಾಜ್ಯದ ಮಕ್ಕಳು. ರಾಕೇಶ್‌ಕೃಷ್ಣ ದಕ್ಷಿಣ ಕನ್ನಡದ ಪುತ್ತೂರು ತಾಲ್ಲೂಕಿನ ಬನ್ನೂರು ಗ್ರಾಮದವರು.

ಆಧಾರ್: ಕನ್ನಡಪ್ರಭ, ದಿನಾಂಕ 25.01.2021

## 6. 119 ಸಾಧಕರಿಗೆ ಒಲಿದ ಭಾರತದ ಉನ್ನತ ನಾಗರಿಕ ಗೌರವ

ಪ್ರಸಿದ್ಧ ವೈದ್ಯ ವಿಜ್ಞಾನಿ, ಹೃದ್ರೋಗ ತಜ್ಞ ಡಾ:ಬಿ.ಎಂ.ಹೆಗ್ಡೆ, ಜ್ಞಾನಪೀಠ ಪುರಸ್ಕೃತ ಸಾಹಿತಿ ಡಾ.ಚಂದ್ರಶೇಖರ ಕಂಬಾರ, ರಾಜ್ಯ ಜಾನಪದ ಅಕಾಡಮಿ ಅಧ್ಯಕ್ಷೆ ಮಾತಾ ಮಂಜಮ್ಮ ಜೋಗತಿ, ವೇದವಿಜ್ಞಾನಿ ಡಾ:ಆರ್.ಎಲ್.ಕಶ್ಯಪ್ ಮತ್ತು ಕ್ರೀಡಾಪಟು ಕೆ.ವೈ.ವೆಂಕಟೇಶ್ 2021 ಸಾಲಿನ ಪದ್ಮ ಪುರಸ್ಕಾರಕ್ಕೆ ಪಾತ್ರರಾಗಿರುವ ಪಂಚ ಕನ್ನಡಿಗರು. ವಿವಿಧ ಕ್ಷೇತ್ರಗಳಲ್ಲಿ ಸಾಧನೆ ಮೆರೆದಿರುವ 119 ಸಾಧಕರನ್ನು ಗಣರಾಜ್ಯೋತ್ಸವ ಹಿನ್ನೆಲೆಯಲ್ಲಿ ಪದ್ಮ ಗೌರವಕ್ಕೆ ಆಯ್ಕೆ ಮಾಡಲಾಗಿದೆ. ಇತ್ತೀಚೆಗೆ ನಿಧನರಾದ ಮೇರು ಗಾಯಕ ಎಸ್.ಪಿ.ಬಾಲಸುಬ್ರಮಣ್ಯಂಗೆ ಮರಣೋತ್ತರವಾಗಿ ಪದ್ಮವಿಭೂಷಣ ಪ್ರಶಸ್ತಿ ಘೋಷಿಸಲಾಗಿದೆ.

**ಜನರ ನೆಚ್ಚಿನ ಡಾಕ್ಟರ್:** ಭಾರತದ ಪ್ರಸಿದ್ಧ ವೈದ್ಯ ವಿಜ್ಞಾನಿ, ಹೃದ್ರೋಗ ತಜ್ಞ ಲೇಖಕ ಡಾ:ಬೆಳ್ಳೆ ಮೋನಪ್ಪ (ಬಿ.ಎಂ.) ಹೆಗ್ಡೆ ದೇಶ, ವಿದೇಶಗಳ ಪ್ರಸಿದ್ಧರ ಒಡನಾಡಿಯಾಗಿದ್ದುಕೊಂಡೇ ಜನಸಾಮಾನ್ಯರ ನಾಡಿಮಿಡಿತಕ್ಕೆ ಸ್ಪಂದಿಸಿದವರು. ವೈದ್ಯರಾಗಷ್ಟೆ ಅಲ್ಲ ಸಮಾಜಕ್ಕೇನಾದರೂ ಒಳ್ಳೆಯದನ್ನು ಮಾಡಬೇಕು ಎನ್ನುವ ಜನರ ನೆಚ್ಚಿನ ಡಾಕ್ಟರ್ ರೋಗಿಗಳಿಗೆ ಧೈರ್ಯ ಹೇಳುವ ಮೂಲಕವೇ ವಾಸಿ ಮಾಡುವ ಖ್ಯಾತಿ ಹೊಂದಿದವರು. ದೇವರಿಗೆ ನನ್ನ ಧನ್ಯವಾದ, ದೇಶಕ್ಕೆ ಕೇಂದ್ರಕ್ಕೆ ವಂದನೆ. 2010 ರಲ್ಲಿ ಪದ್ಮಭೂಷಣ ಬಂದಿತ್ತು. ಪದ್ಮವಿಭೂಷಣದ ನಿರೀಕ್ಷೆ ಇತ್ತು. ಎಲ್ಲದಕ್ಕೂ ಸಮಯ ಬರಬೇಕು, ಈಗ ಬಂದಿದೆ, ಖುಷಿಯಾಗಿದೆ ಎಂದರು.

ಆಧಾರ:– ವಿಜಯವಾಣಿ, ದಿನಾಂಕ: 26.01.2021

# ಭಾಗ–11

# ಶ್ರದ್ಧಾಂಜಲಿ

## 1. ಆರ್.ಎನ್.ಶೆಟ್ಟಿ, ಶಿಕ್ಷಣ ಮತ್ತು ಉದ್ಯಮ ಸ್ಥಾಪಕರು

ಆರ್.ಎನ್.ಎಸ್ ಶಿಕ್ಷಣ ಮತ್ತು ಉದ್ಯಮ ಸಮೂಹಗಳ ಸ್ಥಾಪಕ ಆರ್.ಎನ್.ಶೆಟ್ಟಿ ಅವರಿಗೆ ವಿವಿಧ ಕ್ಷೇತ್ರದ ಗಣ್ಯರು ಶ್ರದ್ಧಾಂಜಲಿ ಸಲ್ಲಿಸಿದರು.

ನಗರದ ಚನ್ನಸಂದ್ರದಲ್ಲಿ ನೂತನವಾಗಿ ನಿರ್ಮಿಸಲಾಗಿರುವ ಡಾ.ಆರ್.ಎನ್.ಶೆಟ್ಟಿ ಸಭಾಂಗಣದಲ್ಲಿ ಏರ್ಪಡಿಸಲಾದ ಶ್ರದ್ಧಾಂಜಲಿ ಸಭೆಯಲ್ಲಿ ಪ್ರಭಾಕರ ಕೋರೆ, 'ಆರ್.ಎನ್.ಶೆಟ್ಟಿ ಅವರು ಹುಬ್ಬಳ್ಳಿ ಬಿಟ್ಟು ಬೆಂಗಳೂರಿಗೆ ಬಂದ ಬಳಿಕ ಉತ್ತರ ಕರ್ನಾಟಕದ ಭಾಗಕ್ಕೆ ಒಂದು ಕೊರತೆ ಉಂಟಾಗಿತ್ತು. ಅವರು ಹುಬ್ಬಳ್ಳಿಯಲ್ಲಿಯೇ ಇದ್ದಿದ್ದರೆ ಆ ಭಾಗದ ಜನತೆಗೆ ಹೆಚ್ಚು ಲಾಭವಾಗುತ್ತಿತ್ತು' ಎಂದರು.

ಶಂಕರ್ ಬಿದರಿ ಮಾತನಾಡಿ, 'ರಾಮಕೃಷ್ಣ ಹೆಗಡೆ ಅವರು ಆರ್.ಎನ್.ಶೆಟ್ಟಿ ಅವರನ್ನು ನನಗೆ ಮೊದಲು ಪರಿಚಯಿಸಿದರು. ಅವರೊಂದಿಗೆ ನಿರಂತರ ಒಡನಾಟ ಹೊಂದಿದ್ದೆ' ಎಂದು ತಿಳಿಸಿದರು.

ಆಧಾರ: ಪ್ರಜಾವಾಣಿ, ದಿನಾಂಕ: 04.01.2021

## 2. ಬಸವಂತರೆಡ್ಡಿ, ಮಾಜಿ ಶಾಸಕರು

ಸೇಡಂನ ಮಾಜಿ ಶಾಸಕ, ರಾಜಕೀಯ ಮುತ್ಸದ್ಧಿ ಬಸವಂತರೆಡ್ಡಿ ಪಾಟೀಲ್ ಮೋತಕಪಲ್ಲಿ ತೀವ್ರ ಅನಾರೋಗ್ಯದಿಂದ ನಿಧನರಾಗಿದ್ದಾರೆ. ಅನಾರೋಗ್ಯದಿಂದಾಗಿ ಕಲಬುರಗಿ ಖಾಸಗಿ ಆಸ್ಪತ್ರೆಗೆ ದಾಖಲಾಗಿದ್ದ ಅವರು ಚಿಕಿತ್ಸೆ ಫಲಿಸದೆ ಕೊನೆಯುಸಿರೆಳೆದಿದ್ದಾರೆ.

ಆಧಾರ: ಕನ್ನಡಪ್ರಭ, ದಿನಾಂಕ: 06.01.2021

## 3. ಉಸ್ತಾದ್ ಗುಲಾಮ್ ಮುಸ್ತಫಾ ಖಾನ್, ಹಿಂದೂಸ್ತಾನಿ ಸಂಗೀತಗಾರರು

ಮೂರು ಪದ್ಮ ಪ್ರಶಸ್ತಿಗಳಿಗೆ ಭಾಜನರಾಗಿದ್ದ ಹಿಂದೂಸ್ತಾನಿ ಸಂಗೀತ ಮಾಂತ್ರಿಕ ಭಾರತೀಯ ಶಾಸ್ತ್ರೀಯ ಸಂಗೀತ ಕ್ಷೇತ್ರದ ದಿಗ್ಗಜ, ಮೂರು ಪದ್ಮ ಪ್ರಶಸ್ತಿಗಳಿಗೆ ಭಾಜನರಾಗಿದ್ದ ಉಸ್ತಾದ್ ಗುಲಾಮ್ ಮುಸ್ತಫಾ ಖಾನ್(89) ಅವರು ಮುಂಬಯಿಯ ಬಾಂದ್ರಾದಲ್ಲಿರುವ ತಮ್ಮ ನಿವಾಸದಲ್ಲಿ ಕೊನೆಯುಸಿರೆಳೆದರು.

ತಂದೆಯಿಂದಲೇ ಶಾಸ್ತ್ರೀಯ ಸಂಗೀತದ ಆರಂಭಿಕ ಪಾಠಗಳನ್ನು ಕಲಿತ ಅವರು, ಬಳಿಕ ತಮ್ಮ ಸಹೋದರ ಸಂಬಂಧಿ ಉಸ್ತಾದ್ ನಿಸಾರ್ ಹುಸೇನ್ ಖಾನ್ ಬಳಿ ಅಭ್ಯಾಸ ಮುಂದುವರಿಸಿದ್ದರು ನಂತರ ಹಿಂದೂಸ್ತಾನಿ ಸಂಗೀತದ ರಾಂಪುರ–ಸಹಸ್ವಾನ್ ಘರಾನಾದಲ್ಲಿ ವಿಶಿಷ್ಟ ಛಾಪು ಮೂಡಿಸಿದರು. ದೇಶ–ವಿದೇಶಗಳಲ್ಲಿ ಕಾರ್ಯಕ್ರಮ ನೀಡಿದರು. ಮರಾಠಿ, ಗುಜರಾತಿ ಸಿನಿಮಾಗಳಲ್ಲಿ ಹಿನ್ನೆಲೆ ಗಾಯಕರಾಗಿಯೂ ಹೆಸರು ಮಾಡಿದರು. ಕೇಂದ್ರ ವಾರ್ತಾ ಮತ್ತು ಪ್ರಸಾರ ಸಚಿವಾಲಯದ 70ಕ್ಕೂ ಅಧಿಕ ಸಾಕ್ಷ್ಯಚಿತ್ರಗಳಿಗೆ ಧ್ವನಿ ನೀಡಿದ್ದಾರೆ.

ಸಂಗೀತ ಕ್ಷೇತ್ರದ ಸಾಧನೆಗಾಗಿ 1991ರಲ್ಲಿ ಪದ್ಮಶ್ರೀ ಪ್ರಶಸ್ತಿ ಪಡೆದ ಅವರು 2006ರಲ್ಲಿ ಪದ್ಮ ಭೂಷಣ ಹಾಗೂ 2018ರಲ್ಲಿ ಪದ್ಮವಿಭೂಷಣ ಗೌರವಕ್ಕೆ ಪಾತ್ರರಾಗಿದ್ದಾರೆ. 2003ರಲ್ಲಿ ಅವರು ಪ್ರದರ್ಶನ ಕಲಾವಿದರಿಗೆ ನೀಡಲಾಗುವ ದೇಶದ ಅತ್ಯುನ್ನತ ಸಮ್ಮಾನವಾದ 'ಸಂಗೀತ ನಾಟಕ ಅಕಾಡೆಮೆ' ಪ್ರಶಸ್ತಿಗೂ ಭಾಜನರಾಗಿದ್ದರು

ಆಧಾರ: ಕನ್ನಡಪ್ರಭ, ದಿನಾಂಕ: 18.01.2021

## 4. ಎಂ.ಸಿ.ಮನಗೂಳಿ, ಮಾನ್ಯ ಶಾಸಕರು

ಕೊರೋನಾ ಸೋಂಕಿನಿಂದ ಬಳಲುತ್ತಿದ್ದ ಹಿರಿಯ ಸಮಾಜವಾದಿ, ಮಾಜಿ ಸಚಿವ, ಸಿಂಧಗಿ ಕ್ಷೇತ್ರದ ಜೆಡಿಎಸ್ ಶಾಸಕ ಎಂ.ಸಿ.ಮನಗೂಳಿ (85) ಅವರು ನಿಧನರಾದರು.

**2 ಬಾರಿ ಗೆದ್ದಾಗಲೂ ಸಚಿವ:** ಪಕ್ಷ ನಿಷ್ಠೆಗೆ ಹೆಸರಾಗಿದ್ದ ಮಲ್ಲಪ್ಪ ಚನ್ನವೀರಪ್ಪ ಮನಗೂಳಿ ಅವರು ಪುರಸಭೆ ಸದಸ್ಯರಾಗಿ ರಾಜಕೀಯ ಜೀವನ ಆರಂಭಿಸಿದವರು. 1989 ರಿಂದ 2018 ರವರೆಗೆ ಒಟ್ಟು 7 ಬಾರಿ ವಿಧಾನಸಭೆಗೆ ಸ್ಪರ್ಧಿಸಿದ್ದ ಅವರು 2 ಬಾರಿ (1998, 2018ರಲ್ಲಿ) ಯಷ್ಟೇ ಗೆಲುವು ಸಾಧಿಸಿದ್ದರು. ವಿಶೇಷವೆಂದರೆ ಗೆದ್ದ ಎರಡು ಬಾರಿಯೂ ಅವರಿಗೆ ಸಚಿವ ಸ್ಥಾನ ಒಲಿದು ಬಂದಿತ್ತು. 1994ರಲ್ಲಿ ಶಾಸಕರಾಗಿ ಆಯ್ಕೆಯಾದಾಗ ಜೆ.ಎಚ್.ಪಟೇಲ್ ಸಂಪುಟದಲ್ಲಿ ಗ್ರಾಮೀಣಾಬಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರಾಗಿ, ನಂತರ 2018ರಲ್ಲಿ ಜೆಡಿಎಸ್‌ನಿಂದ ಆಯ್ಕೆಯಾದಾಗ ಸಮ್ಮಿಶ್ರ ಸರ್ಕಾರದಲ್ಲಿ ತೋಟಗಾರಿಕೆ ಸಚಿವರಾಗಿ ಕಾರ್ಯನಿರ್ವಹಿಸಿದ್ದರು. ಸಿಂಧಗಿ ಕ್ಷೇತ್ರದ ಜನರ ಬಹುದಿನಗಳ ಬೇಡಿಕೆಯಾಗಿದ್ದ ನೀರಾವರಿ ಯೋಜನೆ ಅನುಷ್ಠಾನದಲ್ಲಿ ಮಹತ್ವದ ಪಾತ್ರ ವಹಿಸಿದ ಹಿನ್ನೆಲೆಯಲ್ಲಿ ತಾಲ್ಲೂಕಿನ ಗೋಲಗೇರಿಯಲ್ಲಿ ಮನಗೂಳಿ ಅವರ ಕಂಚಿನ ಪ್ರತಿಮೆಯನ್ನು ಸ್ಥಾಪಿಸಲಾಗಿದೆ.

ಆಧಾರ: ಕನ್ನಡಪ್ರಭ, ದಿನಾಂಕ: 29.01.2021

## 5. ರಾಮಾ ಜೋಯಿಸ್, ನಿವೃತ್ತ ನ್ಯಾಯಮೂರ್ತಿ

ನ್ಯಾಯಾಂಗದ ಘನತೆ ಎತ್ತಿ ಹಿಡಿದಿದ್ದ ಧೀಮಂತ, ದೇಶದ ನ್ಯಾಯಾಂಗ ಹಾಗೂ ಶಾಸಕಾಂಗದಲ್ಲಿ ಸಕ್ರಿಯರಾಗಿದ್ದ ಹೈಕೋರ್ಟ್ ನಿವೃತ್ತ ನ್ಯಾಯಮೂರ್ತಿ ಹಾಗೂ ಮಾಜಿ ರಾಜ್ಯಪಾಲ ರಾಮಾ ಜೋಯಿಸ್ (89) ನಿಧನರಾದರು.

1992ರಲ್ಲಿ ಹರಿಯಾಣ ಮತ್ತು ಪಂಜಾಬ್ ಹೈಕೋರ್ಟ್‌ನ ಮುಖ್ಯ ನ್ಯಾಯಮೂರ್ತಿಯಾಗಿ ಕಾರ್ಯನಿರ್ವಹಿಸಿದ್ದರು. 2002ರಲ್ಲಿ ಜಾರ್ಖಂಡ್ ರಾಜ್ಯಪಾಲರಾಗಿ, 2003ರಲ್ಲಿ ಬಿಹಾರ ರಾಜ್ಯಪಾಲರಾಗಿಯೂ ಸೇವೆ ಸಲ್ಲಿಸಿದ್ದರು. ನಿವೃತ್ತಿ ಬಳಿಕ ಭಾರತೀಯ ಜನತಾ ಪಕ್ಷದಲ್ಲಿ ಗುರುತಿಸಿಕೊಂಡಿದ್ದ ಅವರು, ರಾಜ್ಯಸಭೆ ಸದಸ್ಯರೂ ಆಗಿದ್ದರು.

ಸರ್ಕಾರದ ಪ್ರತಿನಿಧಿಗಳಾಗಿ ಗೃಹ ಸಚಿವ ಬಸವರಾಜ ಬೊಮ್ಮಾಯಿ, ಸಚಿವರಾದ ಎಸ್. ಸುರೇಶ್ ಕುಮಾರ್, ಕೆ.ಎಸ್.ಈಶ್ವರಪ್ಪ, ಡಾ. ಕೆ.ಸುಧಾಕರ್, ಸಂಸದೆ ಶೋಭಾ ಕರಂದ್ಲಾಜೆ, ವಿಧಾನಸಭೆಯ ಸ್ಪೀಕರ್ ವಿಶ್ವೇಶ್ವರ ಹೆಗಡೆ ಕಾಗೇರಿ, ಬಿಜೆಪಿ ರಾಜ್ಯಾಧ್ಯಕ್ಷ ನಳೀನ್ ಕುಮಾರ್ ಕಟೀಲ್, ಲೋಕಾಯುಕ್ತ ನ್ಯಾ.ಪಿ. ವಿಶ್ವನಾಥ ಶೆಟ್ಟಿ ಅಂತಿಮ ದರ್ಶನ ಪಡೆದರು.

**ಪ್ರಮುಖ ಪುಸ್ತಕಗಳು:** 'ಧರ್ಮ ದಿ ಗ್ಲೋಬಲ್ ಎಥಿಕ್', 'ಹಿಸ್ಟಾರಿಕ್ ಬ್ಯಾಟಲ್' ಸೇರಿದಂತೆ ಕಾನೂನು ಮತ್ತು ಸಂವಿಧಾನಕ್ಕೆ ಸಂಬಂಧಿಸಿದ ಅನೇಕ ಪುಸ್ತಕಗಳನ್ನು ರಚಿಸಿದ್ದಾರೆ. ತುರ್ತು ಪರಿಸ್ಥಿತಿಯ ಜೈಲುವಾಸಕ್ಕೆ ಸಂಬಂಧಿಸಿ 'ಹಿಸ್ಟಾರಿಕ್ ಲೀಗಲ್ ಬ್ಯಾಟಲ್ ಆಫ್ ಅಟಲ್ ಬಿಹಾರಿ ವಾಜಪೇಯಿ, ಎಲ್.ಕೆ.ಅಡ್ವಾಣಿ, ಶ್ಯಾಮನಂದನ್ ಮಿಶ್ರಾ, ಮಧು ದಂಡವತೆ' ಎಂಬ ಕೃತಿಯನ್ನೂ ರಚಿಸಿದ್ದಾರೆ.

ನಿವೃತ್ತ ನ್ಯಾಯಮೂರ್ತಿ ರಾಮಾ ಜೋಯಿಸ್ ನಿಧನರಾದ ಸುದ್ದಿ ಅತೀವ ದುಃಖ ತಂದಿದೆ. ರಾಜ್ಯಪಾಲರಾಗಿ, ರಾಜ್ಯಸಭೆ ಸದಸ್ಯರಾಗಿಯೂ ಅವರು ಅನುಪಮ ಸೇವೆ ಸಲ್ಲಿಸಿದ್ದರು. ಅವರ ಆತ್ಮಕ್ಕೆ ಸದ್ಗತಿ ಕೋರುವೆ– ಬಿ.ಎಸ್.ಯಡಿಯೂರಪ್ಪ, ಮುಖ್ಯಮಂತ್ರಿಗಳು.

ಆಧಾರ: ವಿಜಯ ಕರ್ನಾಟಕ, ದಿನಾಂಕ: 17.02.2021

## 6. ವಾಲ್ಮೀಕಿ ನಾಯಕ, ಮಾಜಿ ಶಾಸಕರು

ಚಿತ್ತಾಪುರ ಕ್ಷೇತ್ರದ ಮಾಜಿ ಶಾಸಕ ವಾಲ್ಮೀಕಿ ನಾಯಕ್ (75) ಹೃದಯಾಘಾತದಿಂದ ನಿಧನರಾದರು. ಬಿಜೆಪಿಯಿಂದ ಶಹಾಬಾದ್ ಕ್ಷೇತ್ರದಿಂದ ಒಮ್ಮೆ ಚಿತ್ತಾಪುರದಿಂದ ನಾಲ್ಕು ಬಾರಿ

ಸ್ಪರ್ಧಿಸಿದ್ದರು. 2009ರಲ್ಲಿ ಚಿತ್ತಾಪುರ ಕ್ಷೇತ್ರಕ್ಕೆ ನಡೆದ ಉಪ ಚುನಾವಣೆಯಲ್ಲಿ ಕಾಂಗ್ರೆಸ್‌ನ ಪ್ರಿಯಾಂಕ್ ಖರ್ಗೆ ಅವರನ್ನು ಸೋಲಿಸಿದ್ದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ: 20.03.2021

## 7. ಎಚ್.ಟಿ.ಕೃಷ್ಣಪ್ಪ, ಮಾಜಿ ಸಚಿವರು

ಮಾಜಿ ಸಚಿವ ಎಚ್.ಟಿ.ಕೃಷ್ಣಪ್ಪ (91) ಬೆಂಗಳೂರಿನಲ್ಲಿ ನಿಧನರಾದರು. ಸಜ್ಜನ ರಾಜಕಾರಣಿ ಎಂದೇ ಗುರುತಿಸಿಕೊಂಡಿದ್ದ ಕೃಷ್ಣಪ್ಪ, ಆರಂಭದಲ್ಲಿ ತಾಲ್ಲೂಕು ಬೋರ್ಡ್ ಅಧ್ಯಕ್ಷರಾಗಿ ಕೆಲಸ ಮಾಡಿದ್ದರು.

1973ರಲ್ಲಿ ನಡೆದ ವಿಧಾನಸಭೆ ಉಪ ಚುನಾವಣೆಯಲ್ಲಿ ನಾಗಮಂಗಲ ಕ್ಷೇತ್ರದಿಂದ ಕಾಂಗ್ರೆಸ್‌ನಿಂದ ಸ್ಪರ್ಧಿಸಿ ಗೆಲುವು ಸಾಧಿಸಿದ್ದರು. 1978ರ ಚುನಾವಣೆಯಲ್ಲಿ ಮತ್ತೆ ಕಾಂಗ್ರೆಸ್‌ನಿಂದ ಗೆದ್ದ ಅವರು ದೇವರಾಜ ಅರಸು ಸರ್ಕಾರದಲ್ಲಿ ರೇಷ್ಮೆ ಸಚಿವರಾಗಿ ಕೆಲಸ ಮಾಡಿದ್ದರು.

1984ರಲ್ಲಿ ನಡೆದ ಉಪ ಚುನಾವಣೆಯಲ್ಲಿ ಪಕ್ಷೇತರರಾಗಿ ಸ್ಪರ್ಧಿಸಿ ಗೆದ್ದರಾದರೂ ಪ್ರಮಾಣ ವಚನ ಸ್ವೀಕರಿಸುವ ಮೊದಲೇ ರಾಮಕೃಷ್ಣ ಹೆಗಡೆ ಸರ್ಕಾರ ವಿಸರ್ಜನೆಗೊಂಡು ಸಾರ್ವತ್ರಿಕ ಚುನಾವಣೆ ಎದುರಾಯಿತು. 1985ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ಜನತಾ ಪಕ್ಷದಿಂದ ಸ್ಪರ್ಧಿಸಿ, ಗೆದ್ದು ರಾಮಕೃಷ್ಣ ಹೆಗಡೆ ಅವರ ಸರ್ಕಾರದಲ್ಲಿ ಆರೋಗ್ಯ, ಅಬಕಾರಿ, ವೈದ್ಯಕೀಯ ಶಿಕ್ಷಣ ಸಚಿವರಾಗಿ ಕಾರ್ಯ ನಿರ್ವಹಿಸಿದ್ದರು.

1994ರಲ್ಲಿ ಜನತಾ ಪಕ್ಷದಿಂದ ಲೋಕಸಭೆಗೆ, 1996ರಲ್ಲಿ ರಾಜ್ಯಸಭೆ ಚುನಾವಣೆಯಲ್ಲಿ ಸ್ಪರ್ಧಿಸಿ ಸೋತರು. ನಂತರ ರಾಜಕಾರಣದಿಂದ ದೂರ ಸರಿದರು. ವಕೀಲಿ ವೃತ್ತಿಯಿಂದ ಹೆಸರುವಾಸಿಯಾಗಿ ಅವರು ರಾಜಕಾರಣ ಪ್ರವೇಶಿಸಿದ್ದರು. ನಾಗಮಂಗಲ ತಾಲ್ಲೂಕಿಗೆ ಹೇಮಾವತಿ ನೀರು ತರುವಲ್ಲಿ ಪ್ರಮುಖ ಪಾತ್ರ ವಹಿಸಿದ್ದರು.

ಆಧಾರ: ಪ್ರಜಾವಾಣಿ, ದಿನಾಂಕ: 20.03.2021

## 8. ಬಿ.ಡಿ. ಬಸವರಾಜು, ಮಾಜಿ ಸಚಿವರು

ಮಾಜಿ ಸಚಿವ ಬಿ.ಡಿ. ಬಸವರಾಜು (85) ಅವರು ಅನಾರೋಗ್ಯದಿಂದ ನಿಧನರಾದರು. ಸಕಲೇಶಪುರ ತಾಲ್ಲೂಕಿನ ಬಾಳ್ಳುಪೇಟೆ ಗ್ರಾಮದ ಬಸವರಾಜು, ಎಸ್.ಆರ್. ಬೊಮ್ಮಾಯಿ ಸಚಿವ ಸಂಪುಟದಲ್ಲಿ ಕೇವಲ ಎರಡು ದಿನ ಉನ್ನತ ಶಿಕ್ಷಣ ಸಚಿವರಾಗಿದ್ದರು. ಸಕಲೇಶಪುರಕ್ಕೆ ಬಿ.ಇಡಿ ಕಾಲೇಜು ಹಾಗೂ ಪ್ರಥಮ ದರ್ಜೆ ಕಾಲೇಜು ಮಂಜೂರು ಮಾಡಿಸಿದ ಕೀರ್ತಿಗೆ ಪಾತ್ರರಾಗಿದ್ದರು.

ಜನತಾ ಪಕ್ಷದಿಂದ ಸ್ಪರ್ಧೆ ಮಾಡಿ 1985 ರಿಂದ 1989ರ ವರೆಗೆ ಸಕಲೇಶಪುರ–ಆಲೂರು ವಿಧಾನಸಭಾ ಕ್ಷೇತ್ರದ ಶಾಸಕರಾಗಿದ್ದರು. 1989, 1994ರಲ್ಲಿ ಜನತಾ ದಳದಿಂದ ಹಾಗೂ 2004ರಲ್ಲಿ ಸ್ವತಂತ್ರ ಅಭ್ಯರ್ಥಿಯಾಗಿ ಸ್ಪರ್ಧಿಸಿ ಸೋಲುಂಡರು. 1999ರಲ್ಲಿ ಬಿಜೆಪಿ ಅಭ್ಯರ್ಥಿಯಾಗಿ ಹಾಸನ ಲೋಕಸಭಾ ಚುನಾವಣೆಗೆ ಸ್ಪರ್ಧಿಸಿ ಪರಾಭವಗೊಂಡಿದ್ದರು.

ಆಧಾರ: ಪ್ರಜಾವಾಣಿ, ದಿನಾಂಕ: 23.03.2021

## 9. ಡಾ. ಜೇಕಬ್, ಮಾಜಿ ಶಾಸಕರು

ಮಾಜಿ ಶಾಸಕ ಡಾ.ಜೇಕಬ್ ಪಿ.ಜೆ (90) ವಯೋ ಸಹಜ ಕಾಯಿಲೆಗಳಿಂದ ನಿಧನರಾದರು. ಮಾರ್ಚ್ 30 ರಂದು ಅಂತ್ಯಕ್ರಿಯೆ ನಡೆಯಿತು. 1982–83ರಲ್ಲಿ ಕಲಘಟಗಿ ವಿಧಾನಸಭಾ ಕ್ಷೇತ್ರದಿಂದ ಪಕ್ಷೇತರ ಶಾಸಕರಾಗಿದ್ದರು. ಅಂದಿನ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆ ಅವರು ಇವರನ್ನು ಲೋಕಲ್ ಫೈನಾನ್ಸ್ ಕಮೀಷನ್ ಅಧ್ಯಕ್ಷರನ್ನಾಗಿ ನೇಮಕ ಮಾಡಿದ್ದರು. ಕನ್ನಡ ರಾಜ್ಯೋತ್ಸವ ಪ್ರಶಸ್ತಿ, ಕವಿವಿ ಡಾಕ್ಟರೇಟ್ ಹೀಗೆ ಹಲವು ಪುರಸ್ಕಾರ ಪಡೆದಿದ್ದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ: 30.03.2021

# ಭಾಗ–12

# ಪ್ರಮುಖ ಲೇಖನಗಳು

## 1. ಸ್ಪೀಕರ್ ಸುಗ್ರೀವಾಜ್ಞೆಯ ಪೂರ್ವಾಪರ

ಕರ್ನಾಟಕದ ಮೇಲ್ಮನೆಯ ಉಪ ಸಭಾಪತಿ ಆತ್ಮಹತ್ಯೆ ಪ್ರಕರಣದ ಬಗ್ಗೆ ಮೇಲ್ಮಟ್ಟದ ಸ್ವತಂತ್ರ ಸಂಸ್ಥೆಯಿಂದ ತನಿಖೆ ನಡೆಸಬೇಕೆಂದು ಲೋಕಸಭೆ ಸ್ಪೀಕರ್ ಓಂ ಬಿರ್ಲಾ ಸೂಚಿಸಿರುವುದು ಸುಗ್ರೀವಾಜ್ಞೆಯೇ. ಇದನ್ನು ಮೀರಿ ವರ್ತಿಸಲು ಬರುವುದಿಲ್ಲ. ಸಾಮಾನ್ಯವಾಗಿ ರಾಜ್ಯಪಾಲರು ಮತ್ತು ರಾಷ್ಟ್ರಪತಿ ಹೊರಡಿಸುವುದು ಸುಗ್ರೀವಾಜ್ಞೆ ಎಂದು ಕರೆಯುತ್ತೇವೆ. ಇದಕ್ಕೆ ಇಂಗ್ಲೀಷ್‌ನಲ್ಲಿ ' ಆರ್ಡಿನೆನ್ಸ್ ' ಎಂಬ ಶಬ್ದ ಬಳಸುತ್ತ ಬಂದಿದ್ದೇವೆ. ಸ್ಪೀಕರ್ ಈಗ ನೀಡಿರುವ ನಿರ್ದೇಶನವೂ ಸುಗ್ರೀವಾಜ್ಞೆ, ಇದನ್ನು ಪ್ರಶ್ನಿಸಲು ಬರುವುದಿಲ್ಲ. ಹಿಂದೆ ಎಂದೂ ಸ್ಪೀಕರ್ ಅವರು ರಾಜ್ಯ ಸರ್ಕಾರಕ್ಕೆ ಈ ರೀತಿ ನೇರವಾಗಿ ಆದೇಶ ನೀಡಿರಲಿಲ್ಲ. ನಮ್ಮ ಸಂಸದೀಯ ವ್ಯವಸ್ಥೆಯಲ್ಲಿ ಶಾಸನಸಭೆಗಳಲ್ಲಿ ಸದಸ್ಯರ ನಡುವೆ ಗದ್ದಲ, ಗೊಂದಲ ನಡೆದಿವೆ. ಆದರೆ ಉಪ ಸಭಾಪತಿ ಆತ್ಮಹತ್ಯೆ ಮಾಡಿಕೊಂಡ ಘಟನೆ ನಡೆದಿಲ್ಲ.

ಈಗ ಈ ಘಟನೆಯ ಬಗ್ಗೆ ಮೇಲ್ಮಟ್ಟದ ಸ್ವತಂತ್ರ ಸಂಸ್ಥೆಯಿಂದ ತನಿಖೆ ನಡೆಯಬೇಕು ಎಂದರೆ ಯಾವುದು, ಈ ತನಿಖೆಗೆ ಯಾರು ಆದೇಶ ನೀಡಬೇಕು. ರಾಜ್ಯ ಸರ್ಕಾರವೊ, ಮೇಲ್ಮನೆಯ ಸಭಾಪತಿಗಳೋ ಯಾರು ಎಂಬುದು ಸ್ಪಷ್ಟಗೊಂಡಿಲ್ಲ. ಸಾಮಾನ್ಯವಾಗಿ ಕಾನೂನು ಪರಿಪಾಲನೆ ರಾಜ್ಯ ಸರ್ಕಾರದ ವ್ಯಾಪ್ತಿಗೆ ಬರುತ್ತದೆ. ಮೇಲ್ಮನೆಯಲ್ಲಿ ನಡೆದ ಘಟನೆಯಿಂದ ನೊಂದು ಉಪ ಸಭಾಪತಿ ಧರ್ಮೇಗೌಡರು ರೈಲಿಗೆ ತಲೆಕೊಟ್ಟು ಆತ್ಮಹತ್ಯೆ ಮಾಡಿಕೊಂಡಿದ್ದಾರೆ ಎಂದು ಹೇಳಲಾಗಿದೆ. ಮೇಲ್ಮನೆ ಒಳಗೆ ನಡೆದ ಘಟನೆಗೂ ಆತ್ಮಹತ್ಯೆಗೂ ಸಂಬಂಧ ಇದೆಯೇ ಇಲ್ಲವೆ ಎಂಬುದು ಸ್ಪಷ್ಟವಾಗಿಲ್ಲ. ಮೇಲ್ಮನೆ ಒಳಗೆ ನಡೆಯುವ ಪ್ರತಿಯೊಂದು ಘಟನೆಯು ಸಭಾಪತಿ ವ್ಯಾಪ್ತಿಗೆ ಬರುತ್ತದೆ. ಈಗ ಸಭಾಪತಿ ವಿರುದ್ಧ ಅವಿಶ್ವಾಸ ನಿರ್ಣಯ ಮಂಡಿಸುವಾಗಲೇ ಈ ಘಟನೆ ನಡೆದಿದೆ. ಸಭಾಪತಿ ಇಲ್ಲ ಎಂದಾಗ ಉಪ ಸಭಾಪತಿ ಅಧ್ಯಕ್ಷತೆ ವಹಿಸುವುದು ರೂಢಿ. ಆದರೆ ಸಭಾಪತಿ ಸಭೆಗೆ ಬರುವ ಮುನ್ನವೇ ಎಲ್ಲ ಘಟನೆ ನಡೆದುಹೋಗಿದೆ. ಈ ಘಟನೆಯ ನಂತರ ಉಪ ಸಭಾಪತಿ ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಈಗ ಈ ಎಲ್ಲ ಘಟನೆಗಳ ಸಮಗ್ರ ತನಿಖೆ ಯಾರಿಂದ ನಡೆಯಬೇಕು ಎಂಬುದು ಸ್ಪಷ್ಟವಾಗಿಲ್ಲ. ದೇಶದ ಎಲ್ಲ ಶಾಸಕಾಂಗ ಸಭೆಗಳ ಅಧ್ಯಕ್ಷರು ಪ್ರತಿವರ್ಷ ಲೋಕಸಭೆ ಸ್ಪೀಕರ್ ನೇತೃತ್ವದಲ್ಲಿ ಸಭೆ ನಡೆಸಿ ಸಂಸದೀಯ ನಡವಳಿಕೆಯ ಬಗ್ಗೆ ಚರ್ಚಿಸುತ್ತಾರೆ. ಈ ಸಭೆಗಳಲ್ಲಿ ಸದಸ್ಯರನ್ನು ನಿಯಂತ್ರಿಸುವ ಬಗ್ಗೆ ಚರ್ಚೆಗಳು ನಡೆದಿವೆ. ಅದರೇ ಸಭೆಯಲ್ಲಿ ಗೊಂದಲ ನಡೆದು ಮುಕ್ತಾಯಗೊಂಡ ಮೇಲೆ ಉಪ ಸಭಾಪತಿಯೊಬ್ಬರು ಆತ್ಮಹತ್ಯೆ ಮಾಡಿಕೊಂಡಿರುವುದು ಇದೇ ಮೊದಲು. ಅದರಿಂದ ಸ್ಪೀಕರ್ ಇದನ್ನು ಗಂಭೀರವಾಗಿ ಪರಿಗಣಿಸಿ ಆದೇಶಿಸಿದ್ದಾರೆ.

ಮೇಲ್ಮನೆ ಮತ್ತು ಕೆಳಮನೆಯಲ್ಲಿ ಅದರ ಸದಸ್ಯರು ಹೊರತುಪಡಿಸಿ ಬೇರೆಯವರು ಯಾರೂ ಭಾಗವಹಿಸಲು ಬರುವುದಲ್ಲ. ಸಭಾಪತಿ ಮತ್ತು ಉಪ ಸಭಾಪತಿ ಸದಸ್ಯರಿಂದಲೇ ಆಯ್ಕೆಗೊಂಡವರು, ಸಭೆಯೊಳಗೆ ಕಾರ್ಯಕಲಾಪವನ್ನು ಮುಕ್ತವಾಗಿ ನಡೆಸಲು ಎಲ್ಲ ಅಧಿಕಾರ ಅವರಿಗೆ ಇರುತ್ತದೆ. ಹೀಗಿರುವಾಗ ಉಪ ಸಭಾಪತಿಗಾದ ಅಪಮಾನಕ್ಕೆ ಯಾರು ಹೊಣೆ ಎಂಬುದು ತೀರ್ಮಾನವಾಗಬೇಕು. ಸಾಮಾನ್ಯವಾಗಿ ವಿಧಾನ ಸಭೆ ಮತ್ತು ವಿಧಾನ ಪರಿಷತ್ತಿನಲ್ಲಿ ರೀತಿನೀತಿಗಳ ಬಗ್ಗೆ ಜಿಜ್ಞಾಸೆ ಮೂಡಿದಾಗ ಲೋಕಸಭೆ ಸ್ಪೀಕರ್ ಕಾರ್ಯಾಲಯದ ಸಲಹೆ ಪಡೆಯಲಾಗುವುದು. ಅಲ್ಲದೆ ಈ ಹಿಂದೆ ಅನುಸರಿಸಿಕೊಂಡು ಬಂದಿರುವ ಸತ್ಸಂಪ್ರದಾಯಗಳೇ ದಾರಿದೀಪ. ಈಗ ಸ್ಪೀಕರ್ ಅವರೇ ಆದೇಶ ನೀಡಿ

ಸ್ವತಂತ್ರ ತನಿಖೆಗೆ ಕೇಳಿರುವುದರಿಂದ ಸರ್ಕಾರ ಮತ್ತು ಮೇಲ್ಮನೆ ಸ್ಪೀಕರ್ ಸ್ಪಂದಿಸುವುದು ಅನಿವಾರ್ಯ. ಪೊಲೀಸರು ಸದನದ ಹೊರಗೆ ಉಪ ಸಭಾಪತಿ ಆತ್ಮಹತ್ಯೆಯ ಬಗ್ಗೆ ತನಿಖೆ ನಡೆಸಲು ಬರುವುದಿಲ್ಲ. ಈಗ ಮೇಲ್ಮನೆಯ ಸಭಾಪತಿ ಅಂದು ನಡೆದ ಘಟನೆಯ ಬಗ್ಗೆ ತನಿಖೆ ನಡೆಸಲು ಸದನ ಸಮಿತಿ ರಚಿಸಿದ್ದಾರೆ. ಈ ಎರಡು ತನಿಖೆಯ ಆಧಾರದ ಮೇಲೆ ಮುಂದಿನ ಕ್ರಮ ಏನು ಎಂಬುದು ಸ್ಪಷ್ಟವಾಗಿಲ್ಲ. ಏನೇ ಆಗಲಿ ಭಾರತೀಯ ಸಂಸದೀಯ ವ್ಯವಸ್ಥೆಯ ಇತಿಹಾಸದಲ್ಲಿ ಈ ಘಟನೆ ಕಪ್ಪುಚುಕ್ಕಿಯಾಗಿ ಉಳಿಯಲಿದೆ.  ಈ ಘಟನೆಯನ್ನು ರಾಜಕೀಯ ಮರ್ಯಾದೆ ಹತ್ಯೆ ಎಂದು ಪರಿಗಣಿಸಬೇಕೆಂದು ಮಾಜಿ ಮುಖ್ಯಮಂತ್ರಿ ಒತ್ತಾಯಿಸಿದ್ದಾರೆ.  ಈ ಘಟನೆಯ ತನಿಖೆ ನಮ್ಮ ಸಂಸದೀಯ ವ್ಯವಸ್ಥೆಯಲ್ಲಿರುವ ಲೋಪಗಳನ್ನು ಸರಿಪಡಿಸಲು ಬೆಳಕು ಚೆಲ್ಲುವಂತೆ ಆಗಬೇಕು.  ಸದನದ ಒಳಗೆ ಸದಸ್ಯರ ರಕ್ಷಣೆ ಯಾರ ಹೊಣೆ, ಧರ್ಮೇಗೌಡರು ಬರೆದಿರುವ ಮರಣಪತ್ರ ನಮ್ಮ ಇಂದಿನ ಸಂಸದೀಯ ನಡವಳಿಕೆಗೆ ಹಿಡಿದ ಕನ್ನಡಿಯೇ, ಯಾವುದೂ ಸ್ಪಷ್ಟಗೊಂಡಿಲ್ಲ. ಹೊಸ ವರ್ಷದಲ್ಲಿ ಹೊಸ ಬೆಳಕು ಮೂಡಿ ನಮ್ಮ ಸಂಸದೀಯ ವ್ಯವಸ್ಥೆ ಗಟ್ಟಿಗೊಳ್ಳಲಿದೆ ಎಂಬ ವಿಶ್ವಾಸವಂತು ಇದೆ.

**ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:01.01.2021**

## 2. ಸದನ ಸಮಿತಿ ರಚನೆ ತಿಕ್ಕಾಟ

ವಿಧಾನಪರಿಷತ್ತಿನಲ್ಲಿ ಡಿಸೆಂಬರ್ 15 ರಂದು ಜರುಗಿದ ಕುರುಕ್ಷೇತ್ರ ಸಂಗ್ರಾಮವನ್ನು ಅಣಕಿಸುವ ರೀತಿಯ ಗೆರಿಲ್ಲಾ ಮಾದರಿಯ ಕ್ಷಾತ್ರ ಪ್ರದರ್ಶನದ ಸತ್ಯಾಸತ್ಯದ ತನಿಖೆಗೆ ಸಂಬಂಧಿಸಿದಂತೆ ಸಭಾಪತಿ ಪ್ರತಾಪಚಂದ್ರ ಶೆಟ್ಟಿ ಅವರು ಸದನ ಸಮಿತಿಯನ್ನು ರಚಿಸಿರುವುದು ಸ್ವಾಗತಾರ್ಹ ಬೆಳವಣಿಗೆ. ಏಕೆಂದರೆ, ಇಡೀ ಕರ್ನಾಟಕವೇ ತಲೆತಗ್ಗಿಸಬೇಕಾದ ರೀತಿಯ ಬೆಳವಣಿಗೆಯನ್ನು ಕನಿಷ್ಠ ಪಕ್ಷ ಸತ್ಯಾಂಶ ತಿಳಿದು ತಪ್ಪಿತಸ್ಥರಿಗೆ ತಕ್ಕ ಶಿಕ್ಷೆ ವಿಧಿಸಲು ಸದನ ಸಮಿತಿಯ ತನಿಖೆ ನೆರವಾಗಬಹುದು. ಆದರೆ, ಸದನ ಸಮಿತಿಯ ರಚನೆಗೆ ಸಭಾಪತಿಯವರಿಗೆ ಉಂಟೆ ಎಂಬ ಪ್ರಶ್ನೆ ಈಗ ಉದ್ಭವವಾಗಿದೆ. ಇಂತಹ ಪ್ರಶ್ನೆ ಉದ್ಭವವಾಗಿರುವುದು ಇದೇ ಮೊದಲಲ್ಲ. 1983ರಲ್ಲಿ ಡಿ.ಬಿ.ಚಂದ್ರೇಗೌಡ ವಿಧಾನಸಭೆ ಅಧ್ಯಕ್ಷರಾಗಿದ್ದಾಗ ಸದನ ಸಮಿತಿ ರಚಿಸಿದ ವಿಚಾರಕ್ಕೂ ಕೂಡ ಇದೇ ರೀತಿಯ ವಿವಾದ ತಲೆದೋರಿತ್ತು. ಆಗಿನ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆಯವರ ಸೋದರ ಸಂಬಂಧಿ ಗಣೇಶ ಹೆಗಡೆ ಅವರ ವಿರುದ್ಧದ ಅಕ್ಕಿ ಕಳ್ಳಸಾಗಣೆ ಆರೋಪಕ್ಕೆ ಸಂಬಂಧಿಸಿದಂತೆ ಮೈಸೂರಿನ ಕೆ.ಆರ್.ಕ್ಷೇತ್ರದ ಶಾಸಕ ಎಚ್.ಗಂಗಾಧರನ್ ನೇತೃತ್ವದಲ್ಲಿ ಸದನ ಸಮಿತಿಯನ್ನು ಚಂದ್ರೇಗೌಡರು ರಚಿಸಿದ್ದರು. ಆಗಿನ ಪ್ರತಿಪಕ್ಷದ ನಾಯಕ ವೀರಪ್ಪಮೊಯ್ಲಿ ಸೇರಿದಂತೆ ಇಡೀ ಕಾಂಗ್ರೆಸ್ ಪಕ್ಷ ಮುಖಂಡರು ಸದನ ಸಮಿತಿ ರಚನೆಗೆ ಇಲ್ಲದ ಅಧಿಕಾರವನ್ನು ಸಭಾಧಕ್ಷರು ಚಲಾಯಿಸಿದ್ದಾರೆ ಎಂದು ವಿರೋಧಿಸಿದ್ದರು.

ಸಭಾಧ್ಯಕ್ಷರಿಗೆ ಅಧಿವೇಶನದ ಕಲಾಪ ನಡೆಯುವಾಗ ಮಾತ್ರ ಪರಮಾಧಿಕಾರ ಚಲಾಯಿಸುವ ಹಕ್ಕಿರುತ್ತದೆ. ಉಳಿದ ಸಂದರ್ಭಗಳಲ್ಲಿ ಯಾವುದೇ ರೀತಿಯ ಹಕ್ಕಿರುವುದಿಲ್ಲ ಎಂಬುದು ಆಗಿನ ಕಾಂಗ್ರೆಸ್ ಪಕ್ಷದ ಮುಖಂಡರ ವಾದ ಅಕ್ಕಿ ಕಳ್ಳಸಾಗಣೆ ಆರೋಪ ಕೇಳಿಬಂದು ವಿಧಾನಸಭೆಯಲ್ಲಿ ಮಾರ್ದನಿಗೊಂಡಾಗ ಸಭಾಧ್ಯಕ್ಷರು ಸದನ ಸಮಿತಿ ರಚಿಸಿದ್ದರೆ ಬಹುಶ: ಆಕ್ಷೇಪ ಇರುತ್ತಿರಲಿಲ್ಲ. ಸದನದ ಕಲಾಪ ಅನಿರ್ದಿಷ್ಠ ಕಾಲದವರೆಗೆ ಮುಂದೂಡಿಕೆ ಮಾಡಿದ ನಂತರ ಸದನ ಸಮಿತಿ ರಚಿಸಿದ್ದು ಈ ವಿವಾದಕ್ಕೆ ಕಾರಣವಾಗಿತ್ತು. ಈ ವಿವಾದ ಯಾವ ಮಟ್ಟಕ್ಕೆ ಹೋಯಿತೆಂದರೆ ಕಾಂಗ್ರೆಸ್ ಪಕ್ಷದ ಸದಸ್ಯರು ಈ ಸದನ ಸಮಿತಿಗೆ ಬಹಿಷ್ಕಾರವನ್ನು ಪರಿಗಣಿಸದೆ ಎಚ್.ಗಂಗಾಧರನ್ ಸಮಿತಿ ಆರೋಪದ ಬಗ್ಗೆ ತನಿಖೆ ನಡೆಸಿ ಸಭಾಧ್ಯಕ್ಷರಿಗೆ ಆರೋಪದಲ್ಲಿ ಹುರುಳಿಲ್ಲ ಎಂಬ ಅಭಿಪ್ರಾಯ ಇರುವ ವರದಿಯನ್ನು ಸಲ್ಲಿಸಿಯೂ ಆಗಿತ್ತು ಆದರೆ, ಅದಕ್ಕೆ ಕಾಂಗ್ರೆಸ್ ಪಕ್ಷ ಮಾನ್ಯತೆ ಕೊಡಲು ಕಡೆಗೂ ಒಪ್ಪಲಿಲ್ಲ. ಸಭಾಧ್ಯಕ್ಷರಾಗಿದ್ದ ಡಿ.ಬಿ.ಚಂದ್ರೇಗೌಡ ಅವರು ಹಲವು ವಿಚಾರ ಸಂಕೀರ್ಣಗಳಲ್ಲಿ ತಮ್ಮ ನಿಲುವನ್ನು ಸಮರ್ಥಿಸಿಕೊಂಡು ಮುಂಬೈನಲ್ಲಿ ನಡೆದ ಅಖಿಲ ಭಾರತ ಶಾಸನ ಸಭಾ ಸಭಾಧ್ಯಕ್ಷರ ಸಮ್ಮೇಳನದಲ್ಲಿ ಪ್ರಸ್ತಾಪಿಸಿ ಸಭಾಸದರ ಸಹಮತ ಪಡೆದುಕೊಂಡದ್ದೂ ಆಯಿತು. ಚಂದ್ರೇಗೌಡರು ಸಭಾಧ್ಯಕ್ಷ ಸ್ಥಾನದಿಂದ ನಿರ್ಗಮಿಸಿದ ಮೇಲೂ

ಈ ವಿವಾದ ತಣ್ಣಗಾಗಿರಲಿಲ್ಲ ಅಂದ ಹಾಗೆ ವಿಧಾನಪರಿಷತ್ತಿನ ಪ್ರಸ್ತುತ ಸಭಾಪತಿಯಾಗಿರುವ ಪ್ರತಾಪಚಂದ್ರ ಶೆಟ್ಟರು ಆಗ ವಿಧಾನಸಭೆ ಸದಸ್ಯರಾಗಿದ್ದರು. ಡಿಸೆಂಬರ್ 15ರ ಸದನದಲ್ಲಿ ಗುದ್ದಾಟ ನಡೆದು ಕಲಾಪವನ್ನು ಅನಿರ್ದಿಷ್ಟ ಕಾಲ ಮುಂದೂಡಿದ ಕೆಲ ದಿನಗಳ ನಂತರ ಸಭಾಪತಿ ಪ್ರತಾಪಚಂದ್ರ ಶೆಟ್ಟರು ಜೆಡಿಎಸ್ ಶಾಸಕ ಮರಿತಿಬ್ಬೇಗೌಡರ ನೇತೃತ್ವದಲ್ಲಿ ರಚಿಸಿರುವ ಸದನ ಸಮಿತಿಗೂ ಕೂಡಾ ಅಧಿವೇಶನ ಮುಂದೂಡಲಾಗಿದೆ. ಕಲಾಪ ಇಲ್ಲದ ಸಂದರ್ಭದಲ್ಲಿ ಸಭಾಧ್ಯಕ್ಷರಿಗೆ ಯಾವುದೇ ರೀತಿಯ ನಿರ್ಣಾಯಕ ಅಧಿಕಾರಿ ಚಲಾವಣೆಗೆ ಅವಕಾಶವಿಲ್ಲ. ಹೀಗಿರುವಾಗ ಸದನ ಸಮಿತಿ ರಚಿಸಿದರೆ ಅದಕ್ಕೆ ಕಾನೂನಿನ ಔಚಿತ್ಯ ಸಿಕ್ಕುತ್ತದೆಯೇ ಎಂಬ ಪ್ರಶ್ನೆ ಮೂಲಭೂತ ಅಂಶಗಳನ್ನು ಕೇಳುತ್ತದೆ. ಸಭಾಧ್ಯಕ್ಷರ ಜವಾಬ್ದಾರಿ ಮತ್ತು ಕರ್ತವ್ಯಗಳ ಬಗ್ಗೆ ನಿಯಮಾವಳಿಯಲ್ಲಿ ಸ್ಪಷ್ಟವಾಗಿದೆ. ಕೌಲ್ ಮತ್ತು ಶಕ್ದರ್ ವಿರಚಿತ ಗ್ರಂಥದಲ್ಲಿ ಸಭಾಧ್ಯಕ್ಷರ ಜವಾಬ್ದಾರಿ ಮತ್ತು ಕರ್ತವ್ಯದ ಬಗ್ಗೆ ಹಲವು ನಿದರ್ಶನಗಳ ಸಮೇತ ವಿವರಣೆಗಳಿವೆ. ಆದರೆ, ಕೆಲವು ಸಂದರ್ಭಗಳ ವಿಶ್ಲೇಷಣೆಯಲ್ಲಿ ಅಡ್ಡಗೋಡೆ ಮೇಲೆ ದೀಪ ಇಡುವ ಮಾತುಗಳಿವೆ. ಜನತಾ ಪಕ್ಷದ ಸರ್ಕಾರದಲ್ಲಿ ಆಗಿನ ಕಾನೂನು ಸಚಿವರಾಗಿದ್ದ ಪ್ರೊ.ಎ.ಲಕ್ಷ್ಮೀಸಾಗರ್ ಸದನದಲ್ಲಿ ಮಂಡಿಸಿದ ನಿಲುವುಗಳು ಬಹುಶ: ಈಗ ಕಾಂಗ್ರೆಸ್ ಪಕ್ಷದ ಮುಖಂಡರ ವಾದಕ್ಕೆ ಆಧಾರವಾಗಬಹುದೇನೋ. ಲಕ್ಷ್ಮೀಸಾಗರ್ ಮಂಡಿಸಿದ ವಾದದ ಸಾರಾಂಶವೆಂದರೆ 'ಸಭಾಧ್ಯಕ್ಷೆಂದರೆ ಸಭಾಧ್ಯಕ್ಷರು. ಅವರು ಪೂರ್ಣಾವಧಿ ಅಧಿಕಾರ ಹೊಂದಿರುತ್ತಾರೆ. ಅಧಿವೇಶನ ನಡೆಯುವಾಗ ಮಾತ್ರ ಅಧಿಕಾರ ಚಲಾಯಿಸಲು ಅವಕಾಶವಿದೆ ಎಂಬ ವಿಶ್ಲೇಷಣೆಗೆ ಆಧಾರಗಳಿಲ್ಲ. ಹೌಸ್ ಆಫ್ ಕಾಮನ್ಸ್‌ನಲ್ಲಿ ಸಭಾಧ್ಯಕ್ಷರ ಕಾರ್ಯ ನಿರ್ವಹಣೆಯ ಹಲವಾರು ನಿದರ್ಶನಗಳಲ್ಲಿ ಕಂಡುಬರುವ ಅಂಶವೆಂದರೆ ಒಂದೋ ಸಭಾಧ್ಯಕ್ಷರನ್ನು ಸಭಾಧ್ಯಕ್ಷರು ಎಂದು ಒಪ್ಪಿಕೊಳ್ಳಬೇಕು ಇಲ್ಲವೇ ಇವರು ಸಭಾಧ್ಯಕ್ಷರಲ್ಲ ಎನ್ನುವ ನಿಲುವಿಗೆ ಬರಬೇಕು. ಇವೆರಡನ್ನು ಬಿಟ್ಟು ಅನುಕೂಲಸಿಂಧು ನಿಲುವನ್ನು ತಾಳುವುದು ಸ್ವಾರ್ಥ ಸಾಧನೆಗಾಗಿ ಮಾತ್ರ. ಆದರೆ, ಕಾಂಗ್ರೆಸ್ ಪಕ್ಷದ ಮುಖಂಡರಾದ ವೀರಪ್ಪ ಮೊಯಿಲಿ, ಕೆ.ಹೆಚ್.ಪಾಟೀಲ್, ಕೆ.ಹೆಚ್.ರಂಗನಾಥ್, ಬಸವಲಿಂಗಪ್ಪ ಮೊದಲಾದವರು ಲಕ್ಷ್ಮೀಸಾಗರ್ ನಿಲುವನ್ನು ಒಪ್ಪಲಿಲ್ಲ. ಹೀಗಾಗಿ ಬಿಕ್ಕಟ್ಟು ಉದ್ಭವಿಸಿತ್ತು. ಆಗಿನ ಬಿಜೆಪಿ ಅಧ್ಯಕ್ಷರಾಗಿದ್ದ ಎ.ಕೆ.ಸುಬ್ಬಯ್ಯ ಅವರು ಕೂಡ ಲಕ್ಷ್ಮೀಸಾಗರ್ ನಿಲುವಿಗೆ ಸಹಮತ ಸೂಚಿಸಿದ್ದರು.

ಈಗ ವಿಧಾನಪರಿಷತ್ತಿನಲ್ಲಿ ಜರುಗಿರುವ ಗುದ್ದಾಟದ ಪ್ರಕರಣಕ್ಕೂ 80ರ ದಶಕದ ಅಕ್ಕಿ ಕಳ್ಳಸಾಗಣೆ ಪ್ರಕರಣಕ್ಕೂ ನೇರವಾದ ಸಂಬಂಧವಿದೆ. ಸಂಬಂಧವಿರುವುದು ಸಭಾಧ್ಯಕ್ಷರ ಸದನ ಸಮಿತಿ ರಚನೆಗೆ ಕೈಗೊಂಡಿರುವ ನಿರ್ಧಾರಗಳ ಬಗ್ಗೆ ಮಾತ್ರ. ಬಿಜೆಪಿ ಮುಖಂಡರು ಈಗಿನ ಸದನ ಸಮಿತಿ ರಚನೆಯನ್ನು ಒಪ್ಪಲು ನಿರಾಕರಿಸುತ್ತಾರೆ. ಏಕೆಂದರೆ, ಅಧಿವೇಶನ ಇಲ್ಲದಿರುವಾಗ ಸಭಾಪತಿಗಳು ಕೈಗೊಳ್ಳುವ ಕ್ರಮಕ್ಕೆ ನೆಲೆಬೆಲೆ ಇಲ್ಲ ಎಂಬುದು ಅವರು ಕೊಡುವ ವಿವರಣೆ. ಕಾನೂನು ಸಚಿವ ಜೆ.ಸಿ.ಮಾಧುಸ್ವಾಮಿ ಅವರು ಈ ವಿವಾದವನ್ನು ಕೆದಕದೆ ಸದನ ಸಮಿತಿ ರಚಿಸಿರುವುದು ಕೇವಲ ಅಧಿಕಾರಿಗಳ ವಿಚಾರಣೆಗೆ ಮಾತ್ರ. ಈ ಸಮಿತಿಗೆ ಶಾಸಕರನ್ನಾಗಲೀ ಅಥವಾ ಮಂತ್ರಿಗಳನ್ನಾಗಲಿ ವಿಚಾರಣೆಗೆ ಒಳಪಡಿಸುವ ಅಧಿಕಾರವಿಲ್ಲ ಎಂದು ನೇರವಾಗಿ ಹೇಳುತ್ತಾರೆ. ಆದರೆ, ಸಭಾಪತಿಗಳ ಆದೇಶದಂತೆ ವಿಧಾನಪರಿಷತ್ತಿನ ಕಾರ್ಯದರ್ಶಿಯವರು ಹೊರಡಿಸಿರುವ ಆದೇಶದ ಪ್ರಕಾರ ಘಟನಾವಳಿಯಲ್ಲಿ ಭಾಗಿಯಾಗಿರುವ ಶಾಸಕರು, ಮಂತ್ರಿಗಳು ಹಾಗೂ ಅಧಿಕಾರಿಗಳ ವಿಚಾರಣೆಗೆ ಅವಕಾಶವಿದೆ. ಹೀಗಾಗಿ ಸಂಸದೀಯ ವ್ಯವಸ್ಥೆಯ ಖಾತೆ ನಿರ್ವಹಿಸುವ ಸಚಿವ ಮಾಧುಸ್ವಾಮಿ ಅವರ ನಿಲುವಿಗೂ ಹಾಗೂ ಸದನವನ್ನು ನಿರ್ವಹಿಸುವ ಸಚಿವ ಮಾಧುಸ್ವಾಮಿ ಅವರ ನಿಲುವಿಗೂ ಹಾಗೂ ಸದನವನ್ನು ನಿರ್ವಹಿಸುವ ಹೊಣೆ ಹೊತ್ತಿರುವ ಸಭಾಪತಿ ಪ್ರತಾಪಚಂದ್ರ ಶೆಟ್ಟಿ ಅವರಿಗೂ ಗುಣಾತ್ಮಕ ವ್ಯತ್ಯಾಸವಿದೆ. ವ್ಯತ್ಯಾಸ ಸೃಷ್ಟಿಯಾಗಲು ಪ್ರಸ್ತುತ ಬಿಕ್ಕಟ್ಟಿನ ರಾಜಕಾರಣದ ದೃಷ್ಟಿ ಕಾರಣವೋ ಇಲ್ಲವೆ ಕಾನೂನಿನ ದೃಷ್ಟಿದೋಷ ಕಾರಣವೋ ಎಂಬುದು ಸ್ಪಷ್ಟವಾಗಬೇಕಿದೆ.

1990–91ರಲ್ಲಿ ಬೆಂಗಳೂರಿನಲ್ಲಿ ನಡೆದ ಅಖಿಲ ಭಾರತ ಸಭಾಧ್ಯಕ್ಷರುಗಳ ಸಮ್ಮೇಳನದಲ್ಲಿ ಪಾಲ್ಗೊಳ್ಳಲು ಆಗಮಿಸಿದ್ದ ಆಗಿನ ಲೋಕಸಭಾಧ್ಯಕ್ಷ ರಬಿ ರೇ ಅವರು ಪತ್ರಿಕಾಗೋಷ್ಠಿಯೊಂದರಲ್ಲಿ ಈ ಪ್ರಶ್ನೆಯನ್ನು ಮುಂದಿಟ್ಟಾಗ ಇಲ್ಲದ ವಿವಾದ ಏಕೆ ಸೃಷ್ಟಿಸುತ್ತೀರಿ ಎಂದು ಕಣ್ಣುಮಿಟುಕಿಸಿ ಸುಮ್ಮನಾಗಿದ್ದರು. ತದನಂತರ ಪತ್ರಿಕಾಗೋಷ್ಠಿ ಮುಗಿಯುವ ಮುನ್ನ ಮತ್ತೆ ಆ ಪ್ರಶ್ನೆಯನ್ನು ನೆನಪಿಸಿ 'ಕ್ಷಮಿಸಿ' ಬೇಕಂತಲೇ ನಾನು ಆ ಉತ್ತರ ನೀಡಿದೆ. ಸಭಾಧ್ಯಕ್ಷರಿಗೆ ಅಧಿವೇಶನ ಇಲ್ಲದಿರುವಾಗ ಪರಮಾಧಿಕಾರ ಚಲಾಯಿಸುವ

ಬಗ್ಗೆ ಸ್ಪಷ್ಟವಾದ ಮಾರ್ಗಸೂಚಿ ಇಲ್ಲ. ಈಗಿರುವುದು ವ್ಯಕ್ತಿ ಆಧಾರಿತ ಅಥವಾ ಪಕ್ಷ ಆಧಾರಿತ ಮಾರ್ಗಸೂಚಿ. ನಮಗೆ ಬೇಕಾಗಿರುವುದು ವಸ್ತುನಿಷ್ಠವಾದ ಮಾರ್ಗಸೂಚಿ. ಪಕ್ಷಗಳ ಅನುಕೂಲಕ್ಕೆ ರೂಪುಗೊಳ್ಳುವ ಈ ಕಾರ್ಯಸೂಚಿಯನ್ನು ಸಮರ್ಥಿಸಲಾರೆ–ನಿರಾಕರಿಸಲಾರೆ. ಏಕೆಂದರೆ, ನಾನೂ ಕೂಡಾ ಒಬ್ಬ ರಾಜಕಾರಣಿ. ಕೆಲ ಕಾಲ ಕೇಂದ್ರ ಮಂತ್ರಿಯಾಗಿದ್ದವನು. ಈ ಪ್ರಶ್ನೆ ಮುಂದಿನ ಸಮ್ಮೇಳನದಲ್ಲಿ ಮುಖ್ಯ ವಿಷಯವಾಗಿ ಚರ್ಚೆಯಾಗುವಂತೆ ನೋಡಿಕೊಳ್ಳುವೆ ಎಂದು ಹೇಳಿದ್ದು ಅರ್ಥಗರ್ಭಿತವಾಗಿತ್ತು. ಆದರೆ, ಕಾಲದ ಉರುಳಿನಲ್ಲಿ ಆಗಿನ ಲೋಕಸಭೆ ವಿಸರ್ಜನೆಯಾಗಿ 1991ರಲ್ಲಿ ಹೊಸ ಚುನಾವಣೆ ನಡೆದ ಮೇಲೆ ರಬಿ ರೇ ಚುನಾವಣೆಯಲ್ಲಿ ಸೋತರು. ಲೋಕಸಭಾಧ್ಯಕ್ಷರಾಗಿ ಶಿವರಾಜ ಪಾಟೀಲ್ ಅಧಿಕಾರ ವಹಿಸಿಕೊಂಡ ನಂತರ ಈ ಪ್ರಶ್ನೆ ಕಾಲಗರ್ಭದಲ್ಲಿ ಹೂತುಹೋಯಿತು.

**ಆಧಾರ:– ಸಂಯುಕ್ತ ಕರ್ನಾಟಕ ದಿನಾಂಕ:08.01.2021**

## 3. ಮತಾಂತರ ನಿಷೇಧ ಕಾಯಿದೆಯಲ್ಲಿ ಏನೇನಿದೆ

## ಲವ್ ಜಿಹಾದ್ ಕಾಯಿದೆ ಸುತ್ತಮುತ್ತ

ಇತ್ತೀಚೆಗೆ ಉತ್ತರ ಪ್ರದೇಶ ಸರಕಾರ ಲವ್ ಜಿಹಾದ್ ನಿಷೇಧಿಸಿ ಕಾನೂನು ತಂದಿದೆ. ಕರ್ನಾಟಕ ಸೇರಿದಂತೆ ಇನ್ನೂ ಕೆಲವು ಬಿಜೆಪಿ ಸರಕಾರಗಳು ಇಂತಹುದೇ ಕಾನೂನು ತರುವುದಾಗಿ ಹೇಳುತ್ತಿದೆ. ಈ ಕಾನೂನುಗಳಲ್ಲಿ ಏನಿದೆ? ವಿಶ್ಲೇಷಿಸಿ ನೋಡೋಣ.

ಲವ್ ಜಿಹಾದ್ ಅಂದರೇನು? ಉತ್ತರ ಪ್ರದೇಶದ ಕಾನೂನು ಲವ್ ಜಿಹಾದ್ ಏನೆಂದು ವ್ಯಾಖ್ಯಾನಿಸುವುದಿಲ್ಲ. ಎರಡನೆಯದಾಗಿ, ಆ ಕಾನೂನು ಪ್ರಥಮವಲ್ಲ. ಇಂತಹ ಕಾನೂನುಗಳು ಮೊದಲಿನಿಂದಲೇ ಕೆಲವೆಡೆ ಜಾರಿಯಲ್ಲಿದೆ. ಈ ಕಾನೂನು ಪ್ರಥಮವಲ್ಲ. ಇಂತಹ ಕಾನೂನುಗಳು ಮೊದಲಿನಿಂದಲೇ ಕೆಲವೆಡೆ ಜಾರಿಯಲ್ಲಿವೆ. ಈ ಕಾನೂನು ಸುಗ್ರೀವಾಜ್ಞೆಯಾಗಿ ಬಂದಿದೆ. ಇದು ಆರು ತಿಂಗಳ ಒಳಗೆ ವಿಧಾನಸಭೆಯಿಂದ ಅನುಮೋದನೆಯಾಗಬೇಕು. ಉ.ಪ್ರ.ದಲ್ಲಿ ಬಿಜೆಪಿಗೆ ಬಹುಮತ ಇರುವುದರಿಂದ ಇದರಲ್ಲಿ ಕಷ್ಟವಿಲ್ಲ. ಈ ಕಾನೂನಿನ ಅಧಿಕೃತ ಹೆಸರು ಉ.ಪ್ರ. ಅಕ್ರಮ ಪರೋಕ್ಷವಾಗಿ ಇನ್ನೊಬ್ಬ ವ್ಯಕ್ತಿಯನ್ನು ಈ ಕೆಳಗಿನವುಗಳನ್ನು ಉಪಯೋಗಿಸಿ ಮತಾಂತರಿಸಬಾರದು.

1. ತಪ್ಪು ತಿಳಿವಳಿಕೆ (misrepresentation) 2. ಬಲಾತ್ಕಾರ(force) 3. ಸಮ್ಮತವಲ್ಲದ ಪ್ರಭಾವ (undue influence) 4. ಸಮ್ಮತವಲ್ಲದ ಒತ್ತಡ (coercion) ಸಮ್ಮತವಲ್ಲದ ಒತ್ತಡವೆಂದರೆ ಮಾನಸಿಕ ಒತ್ತಡ, ಶಾರೀರಿಕ ಹಾನಿ ಮಾಡುವ ಬಲಪ್ರಯೋಗ ಅಥವಾ ಬೆದರಿಕೆಯಿಂದ ಒಬ್ಬ ವ್ಯಕ್ತಿಯನ್ನು ಅವನ ಮನಸ್ಸಿಗೆ ವಿರುದ್ಧವಾಗಿ ವರ್ತಿಸುವಂತೆ ಮಾಡುವುದು. 5. ಆಮಿಷ (allurement) ಆಮಿಷವೆಂದರೆ ಈ ಕೆಳಗಿನವುಗಳ ಕೊಡುಗೆ ಅಥವಾ ಆಸೆ ಹುಟ್ಟಿಸುವುದು. ಅ) ಯಾವುದೇ ಉಡುಗೊರೆ, ಪ್ರತಿಫಲ, ಸುಲಭ ಹಣ, ನಗದು ರೂಪದಲ್ಲಾಗಲಿ ಅಥವಾ ವಸ್ತು ರೂಪದಲ್ಲಾಗಲಿ ಭೌತಿಕಲಾಭ, ಬ) ಉದ್ಯೋಗ ಯಾವುದೇ ಧಾರ್ಮಿಕ ಸಂಸ್ಥೆಯ ಹೆಸರಾಂತ ಶಾಲೆಯಲ್ಲಿ ಉಚಿತ ಶಿಕ್ಷಣ, ಕ) ಸುಧಾರಿತ ಜೀವನ, ದೈವಶಾಪ. 6. ಮೋಸದ ವಿಧಾನಗಳು(fraudulent means) ಹೆಸರಿನ, ಅಡ್ಡ ಹೆಸರಿನ ವಿಷಯದಲ್ಲಿ ಧಾರ್ಮಿಕ ಚಿಹ್ನೆಗಳ ವಿಷಯದಲ್ಲಿ ನಿಜವನ್ನು ಮರೆಮಾಚಿ ಬೇರೆ ತರಹದ ಚಿತ್ರಣ ಕೊಡುವುದು. 7. ವಿವಾಹ (marriage) ಇಂತಹ ಮತಾಂತರಕ್ಕೆ ಸಹಕರಿಸಬಾರದು. ಮನವೊಲಿಸಬಾರದು ಅಥವಾ ಮಸಲತ್ತು ಮಾಡಬಾರದು. ಯಾವುದೇ ವ್ಯಕ್ತಿ ತನ್ನ ನಿಕಟಪೂರ್ವ ಮತಕ್ಕೆ ತಿರುಗಿ ಮತಾಂತರವಾಗುವುದು ಈ ಕಾನೂನಿನ್ವಯ ಮತಾಂತರವೆನಿಸಿಕೊಳ್ಳುವುದಿಲ್ಲ. ಮೇಲಿನ ಮೂರನೇ ಕಲಂ ಉಲ್ಲಂಘಿಸಿದವರಿಗೆ ವಿವಿಧ ಸಂದರ್ಭಕ್ಕೆ ಅನುಗುಣವಾಗಿ ಹತ್ತು ವರ್ಷದವರೆಗೆ ಶಿಕ್ಷೆ ಮತ್ತು ದಂಡ ವಿಧಿಸಲು ಅವಕಾಶವಿದೆ. ಮತಾಂತರಕ್ಕೆ ಒಳಗಾದ ವ್ಯಕ್ತಿಗೆ ಅಪರಾಧಿಗಳಿಂದ ಪರಿಹಾರ ಕೊಡಿಸಲು ಅವಕಾಶವಿದೆ.

ಇಲ್ಲಿ ಕೆಲವು ವಿಷಯಗಳನ್ನು ಗಮನಿಸಬೇಕು. ಮೊದಲನೆಯದಾಗಿ, ಇದು ಮತಾಂತರವನ್ನು ಸಾರಾಸಗಟಾಗಿ ನಿಷೇಧಿಸುವುದಿಲ್ಲ. ಎರಡನೆಯದಾಗಿ ಲವ್ ಜಿಹಾದ್ ಎಂದು ಸಾಮಾನ್ಯವಾಗಿ ಯಾವುದಕ್ಕೆ ಹೇಳುತ್ತೇವೊ ಅದಕ್ಕೆ ಸೀಮಿತವಾಗಿಲ್ಲ. ಮೂರನೆಯದಾಗಿ ಇದು ಅಂತರ್ ಧರ್ಮೀಯ ವಿವಾಹವನ್ನು ನಿಷೇಧಿಸುವುದಿಲ್ಲ. ಆ ಮೂಲಕ ನಡೆಯುವ ಮತಾಂತರವನ್ನು ಮಾತ್ರ ನಿಷೇಧಿಸುತ್ತದೆ ಮತ್ತು ಕೇವಲ ಹಿಂದೂ ಧರ್ಮದಿಂದ ಬೇರೆ ಧರ್ಮಕ್ಕೆ ಮತಾಂತರವಾಗುವುದಕ್ಕೆ ಸೀಮಿತವಾಗಿಲ್ಲ.

ಈ ಕಾನೂನು ಮತಾಂತರಕ್ಕೆ ಕಾನೂನಿನ ಚೌಕಟ್ಟು ಹಾಕಿಕೊಡುತ್ತದೆ. ಇದರ ಎಂಟನೇ ಕಲಂ ಪ್ರಕಾರ ಮತಾಂತರಗೊಳ್ಳಲು ಬಯಸುವ ವ್ಯಕ್ತಿ ಜಿಲ್ಲಾದಂಡಾಧಿಕಾರಿಗೆ ಅರವತ್ತು ದಿನ ಪೂರ್ವಭಾವಿಯಾಗಿ ನಿಗದಿತ ನಮೂನೆಯಲ್ಲಿ ತಾನು ಸ್ವಇಚ್ಛೆಯಿಂದ ಯಾವುದೇ ಬಲಾತ್ಕಾರ, ಸಮ್ಮತವಲ್ಲದ ಒತ್ತಡ, ಸಮ್ಮತವಲ್ಲದ ಪ್ರಭಾವ ಅಥವಾ ಆಮಿಷ ಇಲ್ಲದೆ ಮತಾಂತರವಾಗಲು ಬಯಸಿದ್ದೇನೆಂದು ಘೋಷಣಾಪತ್ರ ಕೊಡಬೇಕು. ಮತಾಂತರದ ಧಾರ್ಮಿಕ ವಿಧಿ ನೆರವೇರಿಸುವ ವ್ಯಕ್ತಿಯು ಜಿಲ್ಲಾ ದಂಡಾಧಿಕಾರಿಗೆ ಈ ಕುರಿತು ಒಂದು ತಿಂಗಳ ಪೂರ್ವಭಾವಿ ತಿಳಿವಳಿಕೆಯನ್ನು ನಿಗದಿತ ನಮೂನೆಯಲ್ಲಿ ನೀಡಬೇಕು. ಮೇಲಿನ ಎರಡು ಮುನ್ಸೂಚನೆ ನೀಡದಿದ್ದರೆ ಅಪರಾಧವಾಗುತ್ತದೆ ಮತ್ತು ಮತಾಂತರ ಅನೂರ್ಜಿತ.

ಸೂಚನೆ ದೊರಕಿದ ನಂತರ ಜಿಲ್ಲಾ ದಂಡಾಧಿಕಾರಿ ಈ ಮತಾಂತರದ ನೈಜ ಉದ್ದೇಶದ ಕುರಿತು ತನಿಖೆ ನಡೆಸಬೇಕಾಗುತ್ತದೆ. ಮತಾಂತರವಾದ ವ್ಯಕ್ತಿಯು ಅರವತ್ತು ದಿನಗಳ ಒಳಗಾಗಿ ಜಿಲ್ಲಾಧಿಕಾರಿಗೆ ನಿಗದಿತ ನಮೂನೆಯಲ್ಲಿ ಮತಾಂತರದ ವಿವರಗಳನ್ನು ಕೊಡಬೇಕು. ತಪ್ಪಿದಲ್ಲಿ ಮತಾಂತರ ಸಿಂಧುವಾಗುವುದಿಲ್ಲ. ಜಿಲ್ಲಾಧಿಕಾರಿ ಸಲ್ಲಿಸಿದ ವಿವರಗಳ ನಮೂನೆಯ ಪ್ರತಿಯನ್ನು ತಮ್ಮ ಕಛೇರಿಯ ತಿಳುವಳಿಕೆ ಫಲಕದಲ್ಲಿ ಪ್ರದರ್ಶಿಸಬೇಕು. ಮತಾಂತರಗೊಂಡ ವ್ಯಕ್ತಿಯು ವಿವರ ಕೊಟ್ಟ 21 ದಿನಗಳ ಒಳಗೆ ಜಿಲ್ಲಾಧಿಕಾರಿ ಎದುರು ಹಾಜರಾಗಿ ತನ್ನ ಗುರುತು ಮತ್ತು ವಿವರ ದೃಢೀಕರಿಸಬೇಕು. ಜಿಲ್ಲಾಧಿಕಾರಿ ದೃಢೀಕರಣವನ್ನು ಮತ್ತು ಆಕ್ಷೇಪ ಏನಾದರೂ ಬಂದಲ್ಲಿ ವಿವರಗಳನ್ನು ನಮೂದಿಸತಕ್ಕದ್ದು. ಆಕ್ಷೇಪದ ಕುರಿತು ಏನೂ ಕ್ರಮ ತೆಗೆದುಕೊಳ್ಳಲಿಕ್ಕೆ ಇಲ್ಲ.

ಉಳಿದ ಕೆಲವು ಪ್ರಮುಖ ನಿಯಮಗಳು ಹೀಗಿವೆ.

1. ಅಕ್ರಮ ಮತಾಂತರದ ಕುರಿತು ಮತಾಂತರಕ್ಕೆ ಒಳಗಾದ ವ್ಯಕ್ತಿ ಅವನ/ಳ ಪಾಲಕರು, ಸಹೋದರ/ರಿ ರಕ್ತ ಸಂಬಂಧಿ, ಮದುವೆ ಅಥವಾ ದತ್ತು ಸಂಬಂಧಿ ದೂರು ನೀಡಬಹುದು.

2. ಮತಾಂತರ ನಿಷೇಧಿಸಲ್ಪಟ್ಟ ಅಂಶಗಳಿಂದ ಆಗಿಲ್ಲವೆಂದು ಸಾಬೀತು ಮಾಡುವುದು ಮತಾಂತರ ಮಾಡಿಸಿದವನ ಜವಾಬ್ದಾರಿ.

3. ಅಕ್ರಮ ಮತಾಂತರದಲ್ಲಿ ತೊಡಗಿದ ಸಂಸ್ಥೆಯ ಮುಖ್ಯಸ್ಥರು ಶಿಕ್ಷೆಗೆ ಒಳಗಾಗುತ್ತಾರೆ. ಸಂಸ್ಥೆಯ ನೋಂದಣಿ ರದ್ದಾಗಬಹುದು.

4. ಅಕ್ರಮ ಮತಾಂತರಕ್ಕೆ ಸಹಕರಿಸಿದವರೂ ಅಪರಾಧಿ.

ಈ ಕಾನೂನನ್ನು ಸರ್ವೋಚ್ಚ ನ್ಯಾಯಾಲಯದಲ್ಲಿ ಪ್ರಶ್ನಿಸುವ ಅರ್ಜಿಗಳು ದಾಖಲಾಗಿವೆ. ಹಿಂದೆ ಮಧ್ಯಪ್ರದೇಶ ಮತ್ತು ಒಡಿಶಾದ ಇದೇ ತರಹದ ಕಾನೂನುಗಳು ಸರ್ವೋಚ್ಚ ನ್ಯಾಯಾಲಯದ ಪರಿಶೀಲನೆಗೆ ಒಳಪಟ್ಟಿವೆ. 1977ರ ರೆ. ಸ್ಟಾನಿಸ್ಲಾಸ್ ವರ್ಸಸ್ ಮಧ್ಯಪ್ರದೇಶ ರಾಜ್ಯ ಮೊಕದ್ದಮೆಯಲ್ಲಿ ಈ ಕಾನೂನಿನ ವಿರುದ್ಧ ಎರಡು ಮುಖ್ಯ ಆಕ್ಷೇಪಣೆ ಎತ್ತಲಾಗಿತ್ತು.

1. ರಾಜ್ಯ ವಿಧಾನಸಭೆಗೆ ಈ ಕಾನೂನು ಮಾಡುವ ಶಾಸನಾತ್ಮಕ ಅಧಿಕಾರ ಇಲ್ಲ, ಸಂವಿಧಾನದ ಏಳನೆ ಅನುಚ್ಛೇದದಲ್ಲಿ ಮೂರು ಪಟ್ಟಿಗಳಿವೆ. ಮೊದಲನೆಯ ಪಟ್ಟಿಯ ವಿಷಯಗಳ ಬಗ್ಗೆ

ಕೇವಲ ರಾಜ್ಯ ಕಾನೂನು ಮಾಡಬಹುದು. ಮೂರನೆ ಪಟ್ಟಿಯಲ್ಲಿ ನಮೂದಿಸಿದ ವಿಷಯಗಳ ಬಗ್ಗೆ ಎರಡೂ (ಸಂಸತ್ತು ಮತ್ತು ರಾಜ್ಯ ವಿಧಾನ ಮಂಡಲ) ಕಾನೂನು ಮಾಡಬಹುದು. ಯಾವುದೇ ಪಟ್ಟಿಯಲ್ಲಿ ನಮೂದಾಗದಿದ್ದರೆ ಸಂಸತ್ತು ಕಾನೂನು ಮಾಡಬಹುದು. ಧರ್ಮ ಮತ್ತು ಮತಾಂತರ ಯಾವುದೇ ಪಟ್ಟಿಯಲ್ಲಿ ಇಲ್ಲದಿರುವುದರಿಂದ ಕೇವಲ ಸಂಸತ್ತು ಈ ಕುರಿತು ಕಾನೂನು ಮಾಡಬಹುದು–ಈ ವಾದವನ್ನು ಸರ್ವೋಚ್ಚ ನ್ಯಾಯಲಯ ತಿರಸ್ಕರಿಸಿತು. ಈ ಕಾನೂನಿನ ಉದ್ದೇಶ, ಅಕ್ರಮ ಮತಾಂತರದಿಂದ ಸಾರ್ವಜನಿಕ ಕಾನೂನು ಸುವ್ಯವಸ್ಥೆಗೆ ಭಂಗ ಉಂಟಾಗುವುದನ್ನು ತಪ್ಪಿಸುವುದು. ಸಾರ್ವಜನಿಕ ಕಾನೂನು ಸುವ್ಯವಸ್ಥೆ ಎರಡನೆಯ ಪಟ್ಟಿಯಲ್ಲಿದ್ದು ಈ ಕುರಿತು ರಾಜ್ಯ ವಿಧಾನಮಂಡಲ ಕಾನೂನು ಮಾಡಬಹುದು ಎಂದು ನ್ಯಾಯಾಲಯ ತೀರ್ಪು ನೀಡಿತು.

2. ಈ ಕಾನೂನು ಸಂವಿಧಾನದ 25ನೇ ವಿಧಿಯಲ್ಲಿ ನೀಡಲಾದ ಧರ್ಮಪ್ರಚಾರದ ಹಕ್ಕನ್ನು ಉಲ್ಲಂಘಿಸುತ್ತದೆ. ಈ ವಾದವನ್ನು ತಿರಸ್ಕರಿಸಿದ ಸರ್ವೋಚ್ಚ ನ್ಯಾಯಾಲಯ, ಧರ್ಮಪ್ರಚಾರದ ಹಕ್ಕು ಮತಾಂತರ ಮಾಡುವ ಹಕ್ಕನ್ನು ನೀಡುವುದಿಲ್ಲ ಎಂದಿತು.

ಉತ್ತರ ಪ್ರದೇಶದ ಕಾನೂನಿನಲ್ಲಿ ಅಕ್ರಮ ಮತಾಂತರದ ವ್ಯಾಖ್ಯಾನ ಹೆಚ್ಚು ವಿಸ್ತಾರವಾಗಿದೆ ಮತ್ತು ಕೆಲವು ಕಲಮುಗಳು ಹೆಚ್ಚು ಕಠಿಣವಾಗಿವೆ. ಸರ್ವೋಚ್ಚ ನ್ಯಾಯಾಲಯದ ತೀರ್ಪನ್ನು ಕಾಯೋಣ.

**ಲೇಖಕರು: ಜಿ.ಟಿ. ಹೆಗಡೆ,**
**ಹಿರಿಯ ವಕೀಲರು,**
**ಆಧಾರ: ವಿಜಯ ಕರ್ನಾಟಕ, ದಿನಾಂಕ:15.01.2021**

## 4. ಸಂವಿಧಾನ: ಜಾರಿ ತಡವಾದದ್ದೇಕೆ?

ಜನವರಿ 26ರಂದೇ ಏಕೆ ಗಣರಾಜ್ಯೋತ್ಸವ? ಹೌದಲ್ಲವೇ? ಗಣರಾಜ್ಯ ದಿನ ಎಂದರೆ ಭಾರತ ಸಂವಿಧಾನವನ್ನು ದೇಶದಲ್ಲಿ ಜಾರಿಗೆ ತಂದ ದಿನ. ಆದರೆ, ಭಾರತ ಸಂವಿದಾನವು ಪೂರ್ತಿ ಸಿದ್ಧವಾಗಿ, ಸಂವಿಧಾನ ರಚನಾ ಸಭೆಯು ಅದನ್ನು 1949ರ ನವೆಂಬರ್ 26ರಂದೇ ಅಂಗೀಕೃತವಾಗಿದ್ದರೆ ಅದನ್ನು ರಾಷ್ಟ್ರದಲ್ಲಿ ಜಾರಿಗೆ ಕೊಡಲು ಎರಡು ತಿಂಗಳು ತಡಮಾಡಿದ್ದು ಏಕೆ? ಬೇಕಾದ ಸಿದ್ಧತೆ ಮಾಡಿಕೊಳ್ಳುವುದಕ್ಕೇ? ಅಲ್ಲ. ಈ ತೀರ್ಮಾನಕ್ಕೆ ಮಹತ್ವದ ಕಾರಣಗಳಿದ್ದವು.

ಭಾರತಕ್ಕೆ ಸ್ವಾತಂತ್ರ್ಯವನ್ನು ನೀಡಬೇಕು ಎಂದು ಬ್ರಿಟಿಷ್ ಸರ್ಕಾರವು ತೀರ್ಮಾನಿಸಿತು. ಅದನ್ನು ಆಗಸ್ಟ್ 15ರಂದು ಘೋಷಿಸಬೇಕು ಎಂದು ತೀರ್ಮಾನಿಸಿದ್ದು ಭಾರತೀಯರಲ್ಲ. ಆಗ ವೈಸ್‌ರಾಯ್ ಆಗಿದ್ದ ಲಾರ್ಡ್ ಮೌಂಟ್ ಬ್ಯಾಟನ್. ಆಗಸ್ಟ್ 15, ಎರಡನೇ ಜಾಗತಿಕ ಯುದ್ಧದಲ್ಲಿ ಬ್ರಿಟನ್ ಸೇರಿದ ಹಾಗೆ ಅಲೈನ್ ರಾಷ್ಟ್ರಗಳಿಗೆ ಜಪಾನ್ ಶರಣಾಗತಿಯಾದ ದಿನ. ಮೌಂಟ್ ಬ್ಯಾಟನ್ ಆಗ್ನೇಯ ಏಷ್ಯಾದ ಕಮಾಂಡಿನ ಸುಪ್ರೀಂ ಅಲೈಡ್ ಕಮಾಂಡರ್ ಆಗಿದ್ದರು ಮತ್ತು ಜಪಾನಿನ ಶರಣಾಗತಿಯನ್ನು ಸಿಂಗಪುರದಲ್ಲಿ ಒಪ್ಪಿಕೊಂಡಿದ್ದು ಇವರೇ ಆಗಿದ್ದರು. 1947ರ ಆಗಸ್ಟ್ 15, ಜಪಾನಿನ ಶರಣಾಗತಿಯ ಎರಡನೇ ವಾರ್ಷಿಕೋತ್ಸವವಾಗಿತ್ತು1 ಎಂದರೆ, ಇತಿಹಾಸಜ್ಞ ರಾಮಚಂದ್ರ ಗುಹಾ ಹೇಳುವ ಹಾಗೆ, 'ಕೊನೆಗೂ ಬಂದ ಸ್ವಾತಂತ್ರ್ಯವು ರಾಷ್ಟ್ರೀಯವಾದಿ ಅಭಿಮಾನಕ್ಕಿಂತ ಸಾಮ್ರಾಜ್ಯಶಾಹಿ ಅಹಂಕಾರವನ್ನು ಅನುರಣಿಸುವ ದಿನದಂದು ಬಂದಿತು.

ಭಾರತೀಯರಿಗೆ ಉಳಿದಿದ್ದ ಇನ್ನೊಂದು ರಾಷ್ಟ್ರೀಯ ಸಮ್ಮಾನದ ಅವಕಾಶವೆಂದರೆ, ಭಾರತ ಸಂವಿಧಾನವನ್ನು ಜಾರಿಗೆ ನೀಡಲು ರಾಷ್ಟ್ರೀಯವಾದ ಅಭಿಮಾನದ ಪ್ರತೀಕವಾದ ದಿನವನ್ನು ಆಯ್ಕೆ ಮಾಡಿಕೊಳ್ಳುವುದು. ಅದುವೇ ಜನವರಿ 26, ಇದರ ರಾಷ್ಟೀಯ ಮಹತ್ವವೇನು?

ಭಾರತಕ್ಕೆ ಸ್ವಾತಂತ್ರ್ಯ ಬರುವ 17 ವರ್ಷ ಮುಂಚೆಯೇ 1930ರಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಲಾಹೋರಿನಲ್ಲಿ ನಡೆದ ತನ್ನ ವಾರ್ಷಿಕ ಅಧಿವೇಶನದಲ್ಲಿ ಭಾರತಕ್ಕೆ 'ಪೂರ್ಣ ಸ್ವರಾಜ್ಯ'ವನ್ನು

ಘೋಷಿಸಿತ್ತು. ಅಂದು ಜನವರಿ 26 ಆಗಿತ್ತು. ಅದಕ್ಕೂ ಮುಂಚೆ 1929ರ ಡಿಸೆಂಬರ್ 31ರ ಮಧ್ಯರಾತ್ರಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿನ ಅಧ್ಯಕ್ಷ ಜವಾಹರಲಾಲ್ ನೆಹರೂ ಅವರು ಭಾರತದ ಸ್ವರಾಜ್ಯದ ಪ್ರತೀಕವಾದ (ಮಧ್ಯದಲ್ಲಿ ಅಶೋಕ ಚಕ್ರದ ಬದಲು ಚರಕದ ಚಿತ್ರವಿರುವ) ತ್ರಿವರ್ಣ ಧ್ವಜವನ್ನು ಲಾಹೋರಿನ ರಾವಿ ನದಿಯ ದಡದಲ್ಲಿ ಹಾರಿಸಿದ್ದರು. 1930ರ ಜನವರಿ 26 ಅನ್ನು ಸ್ವಾತಂತ್ರ್ಯ ಘೋಷಣೆಯ ಗಡುವಿನ ದಿನವನ್ನಾಗಿ ನಿಗದಿಪಡಿಸಿದ್ದರು. ಅಂದು, ಅಧಿವೇಶನದಲ್ಲಿ ಸೇರಿದ್ದ ಬೃಹತ್ ಸಮಾವೇಶದಲ್ಲಿ ಭಾರತೀಯರು ಅಂಗೀಕರಿಸಿದ ಠರಾವಿನ ಪಠ್ಯದ ಕೆಲವು ಭಾಗ ಹೀಗಿತ್ತು. 'ಯಾವುದೇ ಸರ್ಕಾರವು ಜನರ ನೈಜ ಹಕ್ಕುಗಳನ್ನು ಕಸಿದುಕೊಂಡಲ್ಲಿ, ಅವರನ್ನು ತುಳಿದಲ್ಲಿ ಅಂಥ ಸರ್ಕಾರವನ್ನು ಬದಲಾಯಿಸುವ ಅಥವಾ ರದ್ದು ಪಡಿಸುವ ಹಕ್ಕೂ ಜನತೆಗೆ ಇದೆ... ಆದ್ದರಿಂದ ಪೂರ್ಣ ಸ್ವರಾಜ್ಯದ ಸ್ಥಾಪನೆಗಾಗಿ ನಾವು ಅಮಾನವೀಯ ಬ್ರಿಟಿಷ್ ಸರ್ಕಾರವನ್ನು ಅಂತ್ಯಗೊಳಿಸುವ ಪಣವನ್ನು ತೊಡುತ್ತೇವೆ. 1930 ರಿಂದ 17 ವರ್ಷಗಳ ಕಾಲ ಭಾರತೀಯರು ಜನವರಿ 26ರಂದು ದೇಶದಾದ್ಯಂತ 'ಪೂರ್ಣ ಸ್ವರಾಜ್ಯ ದಿನ'ವನ್ನು ಆಚರಿಸಿ, ತ್ರಿವರ್ಣ ಧ್ವಜವನ್ನು ಹಾರಿಸಿದರು.

ಈ ಕಾರಣಗಳಿಗಾಗಿ ಭಾರತೀಯರ ಸ್ವಾಭಿಮಾನದ ಪ್ರತೀಕವಾದ ಆ ದಿನದಂದೇ ತನ್ನನ್ನು 'ಸಾರ್ವಭೌಮ' (ಸಮಾಜವಾದಿ ಮತಧರ್ಮ ನಿರಾಪೇಕ್ಷ) ಜನಸತ್ತಾತ್ಮಕ ಗಣರಾಜ್ಯವನ್ನಾಗಿ ಜಗತ್ತಿನೆದುರು ಘೋಷಿಸಲು, ಸಂವಿಧಾನವನ್ನು ರಾಷ್ಟ್ರದಲ್ಲಿ ಜಾರಿಗೆ ಕೊಡಲು ಸಿದ್ಧವಾಗಿ ಎರಡು ತಿಂಗಳು ತಡವಾದರೂ ಅಡ್ಡಿಯಿಲ್ಲವೆಂದು (1950ರ) ಜನವರಿ 26 ಅನ್ನು ಭಾರತವು ಆಯ್ಕೆ ಮಾಡಿಕೊಂಡಿತು.

ವಾಸ್ತವವಾಗಿ, 191947ರಲ್ಲಿ 'ಸ್ವಾತಂತ್ರ್ಯ' ಬಂದಿದ್ದರೂ 1950ರ ಜನವರಿ 26, ಎಂದರೆ ತನ್ನದೇ ಸಂವಿಧಾನ ಜಾರಿಯಾಗಿ ಕೊಡುವವರೆಗೆ ಭಾರತವು ಸರ್ವತಂತ್ರ ಸ್ವತಂತ್ರ ರಾಷ್ಟ್ರವಾಗಿರದೆ, 'ಅರೆ–ಸ್ವಾಯತ್ತತೆಯೊಂದಿಗೆ ಬ್ರಿಟಿಷ್ ಅಧಿಪತ್ಯವನ್ನು ಒಪ್ಪಿಕೊಂಡೇ ಮುಂದುವರಿಯವ 'ಡೊಮಿನಿಯನ್ ರಾಷ್ಟ್ರ' ಆಗಿತ್ತು. 1950ರ ಜನವರಿ 26 ರಂದು, ಬ್ರಿಟಿಷರ ಕೊನೆಯ ಗವರ್ನ್‌ಮೆಂಟ್ ಆಫ್ ಇಂಡಿಯಾ ಆ್ಯಕ್ಟ್ 1935ರ ಜಾಗದಲ್ಲಿ, ಭಾರತದ ಸ್ವಆಳ್ವಿಕೆಯ ದಾರಿದೀಪವಾದ ಸಂವಿಧಾನ ಜಾರಿಗೆ ಬಂದ ಕ್ಷಣದಿಂದ ಭಾರತವು ಸಾರ್ವಭೌಮ ರಾಷ್ಟ್ರವಾಯಿತು.

ನಮ್ಮಲ್ಲಿ ಈಗಲೂ ಬಹುತೇಕ ಜನರಿಗೆ ಸ್ವಾತಂತ್ರ ದಿನಾಚರಣೆ ಮತ್ತು ಗಣರಾಜ್ಯೋತ್ಸವದ ನಡುವೆ ವ್ಯತ್ಯಾಸವೇ ಗೊತ್ತಿಲ್ಲದ ಸ್ಥಿತಿಯಿದೆ. ಅಂದು, ರಾಷ್ಟ್ರ ಮಟ್ಟದಿಂದ ಹಿಡಿದು ಗ್ರಾಮ ಪಂಚಾಯಿತಿಯವರೆಗೆ ಎಲ್ಲ ಕಡೆ ಜನಪ್ರತಿನಿಧಿಗಳು ತಮ್ಮ ಸಾಧನೆಗಳ ತುತ್ತೂರಿಯನ್ನು ಊದುತ್ತಾ ಹಳಸಿದ ಭಾಷಣಗಳನ್ನು ಮಾಡುವುದಾದರೆ ಜನರಿಗೆ ಈ ದಿನಗಳ ಮಹತ್ವ ಅರ್ಥವಾಗುವುದಾದರೂ ಹೇಗೆ? ಈಗ ನಿಮಗೆ ಗಣರಾಜ್ಯೋತ್ಸವದ ಮಹತ್ವ ಅರ್ಥವಾಗಿದ್ದರೆ, ಅಂದು ಭಾರತದ ಧ್ವಜವನ್ನು ಹಾರಿಸಿ, ಸಂವಿಧಾನವನ್ನು ಪ್ರತಿನಿಧಿಸುವ ಪ್ರಸ್ತಾವನೆಯ ಕನ್ನಡ ಆವೃತ್ತಿಯನ್ನು ಇಡಿ. ಈ ದಿನದ ಮಹತ್ವವನ್ನು ಎಲ್ಲರಿಗೂ ಅರ್ಥ ಮಾಡಿಸುವ ಪ್ರಯತ್ನ ಮಾಡಿ.

**ಆಧಾರ:– ಪ್ರಜಾವಾಣಿ, ದಿನಾಂಕ 19.01.2021**

## 5. ಸರ್ಕಾರ ದನ ಕಾಯುವ ಕೆಲಸ ಮಾಡಬೇಕಾದೀತು.

ಕೃಷಿ ಪ್ರಧಾನ ದೇಶ ಭಾರತ. ಬಹುಪಾಲು ಜನರ ಮುಖ್ಯ ಜೀವನಾಧಾರ ಒಕ್ಕಲುತನ. ಪಶುಪಾಲನೆ ಅಂದರೆ ಹೈನದ ದನಗಳನ್ನು ಸಾಕುವುದು ಕೃಷಿಯ ಒಂದು ಭಾಗವೇ ಆಗಿದೆ. ಕೃಷಿಯಲ್ಲಿ ದನಕರುಗಳನ್ನು ಬಳಕೆ ಮಾಡುತ್ತಿರುವ ರೈತ ಎತ್ತು ಹಾಗೂ ಆಕಳುಗಳನ್ನು ಪೂಜನೀಯವಾಗಿ ಕಾಣುವುದು ಅವನ ಧರ್ಮವಾಗಿದೆ. ಉತ್ತರ ಕರ್ನಾಟಕದಲ್ಲಂತೂ ಪ್ರತಿ ರೈತರು ಬಸವಣ್ಣ(ಎತ್ತು)ನವರ ಎಂದು ಪರಿಗಣಿಸಿ ಅಂದು ಕೃಷಿ ಕೆಲಸಕ್ಕೆ ರಜೆ ಘೋಷಿಸುವುದು ಒಂದು ಪರಂಪರೆ. ಎತ್ತುಗಳ ಮೈತೊಳೆದು ಪೂಜೆ ಮಾಡಿ ಮನೆಯಲ್ಲಿ ತಯಾರಿಸಿದ ಅಡುಗೆಯ ಒಂದು ತುಣುಕನ್ನು ಅವುಗಳ ಬಾಯಿಗೆ ಹಾಕುವುದು ರೈತರ ರೂಢಿ. ಹೀಗಿರುವಾಗ ಗೋವು (ಎತ್ತುಗಳೂ ಸೇರಿ) ಪೂಜನೀಯ ಎಂದು ರೈತರಿಗೆ ಯಾರೂ ಹೇಳಿಕೊಡಬೇಕಾಗಿಲ್ಲ. ಆದರೆ ರೈತರು ತಮಗೆ ಬೇಕಾದ ಎತ್ತುಗಳನ್ನು ಮತ್ತು ಹೈನಕ್ಕೆ ಆಕಳುಗಳನ್ನು ಕೊಂಡು ತರುವುದು ಸಹಜ. ತಮ್ಮ ಬಳಕೆಗೆ ಅನಗತ್ಯವೆಂದು ತಿಳಿದ ದನಗಳನ್ನು ದನದ ಪೇಟೆಯಲ್ಲೋ

ಅಥವಾ ಊರ ಮನೆಯಲ್ಲೋ ಬಂದ ಖರೀದಿದಾರರಿಗೆ ಮಾರಾಟ ಮಾಡುತ್ತಿದ್ದರು. ಆಗ ಆ ದನಗಳು ತಮ್ಮವೇ ಎಂದು ಖಚಿತಪಡಿಸುವ ಪತ್ರವನ್ನು ಪಂಚಾಯಿತಿ ಇಲ್ಲವೆ ಎಪಿಎಂಸಿಯಿಂದ ಪಡೆಯಲಾಗುತ್ತಿತ್ತು. ಯಾವ ರೈತರೂ ತಮ್ಮ ದನಗಳನ್ನು ಉದ್ದೇಶಪೂರ್ವಕವಾಗಿ ಮಾಂಸಕ್ಕೆ ಮಾರಾಟ ಮಾಡುವ ಕಟುಕತನ ತೋರಿದ ಉದಾಹರಣೆಗಳು ಇಲ್ಲ. ಆದರೆ ರೋಗಗ್ರಸ್ತ, ಅನುತ್ಪಾದಕ ದನಗಳನ್ನು ಮಾರಾಟ ಮಾಡುತ್ತಿದ್ದುದು ನಿಜ. ಈಗ ಸಮಾಜದಲ್ಲಿ ತೀವ್ರ ಬದಲಾವಣೆಗಳಾಗಿವೆ. ಅದರಂತೆ ಕೃಷಿ ಕೂಡ ಹೆಚ್ಚು ಹೆಚ್ಚು ಯಾಂತ್ರೀಕರಣಗೊಂಡಿದೆ. ಇಂದು ಕೃಷಿ ಕಾರ್ಯದಲ್ಲಿ ರೈತ ಎತ್ತುಗಳ ಬಳಕೆಯನ್ನು ತೀರ ಕಡಿಮೆ ಮಾಡಿದ್ದಾನೆ. ಎತ್ತುಗಳು ಇಲ್ಲದೆ ಕೃಷಿ ಮಾಡಬಹುದು ಎಂಬ ಸ್ಥಿತಿಗೆ ತಲುಪಿದಂತಿದೆ. ಹೀಗಾಗಿ ಬಹುತೇಕ ರೈತ ಕುಟುಂಬಗಳ ಮನೆಗಳಲ್ಲಿ ದನಕರುಗಳು ಇಲ್ಲ. ಇನ್ನೊಂದು ಬೆಳವಣಿಗೆ ಎಂದರೆ ಜವಾರಿ ಆಕಳದ ಸ್ಥಾನವನ್ನು ಈಗ ಹೈಬ್ರಿಡ್ ತಳಿ ಆಕಳು ಆಕ್ರಮಿಸಿದೆ. ಹೆಚ್ಚು ಹಾಲಿನ ನಿರೀಕ್ಷೆಯಲ್ಲಿರುವ ರೈತರು ಹೈಬ್ರಿಡ್ ತಳಿ ಆಕಳನ್ನು ಸಾಕುತ್ತಿದ್ದಾರೆ. ಅದು ಹೆಚ್ಚು ಹಾಲು ಕೊಡುತ್ತದೆ ನಿಜ, ಆದರೆ ಅದರ ಪೋಷಣೆ ಖರ್ಚುದಾಯಕವೂ ಹೌದು. ಈ ತಳಿ ಬಗ್ಗೆ ಇರುವ ಒಂದು ಆತಂಕ ಎಂದರೆ ಇದು ಕೊಡುವ ಗಂಡು ಕರು ಉಳುಮೆಗೆ ಎತ್ತನ್ನು ಒದಗಿಸದು. ಅದು ಒಂದು ರೀತಿಯಲ್ಲಿ ರೈತನಿಗೆ ಅನುಪಯುಕ್ತ ಮತ್ತು ಹೊರೆ. ಅದರಲ್ಲಿಯೂ ಎಚ್ ಎಫ್ ಜರ್ಸಿ ಆಕಳುಗಳು ಗಂಡು ಕರು ಹಾಕಿದರೆ ಹುಟ್ಟಿದ ದಿನದಂದೇ ಕಟುಕರಿಗೆ ಮಾರಾಟ ಮಾಡುವುದು ಇಡೀ ರಾಜ್ಯದಲ್ಲಿ ಇರುವ ಪದ್ಧತಿ.

ವಸ್ತುಸ್ಥಿತಿ ಹೀಗಿರುವಾಗ ಕರ್ನಾಟಕ ಸರ್ಕಾರ ಜಾರಿಗೆ ತಂದಿರುವ 'ಗೋಹತ್ಯೆ ನಿಷೇಧ ಕಾಯಿದೆ'ಯ ಔಚಿತ್ಯ ಏನು ಎಂದು ತಿಳಿಯಬೇಕಿದೆ. ಗೋಹತ್ಯೆ ನಿಷೇಧ ಇದೆ ಎಂದಾದರೆ ದನದ ಮಾಂಸ ಮಾರಾಟದ ನಿಷೇಧವೂ ಇರಬೇಕಿತ್ತಲ್ಲ. ಮೊದಲನೆಯದು ಇದೆ ಎಂದಾದರೆ ಎರಡನೆಯದು ಇದ್ದರೆ, ಕಾಯ್ದೆ ಜಾರಿ ಅರ್ಥಪೂರ್ಣವಾಗುವುದು. ಆದ್ದರಿಂದ ಗೋಹತ್ಯೆ. ನಿಷೇಧ ಕಾಯಿದೆ ಜಾರಿಯಲ್ಲಿ ಸಾಕಷ್ಟು ರಾಜಕೀಯ'ದ ವಾಸನೆ ಬಡಿಯುತ್ತದೆ. ಯಾವುದೋ ನಿರ್ದಿಷ್ಟ ವಿಚಾರವನ್ನು ಗುರಿಯಾಗಿಸಿಕೊಂಡಂತಿದೆ ಈ ಕಾಯಿದೆ. ಆದರೆ ದನದ ಮಾಂಸ ಮಾರಾಟ ಮತ್ತು ರಫ್ತು ವ್ಯವಹಾರದಲ್ಲಿ ಪ್ರಮುಖ ವ್ಯಕ್ತಿಗಳಿರುವುದು ಖೇದದ ಸಂಗತಿ. ಈ ಕಾನೂನು ಜಾರಿಗೊಂಡ ಮೇಲೆ ರೈತರು ಎದುರಿಸುವ ಸವಾಲುಗಳು, ಅನುಭವಿಸಬಹುದಾದ ಸಂಕಷ್ಟಗಳ ಬಗ್ಗೆ ಚಿಂತಿಸಬೇಕಿದೆ. ರೈತರು ವ್ಯವಸಾಯಕ್ಕೆ ಅಗತ್ಯವಿರುವ ಪದಾರ್ಥಗಳನ್ನು ಕೊಳ್ಳುವಂತೆ ಮತ್ತು ತಮ್ಮಲ್ಲಿನ ಹೆಚ್ಚುವರಿ ಕೃಷಿ ಉತ್ಪಾದನೆ ಮಾರಾಟ ಮಾಡುವಂತೆ ದನಗಳನ್ನು ಮಾರುವ ಅಥವಾ ಖರೀದಿಸುವ ಅನಿವಾರ್ಯತೆಗೆ ಒಳಗಾಗುತ್ತಾರೆ. ರೈತನು ದನಗಳನ್ನು ಮಾರುವ ಇಲ್ಲವೆ ಕೊಳ್ಳುವ ಪ್ರಕ್ರಿಯೆಯಲ್ಲಿ ಯಾವುದೇ ಶೋಷಣೆ ಕಿರಿಕಿರಿ ಒಳಗಾಗದಂತೆ ನಿಗಾ ವಹಿಸುವುದು ಕಾಯಿದೆಯ ಜವಾಬ್ದಾರಿಯಾಗಬೇಕು. ಇವತ್ತಿಗೂ ಗ್ರಾಮೀಣ ಪ್ರದೇಶದಲ್ಲಿ ರೈತರು ಮುದಿ ದನಕರುಗಳನ್ನು ಪೋಷಣೆ ಮಾಡಿ, ಅವು ಸತ್ತ ನಂತರ ತಮ್ಮ ಜಮೀನುಗಳಲ್ಲಿ ಹೂಳುವುದುಂಟು. ಆದರೆ ರೋಗಗ್ರಸ್ತ ದನಕರುಗಳನ್ನು ಮಾರಲೇಬೇಕಾಗುತ್ತದೆ. ಹಾಗೆ ಮಾರಾಟ ಮಾಡುವಾಗ ರೈತರು ಅನುಸರಿಸಬೇಕಾದ ನಿಯಮಗಳೇನು; ಒಂದೊಮ್ಮೆ ಮಾರಾಟ ಪ್ರಕ್ರಿಯೆ ನಡೆದರೆ ಖರೀದಿದಾರ ಕಾನೂನಿನನ್ವಯ ತಪ್ಪಿತಸ್ಥನಾದಲ್ಲಿ ಮಾರಾಟ ಮಾಡಿದ ರೈತನೂ ತಪ್ಪಿತಸ್ಥನಾಗುವ ಭಯ ಅವರನ್ನು ಕಾಡುತ್ತದೆ.

ಇನ್ನೊಂದು ಪ್ರಶ್ನೆ ಎಂದರೆ ಬಡ, ಕೆಳಮಧ್ಯಮ ವರ್ಗದ ರೈತರಲ್ಲಿರುವ ಅನುಪಯುಕ್ತ, ವಯಸ್ಸಾದ ದನಗಳನ್ನು ಪೋಷಿಸಲು ಸರ್ಕಾರ ಗೋಶಾಲೆ ತೆರೆಯುತ್ತದೆಯೇ. ಉತ್ತರ ಪ್ರದೇಶದಲ್ಲಿ 1500 ಗೋಶಾಲೆಗಳನ್ನು ಸರ್ಕಾರ ತೆರೆದಿದೆ ಎಂಬ ವರದಿ ಇದೆ. ಅದರಂತೆ ಖಾಸಗಿ ಗೋಶಾಲೆಗಳೂ ಇವೆ. ನಮ್ಮ ರಾಜ್ಯದಲ್ಲಿ ಕೆಲವು ಮಠಗಳು ಗೋಶಾಲೆಗಳನ್ನು ತೆರೆದಿವೆ. ಆದರೆ ಸರ್ಕಾರ ಈ ಕುರಿತು ಯಾರಿಗೂ ಯಾವ ಅನುದಾನವನ್ನು ಕೊಟ್ಟ ಹಾಗಿಲ್ಲ.

**ಪೋಸ್ಟ್‌ಮಾರ್ಟಮ್‌ಗೆ ವೈದ್ಯರು ಸಿಗುತ್ತಾರೆಯೆ:** ಸತ್ತ ಮೇಲೆ ಅವುಗಳನ್ನು ಕಡ್ಡಾಯವಾಗಿ ಪೋಸ್ಟ್ ಮಾರ್ಟಮ್ ಮಾಡಬೇಕು ಎಂಬುದು ಸರ್ಕಾರದ ನಿಲುವು. ಆ ಸಮಯಕ್ಕೆ ಸರಿಯಾದ ರೀತಿಯಲ್ಲಿ ಪಶು ವೈದ್ಯರು ಸಿಗುತ್ತಾರೆಯೇ. ಎಲ್ಲ ಜಿಲ್ಲೆ ಮತ್ತು ತಾಲ್ಲೂಕಿನಲ್ಲಿ ಸಾಕಷ್ಟು ಜನ ಬೇರೆ ಇಲಾಖೆಗೆ ನಿಯೋಜನೆಯ ಮೇಲೆ ಹೋಗಿರುವರು. ಜಾನುವಾರುಗಳಿಗೆ ಕಾಯಿಲೆಯಾದರೆ ನೋಡದ ವೈದ್ಯರು

ಅವುಗಳನ್ನು ಪೋಸ್ಟ್‌ಮಾರ್ಟಮ್ ಹೇಗೆ ಮಾಡುತ್ತಾರೆ ಎನ್ನುವುದನ್ನು ಸರ್ಕಾರವೇ ಹೇಳಬೇಕು. ಒಂದು ವೇಳೆ ಎರಡು–ಮೂರು ದಿನ ವೈದ್ಯರು ಸಿಗದಿದ್ದಲ್ಲಿ ಪರಿಸ್ಥಿತಿ ಏನು.

ನಮ್ಮ ರಾಜ್ಯದಲ್ಲಿ 2010ರಿಂದಲೇ ಈ ಕಾಯಿದೆ ಜಾರಿಯಲ್ಲಿದೆ. ಈ ಕಾಯಿದೆಯಲ್ಲಿ ಮತ್ತಷ್ಟು ಬಿಗಿಯಾದ ಕ್ರಮಗಳನ್ನು ಪ್ರಸ್ತಾಪಿಸಿ ಅನೇಕ ರೀತಿಯಲ್ಲಿ ಚರ್ಚೆಯಾಗಿದೆ. ಉತ್ತರ ಪ್ರದೇಶದಲ್ಲಿ ಈ ಕಾಯಿದೆಯೊಳಗೆ ಬರುವ ಜಾನುವಾರುಗಳಿಗೆ, ಗೋಶಾಲೆಯಲ್ಲಿರುವ ದನಗಳಿಗೆ ಪ್ರತಿ ದನಕ್ಕೆ ದಿನಕ್ಕೆ ರೂ.30 ಕೊಡುತ್ತಾರೆ ಎಂಬ ಮಾಹಿತಿ ಇದೆ. ರೈತರು ವಯಸ್ಸಾದ ದನಗಳನ್ನು ಗೋಶಾಲೆಗೆ ಒಯ್ಯುವಾಗ ಅವುಗಳಿಗೆ ನಿರ್ದಿಷ್ಟ ಮೊತ್ತದ ಹಣ ಕೊಡಬೇಕಾಗುತ್ತದೆ. ನಮ್ಮ ರಾಜ್ಯದಲ್ಲಿ ಸುಮಾರು 3 ಕೋಟಿಗೂ ಅಧಿಕ ಜಾನುವಾರುಗಳಿವೆ ಎಂದು ಅಂದಾಜಿಸಲಾಗಿದೆ. 79 ಲಕ್ಷ ರೈತ ಕುಟುಂಬಗಳಿವೆ. ಉತ್ತರ ಪ್ರದೇಶದಲ್ಲಿ ಈ ಕಾನೂನು ಉಲ್ಲಂಘನೆ ಮಾಡಿದವರಿಗೆ 10 ವರ್ಷ ಜೈಲು ಮತ್ತು ಲಕ್ಷಗಟ್ಟಲೆ ದಂಡ ವಿಧಿಸಲಾಗುತ್ತದೆ. ಈ ನಿಟ್ಟಿನಲ್ಲಿ ರೈತರು ತಮ್ಮ ದನಗಳನ್ನು ಮಾರುಕಟ್ಟೆಗೆ ಮಾರಲು ಹೋದರೆ, ಖರೀದಿಸಲು ಹೋದರೆ ಅವರಿಗೆ ಯಾವ ರೀತಿಯ ರಕ್ಷಣೆ ಇರುತ್ತದೆ ಎಂಬುದನ್ನು ಸರ್ಕಾರ ಸ್ಪಷ್ಟಪಡಿಸಲಿ.

**ಸಾವಿರ ಗೋಶಾಲೆ ತೆರೆಯಬೇಕು:** ನಮ್ಮ ರಾಜ್ಯದಲ್ಲಿ ಕನಿಷ್ಠ ಒಂದು ಸಾವಿರಕ್ಕಿಂತ ಅಧಿಕ ಗೋಶಾಲೆಗಳನ್ನು ತೆರೆಯುವ ಅವಶ್ಯಕತೆ ಇದೆ. ಉತ್ತರ ಪ್ರದೇಶದಂತೆ ಇಲ್ಲಿಯೂ ಪ್ರತಿ ದಿನಕ್ಕೆ ರೂ.30 ನೀಡಬೇಕಾದರೆ ಬಜೆಟ್‌ನಲ್ಲಿ ಇದನ್ನು ಒದಗಿಸಲಾಗಿದೆಯೇ. ನಮ್ಮ ರಾಜ್ಯದಲ್ಲಿ ಮಾಂಸ ಮಾರಾಟದಿಂದ ವಾರ್ಷಿಕ 455 ಕೋಟಿ ಬರುತ್ತದೆ. ಇದನ್ನು ಸಂಪೂರ್ಣ ನಿಷೇಧ ಮಾಡಿದರೆ ಅದಕ್ಕೆ ಪರ್ಯಾಯ ದಾರಿಯನ್ನು ಹುಡುಕಬೇಕಾಗುತ್ತದೆ. ಉತ್ತರ ಪ್ರದೇಶದಲ್ಲಿ ಈ ಕಾಯಿದೆ ಜಾರಿಗೆ ಬಂದಾಗಿನಿಂದ ಅನೇಕ ಮೊಕದ್ದಮೆಗಳು ದಾಖಲಾಗಿ ಅಲ್ಲಿ ಕಾನೂನು ದುರುಪಯೋಗ ಆಗುತ್ತದೆಂದು ಎಷ್ಟೋ ನ್ಯಾಯಾಲಯಗಳು ಅಸಮಾಧಾನ ವ್ಯಕ್ತಪಡಿಸಿರುವ ನಿದರ್ಶನಗಳು ವರದಿಯಾಗಿದೆ. ಈ ಹಿನ್ನೆಲೆಯಲ್ಲಿ ಸರ್ಕಾರ ತರಾತುರಿಯಲ್ಲಿ ಸುಗ್ರೀವಾಜ್ಞೆ ತಂದಿದೆ. ಜನವರಿ 18ರಿಂದ ಈ ಕಾನೂನು ಜಾರಿಗೆ ಬರುತ್ತದೆಂದು ಸರ್ಕಾರ ಸುಗ್ರೀವಾಜ್ಞೆಯಲ್ಲಿ ಹೇಳಿದೆ ಜಾನುವಾರುಗಳನ್ನು ಸಾಕಲು ಅನುಮತಿ ಪಡೆಯಬೇಕಾಗುತ್ತದೆ. ಇದರಿಂದ ಭ್ರಷ್ಟಾಚಾರ ಹೆಚ್ಚಾಗುತ್ತದೆ. ರೈತರಿಗೆ ತೊಂದರೆಯಾಗದಂತೆ ಸರ್ಕಾರ ಏನು ಮುಂಜಾಗ್ರತೆ ಕ್ರಮ ಕೈಗೊಂಡಿದೆ. ಈ ದಿನಾಂಕದಿಂದ ಸಾವಿರಾರು ದನಗಳನ್ನು ಸಾಗಾಣಿಕೆ ಮಾಡುವಾಗ ಪೊಲೀಸರು ತಮ್ಮ ವಶಕ್ಕೆ ಪಡೆದುಕೊಳ್ಳುತ್ತಾರೆ. ಅವುಗಳಿಗೆ ಮೇವು, ನೀರಿನ ವ್ಯವಸ್ಥೆ ಏನು. ಪರವಾನಿಗಿ ಪಡೆದು ದನಗಳನ್ನು ಸಾಗಾಣಿಕೆ ಮಾಡುವಾಗ ಇಂತಿಷ್ಟು ಅಂತರವಿರಬೇಕು ಎಂಬ ಕಾನೂನನ್ನು ಸಹ ಇದರಲ್ಲಿ ಅಳವಡಿಸಲಾಗಿದೆ. ಅಲ್ಲದೇ 25 ಕಿ.ಮೀ ಗಿಂತ ಹೆಚ್ಚಿಗೆ ವೇಗವಾಗಿ ವಾಹನ ಓಡಿಸುವಂತಿಲ್ಲ. ಈಗ ನಮ್ಮ ರಾಜ್ಯಕ್ಕೆ ಗೀರ್ ತಳಿ, ದೇವಣಿ ತಳಿ, ರೆಡ್ ಸಿಂದಿ, ಖಿಲಾರಿ ಮುಂತಾದ ದೇಶಿಯ ಆಕಳುಗಳನ್ನು ಬೇರೆ ಬೇರೆ ರಾಜ್ಯಗಳಿಂದ ತರಬೇಕಾದರೆ ಅದಕ್ಕೆ ಯಾವ ನಿಯಮ ಮಾಡಲಾಗಿದೆ.

ಸಾಧಕ ಬಾಧಕ ಚರ್ಚಿಸಬೇಕು: ಈ ಎಲ್ಲ ಮೇಲಿನ ವಿಚಾರಗಳನ್ನು ಸರ್ಕಾರ ಅರಿತುಕೊಂಡಂತೆ ಕಾಣುವುದಿಲ್ಲ. ಕೇವಲ ತನ್ನ ರಾಜಕೀಯ ಲಾಭಕ್ಕಾಗಿ ಈ ಕಾನೂನು ತಂದಂತೆ ಕಾಣುತ್ತಿದೆ. ವಿನಾಕಾರಣ ಇಂತಹ ಕಾನೂನನ್ನು ತಂದು ಇಡೀ ರಾಜ್ಯದಲ್ಲಿಯೇ ತೊಂದರೆಯನ್ನು ಸೃಷ್ಟಿಸಲಾಗುತ್ತಿದೆ. ಒಂದು ತಜ್ಞರ ಸಮಿತಿ ಮಾಡಿ ಅಧ್ಯಯನ ಮಾಡಿ ಸಾಧಕ–ಬಾಧಕಗಳನ್ನು ಅರಿತುಕೊಂಡು ಕಾನೂನು ಜಾರಿಗೆ ತರಬೇಕು.

ನಾನೂ ಒಬ್ಬ ರೈತ. 136 ದನಗಳಿವೆ. ಅವುಗಳಿಗೆ ವಯಸ್ಸಾದ ನಂತರ ನಾನು ಅವುಗಳನ್ನು ಮಾರಲೇಬೇಕಾಗುತ್ತದೆ. ಎಲ್ಲಿಯವರೆಗೆ ಅವುಗಳನ್ನು ನಾನು ಇಟ್ಟುಕೊಳ್ಳಲು ಸಾಧ್ಯ. ರಾಜ್ಯದಲ್ಲಿ ಅನೇಕ ಜನ ಡೇರಿ ಮಾಡಿ ಸರ್ಕಾರದಿಂದ ನಡೆಯುತ್ತಿರುವ ಸಂಸ್ಥೆಗಳಿಗೆ ಹಾಲು ಮಾರಾಟ ಮಾಡುತ್ತಾರೆ. ಈ ಕಾಯಿದೆಯಿಂದ ಅಲ್ಲಿಯೂ ಸಹ ಅನೇಕ ಸಮಸ್ಯೆಗಳು ಉದ್ಭವವಾಗುತ್ತದೆ. ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರ ಎಲ್ಲ ಅಂಶಗಳನ್ನು ಚರ್ಚಿಸಿ ಮೂಲ ಸೌಕರ್ಯಗಳನ್ನು ನಿರ್ಮಿಸಿ ಹಣಕಾಸು ಬಿಡುಗಡೆ ಮಾಡಿ ನಂತರ ಈ ಕಾನೂನನ್ನು ಜಾರಿಗೆ ತರುವುದು ಸೂಕ್ತ. ಇಲ್ಲದಿದ್ದರೆ ಸರ್ಕಾರವೇ

ರೈತರಿಂದ ವಯಸ್ಸಾದ ದನಗಳನ್ನು ಖರೀದಿಸಿ ಗೋಶಾಲೆಗಳಿಗೆ ಕೊಡಬೇಕು. ಇಲ್ಲವೆಂದರೆ ಸರ್ಕಾರ ದನ ಕಾಯುವ ಕೆಲಸ ಮಾಡಬೇಕಾದಂತಹ ಪರಿಸ್ಥಿತಿ ಬಂದೊದಗುವುದರಲ್ಲಿ ಯಾವುದೇ ಸಂದೇಹವಿಲ್ಲ.

**ಲೇಖಕರು: ಶ್ರೀ ಬಸವರಾಜ ಹೊರಟ್ಟಿ,**
**ಮಾನ್ಯ ಸಭಾಪತಿಯವರು,**
**ಕರ್ನಾಟಕ ವಿಧಾನ ಪರಿಷತ್ತು**
**ಆಧಾರ: ವಿಜಯ ಕರ್ನಾಟಕ, ದಿನಾಂಕ:20.01.2021**

## 6. ತಾಳಿಕೋಟೆ ಸಮರದ ಕರ್ಮಭೂಮಿ

ಇತಿಹಾಸ ಇದ್ದರೆ ಮುಂದಿನ ಭವಿಷ್ಯ. ಗತದ ಪರಿಚಯವಿದ್ದರೆ ಮಾತ್ರ ಗತಿ. ಈ ಮಾತನ್ನು ದೊಡ್ಡವರು ಸುಖಾಸುಮ್ಮನೆ ಹೇಳಿಲ್ಲ. ಹೀಗೆ ಗತಕಾಲದಲ್ಲಿ ಚರಿತ್ರೆಯನ್ನೇ ಸೃಷ್ಟಿಸಿದ್ದ ಅದೆಷ್ಟೋ ಪುರಾತತ್ವ ಪ್ರದೇಶಗಳು ಅವಸಾನದ ಅಂಚೆಗೆ ಬಂದು ನಿಂತಿವೆ. ಹೀಗೊಂದು ಇತಿಹಾಸ ಇಲ್ಲಿ ಅವತರಿಸಿತ್ತು ಎನ್ನುವ ಕುರುಹು ಸಿಗದಷ್ಟು ನಿರ್ಲಕ್ಷ್ಯ ಒಳಗಾಗಿವೆ. ಅಂತಹ ಐತಿಹಾಸಿಕ ಸ್ಥಳವೇ ಬಾಗಲಕೋಟೆ ಜಿಲ್ಲೆಯ ಕರಾಡಿ/ತಾಳಿಕೋಟೆ.

ತಾಳಿಕೋಟೆ ಕದನ ಯಾರಿಗೆ ಗೊತ್ತಿಲ್ಲ ಹೇಳಿ. ಇತಿಹಾಸದ ಪಾಠ ಓದಿದ ಪ್ರತಿಯೊಬ್ಬರೂ 1565ರ ತಾಳಿಕೋಟೆಯ ಮಹಾಯುದ್ಧದ ಪರಿಚಯ ಮಾಡಿಕೊಂಡವರೇ, ಅದರಲ್ಲೂ ರಕ್ಕಸ ತಂಗಡಿ ಯುದ್ಧವೆಂದರೆ ಕರ್ನಾಟಕ ಇತಿಹಾಸದ ಒಂದು ಮಹತ್ವದ ತಿರುವು. ರಾಜಪರಂಪರೆಯ ಉತ್ತುಂಗವನ್ನು ಇಡೀ ವಿಶ್ವಕ್ಕೆ ಪರಿಚಯ ಮಾಡಿಕೊಟ್ಟ ವಿಜಯನಗರ ಸಾಮ್ರಾಜ್ಯ ಪತನವಾದ ದಿನ ಇದು. ಜನವರಿ 26ರಂದು ನಾವೆಲ್ಲ ಗಣರಾಜ್ಯೋತ್ಸವವನ್ನು ಸಂಭ್ರಮಿಸುತ್ತೇವೆ. ಈ ದಿನ ಒಂದು ಭವ್ಯ ಸಾಮ್ರಾಜ್ಯವೇ ನೆಲಕಚ್ಚಿದ ಕರಾಳ ಇತಿಹಾಸದ ದಿನ.

ಜನವರಿ 25ರಂದು ತಾಳಿಕೋಟೆ ಕದನಕ್ಕೆ 456 ವರ್ಷಗಳು ಪೂರೈಸಲಿವೆ. ಈ ಐತಿಹಾಸಿಕ ಯುದ್ಧಕ್ಕೆ ಸಾಕ್ಷಿಯಾದ ಕರಾಡಿ ಗ್ರಾಮದಲ್ಲಿ ಈ ಬಾರಿ ಇತಿಹಾಸವನ್ನು ಪುನರ್ ಮನನ ಮಾಡುವ ನಿಟ್ಟಿನಲ್ಲಿ, ಈ ಯುದ್ಧಕ್ಕಾಗಿ ಸಮರ್ಪಿಸಿಕೊಂಡವರ ಸ್ಮರಣೆ ಮಾಡಲು ಇಳಕಲ್ ಪಟ್ಟಣದ ಶಿಲ್ಪಿ ಹಾಗೂ ಉದ್ಯಮಿ ಶಿವಕುಮಾರ್ ಸಕ್ರೆ. ಕರಾಡಿಯ ಬಸವೇಶ್ವರ ದೇಗುಲದ ಅರ್ಚಕರು ಹಾಗೂ ಕೆಲ ಗ್ರಾಮಸ್ಥರನ್ನು ಒಟ್ಟುಗೂಡಿಸಿ ವಿಶೇಷ ಅಭಿಷೇಕವನ್ನು ಏರ್ಪಡಿಸಿದ್ದಾರೆ. ಇವತ್ತಿಗೂ ಆ ಐತಿಹಾಸಿಕ ಯುದ್ಧಕ್ಕೆ ಜೀವಂತ ಸಾಕ್ಷಿಯಾಗಿರುವ ಮರಗಿಡ, ಪ್ರಾಣಿ, ಪಕ್ಷಿ ಮತ್ತು ತಲೆಮಾರುಗಳ ಪಳೆಯುಳಿಕೆಯ ಮನೆತನಗಳನ್ನು, ಸಮರದಲ್ಲಿ ಗಾಯಗೊಂಡವರ ಕುಟುಂಬಗಳನ್ನು ಸ್ಮರಿಸಿ ಗೌರವಿಸುವ ಅಪೂರ್ವ ಕಾಯಕವನ್ನು ಹಮ್ಮಿಕೊಂಡಿದ್ದಾರೆ. 33 ಎಣ್ಣೆ ದೀಪಗಳನ್ನು ಬೆಳಗಿಸುವ ಮೂಲಕ ಯುದ್ಧದಲ್ಲಿ ಹುತಾತ್ಮರಾದವರನ್ನು ಗೌರವಿಸುವ ಮಹೋನ್ನತ ಕಾರ್ಯ ಶಿವಕುಮಾರ್ ಸಕ್ರೆ ಮತ್ತು ಬಳಗದಿಂದ ನಡೆಯುತ್ತಿದೆ.

82 ವರ್ಷದ ರಾಮರಾಯರು ಕರಾಡಿಯ ಪಕ್ಕದಲ್ಲೇ ಬೃಹತ್ ಸೇನಾ ಶಿಬಿರವನ್ನು ಸ್ಥಾಪಿಸಿದ್ದರು. ಕರಾಡಿಯ ಉತ್ತರಕ್ಕೆ 4 ಕಿ.ಮೀ. ದೂರ, ದಕ್ಷಿಣಕ್ಕೆ ಕೃಷ್ಣಾ ನದಿ ದಂಡೆಯ 4 ಕಿ.ಮೀ. ಅಂತರದ ಇಸ್ಲಾಂ ಪುರದ ನಡುವೆ ಸುಲ್ತಾನರ ಒಕ್ಕೂಟ ಸೇನೆ ಮತ್ತು ವಿಜಯನಗರ ಸಾಮ್ರಾಟ್ ನಡುವೆ, ರಕ್ಕಸ ಮತ್ತು ತಂಗಡಿ ನಡುವೆ ಯುದ್ಧ ನಡೆದಿತ್ತು. ಕೆಲವು ಸಣ್ಣಪುಟ್ಟ ಹಿಂದೂ ರಾಜ್ಯಗಳೂ ಸುಲ್ತಾನರ ಒಕ್ಕೂಟದ ಬೆಂಬಲಕ್ಕೆ ಬಂದ ಪರಿಣಾಮ ಅಂದು ಮಹಾನ್ ರಾಜಮನೆತನವೊಂದು ಸೋಲು ಅನುಭವಿಸಿತು.

ತಾಳಿಕೋಟೆ ಯುದ್ಧಕ್ಕೆ ಐತಿಹಾಸಿಕ ಹಿನ್ನೆಲೆಯಿದೆ. ವಿಶೇಷತೆಯೂ ಇದೆ. 80 ಸಾವಿರ ಪದಾತಿದಳ, 30 ಸಾವಿರ ಅಶ್ವ ಸೈನ್ಯ ಹೊಂದಿದ್ದ ಸುಲ್ತಾನರ ಸೇನೆ ವಿರುದ್ಧ 140 ಸಾವಿರ ಕಾಲಾಳುಗಳು, 10 ಸಾವಿರ ಅಶ್ವ ಸೈನಿಕರು, ಎರಡೂ ಕಡೆಯ ಸೇನೆಗಳಲ್ಲಿದ್ದ ಮದಗಜಗಳು ಈ ಮಹಾಯುದ್ಧದಲ್ಲಿ ಸೆಣಸಿದವು. ಕಲ್ಲುಬಂಡೆಗಳ ಪ್ರದೇಶದಲ್ಲಿ ನಡೆದ ಸಮರದ ವೇಳೆ ಸುಲ್ತಾನರು ಸಿಡಿ ತೋಪುಗಳನ್ನು ಬಳಸಿ ಫಿರಂಗಿಗಳ ಮೂಲಕ ದಾಳಿ ಮಾಡಿದ್ದಲ್ಲದೇ ರಾಮರಾಯನ ಶಿರಚ್ಛೇದ ಮಾಡಿ ಇಡೀ ವಿಜಯನಗರ ಸಾಮ್ರಾಜ್ಯದ ಸಂಪತ್ತನ್ನೇ ಲೂಟಿ ಮಾಡಿದರು.

ಭಾರತದಲ್ಲಿ ಹಿಂದೂ ರಾಜ್ಯಗಳ ಕೊನೆಗಾಲಕ್ಕೆ ನಾಂದಿ ಹಾಡಿದ್ದೇ ತಾಳಿಕೋಟೆ ಕದನ. ಆನಂತರ ವಿಜಯನಗರ ಅರಸರು ಸಾಕಷ್ಟು ಪ್ರಯತ್ನ ಮಾಡಿದರೂ ದೊಡ್ಡ ಸಾಮ್ರಾಜ್ಯ ಮರುಸ್ಥಾಪನೆ ಸಾಧ್ಯವಾಗಲೇ ಇಲ್ಲ. ವಿಜಯನಗರದ ಅವನತಿ ಕೇವಲ ಸಾಮ್ರಾಜ್ಯದ ಅವನತಿಯಾಗಲಿಲ್ಲ. ದಕ್ಷಿಣ ಭಾರತದ ರಾಜಕೀಯ ವ್ಯವಸ್ಥೆಯನ್ನೇ ಅದು ಛಿದ್ರ ಮಾಡಿತ್ತು. ಸುಮಾರು 4 ಶತಮಾನಗಳ ಕಾಲ ಕನ್ನಡ ನಾಡಿನಲ್ಲಿ ಏಕಚಕ್ರಾಧಿಪತ್ಯ ಕಣ್ಮರೆಯಾಯಿತು. ಆನಂತರ ಸುಲ್ತಾನರ ಕಚ್ಚಾಟ, ಮೊಘಲರ ದಬ್ಬಾಳಿಕೆಗೆ ದಾರಿ ಮಾಡಿಕೊಟ್ಟು ಬ್ರಿಟಿಷರು ಲಗ್ಗೆ ಇಡಲು ಕಾರಣವಾಯಿತು.

ವಿಜಯನಗರ ಸಾಮ್ರಾಜ್ಯದ ಅವನತಿ ಭಾರತದ, ಅದರಲ್ಲೂ ದಕ್ಷಿಣ ಭಾರತದ, ವಿಶೇಷವಾಗಿ ಹಿಂದೂ ಸಾಮ್ರಾಜ್ಯದ ಮೇಲೆ ದುಷ್ಪರಿಣಾಮಗಳನ್ನು ಬೀರಿತ್ತು. ಇಂತಹ ಐತಿಹಾಸಿಕ ಆಘಾತವನ್ನು ನೀಡಿದ್ದ ತಾಳಿಕೋಟೆ ಕದನ ಮತ್ತು ಅದಕ್ಕೆ ಸಾಕ್ಷಿಯಾದ ಕರಾಡಿ ಪ್ರದೇಶ ಯಾವತ್ತಿಗೂ ಚಿರಸ್ಥಾಯಿಯಾಗಿ ಉಳಿಯಲಿದೆ. ಇತಿಹಾಸದ ಇಂತಹ ಕುರುಹುಗಳು ಭವಿಷ್ಯದಲ್ಲಿ ಅಧಿಕಾರಶಾಹಿಗಳು ಹೆಜ್ಜೆ ತಪ್ಪದಂತೆ ಸದಾ ಎಚ್ಚರಿಸುತ್ತಿರುತ್ತವೆ. ಇಂತಹ ಐತಿಹಾಸಿಕ ಪ್ರದೇಶಗಳನ್ನು ಉಳಿಸಿ, ರಕ್ಷಿಸಿ ಪುನರುಜ್ಜೀವನ ಮಾಡಬೇಕಾದ್ದು ಪ್ರತಿಯೊಬ್ಬ ನಾಗರಿಕನ ಕರ್ತವ್ಯ. ನಮ್ಮ ಪರಂಪರೆಯ ಪುಟಗಳನ್ನು ಕಾಪಾಡಿಕೊಳ್ಳುವುದು ಆಳುವ ಸರ್ಕಾರಗಳ ಹೊಣೆಯೂ ಹೌದು. ಒಂದು ಐತಿಹಾಸಿಕ ತಾಣವನ್ನು ನಿರ್ಲಕ್ಷ್ಯ ಮಾಡಿರುವ ಬಗ್ಗೆ ನಿರಾಸೆಯೂ ಇದೆ. ಸರ್ಕಾರ ಮತ್ತು ಸ್ಥಳೀಯ ಆಡಳಿತ ಮನಸ್ಸು ಮಾಡಿದರೆ ರಾಜ್ಯದ ಪ್ರಸಿದ್ಧ ಪ್ರವಾಸಿ ತಾಣವಾಗಿ ಕರಾಡಿಯನ್ನು ಅಭಿವೃದ್ಧಿ ಪಡಿಸಬಹುದು. ಈ ನಿಟ್ಟಿನಲ್ಲಿ ಜವಾಬ್ದಾರಿಯುತ ಸಚಿವನಾಗಿ ನಾನೂ ಕೂಡ ಮಾನ್ಯ ಮುಖ್ಯಮಂತ್ರಿಗಳ ಗಮನ ಸೆಳೆಯುವ ಪ್ರಯತ್ನ ಮಾಡುತ್ತೇನೆ.

1565ರಲ್ಲಿ ಹಿಂದೂ ಸಾಮ್ರಾಜ್ಯವೊಂದರ ಅಸ್ಮಿತೆಯನ್ನು ಉಳಿಸಲು ಈ ಗ್ರಾಮದ ಜನ ತಮ್ಮನ್ನು ತಾವೇ ಸಮರ್ಪಣೆ ಮಾಡಿಕೊಂಡರು. ಮಹಾನ್ ಯುದ್ಧಕ್ಕೆ ಸಾಕ್ಷಿಯಾಗಿ ತಮ್ಮನ್ನು ಸಮರ್ಪಿಸಿಕೊಂಡು ವಿಜಯನಗರ ಸುವರ್ಣಯುಗವನ್ನು ಉಳಿಸುವ ನಿಟ್ಟಿನಲ್ಲಿ ಯುದ್ಧಕ್ಕೆ ಸಮರ್ಪಿಸಿಕೊಂಡರು. ತ್ಯಾಗ ಮತ್ತು ಬಲಿದಾನಕ್ಕೆ ಸಾಕ್ಷಿಭೂತವಾಗಿರುವ ತಾಳಿಕೋಟೆಯ ಈ ಗ್ರಾಮ ಒಂದು ಐತಿಹಾಸಿಕ ಸ್ಥಳವಾಗಿ ಸಂಪೂರ್ಣ ಹಿಂದೂ ಸಾಮ್ರಾಜ್ಯದ ಕುರುಹಾಗಿ ಬೆಳೆದು ನಿಲ್ಲಬೇಕು. ಮಹಾಸಮರಕ್ಕೆ ಸಾಕ್ಷಿಯಾದ ಪ್ರತಿ ಕಲ್ಲೂ ಇತಿಹಾಸವನ್ನು ಹೇಳುವ ಜೀವಂತ ಸಾಕ್ಷಿಯಾಗಬೇಕು. ಈ ನಿಟ್ಟಿನಲ್ಲಿ ಆಡಳಿತ ಮತ್ತು ಸ್ಥಳೀಯ ಮುಖಂಡರು ಕೈ ಜೋಡಿಸಿ ಇತಿಹಾಸ ಉಳಿಸುವ ಕೆಲಸವನ್ನು ಮಾಡಬೇಕಿದೆ. ಜನವರಿ 25ರಂದು ನಡೆಯಲಿರುವ 456ನೇ ವರ್ಷಾಚರಣೆಯ ವಿಶೇಷ ಪ್ರಯತ್ನಕ್ಕೆ ನಾಲ್ಕೂ ದಿಕ್ಕುಗಳಿಂದ ಬೆಂಬಲ ಸಿಗಲಿ. ಹಿಂದೂಗಳ ಸರ್ವಜನ ಹಿತದ ಸಂದೇಶ ಸಾರಿದ್ದ ವಿಜಯನಗರ ಸಾಮ್ರಾಜ್ಯದ ಸಂಸ್ಕೃತಿಗೆ ಕರಾಡಿ ಗ್ರಾಮ ಸುವರ್ಣ ಸಾಕ್ಷಿಯಾಗಿ ನಿಲ್ಲಲಿ.

ಕೇವಲ ಪಠ್ಯಕ್ಕೆ ಸೀಮಿತವಾಗದೆ ಇಲ್ಲೊಂದು ಪಾರಂಪರಿಕ ವಸ್ತು ಸಂಗ್ರಹಾಲಯ ಸ್ಥಾಪನೆ ಮಾಡಿ ಆ ಕಾಲದಲ್ಲಿ ನಿರ್ಮಿಸಿದ್ದ ದೇಗುಲ, ಕೋಟೆ ಕೊತ್ತಲಗಳನ್ನೂ ಪುನಃಸ್ಥಾಯಿಗೊಳಿಸುವ ಕೆಲಸವನ್ನು ಮಾಡಬೇಕಿದೆ. ಈ ಎಲ್ಲಾ ಪ್ರಯತ್ನಗಳಿಗೆ ತಾಳಿಕೋಟೆ ಮಹಾಯುದ್ಧದ 456ನೇ ವರ್ಷಾಚರಣೆ ಮುನ್ನುಡಿ ಬರೆಯಲಿ ಎಂಬುದು ನನ್ನಂತಹ ಇತಿಹಾಸ ಪ್ರೀತಿಸುವ ಪ್ರತಿಯೊಬ್ಬ ಭಾರತೀಯನ, ಹೆಮ್ಮೆಯ ಕನ್ನಡಿಗನ ಆಶಯವಾಗಿದೆ.

**ಲೇಖಕರು: ಡಾ.ಕೆ.ಸುಧಾಕರ್**

**ರಾಜ್ಯ ಆರೋಗ್ಯ ಸಚಿವರು**

**ಆಧಾರ: ವಿಜಯ ಕರ್ನಾಟಕ, ದಿನಾಂಕ:25.01.2021**

## 7. ಭಾರತೀಯರು ಭಾವನಾತ್ಮಕ ಸ್ವಾತಂತ್ರ್ಯ ಪಡೆದ ದಿನ

ಡಾ. ಬಿ.ಆರ್.ಅಂಬೇಡ್ಕರ್ ಅವರ ಅಧ್ಯಕ್ಷತೆಯ ಸಮಿತಿಯ ಮೂಲಕ ರೂಪುಗೊಂಡ ಸಂವಿಧಾನ ಕಳೆದ ಅರವತ್ತೊಂಭತ್ತು ವರ್ಷಗಳಲ್ಲಿ ವಿಶ್ವದ ಬಹುದೊಡ್ಡ ಜನತಾಂತ್ರಿಕ ವ್ಯವಸ್ಥೆ ಯಶಸ್ವಿಯಾಗಿ ಅಡಿ ಇಡಲು ಸುಭದ್ರ ಬುನಾದಿಯನ್ನು ನಿರ್ಮಿಸಿಕೊಟ್ಟಿದೆ. ಈ ಮೂಲಕ ಬ್ರಿಟಿಷ್ ಇಂಡಿಯಾದ ಸಂವಿಧಾನ 1935ರ Govemment of India Actನ ಎಲ್ಲ ನಡಾವಳಿಗಳಿಗೂ ಇತಿಶ್ರೀ ಹಾಡಲಾಯಿತು. ಸಂವಿಧಾನದ 395ನೇ ವಿಧಿ ಅನ್ವಯ ಬ್ರಿಟಿಷ್ ಪಾರ್ಲಿಮೆಂಟ್ ಭಾರತದಲ್ಲಿ ಜಾರಿಗೊಳಿಸಿದ್ದ ಎಲ್ಲ ಕಾಯಿದೆಗಳು ಅನೂರ್ಜಿತಗೊಂಡವು. 1949ರ ಡಿಸೆಂಬರ್ 31ರಂದು ಭಾರತ ಸಂವಿಧಾನವನ್ನು ಒಪ್ಪಿಕೊಂಡು, 1950ರ ಜನವರಿ 26ರಂದು ಸಾರ್ವಭೌಮ, ಸಮಾಜವಾದಿ, ಜಾತ್ಯತೀತ, ಜನತಾಂತ್ರಿಕ ಗಣರಾಜ್ಯವಾಗಿ ಅಸ್ತಿತ್ವ ಪಡೆದುಕೊಂಡಿತು. ಜೊತೆಗೆ ನ್ಯಾಯ, ಸಮಾನತೆ ಮತ್ತು ಸ್ವಾತಂತ್ರ್ಯ ಹಾಗೂ ಭ್ರಾತೃತ್ವ ಭಾರತ ಸಂವಿಧಾನದ ಮೂಲ ತಿರುಳು ಎಂದು ಜಗತ್ತಿಗೆ ಸಾರಿತು. ಈ ಕಾರಣದಿಂದಲೇ ಜನವರಿ 26 ಭಾರತದ ರಾಜಕೀಯ ಇತಿಹಾಸದ ಅವಿಸ್ಮರಣೀಯ ದಿನ.

ನಾವು ಸಂವಿಧಾನವನ್ನು ಒಪ್ಪಿಕೊಂಡ ಇಪ್ಪತ್ತು ವರ್ಷಗಳಿಗೆ ಮೊದಲು, ಅಂದರೆ 1930ರ ಜನವರಿ 26 ರಂದು ಭಾರತದ ರಾಜಕೀಯ ಇತಿಹಾಸಕ್ಕೆ ದಿಕ್ಸೂಚಿ ಆಗಬಹುದಾದ ಐತಿಹಾಸಿಕ ಘಟನೆ ನಡೆದಿತ್ತು ಅನ್ನುವುದು ಬಹುಜನರಿಗೆ ಗೊತ್ತಿಲ್ಲ. 1929ರಲ್ಲಿ ಭಾರತದ ವೈಸ್‌ರಾಯ್ ಆಗಿದ್ದ ಲಾರ್ಡ್ ಇರ್ವಿನ್ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸುತ್ತಿದ್ದ ಅಗ್ರಗಣ್ಯರಿಗೆ ಭರವಸೆಯೊಂದನ್ನು ನೀಡಿದ್ದರು. ಭಾರತದ ಪ್ರತಿ ಪ್ರಾಂತ್ಯದಲ್ಲಿ ಚುನಾವಣೆಗಳು ನಡೆದು, ಸ್ಥಳೀಯರು ಅಧಿಕಾರ ಸೂತ್ರ ಹಿಡಿಯುವ ಚಿಂತನೆ ಈ ಭರವಸೆಯ ಮೂಲ ತಿರುಳಾಗಿತ್ತು. ಇದನ್ನು 'ಇರ್ವಿನ್ ಘೋಷಣೆ' ಯೆಂದು ಕರೆಯಲಾಗಿತ್ತು. ಅನೇಕ ವರ್ಷಗಳಿಂದ ಭೌಗೋಳಿಕ ಪ್ರಾಂತ್ಯಗಳ ಸ್ಥಾಪನೆಯ ಮೂಲಕ ಭಾರತೀಯರಿಗೆ ಅಧಿಕಾರ ನಡೆಸುವ ಹಕ್ಕು ನೀಡಬೇಕು ಎನ್ನುವ ಬೇಡಿಕೆಯನ್ನು ಬ್ರಿಟಿಷ್ ಚಕ್ರಾಧಿಪತ್ಯದ ಮುಂದಿಡುತ್ತಿದ್ದ ಸ್ವಾತಂತ್ರ್ಯ ಹೋರಾಟದ ಅಗ್ರಗಣ್ಯರು ಇರ್ವಿನ್ ಘೋಷಣೆಯನ್ನು ಸ್ವಾಗತಿಸಿದ್ದರು. ಸ್ವಾತಂತ್ರ್ಯ ಹೋರಾಟಗಾರರು ಇಂಥ ಬೇಡಿಕೆಯನ್ನಿಡುವ ಸಂದರ್ಭದಲ್ಲಿ ಸಂಪೂರ್ಣ ಸ್ವಾತಂತ್ರ್ಯವನ್ನೇನು ಕೇಳಿರಲಿಲ್ಲ. ಬ್ರಿಟಿಷ್ ಚಕ್ರಾಧಿಪತ್ಯದ ಉಸ್ತುವಾರಿಯಲ್ಲಿ ಸ್ಥಳೀಯರು ಆಡಳಿತ ನಡೆಸುವುದಕ್ಕೆ ಅವಕಾಶ ನೀಡಬೇಕು ಎನ್ನುವುದಷ್ಟೇ ಅವರ ಬೇಡಿಕೆಯಾಗಿತ್ತು. ಇಂಥ ಬೇಡಿಕೆ ಒಪ್ಪಿಕೊಳ್ಳುವುದು ಬ್ರಿಟಿಷ್ ಚಕ್ರಾಧಿಪತ್ಯಕ್ಕೆ ದೊಡ್ಡ ತಲೆನೋವೇನೂ ಆಗಿರಲಿಲ್ಲ. ಆದರೆ ಭಾರತದ ವೈಸ್‌ರಾಯ್ ಆಗಿದ್ದ ಲಾರ್ಡ್ ಇರ್ವಿನ್ ಕೊಟ್ಟ ಮಾತಿನಂತೆ ನಡೆದುಕೊಳ್ಳಲಿಲ್ಲ. ಯಾಕೆಂದರೆ ಅವರ ಘೋಷಣೆಗೆ ಇಂಗ್ಲೆಂಡ್‌ನಲ್ಲಿ ತೀವ್ರ ಪ್ರತಿರೋಧ ವ್ಯಕ್ತವಾಗಿತ್ತು. ಇಂಗ್ಲೆಂಡ್‌ನ ರಾಜಕಾರಣಿಗಳು, ಭಾರತೀಯರಿಗೆ ರಾಜಕೀಯ ಅಧಿಕಾರ ನೀಡಿದರೆ ಹೆಚ್ಚು ಕಡಿಮೆ ಸ್ವಾತಂತ್ರ್ಯ ನೀಡಿದಂತೆಯೇ ಆಗುತ್ತದೆ. 'ಇರ್ವಿನ್ ಘೋಷಣೆ' ಸಾಕಾರಗೊಂಡರೆ ಕೆಲವೇ ವರ್ಷಗಳಲ್ಲಿ ಬ್ರಿಟಿಷ್ ಚಕ್ರಾಧಿಪತ್ಯ ಭಾರತದ ಮೇಲಣ ಹಿಡಿತ ಕಳೆದುಕೊಳ್ಳುತ್ತದೆ. ಹೀಗಾಗಿ ಇರ್ವಿನ್ ಘೋಷಣೆಯ ಅನುಷ್ಠಾನ ಆಗಕೂಡದು ಎನ್ನುವ ಅಭಿಪ್ರಾಯ ಇಂಗ್ಲೆಂಡ್‌ನಾದ್ಯಂತ ವ್ಯಕ್ತವಾಗಿತ್ತು.

ಬ್ರಿಟಿಷ್ ಸಂಸತ್ತಿನಲ್ಲಿಯೂ 'ಇರ್ವಿನ್ ಘೋಷಣೆ' ಪ್ರಸ್ತಾಪಗೊಂಡಿತು. 'ಇರ್ವಿನ್ ಘೋಷಣೆ' ಸಾಕಾರಗೊಂಡರೆ ಇಂಗ್ಲೆಂಡಿನ ಜನರ ಆತಂಕ ನಿಜವಾಗುತ್ತದೆ. ಬ್ರಿಟಿಷ್ ಚಕ್ರಾಧಿಪತ್ಯದ ಹಿಡಿತ ಸಡಿಲಗೊಳ್ಳುತ್ತದೆ. ಹೀಗಾಗಿ ವೈಸ್‌ರಾಯ್ ಇರ್ವಿನ್ ಅವರ ನಿಲುವು ಬ್ರಿಟಿಷ್ ಚಕ್ರಾಧಿಪತ್ಯಕ್ಕೆ ವಿರುದ್ಧವಾಗುತ್ತದೆ ಎನ್ನುವ ಅಭಿಪ್ರಾಯ ಪಾರ್ಲಿಮೆಂಟ್‌ನಲ್ಲಿ ಧ್ವನಿಸಿತು. ಇದರ ಪರಿಣಾಮ ಲಾರ್ಡ್ ಇರ್ವಿನ್ ತಮ್ಮ ಘೋಷಣೆ ಹಿಂಪಡೆಯುವ ಕುರಿತು ಆಲೋಚಿಸಲಾರಂಭಿಸಿದರು. ಭಾರತದ ಸ್ವಾತಂತ್ರ್ಯ ಹೋರಾಟದ ಅಗ್ರಗಣ್ಯ ನಾಯಕರಾಗಿದ್ದ ಗಾಂಧೀಜಿ, ನೆಹರು, ಮೊಹಮದ್ ಅಲಿ ಜಿನ್ನಾ, ಸಪ್ರೂ ಮುಂತಾದ ನಾಯಕರೊಡನೆ ಸಮಾಲೋಚನೆ ನಡೆಸಿ, ಸದ್ಯಕ್ಕೆ ಭಾರತದ ವಿವಿಧ ಭೌಗೋಳಿಕ ಪ್ರದೇಶಗಳಿಗೆ ಪ್ರಾಂತೀಯ ಸ್ವರೂಪ ಕೊಡುವುದು ಸಾಧ್ಯವಿಲ್ಲ ಎಂದು ಇರ್ವಿನ್ ತಿಳಿಸಿದರು. ಇದು ಹೋರಾಟಗಾರರನ್ನು ಕೆರಳಿಸಿತು. "ಭಾರತದ ವಿವಿಧ ಭೌಗೋಳಿಕ ಪ್ರದೇಶಗಳಿಗೆ ಪ್ರಾಂತೀಯ ಸ್ವರೂಪ ನೀಡಬೇಕು ಎನ್ನುವ ನಮ್ಮ ಬೇಡಿಕೆ ನ್ಯಾಯ ಸಮ್ಮತವಾಗಿತ್ತು. ನಾವು ಪೂರ್ಣ ಸ್ವಾತಂತ್ರ್ಯವನ್ನೇನೂ ಕೇಳಿರಲಿಲ್ಲ. ನಮ್ಮ ಕನಿಷ್ಠ ಬೇಡಿಕೆಯನ್ನು ಈಡೇರಿಸದ ಬ್ರಿಟಿಷ್ ಚಕ್ರಾಧಿಪತ್ಯದ ಧೋರಣೆಗೆ ನಮ್ಮ

ಧಿಕ್ಕಾರವಿದೆ. ಯಾವುದೇ ಕಾರಣಕ್ಕೂ ಬ್ರಿಟಿಷರ ಈ ನಡೆಯನ್ನು ನಾವು ಸಹಿಸುವುದಿಲ್ಲ. ಇನ್ನು ಮುಂದೆ ಪ್ರಾಂತೀಯ ಸ್ವರೂಪ ಬೇಡಿಕೆಯನ್ನು ಕೈಬಿಟ್ಟು 'ಪೂರ್ಣ ಸ್ವರಾಜ್' ಅರ್ಥಾತ್ ಬ್ರಿಟಿಷ್ ನಿರಂಕುಶ ಪ್ರಭುತ್ವದಿಂದ ಮುಕ್ತಗೊಂಡ ಸಂಪೂರ್ಣ ಸ್ವಾತಂತ್ರ್ಯ ಪಡೆವುದೇ ನಮ್ಮ ಗುರಿ," ಎಂದು ಹೋರಾಟಗಾರರು ಘೋಷಿಸಿದರು.

1929ರಲ್ಲಿ ಲಾಹೋರ್‌ನಲ್ಲಿ ನಡೆದ ಅಧಿವೇಶನದಲ್ಲಿ 'ಪೂರ್ಣ ಸ್ವರಾಜ್' ನಮ್ಮ ಪರಮಾಧಿಕಾರ. ಸಂಪೂರ್ಣ ಸ್ವಾತಂತ್ರ್ಯವನ್ನು ಗಳಿಸುವುದು ನಮ್ಮ ಹಕ್ಕು. ಇದನ್ನು ಬ್ರಿಟಿಷರು ಯಾವುದೇ ಕಾರಣಕ್ಕೆ ನಿರಾಕರಿಸಲು ಸಾಧ್ಯವಿಲ್ಲ. ಬ್ರಿಟಿಷ್ ಚಕ್ರಾಧಿಪತ್ಯದ ನೆರಳಲ್ಲಿ ಭಾರತ ಹೆಚ್ಚು ಕಾಲ ಬದುಕಲು ಸಾಧ್ಯವಿಲ್ಲ. ಸಾಮಾಜಿಕ, ಆರ್ಥಿಕವಾಗಿ ಭಾರತ ಅಪಾಯದ ಹಾದಿಯಲ್ಲಿದೆ. ಬ್ರಿಟಿಷ್ ಚಕ್ರಾಧಿಪತ್ಯ ಎಲ್ಲ ಕ್ಷೇತ್ರಗಳಲ್ಲಿ ಭಾರತೀಯರನ್ನು ಶೋಷಣೆಗೆ ಗುರಿ ಮಾಡಿದೆ. ಗ್ರಾಮೀಣ ಕೈಗಾರಿಕೆಗಳು ನಾಶಗೊಂಡಿವೆ. ಕೈಮಗ್ಗದ ಕ್ಷೇತ್ರದಲ್ಲಿ ಯಾಂತ್ರೀಕೃತ ನೇಯ್ಗೆ ಪ್ರಭುತ್ವ ಸಾಧಿಸಿದೆ. ಭಾರತದ ಕಚ್ಚಾವಸ್ತುಗಳನ್ನು ಇಂಗ್ಲೆಂಡ್‌ಗೆ ರಫ್ತು ಮಾಡಿ, ಅಲ್ಲಿನ ಉದ್ಯಮಗಳಲ್ಲಿ ಸಿದ್ಧಪಡಿಸಿದ ಉತ್ಪನ್ನಗಳನ್ನು ಭಾರತಕ್ಕೆ ತಂದು ಮಾರಾಟ ಮಾಡುವ ಔದ್ಯಮಿಕ ತಂತ್ರಗಾರಿಕೆಯನ್ನು ಬ್ರಿಟಿಷ್ ಉದ್ಯಮಪತಿಗಳು ಅನುಸರಿಸಿದ್ದಾರೆ. ಅವರ ಉತ್ಪನ್ನಗಳಿಗೆ ಭಾರತ ದೊಡ್ಡ ಮಾರುಕಟ್ಟೆಯಾಗಿದೆ. ಇದರಿಂದಾಗಿ ಭಾರತ ಆರ್ಥಿಕವಾಗಿ ಸಂಪೂರ್ಣ ಕುಸಿದಿದೆ. ಇಂತಹ ಶೋಷಣೆಯನ್ನು ಯಾವುದೇ ಕಾರಣಕ್ಕೆ ಸಹಿಸಿಕೊಳ್ಳಲು ಸಾಧ್ಯವಿಲ್ಲ. ಇದರಿಂದ ಭಾರತೀಯರ ತಲಾದಾಯ ಸಂಪೂರ್ಣ ಕುಸಿದಿದೆ. ಸದ್ಯದ ಪರಿಸ್ಥಿತಿಯಲ್ಲಿ ಭಾರತೀಯರ ತಲಾದಾಯ ಕೇವಲ ಏಳು ಪೈಸೆ. ಬ್ರಿಟಿಷ್ ಚಕ್ರಾಧಿಪತ್ಯ ಮನಸೋ ಇಚ್ಛೆ ತೆರಿಗೆ ಹೇರುತ್ತಿದೆ. ಇದರಲ್ಲಿ ಶೇ.20 ತೆರಿಗೆ ರೈತರ ಮೇಲೆ ಹೇರಲಾಗುತ್ತಿದೆ. ಉಪ್ಪಿನ ಮೇಲೂ ತೆರಿಗೆ ವಿಧಿಸಲಾಗುತ್ತಿದೆ. ಅಂತಿಮವಾಗಿ ಭಾರತದ ಜನಸಮುದಾಯ ತೆರಿಗೆಯ ಭಾರದಿಂದ ಕುಸಿದು ಹೋಗುತ್ತಿದೆ. ರೈತರೂ ಸೇರಿದಂತೆ ಭಾರತದ ಕೋಟ್ಯಂತರ ಕುಲ ಕಸುಬುದಾರರು, ಕರಕುಶಲಿಗಳು ಕೆಲಸ ಕಳೆದುಕೊಂಡು ನಿರುದ್ಯೋಗಿಗಳಾಗಿದ್ದಾರೆ. ಇಂಥ ಪರಿಸ್ಥಿತಿಯಲ್ಲಿ ಭಾರತದ ಪುನರುತ್ಥಾನ ಪೂರ್ಣ ಸ್ವರಾಜ್‌ನಿಂದ ಮಾತ್ರ ಸಾಧ್ಯ. ಜಗತ್ತಿನ ಎಲ್ಲ ಜನರಂತೆಯೇ ಸ್ವಾತಂತ್ರ್ಯ ಹಾಗೂ ನಮ್ಮ ಶ್ರಮದ ಫಲವನ್ನು ಅನುಭವಿಸುವುದು ನಮ್ಮ ಹಕ್ಕು. ಯಾವುದೇ ಸರ್ಕಾರ ಜನತೆಯ ಈ ಹಕ್ಕನ್ನು ನಿರಾಕರಿಸುತ್ತಿದ್ದರೆ ಜನತೆಗೆ ಅಂಥ ಸರ್ಕಾರವನ್ನು ನಿರಾಕರಿಸುವ ಅಥವಾ ಬದಲಾಯಿಸುವ ಹಕ್ಕು ಇದೆ.

The British government in India has not only deprived the Indian people of their freedom but has based itself on the exploitation of the masses, and has ruined India economically, politically, culturally and spiritually. We believe, therefore, that India must serve the British connection and attain Poorna Swaraj or complete independence ಎನ್ನುವ 750 ಪದಗಳ ನಿರ್ಣಯವನ್ನು ಲಾಹೋರ್ ಅಧಿವೇಶನದಲ್ಲಿ ಕೈಗೊಳ್ಳಲಾಯಿತು.

ಸ್ವಾತಂತ್ರ್ಯ ಹೋರಾಟಗಾರರ 'ಪೂರ್ಣ ಸ್ವರಾಜ್ ನಮ್ಮ ಹಕ್ಕು' ಎನ್ನುವ ಘೋಷಣೆಗೆ ಬ್ರಿಟಿಷ್ ಚಕ್ರಾಧಿಪತ್ಯ ಸೊಪ್ಪು ಹಾಕದಿದ್ದಾಗ 1929 ಡಿಸೆಂಬರ್ 26ರಂದು ಲಾಹೋರ್‌ನಲ್ಲಿ ನಡೆದ ಅಧಿವೇಶನದಲ್ಲಿ ಸ್ವಾತಂತ್ರ್ಯ ಭಾರತೀಯರ ಪ್ರಶ್ನಾತೀತ ಹಕ್ಕು, ಬ್ರಿಟಿಷ್ ಸರ್ಕಾರ ಭಾರತೀಯರ ಸ್ವಾತಂತ್ರ್ಯ ಹಕ್ಕು ಕಸಿದುಕೊಳ್ಳುವುದರ ಜೊತೆಗೆ ಇಲ್ಲಿನ ಸಮುದಾಯದ ವಿರುದ್ಧ ನಿರಂತರ ಶೋಷಣೆಯಲ್ಲಿ ತೊಡಗಿದೆ. ಅರ್ಥಿಕವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಮತ್ತು ಆಧ್ಯಾತ್ಮಿಕವಾಗಿ ಭಾರತೀಯ ಪರಂಪರೆ ನಾಶವಾಗುತ್ತಿದೆ. ಈ ಹಿನ್ನೆಲೆ ಭಾರತ ಪೂರ್ಣ ಸ್ವರಾಜ್ಯಗಳಿಸಿಕೊಂಡಿದೆ ಎಂದು ಘೋಷಣೆ ಮಾಡಲಾಯಿತು. ಅಧಿವೇಶನದಲ್ಲಿ ಕಾಂಗ್ರೆಸ್ ಅಧ್ಯಕ್ಷನಾಗಿ ಆಯ್ಕೆಗೊಂಡ ಜವಹರಲಾಲ್ ನೆಹರು 1929ರ ಡಿಸೆಂಬರ್ 26ರಂದು ಭಾರತ ಪೂರ್ಣ ಸ್ವರಾಜ್ಯ ಆಗಿದೆ ಎಂದು ಘೋಷಿಸಿದರು. ಸಂವಿಧಾನಾತ್ಮಕವಾಗಿ 1947 ಆಗಸ್ಟ್ 15 ಭಾರತ ಸ್ವಾತಂತ್ರ್ಯ ಪಡೆದ ದಿನವಾದರೂ 1930 ಜನವರಿ 26 ಭಾವನಾತ್ಮಕವಾಗಿ ಸ್ವಾತಂತ್ರ್ಯ ಪಡೆದ ಐತಿಹಾಸಿಕ ದಿನವಾಯಿತು.

**ಆಧಾರ: ವಿಜಯ ಕರ್ನಾಟಕ, ದಿನಾಂಕ:27.01.2021**

## 8. ಮಹಾತ್ಮ ಗಾಂಧೀಜಿ ಕನಸಿನ ರಾಷ್ಟ್ರಧ್ವಜ

ಮೋಹನ್‌ದಾಸ್ ಕರಮಚಂದ ಗಾಂಧಿ ರಾಷ್ಟ್ರೀಯ ಚಳವಳಿಯ ನಾಯಕರಾಗಿ ಮಾನ್ಯತೆ ಪಡೆದಾಗ, 1916ರ ಸುಮಾರಿಗೆ ಆಂಧ್ರದ ಮುಸಲಿಪಟ್ಟಣಂನ ಪಿಂಗ್ಲೆ ವೆಂಕಯ್ಯ ಎಂಬ ಯುವಕ, ದೇಶಕ್ಕಾಗಿ ಒಂದು ಧ್ವಜ ರೂಪಿಸುವ ಯತ್ನ ನಡೆಸುತ್ತಿದ್ದನು. 'ಭಾರತದ ರಾಷ್ಟ್ರೀಯ ಧ್ವಜ' ಎಂಬ ಹೆಸರಿನ ಒಂದು ಪುಸ್ತಕ ಬರೆದರು. ಗಾಂಧೀಜಿಯವರ ಮುಂದೆ ಒಂದು ವಿನ್ಯಾಸವನ್ನು ಮಂಡಿಸಿದರು. ಆದರೆ ಅದು ಗಾಂಧೀಜಿಯವರಿಗೆ ಇಷ್ಟವಾಗಲಿಲ್ಲ. ಆ ಧ್ವಜ ವಿನ್ಯಾಸದಲ್ಲಿ ಸಂಪೂರ್ಣ ದೇಶದ ಅಂತರಾತ್ಮಕ್ಕೆ ಹೊಂದುವ ವೈಶಿಷ್ಟ್ಯವೇನೂ ಕಾಣಲಿಲ್ಲ.

ನಮ್ಮ ಸ್ವಾವಲಂಬನೆಯ ಪ್ರತೀಕವಾಗಿ, ರಾಷ್ಟ್ರಧ್ವಜದಲ್ಲಿ ಚರಕ ಇರಬೇಕೆಂದು ಗುರುದಾಸ್‌ಪುರ್‌ನ ಲಾಲಾಹನ್ಸ್ ರಾಜ್‌ಸೋಂಧಿ ಒಮ್ಮೆ ಗಾಂಧಿಗೆ ಸಲಹೆ ಮಾಡಿದರು. ಇದು ಗಾಂಧೀಜಿಗೆ ಬಹಳ ಇಷ್ಟವಾಯಿತು. 1921ರ ಏಪ್ರಿಲ್‌ನಲ್ಲಿ ವಿಜಯವಾಡದಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಸಭೆಗೆ ವೆಂಕಯ್ಯರನ್ನು ಕರೆಸಿ, ಹಿಂದೂ ಧರ್ಮವನ್ನು ಸಂಕೇತಿಸುವ ಕೇಸರಿ ಬಣ್ಣ, ಅದರಲ್ಲಿ ಚರಕ ಹಾಗೂ ಇಸ್ಲಾಂ ಧರ್ಮವನ್ನು ಸಂಕೇತಿಸುವ ಹಸಿರು ಬಣ್ಣದ ಪಟ್ಟಿಯನ್ನೊಳಗೊಂಡ ಧ್ವಜ ರಚಿಸಬೇಕೆಂದು ತಿಳಿಸಿದರು.

ಗಾಂಧೀಜಿಯವರ ಮುಂದೆ ಮೂರು ತಾಸಿನೊಳಗೆ ವೆಂಕಯ್ಯ ಒಂದು ಧ್ವಜ ತಯಾರಿಸಿ ಇಟ್ಟರು. ಅದರಲ್ಲಿ ಕೇಸರಿ ಮತ್ತು ಹಸಿರಿನ ಸಮಾನ ಪಟ್ಟಿಗಳಿದ್ದವು. ಎರಡು ಪಟ್ಟಿಗಳ ಮೇಲೆ ಸಮಾನವಾಗಿ ಮೂಡುವಂತೆ ದೊಡ್ಡ ಚರಕವಿತ್ತು. ಆದರೆ ಅದು ಗಾಂಧೀಜಿಯವರ ಕೈ ಸೇರುವಾಗ ಸ್ವಲ್ಪ ತಡವಾದುದರಿಂದ, ಅದನ್ನು ಕಾಂಗ್ರೆಸ್ ಸಮಿತಿಯ ಅನುಮೋದನೆಗಾಗಿ ಸಲ್ಲಿಸಲಾಗಲಿಲ್ಲ. ಆದರೆ ಅದರಿಂದ ಒಳ್ಳೆಯದೇ ಆಯಿತು. ದ್ವಿವರ್ಣದ ಧ್ವಜದಲ್ಲಿ ಇತರೆ ಅಲ್ಪ ಸಂಖ್ಯಾತರನ್ನು ಪ್ರತಿನಿಧಿಸುವ ಸಂಕೇತ ಇರಲಿಲ್ಲ. ಧ್ವಜವನ್ನು ಪಕ್ಷ ಪರಿಶೀಲಿಸಿದ ನಂತರ ಅದರಲ್ಲಿ ಹಿಂದೂ, ಮುಸ್ಲಿಂ ಮತ್ತು ಇತರ ಧರ್ಮಗಳನ್ನು ಪ್ರತಿನಿಧಿಸುವ ಮೂರು ವರ್ಣಗಳಿರಬೇಕೆಂದು ಗಾಂಧೀಜಿ ಕಂಡುಕೊಂಡರು. ದೇಶದಲ್ಲಿ ಅಂದು ಇದ್ದ ರಾಜಕೀಯ ಪರಿಸ್ಥಿತಿಗೆ ಅನುಗುಣವಾಗಿ ಅವರು ಕ್ರಮ ಕೈಗೊಳ್ಳಬೇಕಾಗಿತ್ತು. ಆದ್ದರಿಂದ ಅವರು ಬಿಳಿ, ಹಸಿರು ಮತ್ತು ಕೇಸರಿ ಬಣ್ಣಗಳನ್ನು ಪರಿಗಣಿಸಿದರು.

ಗಾಂಧೀಜಿ ಮತ್ತೆ ವೆಂಕಯ್ಯರನ್ನು ಕರೆಸಿ, ಮುಂಚಿನ ಧ್ವಜದ ವಿನ್ಯಾಸದಲ್ಲಿ ಬಿಳಿ ಪಟ್ಟಿಯನ್ನು ಸೇರಿಸಿ ಧ್ವಜ ನಿರ್ಮಿಸುವಂತೆ ತಿಳಿಸಿದರು. ಮೇಲಿನಿಂದ ಅನುಕ್ರಮವಾಗಿ ಬಿಳಿ, ಹಸಿರು ಮತ್ತು ಕೇಸರಿ ಬಣ್ಣಗಳಿದ್ದು ಮೂರು ಪಟ್ಟೆಗಳ ಮೇಲೂ ಬರುವಂತೆ ಮಧ್ಯದಲ್ಲಿ ಚರಕವಿರಬೇಕೆಂದು ನಿರ್ದೇಶನವಿತ್ತರು. ವೆಂಕಯ್ಯ ಗಾಂಧೀಜಿಯವರ ಇಚ್ಛೆಯಂತೆಯೇ ಧ್ವಜ ತಯಾರಿಸಿದರು. 30 ದೇಶಗಳ ರಾಷ್ಟ್ರ ಧ್ವಜಗಳನ್ನು 5 ವರ್ಷ ಅಭ್ಯಸಿಸಿ, ಕೊನೆಗೆ ತ್ಯಾಗ, ಶಾಂತಿ ಸಮೃದ್ಧಿಯ ಸಂಕೇತವಾದ ಕೇಸರಿ, ಬಿಳಿ, ಹಸಿರಿನ ತ್ರಿವರ್ಣ ಧ್ವಜವನ್ನು ವಿನ್ಯಾಸಗೊಳಿಸಿದರು. ಈ ರೀತಿ ಅಖಿಲ ಭಾರತ ಕಾಂಗ್ರೆಸ್‌ನ ಅಥವಾ ಭಾರತದ ಪ್ರಥಮ ಧ್ವಜ ರೂಪುಗೊಂಡಿತು.

ಧ್ವಜದಲ್ಲಿ ಎಲ್ಲಾ ವರ್ಗಗಳ ಪ್ರಾತಿನಿಧ್ಯ ತೋರಿತು. ಗಾಂಧೀಯವರೇ ಹೇಳಿದಂತೆ: "ದೀರ್ಘವಾಗಿ ಪರಿಶೀಲಿಸಿದ ನಂತರ, ಹಿನ್ನೆಲೆಯಲ್ಲಿ ಇತರ ಧರ್ಮಗಳಿಗೂ ಪ್ರಾತಿನಿಧ್ಯ ಇರಬೇಕೆಂಧು ಕಂಡುಕೊಂಡೆ. ಹಿಂದೂ, ಮುಸ್ಲಿಂ ಏಕತೆ ಕೇವಲ ಅವರಿಗೆ ಮಾತ್ರವಲ್ಲ. ಎಲ್ಲರಿಗೂ ಅನ್ವಯವಾಗುವಂತಹುದು. ಭಾರತದಲ್ಲಿ ವಾಸವಾಗುವ ಎಲ್ಲಾ ಧರ್ಮಗಳವರ ಏಕತೆಯ ಪ್ರತೀಕ ಹಿಂದೂ ಮತ್ತು ಮುಸ್ಲಿಂಮರು ಪರಸ್ಪರ ಸಹಿಷ್ಣುತೆ ತೋರಬಹುದು. ಆದ್ದರಿಂದ ಧ್ವಜದ ಹಿನ್ನೆಲೆಯಲ್ಲಿ ಬಿಳಿ, ಹಸಿರು ಮತ್ತು ಕೇಸರಿ ಬಣ್ಣಗಳಿರಬೇಕೆಂದು ನನ್ನ ಅಭಿಪ್ರಾಯ." (ಎಂ.ಕೆ.ಗಾಂಧಿ, ಯಂಗ್ ಇಂಡಿಯಾ, ದಿ ನ್ಯಾಶನಲ್ ಫ್ಲಾಗ್, 13 ಏಪ್ರಿಲ್, 1921).

ಬಣ್ಣಗಳನ್ನು ವ್ಯವಸ್ಥೆಗೊಳಿಸಿದ ಕ್ರಮವೂ ಅರ್ಥಪೂರ್ಣವಾಗಿತ್ತು. ಗಾಂಧೀಜಿ ಹೀಗೆ ಹೇಳಿದ್ದರು "ದುರ್ಬಲರು ಎಲ್ಲರಿಗಿಂತ ಮೇಲೆ ಇರುತ್ತಾರೆ. ನಂತರ ಮುಸ್ಲಿಂಮರು ಮತ್ತು ಕೊನೆಯಲ್ಲಿ ಹಿಂದೂಗಳ ಬಣ್ಣ ಎಲ್ಲಕ್ಕಿಂತ ಶಕ್ತಿ ಶಾಲಿಯು, ದುರ್ಬಲರಿಗೆ ಆಧಾರವಾಗಿ ಕೆಳಗಿರಬೇಕು."

ಧ್ವಜದಲ್ಲಿ ಪೂರ್ಣ ಪ್ರಮಾಣದ ಚರಕ ಇರಬೇಕೆಂದು ನಿಗದಿಯಾಗಿತ್ತು. ಗಾಂಧೀಜಿ ಹೀಗೆ ಹೇಳಿದ್ದರು "ಭಾರತ ಚರಕ ತಿರುಗಿಸಿಯೇ ಬಾಳಿ ಬದುಕಬಹುದು. ಭಾರತದ ಬಡಜನರ ಏಳಿಗೆಯನ್ನು ಯಾವ ಕೈಗಾರಿಕಾ ಯೋಜನೆಯೂ ಸಾಧಿಸಲಾಗದು. ಭಾರತ ಒಂದು ಸಣ್ಣ ದ್ವೀಪವಲ್ಲ. ಅದೊಂದು ದೊಡ್ಡ ಖಂಡ. ಇದನ್ನು ಇಂಗ್ಲೆಂಡಿನಂತೆ, ಕೈಗಾರಿಕಾ ದೇಶವಾಗಿಸಲು ಸಾಧ್ಯವಿಲ್ಲ. ನಮ್ಮ ಹಾಳಾಗುತ್ತಿರುವ ಸಮಯ ಬಳಕೆ, ದೇಶದ ಸಂಪತ್ತನ್ನು ಜೋಡಿಸಲು ನಮ್ಮ ಗುಡಿಸಲುಗಳಲ್ಲಿ, ಹತ್ತಿಯಿಂದ ಬಟ್ಟೆ ನೇಯುವ ಕಾರ್ಯ ಆರಂಭಗೊಳ್ಳಬೇಕು."

ಗಾಂಧೀಜಿ ಅದನ್ನು ಅನುಮೋದಿಸಿದ್ದರಿಂದ ಅದು ಎಲ್ಲರಿಗೂ ಒಪ್ಪಿಗೆಯಾಯಿತು. ಅದನ್ನು ಕಾಂಗ್ರೆಸ್‌ನ ಎಲ್ಲಾ ಸಮಾರಂಭಗಳಲ್ಲಿ ಹಾರಿಸಲಾಗುತ್ತಿತ್ತು. ಸಮಯ ಕಳೆದಂತೆ ಅದು ರಾಷ್ಟ್ರೀಯ ಧ್ವಜವೆಂದು ಪ್ರಸಿದ್ಧವಾಯಿತು. 1921ರಲ್ಲಿ ಅಹ್ಮದಾಬಾದಿನಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಸಭೆಯಲ್ಲಿ ಮೊದಲ ಬಾರಿಗೆ ದೊಡ್ಡ ಗಾತ್ರದ ಈ ಚರಕ ಧ್ವಜದ ಆರೋಹಣ ನಡೆಯಿತು. ಆನಂತರ ಅದು ಯಾವುದೇ ಅಧಿಕೃತ ನಿರ್ಣಯವಿಲ್ಲದೆ ಭಾರತದ ರಾಷ್ಟ್ರೀಯ ಧ್ವಜವೆಂದು ಮಾನ್ಯತೆ ಪಡೆಯಿತು. 1929ರ ಡಿಸೆಂಬರ್ 31ರಂದು ರಾವಿ ನದಿ ತಟದಲ್ಲಿ ನಡೆದ ಲಾಹೋರ್ ಕಾಂಗ್ರೆಸ್ ಅಧಿವೇಶನದಲ್ಲಿ ಮಧ್ಯರಾತ್ರಿ ಈ ಧ್ವಜದ ಆರೋಹಣ ನಡೆಯಿತು. ಈ ಅಧಿವೇಶನ ಪೂರ್ಣ ಸ್ವರಾಜ್ಯ ಕಾಂಗ್ರೆಸ್‌ನ ಗುರಿಯೆಂದು ಸಾರಿತು. ಜನವರಿ 26 1930ರಂದು, ಇದೇ ಧ್ವಜದ ನೆರಳಿನಲ್ಲಿ ಭಾರತೀಯರು ಪ್ರತಿಜ್ಞೆ ತೊಟ್ಟರು. ಅಸಹಕಾರ ಚಳವಳಿಯೊಂದಿಗೆ ಚರಕಧ್ವಜ ನಿಧಾನವಾಗಿ ಜನಪ್ರಿಯವಾಯಿತು.

1930ರ ಮಾರ್ಚ್ 12ರಂದು ಗಾಂಧೀಜಿ, ಅಸಹಕಾರ ಚಳವಳಿ ಆರಂಭಿಸಿದರು. 78 ಅನುಯಾಯಿಗಳೊಂದಿಗೆ ಸಾಬರ್‌ಮತಿಯಿಂದ ಗುಜರಾತ್‌ನ ಕರಾವಳಿಯ ದಾಂಡಿ ಹಳ್ಳಿಗೆ ಉಪ್ಪಿನ ಕಾಯಿದೆ ಮುರಿಯಲು ಯಾತ್ರೆ ನಡೆಸಿದರು. ಬೆಳಗಿನ ಜಾವ ಯಾತ್ರೆ ಆರಂಭವಾದಾಗ, ರಸ್ತೆಯ ಇಬ್ಬದಿಗಳಲ್ಲಿ ತ್ರಿವರ್ಣ ಧ್ವಜಗಳನ್ನು ಹಿಡಿದು ಜನರು ನೆರೆದಿದ್ದರು. 1947ರ ಮಧ್ಯರಾತ್ರಿ ಬ್ರಿಟಿಷ್ ಧ್ವಜ ಕೆಳಗಿಳಿಯುತ್ತಲೇ ಕೆಂಪುಕೋಟೆಯಲ್ಲಿ ಮೇಲೇರಿದ್ದು ತ್ರಿವರ್ಣ ಧ್ವಜ. ಈ ಧ್ವಜ ಕಾಂಗ್ರೆಸಿನ ಧ್ವಜದ ಪರಿಷ್ಕೃತ ರೂಪ. ಮೂಲ ಧ್ವಜದಲ್ಲಿ ಆದ ಬಹುಮುಖ್ಯ ಪರಿಷ್ಕರಣೆ ಅಂದರೆ ಅದರ ಬಿಳಿ ಬಣ್ಣವನ್ನು ಮಧ್ಯಕ್ಕೆ ತಂದುದು ಹಾಗೂ ಮಧ್ಯಭಾಗದಲ್ಲಿ ಅಶೋಕಚಕ್ರವನ್ನು ಸೇರಿಸಿದ್ದು. ಮೂಲ ಧ್ವಜದಲ್ಲಿ ಇದ್ದದ್ದು ಚರಕದ ಚಿತ್ರ. ಮಹಾತ್ಮಗಾಂಧಿ ಇಡೀ ರಾಷ್ಟ್ರೀಯ ಚಳವಳಿಯಲ್ಲಿ ಬಳಸಿದ ಬಹುಮುಖ್ಯ ದೇಶಿಯ ಸಂಕೇತವಾಗಿದ್ದ ಚರಕವನ್ನು ರಾಷ್ಟ್ರಧ್ವಜದಲ್ಲಿ ಮುಂದುವರಿಸುವುದಕ್ಕೆ ಸಂವಿಧಾನ ಸಭೆಯಲ್ಲಿ ಹಲವಾರು ಸದಸ್ಯರು ಆಕ್ಷೇಪ ವ್ಯಕ್ತಪಡಿಸಿದರು. ಅದಕ್ಕೆ ಒಂದು ಕಾರಣ. ರಾಜಕೀಯ ಪಕ್ಷದ ಧ್ವಜವನ್ನು ಇದ್ದ ಹಾಗೇ ರಾಷ್ಟ್ರ ಧ್ವಜವನ್ನಾಗಿ ಒಪ್ಪಿಕೊಳ್ಳುವುದು ಸರಿಯಲ್ಲ. ಎರಡನೆಯದು, ಚರಕ ಪ್ರಾಚೀನತೆಯ, ಅವೈಜ್ಞಾನಿಕತೆಯ, ಸ್ತ್ರೀಯರ ಕೆಲಸದ ಸಂಕೇತ.

ಕೊನೆಗೆ ಸಾರಾನಾಥದಲ್ಲಿ ಅಶೋಕ ಸ್ತಂಭದಲ್ಲಿ ಕೆತ್ತಲಾದ ಚಕ್ರವರ್ತಿ ಅಶೋಕನ ಧರ್ಮಚಕ್ರವನ್ನೇ ಧ್ವಜದಲ್ಲಿ ಸೇರಿಸುವುದು ಎಂದು ಸಂವಿಧಾನ ಸಭೆ 1947ರ ಜುಲೈ 22ರಂದು ನಿರ್ಣಯಿಸಿತು. ಜವಾಹರಲಾಲ್ ನೆಹರು ಹೇಳಿದರು: "ನಾವು ಕಳೆದ ಕೆಲವು ವರ್ಷಗಳಲ್ಲಿ ಬಳಸಿದ ಧ್ವಜ ಮತ್ತು ಇದರಲ್ಲಿ ಕೆಲವು ವ್ಯತ್ಯಾಸಗಳನ್ನು ನೀವು ಕಾಣಬಹುದು. ಬಣ್ಣಗಳು ಅವೇ ಕಡು ಕೇಸರಿ, ಬಿಳಿ ಮತ್ತು ಕಡು ಹಸಿರು. ಬಿಳಿಯ ಬಣ್ಣದಲ್ಲಿ ಹಿಂದೆ ಭಾರತದ ಜನಸಾಮಾನ್ಯನ ಪ್ರತೀಕವಾದ ಮತ್ತು ಗಾಂಧೀಜಿಯವರು ನಮಗೆ ನೀಡಿದ ಚರಕವಿತ್ತು. ಈಗಿನ ಧ್ವಜದಲ್ಲಿ ಈ ಚರಕದ ಲಾಂಛನವನ್ನು ಸ್ವಲ್ಪ ಬದಲಾಯಿಸಲಾಗಿದೆ. ಸಾಧಾರಣವಾಗಿ ಧ್ವಜದ ಒಂದು ಬದಿಯಲ್ಲಿ ಇರುವ ವಿನ್ಯಾಸವೇ ಇನ್ನೊಂದು ಬದಿಯಲ್ಲೂ ಇರಬೇಕು. ಧ್ವಜದ ಮೇಲಿರುವ ಚರಕದ ಎರಡು ತುದಿಗಳು, ಇಬ್ಬದಿಗಳಲ್ಲಿ ಬೇರೆ ಬೇರೆಯಾಗಿ ಕಾಣುತ್ತವೆ. ಬಹಳಷ್ಟು ಗಹನವಾಗಿ ಪರಿಶೀಲಿಸಿದ ನಂತರ, ಲಾಂಛನದಲ್ಲಿ ಬದಲಾವಣೆ ಮಾಡಬೇಕಾಯಿತು. ಅದರ ಚಕ್ರದ ಮುಖ್ಯ ಭಾಗವನ್ನು ಉಳಿಸಿಕೊಂಡು, ಇತರ ಭಾಗವನ್ನು ತ್ಯಜಿಸಬೇಕಾಯಿತು. ಆದರೆ ಯಾವ ವಿಧದ ಚಕ್ರ ಇರಬೇಕು. ಪರಿಶೀಲಿಸಿದಾಗ ನಾವೆಲ್ಲ ಕಂಡಿರುವ ಅಶೋಕ ಸ್ತಂಭದ ಮೇಲಿರುವ ಚಕ್ರ ಗಮನಕ್ಕೆ ಬಂತು. ಆ ಚಕ್ರ ಭಾರತದ ಪುರಾತನ ಸಂಸ್ಕೃತಿಯೂ, ಹಲವು ಶತಮಾನಗಳಿಂದ ಭಾರತದ ಗೌರವ ಎನಿಸಿದ ಮೌಲ್ಯಗಳ ಪ್ರತೀಕವಾಗಿದೆ. ನನ್ನ ಅಭಿಪ್ರಾಯದಲ್ಲಿ ನಾವು ಈ ರೀತಿ ಈ ಚಕ್ರವನ್ನು ಧ್ವಜದಲ್ಲಿ

ಅಳವಡಿಸಿಕೊಂಡಿದ್ದರಿಂದ ವಿಶ್ವದ ಚರಿತ್ರೆಯಲ್ಲಿ ಅಮರವಾದ ಅಶೋಕನ ಹೆಸರನ್ನು ಸೇರಿಸಿಕೊಂಡಂತಾಗಿದೆ.

ಈ ವಿಷಯ ಗಾಂಧೀಜಿ ಗಮನಕ್ಕೆ ಬರುತ್ತಲೇ ಅವರಿಗೆ ಅಸಮಾಧಾನವಾಯಿತು. 'ಚರಕವಿಲ್ಲದ ಧ್ವಜಕ್ಕೆ ನಾನು ವಂದಿಸಲಾರೆ' ಎಂದರು. ಚರಕ ಅವರ ಪಾಲಿಗೆ ಬರೀ ನೂಲುವ ಸಾಧನವಾಗಿರಲಿಲ್ಲ. ಅವರ ಕಲ್ಪನೆಯ ಭಾರತದ ಅಸದೃಶ ಸಂಕೇತವಾಗಿತ್ತು. ಗಾಂಧೀಜಿಯನ್ನು ಸಮಾಧಾನಪಡಿಸಲು ನೆಹರೂ ಯತ್ನಿಸಿದರು. ಚರಕದ ಚಕ್ರವೂ, ಅಶೋಕ ಚಕ್ರವೂ ಚಕ್ರವೇ. ಈ ಚಕ್ರವನ್ನು ಚರಕದ ಚಕ್ರ ಅಂತಲೇ ಭಾವಿಸಬೇಕು ಎಂದು ಗಾಂಧೀಜಿಯವರಲ್ಲಿ ಕೇಳಿಕೊಂಡರು. ಮನಸ್ಸಿಲ್ಲದೆ ಗಾಂಧೀಜಿ ಒಪ್ಪಿಕೊಂಡರು.

1947ರ ಆಗಸ್ಟ್ 3ರಂದು 'ಹರಿಜನ ಬಂಧು' ಪತ್ರಿಕೆಯಲ್ಲಿ ಗಾಂಧೀಜಿ ಧ್ವಜದ ಕುರಿತು ಹೀಗೆ ಬರೆಯುತ್ತಾರೆ. "ಧ್ವಜದ ನಡುವಣ ಆ ಚಕ್ರವನ್ನು ನೋಡಿ ಕೆಲವರಾದರೂ ಅಶೋಕ ಚಕ್ರವರ್ತಿ ಅಧಿಕಾರ ತ್ಯಜಿಸಿ ಶಾಂತಿ ದೂತನಾದದ್ದನ್ನು ನೆನಪಿಸಿಕೊಳ್ಳಬಹುದು. ಅಶೋಕನ ದಯಾಮಯ ಹೃದಯವನ್ನು ನೆನಪಿಸಿಕೊಳ್ಳಬಹುದು. ಆ ಚಕ್ರದಲ್ಲಿ ಚರಕವನ್ನು ಕಾಣುತ್ತಿದ್ದರೆ ಚರಕದ ಮಹಿಮೆ ಇನ್ನೂ ಒಂದು ತೂಕ ಹೆಚ್ಚಿಗೆ ಅಂತ ನಾನು ಭಾವಿಸುತ್ತೇನೆ."

**ಆಧಾರ: ವಿಜಯ ಕರ್ನಾಟಕ, ದಿನಾಂಕ:27.01.2021**

## 9. ಆಗ ಟೀಚರ್, ಈಗ ಮೇಲ್ಮನೆ ಹೆಡ್ಮಾಸ್ಟರ್

ಒಂದು ಕೆಲಸವಾಗಬೇಕಾದರೆ ಜನಸಾಮಾನ್ಯರು ರಾಜಕೀಯ ಮುಖಂಡರ ಕಚೇರಿಗೆ ನೂರಾರು ಬಾರಿ ಅಲೆಯುವ ಸಂದರ್ಭದಲ್ಲಿ 'ನಿಮ್ಮ ಕೆಲಸವನ್ನು ನಾನು ಇಂದೇ ಮಾಡಿಕೊಡುತ್ತೇನೆ. ನಾಳೆ ನಾನು ಅಧಿಕಾರದಲ್ಲಿ ಇರುವ ಭರವಸೆ ಇಲ್ಲ.' ಎನ್ನುವ ಈ ಮನದಟ್ಟುವ ಮಾತುಗಳನ್ನು ವಿಧಾನ ಪರಿಷತ್ ನೂತನ ಸಭಾಪತಿಯಾದ ಬಸವರಾಜ ಹೊರಟ್ಟಿ ಒಂದು ಫಲಕದಲ್ಲಿ ಬರೆಸಿ ತಮ್ಮ ಹುಬ್ಬಳ್ಳಿಯ ಗೃಹ ಕಚೇರಿಯಲ್ಲಿ ತೂಗು ಹಾಗಿದ್ದಾರೆ. ಇದು ಸೂಕ್ಷ್ಮ ಮನಸ್ಸಿಗೆ ಸಾಕ್ಷಿ.

ಇದೀಗ ವಿಧಾನ ಪರಿಷತ್ ಸಭಾಪತಿ ಗದ್ದಿಗೆ ಮೇಲೆ ಕುಳಿತುಕೊಳ್ಳಲು ಸಜ್ಜಾಗಿರುವ ಬಸವರಾಜ ಹೊರಟ್ಟಿ ಅವರು ಅರೆಕಾಲಿಕ ಶಿಕ್ಷಕನಿಂದ ಸಭಾಪತಿಯ ಸ್ಥಾನದವರೆಗೆ ಸಾಗಿಬಂದ ಹೋರಾಟದ ಹಾದಿ ಒಂದು ರೋಚಕ ಕಥನ. ರಾಜ್ಯದ ಖಾಸಗಿ ಶಾಲಾ ಆಡಳಿತ ಮಂಡಳಿಯವರು 1970–80ರ ದಶಕದಲ್ಲಿ ತಮ್ಮ ಶಾಲೆಯ ಶಿಕ್ಷಕರ ಹಾಗೂ ಸಿಬ್ಬಂದಿ ವರ್ಗದವರನ್ನು ಬಹಳಷ್ಟು ಶೋಷಣೆ ಮಾಡುತ್ತಿದ್ದರು. ಸರ್ಕಾರದಿಂದ ಬಂದ ಸಂಬಳದಲ್ಲಿ ಹೆಚ್ಚಿನ ಭಾಗವನ್ನು ಆಡಳಿತ ಮಂಡಳಿಯವರೇ ಕಸಿದುಕೊಳ್ಳುತ್ತಿದ್ದರು. ಕೆಲಸದ ಭದ್ರತೆ ಇರಲಿಲ್ಲ. ಸಣ್ಣ ಪುಟ್ಟ ಕಾರಣಗಳಿಗಾಗಿ ಶಿಕ್ಷಕರನ್ನು ಹಾಗೂ ಸಿಬ್ಬಂದಿ ವರ್ಗದವರನ್ನು ಕೆಲಸದಿಂದ ಕಿತ್ತುಹಾಕುತ್ತಿದ್ದರು. ಮಕ್ಕಳಿಗೆ ಪಾಠ ಹೇಳುವ ಗುರು ಸ್ಥಾನದಲ್ಲಿದ್ದ ಶಿಕ್ಷಕರು ಆಡಳಿತ ಮಂಡಳಿಯವರ ಮುಂದೆ ಕೈಕಟ್ಟಿ ಜೀತದಾಳುಗಳಂತೆ ನಿಂತುಕೊಳ್ಳುವ ಹೀನ ಪರಿಸ್ಥಿತಿ ಇತ್ತು.

1976ರಲ್ಲಿ ನಡೆದ ಒಂದು ಸಣ್ಣ ಘಟನೆ ಕರ್ನಾಟಕ ಮಾಧ್ಯಮಿಕ ಶಾಲೆಗಳ ನೌಕರರ ಸಂಘ ಜನ್ಮ ತಾಳುವುದಕ್ಕೆ ಕಾರಣವಾಯಿತು. ಆಗ ಹುಬ್ಬಳ್ಳಿ ಲ್ಯಾಮಿಂಗ್ಟನ್ ಹೈಸ್ಕೂಲ್‌ನಲ್ಲಿ ಎಫ್.ಎಸ್. ಶೀರೂರ ಎಂಬುವರು ಶಿಕ್ಷಕರಾಗಿದ್ದರು. ಅವರು 9ನೇ ವರ್ಗದ ಒಬ್ಬ ವಿದ್ಯಾರ್ಥಿಗೆ ಪರೀಕ್ಷೆಯಲ್ಲಿ 36ಕ್ಕೆ ತಪ್ಪಿ 26 ಅಂಕ ಹಾಕಿದರು (ಅದು ಕೂಡ 6 ತಿಂಗಳ ಅಂತರಿಕ ಪರೀಕ್ಷೆಯಲ್ಲಿ) ಇದೇ ಕಾರಣಕ್ಕೆ ಅವರನ್ನು ಕೆಲಸದಿಂದ ಕಿತ್ತುಹಾಕಲು ಆಡಳಿತ ಮಂಡಳಿ ನಿರ್ಧಾರ ಮಾಡಿತು. ಆಗ ಲ್ಯಾಮಿಂಗ್ಟನ್ ಸ್ಕೂಲ್ ಆಡಳಿತಾಧಿಕಾರಿಯಾಗಿದ್ದ ಮಹಾನಗರ ಪಾಲಿಕೆಯ ಕಮೀಷನರ್‌ಗೆ ವರದಿ ಸೂಚಿಸಲಾಗಿತ್ತು.

ಈ ಘಟನೆ ಆಗ ಅದೇ ಶಾಲೆಯಲ್ಲಿ ಅರೆಕಾಲಿಕ ಶಿಕ್ಷಕರಾಗಿದ್ದ ಬಸವರಾಜ ಹೊರಟ್ಟಿ ಅವರ ಮನ ಕೆರಳಿಸಿತು. ಶಿರೂರ ಮಾಸ್ತರ್‌ಗೆ ನೆರವಾಗುವ ದೃಷ್ಟಿಯಿಂದ ಹುಬ್ಬಳ್ಳಿಯ ತಮ್ಮ 7–8 ಸ್ನೇಹಿತರೊಂದಿಗೆ ನಗರ ಪಾಲಿಕೆ ಕಮೀಷನರ್ ಆಗಿದ್ದ ಐ.ಎ.ಎಸ್. ಅಧಿಕಾರಿ ಕೆ.ಎಂ.ಹೊನ್ನಪ್ಪ ಅವರನ್ನು ಭೇಟಿ ಮಾ.ಶೀರೂರ ತಮಗೆ ಕಲಿಸಿದ ಶಿಕ್ಷಕರು. ಅವರು ಉತ್ತಮ ಶಿಕ್ಷಕರಾಗಿದ್ದಾರೆ. ಅವರನ್ನು ಕೆಲಸದಿಂದ ವಜಾ ಮಾಡಬಾರದೆಂದು' ಮನವಿ ಮಾಡಿದರು. ಒಂದು ತೀರ ಸಣ್ಣ ತಪ್ಪಿಗೆ ಶಿಕ್ಷಕರನ್ನು ವಜಾ ಮಾಡುವ

ಕ್ರೂರ ನಿರ್ಧಾರ ಕಮೀಷನರ್ ಅವರಿಗೂ ಸರಿ ಕಾಣಲಿಲ್ಲ. ಅವರು ಪ್ರಾಚಾರ್ಯರನ್ನು ಹಾಗೂ ಆಡಳಿತ ಮಂಡಳಿಯವರನ್ನು ಕರೆದು ಒಂದು ಸಣ್ಣ ತಪ್ಪಿಗೆ ಶಿಕ್ಷಕನನ್ನು ವಜಾ ಮಾಡುವ ದೊಡ್ಡ ಶಿಕ್ಷೆ ಕೊಡುವುದು ತಪ್ಪು ಎಂದು ಗದರಿಸಿ ಛೀಮಾರಿ ಹಾಕಿದರು.

ಶೀರೂರ ಮಾಸ್ತರರ ನೌಕರಿ ಉಳಿಯಿತು. ಈ ಗೆಲುವಿನಿಂದ ಉತ್ಸಾಹಿತರಾದ ಖಾಸಗಿ ಶಿಕ್ಷಣ ಸಂಸ್ಥೆಗಳ ನೌಕರರೆಲ್ಲಾ ಸೇರಿ ಸಂಘ ಕಟ್ಟುವ ನಿರ್ಧಾರ ಮಾಡಿದರು. 12–11–1976ರಂದು ಕರ್ನಾಟಕ ಮಾಧ್ಯಮಿಕ ಶಾಲಾ ನೌಕರರ ಸಂಘ ಜನ್ಮ ತಾಳಿತು. ಬಸವರಾಜ ಹೊರಟ್ಟಿ ಸಂಘದ ಅಧ್ಯಕ್ಷರಾಗಿ ಆಯ್ಕೆಯಾದರು.

ಸಂಘ ಅಸ್ತಿತ್ವಕ್ಕೆ ಬಂದ ನಂತರ ಶಿಕ್ಷಕರ ಹಕ್ಕುಗಳಿಗಾಗಿ ದಿಟ್ಟ ಹೋರಾಟ ಆರಂಭವಾಯಿತು. ಸಂಬಳದಲ್ಲಿ ಆಡಳಿತ ಮಂಡಳಿಗೆ ಹಣ ಕೊಡುವುದನ್ನು ಸಿಬ್ಬಂದಿ ವರ್ಗದವರು ಧೈರ್ಯವಾಗಿ ನಿಲ್ಲಿಸಿದರು. ಇದರಿಂದ ಆಡಳಿತ ಮಂಡಳಿ ಹುಬ್ಬಳ್ಳಿಯ ಕೃಪಾನಂದ ಹೈಸ್ಕೂಲಿನ ಶಿಕ್ಷಕರಾಗಿದ್ದ ಬಾಲರೆಡ್ಡಿಯವರನ್ನು ಆಡಳಿತ ಮಂಡಳಿಯವರು ಕೆಲಸದಿಂದ ವಜಾ ಮಾಡಿದರು. ಅವರ ಪರವಾಗಿ ಶಿಕ್ಷಕರ ಸಂಘ ಹುಬ್ಬಳ್ಳಿಯಲ್ಲಿ ಉಗ್ರ ಹೋರಾಟ, ಉಪವಾಸ ಸತ್ಯಾಗ್ರಹ ಹಾಗೂ ಧರಣಿ ಸತ್ಯಾಗ್ರಹ ಆರಂಭಿಸಿತು. ಈ ಹೋರಾಟಕ್ಕೆ ಅನೇಕ ಕಾರ್ಮಿಕ ಸಂಘಟನೆಗಳು, ಜನಪರ ಸಂಘಟನೆಗಳು ನೇರವಾಗಿ ಬೆಂಬಲ ಸೂಚಿಸಿದವು. ಕೆ.ಎಸ್.ಆರ್.ಟಿ.ಸಿ., ಎಲ್.ಐ.ಸಿ ಹಾಗೂ ಕಾರ್ಖಾನೆಗಳ ಕಾರ್ಮಿಕ ಸಂಘಗಳು ಸಕ್ರಿಯವಾಗಿ ಹೋರಾಟದಲ್ಲಿ ಭಾಗವಹಿಸಿದವು. ಆದರೆ ಶಿಕ್ಷಕರ ಮತಕ್ಷೇತ್ರದಿಂದ ಆಯ್ಕೆಯಾಗಿದ್ದ ಆಗಿನ ವಿಧಾನ ಪರಿಷತ್ ಸದಸ್ಯರು ಆಡಳಿತ ಮಂಡಳಿಯವರೊಂದಿಗೆ ಶಾಮೀಲಾಗಿ ಹೋರಾಟ ಮುರಿಯುವುದಕ್ಕೆ ಪ್ರಯತ್ನಿಸಿದರು. ಅದು ಹೋರಾಟ ನಿರತ ಶಿಕ್ಷಕರನ್ನು ಬಹಳಷ್ಟು ಕೆರಳಿಸಿತು. ಸಂಘದ ಅಧ್ಯಕ್ಷ ಬಸವರಾಜ ಹೊರಟ್ಟಿ ತಾವೇ ಚುನಾವಣೆಗೆ ಸ್ಪರ್ಧಿಸಿ ಶಾಲಾ ನೌಕರರ ನೋವಿಗೆ ಗಟ್ಟಿ ಧ್ವನಿ ಒದಗಿಸಲು ನಿರ್ಧಾರ ಮಾಡಿದರು.

1980ರಲ್ಲಿ ನಡೆದ ವಿಧಾನ ಪರಿಷತ್ ಶಿಕ್ಷಕರ ಮತಕ್ಷೇತ್ರದ ಚುನಾವಣೆಯಲ್ಲಿ ಬಸವರಾಜ ಹೊರಟ್ಟಿ ಪಕ್ಷೇತರ ಅಭ್ಯರ್ಥಿಯಾಗಿ ಸ್ಪರ್ಧಿಸಿ ಗೆಲವು ಸಾಧಿಸಿದರು. ಇದರಿಂದ ಶಿಕ್ಷಕರ ಸಂಘಕ್ಕೆ ಆನೆ ಬಲ ಬಂದಿತು. ಚುನಾವಣೆಯ ಸಂದರ್ಭದಲ್ಲಿ ಮಿತ್ರರೆಲ್ಲ ಸೇರಿ ಚುನಾವಣೆ ಪ್ರಚಾರಕ್ಕೆ ರೂ.12 ಸಾವಿರ ಸಂಗ್ರಹಿಸಿಕೊಟ್ಟರು. ಮುಧೋಳ ತಾಲ್ಲೂಕು ಇಂಗಳಗಿ–ಯಡಹಳ್ಳಿ ಗ್ರಾಮದಲ್ಲಿ ವಾಸವಾಗಿದ್ದ ಅವರ ತಾಯಿ ಮನೆಯಲ್ಲಿದ್ದ ಜೋಳ ಮಾರಿ, ರೂ. 500 ಚುನಾವಣೆಗೆ ಕೊಟ್ಟರು. ಈ ಎರಡೂ ಸಂಗತಿಗಳನ್ನು ಹೊರಟ್ಟಿ ಅವರು ಕಣ್ಣಲ್ಲಿ ನೀರು ತುಂಬಿಕೊಂಡು ಇಂದಿಗೂ ಸ್ಮರಿಸುತ್ತಾರೆ.

ಶಿಕ್ಷಕರ ಸಂಘಟನೆ ಕಳೆದ ನಾಲ್ಕು ದಶಕಗಳಿಂದ ಶಿಕ್ಷಕರ ಧ್ವನಿಯಾಗಿ ಕೆಲಸ ಮಾಡುತ್ತಿದೆ. ಸತತ ಹೋರಾಟದ ಫಲವಾಗಿ ಸರ್ಕಾರಿ ಶಾಲೆಗಳ ಶಿಕ್ಷಕರು ಪಡೆಯುವ ಮಾದರಿಯ ವೇತನ ಇತರ ಸೌಲಭ್ಯಗಳನ್ನು ಖಾಸಗಿ ಶಾಲೆಯ ಶಿಕ್ಷಕರು ಪಡೆಯುತ್ತಿದ್ದಾರೆ. ಎಲ್ಲಕ್ಕೂ ಮಿಗಿಲಾಗಿ ಖಾಸಗಿ ಶಾಲೆಯ ಶಿಕ್ಷಕರು ಆತ್ಮಗೌರವದಿಂದ ಕೆಲಸ ಮಾಡುವ ವಾತಾವರಣ ನಿರ್ಮಾಣವಾಗಿದೆ. ವರ್ಗಾವಣೆ ಪಿಂಚಣಿ ಮುಂತಾದ ಸೌಲಭ್ಯಗಳ ವಿಷಯದಲ್ಲಿ ಕೆಲವು ತಾರತಮ್ಯಗಳು ಉಳಿದಿದೆ. ಇವುಗಳನ್ನು ಸರಿಪಡಿಸಲು ಸಂಘ ಹೋರಾಟ ನಡೆಸಬೇಕು.

ಬಸವರಾಜ ಹೊರಟ್ಟಿ 1980ರಿಂದ ಸತತ 7 ಬಾರಿ ವಿಧಾನ ಪರಿಷತ್ ಸದಸ್ಯರಾಗಿ ಶಿಕ್ಷಕ ಕ್ಷೇತ್ರದಿಂದ ಆಯ್ಕೆಯಾಗುತ್ತಿದ್ದಾರೆ ವಿಧಾನ ಪರಿಷತ್ ಸದಸ್ಯರಾಗಿ ಬರೋಬ್ಬರಿ 40 ವರ್ಷವಾಯಿತು. ಭಾರತದ ರಾಜಕೀಯ ಚರಿತ್ರೆಯಲ್ಲಿ ಇದೊಂದು ದಾಖಲೆ. ಸತತ 7 ಬಾರಿ ವಿಧಾನ ಪರಿಷತ್ ಸದಸ್ಯರಾಗಿ ಆಯ್ಕೆಯಾದ ಮತ್ತೊಬ್ಬ ನಾಯಕ ಇಡೀ ಭಾರತದಲ್ಲಿಯೇ ಇಲ್ಲ.

ಪಾರ್ಟ್‌ಟೈಮ್ ಶಿಕ್ಷಕರಾಗಿ ಬದುಕು ಆರಂಭಿಸಿದ ಹೊರಟ್ಟಿ ಕುಮಾರಸ್ವಾಮಿ ನೇತೃತ್ವದ ಸರ್ಕಾರದಲ್ಲಿ ಶಿಕ್ಷಣ ಸಚಿವರಾಗಿ ಕೆಲಸ ಮಾಡುವ ಅವಕಾಶ ದೊರೆಯಿತು. ಈ ಅವಧಿಯಲ್ಲಿ 1014 ಸರ್ಕಾರಿ ಪ್ರೌಢ ಶಾಲೆ, 492 ಪದವಿಪೂರ್ವ ಕಾಲೇಜು ಆರಂಭಿಸಿದ್ದು, ಒಂದು ದೊಡ್ಡ ದಾಖಲೆ. ಅತಂತ್ರವಾಗಿದ್ದ 48 ಸಾವಿರ ಶಿಕ್ಷಕರಿಗೆ ಹಾಗೂ ಉಪನ್ಯಾಸಕರಿಗೆ ನೇಮಕ ಮಾಡಿದರು.

ಹೊರಟ್ಟಿಯವರು ಸದನದಲ್ಲಿಯೂ ಪ್ರಬುದ್ಧ ಮಾತುಗಾರಿಕೆಯಿಂದ ಹೆಸರಾಗಿದ್ದಾರೆ. ಅವರು ಯಾವ ಮುತುವರ್ಜಿಗೆ ಒಳಗಾಗದೆ ಸ್ಪಷ್ಟ ಮಾತುಗಳಲ್ಲಿ ತಮ್ಮ ಅಭಿಪ್ರಾಯ ಮಂಡಿಸುತ್ತಾರೆ. ರಾಜಕಾರಣದ ಹೊರಗೆ ನಿಂತು ಸತ್ಯವನ್ನು ಸದನದಲ್ಲಿ ಬಿಚ್ಚಿಡುತ್ತಾರೆ. ತಮ್ಮ ತಾಯಿಯ ನೆನಪನ್ನು ಹಸಿರಾಗಿಡಲು 'ಅವ್ವ' ಪ್ರತಿಷ್ಠಾನ ಸ್ಥಾಪಿಸಿ ಅನೇಕ ಶೈಕ್ಷಣಿಕ ಸಾಮಾಜಿಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಹಲವಾರು ಸಾಧಕರಿಗೆ ಸನ್ಮಾನಿಸಿದ್ದಾರೆ. ಇಂದಿಗೂ ತಮ್ಮ ಹುಟ್ಟೂರಿನೊಂದಿಗೆ ಭಾವನಾತ್ಮಕ ನಂಟನ್ನಿಟ್ಟುಕೊಂಡಿದ್ದಾರೆ. ತಮ್ಮದೇ 10 ಎಕರೆ ಜಮೀನನ್ನು ಸರ್ಕಾರಕ್ಕೆ ದೇಣಿಗೆಯಾಗಿ ನೀಡಿ ರಾಜ್ಯಕ್ಕೆ ಮಾದರಿಯಾಗುವಂಥ ಶಾಲೆಯನ್ನು ಪ್ರಾರಂಭಿಸಿದ್ದಾರೆ. ತಮ್ಮ ಸರಳತನ ಮತ್ತು ಗಾಂಭೀರ್ಯತೆಯಿಂದ ಜನರ ಪ್ರೀತಿ ಮತ್ತು ಗೌರವಕ್ಕೆ ಪಾತ್ರರಾಗಿದ್ದಾರೆ.

ಹೊರಟ್ಟಿಯವರಿಗೆ ಈಗ 74ರ ಇಳಿ ವಯಸ್ಸು ಆದರೆ ಅವರು ತಮ್ಮ ಹೋರಾಟದ ಕಾವನ್ನು ಎಳ್ಳಷ್ಟೂ ಕಳೆದುಕೊಂಡಿಲ್ಲ. ಎಲ್ಲಿಯೇ ಶಿಕ್ಷಕರ ನೋವಿನ ಕೂಗನ್ನು ಕೇಳಿದರೆ ಹೊರಟ್ಟಿ ಅವರು ಅಲ್ಲಿ ಹಾಜರಿರುತ್ತಾರೆ.

**ಲೇಖಕರು: ಮಲ್ಲಿಕಾರ್ಜುನ ಹೆಗ್ಗಳಗಿ,**

**ಆಧಾರ: ವಿಜಯವಾಣಿ, ದಿನಾಂಕ:10.02.2021**

## 10. Legal Experts on One Nation, One Election

### 'Save money and time'

***Ashok Haranahalli former Advocate-General***. It is the need of the hour to hold simultaneous elections to Assemblies and Parliament, for which major amendments should be made to the Constitution. If President's rule is imposed, there is provision in the Constitution to hold fresh elections. The terms of different state assemblies and at different times. Hence, the amendment is necessary. If elections are held simultaneously, there is no need for State Election Commissions. The Present system affects governance for about 45 days due to the Model Code of Conduct. State government has to put new policies on hold, but can also take advantage by announcing policies to please voters just before elections. It is huge burden on the exchequer. Enlisting teachers frequently for poll can be avoided. Similarly security personnel can be allowed to track time, instead of focusing on elections. in the interest of governance, simultaneous elections can be held in a democratic set-up.

### 'Impossible in federal structure'

One Nation, One Election is impossibility in a parliamentary system where every government is accountable. In a federal country one cannot demand one election. When the basic fabric of the Constitution is changed. It is lead to an American system where there is no by-election. India is a land of diversity which should be maintained by allowing each culture to have its say. For example, If the government takes an anti-Kannada stand, it will be ousted as was done during the Gokak movement. This is no possible if the one election system is introduced. The existing system is necessary to protect diversity and to prevent a Hindi government from disturbing non-Hindi states. It is an attempt by somebody who secured a brute majority. That is why Dr.B.R.Ambedkar has on November 25, 1949 warned that any government which secures a brute majority is likely to degenerate into dictorship. We are seeing evidence of it by discussing this idea.

**Courtesy:Indian Express:Dt:05.03.2021**

## 11. ಸದನದ ಪಾವಿತ್ರ್ಯ ಉಳಿಸಿ

ವಿಧಾನಸಭೆಯಲ್ಲಿ 'ಒಂದು ದೇಶ-ಒಂದು ಚುನಾವಣೆ ಚರ್ಚೆ ನಡೆದ ಸಂದರ್ಭದಲ್ಲಿ ವಿಷಯ ಮಂಡನೆ ವಿರೋಧಿಸಿ ಪ್ರತಿಪಕ್ಷದವರು ಗದ್ದಲ, ಧರಣಿ ನಡೆಸಿದ್ದಾರೆ. ಇದರ ನಡುವೆ ಭದ್ರಾವತಿ ಶಾಸಕರಾದ ಬಿ.ಕೆ.ಸಂಗಮೇಶ್ವರ ಅವರು ಸದನದ ಬಾವಿಗೆ ನುಗ್ಗಿ ಅಂಗಿ ಬಿಚ್ಚಿಕೊಂಡು ಪ್ರತಿಭಟಿಸಿದರು. ಇದಕ್ಕಾಗಿ ಅವರನ್ನು ಒಂದು ವಾರ ಕಲಾಪಕ್ಕೆ ಬಾರದಂತೆ ಸ್ಪೀಕರ್ ಆದೇಶಿಸಿದರು. ಎರಡು ಬಾರಿ ಕಲಾಪ ಮುಂದೂಡಿದರೂ ಗದ್ದಲ, ಕೋಲಾಹಲದಲ್ಲೇ ದಿನದ ಕಲಾಪ ಮುಗಿದಿದೆ.

'ಒಂದು ದೇಶ-ಒಂದು ಚುನಾವಣೆ' ವಿಷಯದ ಕುರಿತು ಚರ್ಚೆ ನಡೆಸಬೇಕೋ, ಬೇಡವೋ ಎಂಬ ಬಗ್ಗೆಯೇ ಸರ್ಕಾರ ಹಾಗೂ ಪಕ್ಷಗಳ ನಡುವೆ ಇತ್ಯರ್ಥವಾಗಿಲ್ಲ. ಇದನ್ನು ಈ ಮೊದಲೇ ಪರಿಹರಿಸಿಕೊಳ್ಳಬಹುದಿತ್ತು. ಮೊದಲೇ ಒಪ್ಪಿಕೊಂಡ ವಿಚಾರ ಚರ್ಚೆಯ ಸಂದರ್ಭದಲ್ಲಿ ಚರ್ಚೆಯೇ ನಡೆಯದಂತೆ ಗದ್ದಲವೆಬ್ಬಿಸುವುದಾಗಲೀ, ಏಕಪಕ್ಷೀಯವಾಗಿ ಸದನವನ್ನು ಹಿಡಿತಕ್ಕೆ ತೆಗೆದುಕೊಳ್ಳುವುದಾಗಲೀ ಸಲ್ಲದು, ಸರ್ಕಾರವನ್ನು ಪ್ರಶ್ನಿಸುವುದು, ಪ್ರತಿಭಟನೆ ನಡೆಸುವುದು ಪ್ರತಿಪಕ್ಷಗಳ ಹಕ್ಕು. ಆದರೆ ಗದ್ದಲ ನಡೆಸಿ ಚರ್ಚೆಯೇ ನಡೆಯದಂತೆ ಮಾಡುವುದು ಆಕ್ಷೇಪಾರ್ಹ. ಅಮೂಲ್ಯವಾದ ಒಂದು ದಿನ ಕಲಾಪದ ಸಮಯ ವ್ಯರ್ಥವಾಗಿದೆ. ಇಲ್ಲಿ ವೆಚ್ಚವಾಗಿರುವುದು ನೂರಾರು ಜನಪ್ರತಿನಿಧಿಗಳ, ಅಂದರೆ ರಾಜ್ಯದ ಜನತೆಯ ಅಮೂಲ್ಯ ಸಮಯ. ಹಾಗೇ ಕಲಾಪಕ್ಕಾಗಿ ನಡೆಸುವ ಒಂದು ದಿನದ ವೆಚ್ಚ ವ್ಯರ್ಥ. ಈ ನಡುವೆ ಶಾಸಕರು ತೋರಿದ ದುರ್ವರ್ತನೆಯೂ ಖಂಡನೀಯ. ಇದು ವಿಧಾನಮಂಡಲ ಇತಿಹಾಸದಲ್ಲಿ ಒಂದು ಕಪ್ಪು ಚುಕ್ಕೆ. ಸ್ಪೀಕರ್ ಕೊಠಡಿಯಲ್ಲಿ ತನಿಖೆಗೆ ಕರೆದರೂ ಹಾಜರಾಗದೆ ಅವರು ತೋರಿದ ದುಂಡಾವರ್ತನೆ ಇನ್ನು ಮುಂದೆ ಮರುಕಳಿಸದಂತೆ ನೋಡಿಕೊಳ್ಳಬೇಕು.

ವರ್ಷದಿಂದ ವರ್ಷಕ್ಕೆ, ಅಧಿವೇಶನದಿಂದ ಅಧಿವೇಶನಕ್ಕೆ ಶಾಸನ ಸಭೆಗಳು ಪ್ರಬುದ್ಧವಾಗುತ್ತ ಹೋಗಬೇಕು. ಜನಪ್ರತಿನಿಧಿಗಳ ಅಧ್ಯಯನ, ಅರ್ಹತೆ ಚರ್ಚೆಯ ಸಾಮರ್ಥ್ಯ, ಸದನದೆಡೆಗೆ ಅವರು ತೋರುವ ಗೌರವ- ಇವೆಲ್ಲ ಹೆಚ್ಚುತ್ತ ಹೋಗಬೇಕು. ವಿಧಾನಮಂಡಲ ಎನ್ನುವುದು ರಾಜ್ಯದ ಜನತೆ ಆಶೆ ಆಶೋತ್ತರಗಳನ್ನು ಬಿಂಬಿಸುವ ದೇಗುಲದ ಸಮಾನ. ಇಲ್ಲಿ ಆಗುವ ನೀತಿ ನಿರೂಪಣೆಯಿಂದಲೇ ರಾಜ್ಯದಲ್ಲಿ ಆಡಳಿತ ಸಾಕಾರಗೊಳ್ಳುತ್ತದೆ. ಇಂಥ ಕಡೆ ಬಂದು ಜನತೆಯನ್ನು ಪ್ರತಿನಿಧಿಸುವ, ಗೌರವಾರ್ಹ ಸಾಂವಿಧಾನಿಕ ಸ್ಥಾನಮಾನವನ್ನು ಹೊಂದಿದ ಶಾಸಕರು ಸದನದ ಪಾವಿತ್ರ್ಯವನ್ನು ಕಾಪಾಡಿಕೊಳ್ಳಬೇಕಾದುದು ನ್ಯಾಯ. ಈ ಹಿಂದೆ ಸದನಕ್ಕೆ ಅಪಚಾರ ಉಂಟುಮಾಡುವ ಸನ್ನಿವೇಶಗಳು ನಡೆದಿಲ್ಲವೆಂದಲ್ಲ: ನಡೆದಿವೆ. ಪ್ರತಿಯೊಂದು ಘಟನೆ ನಡೆದಾಗಲೂ ಸದನದ ಘನತೆ ಅಷ್ಟರ ಮಟ್ಟಿಗೆ ಮಂಕಾಗುತ್ತದೆ. ಸಾರ್ವಜನಿಕರ ಮುಂದೆ ಲೇವಡಿಗೆ ತುತ್ತಾಗುತ್ತದೆ. ಕಳೆದುಕೊಳ್ಳುವುದು ಸುಲಭ: ಮರುಸ್ಥಾಪಿಸುವುದು ಕಷ್ಟಕರ. ಇಂಥದು ಮುಂದೆ ನಡೆಯಬಾರದು, ಸುಸಂಸ್ಕೃತಿಯೇ ಮೇಲುಗೈ ಪಡೆಯಬೇಕು ಎಂಬುದು ಪ್ರಜಾಪ್ರಭುತ್ವವನ್ನು ಗೌರವಿಸುವ ಎಲ್ಲರ ಆಶಯ. ಇದು ವಿಧಾನಮಂಡಲ ಅಧಿವೇಶನ ನಡೆಯಬೇಕಾದ ರೀತಿಯಲ್ಲ. ಇದರಿಂದ ಪ್ರಜಾಪ್ರಭುತ್ವದ ಯಾವ ಆಶಯವೂ ಸಾಧ್ಯವಾಗದು. ಶಾಸಕರು ತಾವು ಜನರ ಪ್ರತಿನಿಧಿಗಳೆಂಬುದನ್ನೇ ಮರೆತು ವರ್ತಿಸುವುದು ಅವರಿಗೂ ಅವರಿರುವ ಶಾಸನಸಭೆಗಳಲ್ಲಿ ನಡೆಯುವ ಮಾತುಕತೆ, ಆಗುವ ಚರ್ಚೆಗಳು ಒಟ್ಟು ರಾಜ್ಯದ ಘನತೆಯನ್ನು ಎತ್ತರಿಸಬೇಕೇ ಹೊರತು ತಗ್ಗಿಸಬಾರದು. ಕರ್ನಾಟಕದ ಶಾಸನಸಭೆ, ಇಲ್ಲಿನ ನಡಾವಳಿಗಳು ಸಜ್ಜನಿಕೆ, ಮುತ್ಸದ್ದಿತನ ಜನಹಿತದ ವಿವೇಕಗಳಿಗೆ ಹೆಸರಾಗಿವೆ. ರಾಷ್ಟ್ರದ ಶಾಸನಸಭೆಗೂ ಆದರ್ಶವಾಗಬಲ್ಲ ಹತ್ತಾರು ಹೆಸರುಗಳನ್ನು ಇಲ್ಲಿ ಹೆಸರಿಸಬಹುದು. ಇದನ್ನು ಮುಂದಕ್ಕೂ ಉಳಿಸಿಕೊಳ್ಳುವುದು ಶಾಸಕರ ಹೊಣೆಗಾರಿಕೆ. ಈಗ ಆಗಿರುವ ಗೊಂದಲಗಳು ಹಾಗೂ ದುರ್ವರ್ತನೆ ವಿಧಾನಸಭೆಗೆ ಭೂಷಣ ಅಲ್ಲ. ಈ ನಿಟ್ಟಿನಲ್ಲಿ ಪ್ರತಿಯೊಂದು ಪಕ್ಷವೂ, ಪ್ರತಿಯೊಬ್ಬ ಶಾಸಕನೂ ಆತ್ಮಾವಲೋಕನ ಮಾಡಿಕೊಳ್ಳಬೇಕು.

**ಆಧಾರ: ವಿಜಯ ಕರ್ನಾಟಕ, ದಿನಾಂಕ:05.03.2021**

## 12. ದೇಶಕ್ಕೆಲ್ಲ ಒಂದೇ ಚುನಾವಣೆ

ದೇಶಕ್ಕೆ ಒಂದೇ ಬಾರಿ ಚುನಾವಣೆ ನಡೆಸುವ ವಿಚಾರ ಈಗ ಎಲ್ಲ ಕಡೆ ಚರ್ಚೆಗೆ ಬಂದಿದೆ. ಇದು ಮುಕ್ತವಾಗಿ ಪಕ್ಷಾತೀತವಾಗಿ ರಂಗಗಳಲ್ಲಿ ಚರ್ಚೆಯಾಗಬೇಕು. ಗ್ರಾಮ ಪಂಚಾಯ್ತಿಯಿಂದ ಹಿಡಿದು ಸಂಸತ್ತಿನವರೆಗೆ ಒಂದೇ ಚುನಾವಣೆ ನಡೆದರೆ ಹಣ ಮತ್ತು ಸಮಯ ಉಳಿತಾಯವಾಗುತ್ತದೆ ಎಂದು ಎಲ್ಲರೂ ಹೇಳಿದ್ದಾರೆ. ಚುನಾವಣೆ ಆಯೋಗ ಕೂಡ ಒಂದೇ ಚುನಾವಣೆ ಪರ ಧ್ವನಿ ಎತ್ತಿದೆ. ಮತದಾರರ ಪಟ್ಟಿಯನ್ನು ಒಮ್ಮೆ ಸಿದ್ಧಪಡಿಸಿದರೆ ಸಾಕು. ಅದರಲ್ಲಿ ಗ್ರಾಮ ಪಂಚಾಯ್ತಿಯಿಂದ ಸಂಸತ್‌ವರೆಗೆ ಚುನಾವಣೆ ನಡೆಸಬಹುದು. ಪ್ರತಿ 5 ವರ್ಷಕ್ಕೊಮ್ಮೆ ಮಾತ್ರ ಚುನಾವಣೆ ನಡೆಸಬೇಕು. ಮಧ್ಯಂತರದಲ್ಲಿ ಸರ್ಕಾರ ಬಿದ್ದರೆ ಪರ್ಯಾಯ ಸರ್ಕಾರ ರಚನೆ ಕಡ್ಡಾಯ. ರಾಷ್ಟ್ರಪತಿ ಆಳ್ವಿಕೆಗೆ ಅವಕಾಶವಿಲ್ಲ.

ಇಂಥ ವಿಚಾರದ ಬಗ್ಗೆ ಕರ್ನಾಟಕದ ವಿಧಾನಮಂಡಲದಲ್ಲಿ ಚರ್ಚೆ ನಡೆಯಬೇಕಿತ್ತು. ಕರ್ನಾಟಕ ಈ ವಿಚಾರದಲ್ಲಿ ಇಡೀ ದೇಶಕ್ಕೆ ಮಾರ್ಗದರ್ಶಿ ಪಾತ್ರ ವಹಿಸುತ್ತ ಬಂದಿದೆ. ಅಧಿಕಾರ ವಿಕೇಂದ್ರೀಕರಣಕ್ಕೆ ಕರ್ನಾಟಕ ಹಾಕಿದ ಮೊದಲ ಹೆಜ್ಜೆಯನ್ನು ಅನುಸರಿಸಿ ಆಗಿನ ಪ್ರಧಾನಿ ರಾಜೀವ್‌ಗಾಂಧಿ ಜಿಲ್ಲಾ ಪಂಚಾಯತ್ ವ್ಯವಸ್ಥೆಗೆ ಸಂವಿಧಾನದ ರಕ್ಷಣೆ ಒದಗಿಸಿದರು. ಲೋಕಾಯುಕ್ತ ವ್ಯವಸ್ಥೆ ಜಾರಿಗೆ ತಂದಿದ್ದು ಕರ್ನಾಟಕ. ಮಹಿಳೆಯರಿಗೆ ಮೀಸಲು ಸ್ಥಾನ ಕಲ್ಪಿಸಿಕೊಡುವ ಕೆಲಸವನ್ನು ಮಾಡಿದ್ದೂ ಕರ್ನಾಟಕವೇ. ಹೀಗಿರುವಾಗ ಒಂದೇ ಚುನಾವಣೆಯ ಬಗ್ಗೆ ಮುಕ್ತ ಚರ್ಚೆ ವಿಧಾನಮಂಡಲದಲ್ಲಿ ನಡೆದಿದ್ದರೆ ಚೆನ್ನಾಗಿತ್ತು. ನಮ್ಮ ಜನಪರ ಚಿಂತನೆಗೆ ಇದು ಸಹಕಾರಿಯಾಗುತ್ತಿತ್ತು. ಇದರ ಬಗ್ಗೆ ವಿವಿಧ ರಾಜಕೀಯ ಪಕ್ಷಗಳು ವಿಭಿನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದೆ. ಜನಹಿತ ಮತ್ತು ಅಭಿವೃದ್ಧಿಪರ ಚಿಂತನೆ ಅಗತ್ಯ. ಈಗ ವರ್ಷವಿಡೀ ಚುನಾವಣೆಗಳು ಒಂದಲ್ಲ ಮತ್ತೊಂದು ಕಡೆ ನಡೆಯುತ್ತಲೇ ಇರುತ್ತದೆ. ಇದರಿಂದ ಚುನಾವಣೆ ನೀತಿ ಸಂಹಿತೆ ಸದಾ ಜಾರಿಯಲ್ಲಿ ನಡೆಯುವುದಿಲ್ಲ. ಅಲ್ಲದೆ ಕೇಂದ್ರ ಮತ್ತು ರಾಜ್ಯದ ಅಭಿವೃದ್ಧಿಯ ಮೇಲೂ ಪರಿಣಾಮ ಆಗೇ ಆಗುತ್ತದೆ. ಕೇಂದ್ರ ಅನುದಾನ ನೀಡಿಲ್ಲ ಎಂದೋ, ರಾಜ್ಯ ಸರ್ಕಾರ ಸಹಕರಿಸುತ್ತಿಲ್ಲ ಎಂಬ ಆರೋಪಗಳು ಕೇಳಿ ಬರುತ್ತದೆ. ಇದಕ್ಕೆ ಪರಿಹಾರ ಈಗ ಲಭ್ಯವಿಲ್ಲ.

5 ವರ್ಷಕ್ಕೊಮ್ಮೆ ಚುನಾವಣೆ ನಡೆದರೂ ಸಮಸ್ಯೆ ಇದೆ. ಹೇಗಿದ್ದರೂ 5 ವರ್ಷ ಸಮಯವಿದೆ ಎಂದು ಜನ ಪ್ರತಿನಿಧಿಗಳು ನಿರ್ಲಕ್ಷ್ಯ ಮಾಡುವ ಸಂಭವವಿದೆ. ರಾಜ್ಯದಲ್ಲಿ ಎಲ್ಲಾದರೂ ಒಂದು ಕಡೆ ಚುನಾವಣೆ ಇತ್ತು ಎಂದರೆ ಆಡಳಿತದಲ್ಲಿರುವವರು ಎಚ್ಚರವಹಿಸುತ್ತಾರೆ ಎಂಬ ವಾದವೂ ಇದೆ.

ಹಿಂದಿನಿಂದಲೂ ಇದರ ಬಗ್ಗೆ ಚರ್ಚೆ ನಡೆಯುತ್ತ ಬಂದಿದೆ. 1952ರಲ್ಲಿ 7 ರಾಜ್ಯಗಳಲ್ಲಿ ಏಕಕಾಲಕ್ಕೆ ಚುನಾವಣೆ ನಡೆದಿತ್ತು. 1960ರಲ್ಲಿ ಇದು ಬದಲಾಯಿತು. 1999 ರಲ್ಲಿ ಕಾನೂನು ಆಯೋಗದ ಅಧ್ಯಕ್ಷ ನ್ಯಾಯಮೂರ್ತಿ ಜೀವನ್‌ರೆಡ್ಡಿ ಏಕಕಾಲಕ್ಕೆ ಚುನಾವಣೆ ನಡೆಸಲು ಸೂಚಿಸಿದ್ದರು. 2003ರಲ್ಲಿ ವಾಜಪೇಯಿ ಮತ್ತು ಸೋನಿಯ ಗಾಂಧಿ ಇದರ ಬಗ್ಗೆ ಚರ್ಚೆ ನಡೆಸಿದ್ದರು. 2010 ರಲ್ಲಿ ಎಲ್.ಕೆ.ಅಡ್ವಾಣಿಯವರು ಮನಮೋಹನ್ ಸಿಂಗ್ ಅವರೊಂದಿಗೆ ಮಾತುಕತೆ ನಡೆಸಿದ್ದರು. ರಾಷ್ಟ್ರಪತಿಗಳಾಗಿದ್ದ ಪ್ರಣಬ್ ಮುಖರ್ಜಿ ಮತ್ತು ಕೋವಿಂದ್ ತಮ್ಮ ಭಾಷಣದಲ್ಲಿ ಇದನ್ನು ಪ್ರಸ್ತಾಪಿಸಿದ್ದರು. 2015ರಲ್ಲಿ ಸಂಸದೀಯ ಸಮಿತಿ ಇದನ್ನು ಸೂಚಿಸಿತ್ತು. ನೀತಿ ಆಯೋಗ ಇದರ ಬಗ್ಗೆ ಮುಕ್ತ ಚರ್ಚೆ ನಡೆಯಬೇಕು ಎಂದು ಪ್ರಬಂಧವೊಂದನ್ನು ಪ್ರಕಟಿಸಿತ್ತು. ಕಾನೂನು ಆಯೋಗ 2018ರಲ್ಲಿ ಜನತಾ ಪ್ರಾತಿನಿಧ್ಯ ಕಾಯ್ದೆ ಮತ್ತು ಸಂವಿಧಾನಕ್ಕೆ ತಿದ್ದುಪಡಿ ತರುವುದು ಅಗತ್ಯ ಎಂದು ಹೇಳಿತ್ತು. ಇದರ ಬಗ್ಗೆ 25 ವೆಬಿನಾರ್‌ಗಳು ನಡೆದಿವೆ. ಒಂದು ವೇಳೆ ಏಕಕಾಲಕ್ಕೆ ಚುನಾವಣೆ ನಡೆಸಬೇಕು ಎಂದರೆ ಸಂವಿಧಾನಕ್ಕೆ ಕೆಲವು ತಿದ್ದುಪಡಿಗಳನ್ನು ತರಬೇಕಾಗುತ್ತದೆ. ಮುಖ್ಯವಾಗಿ ಸಂವಿಧಾನದ ವಿಧಿ 83. ಇದರಲ್ಲಿ ಜನಪ್ರತಿನಿಧಿಗಳ ಅವಧಿ ಎಂದಿದೆ. ಇದನ್ನು ಬದಲಿಸಬೇಕು. 85ನೇ ಲೋಕಸಭೆ ಸದಸ್ಯರ ಅವಧಿಗೆ ಸಂಬಂಧಿಸಿದ್ದು.

172ನೇ ವಿಧಿ ವಿಧಾನಸಭೆ ಅವಧಿಗೆ ಸಂಬಂಧಿಸಿದ್ದು. 179ನೇ ವಿಧಿ ವಿಧಾನಸಭೆ ಸದಸ್ಯರ ಕಾಲಾವಧಿಗೆ ಸಂಬಂಧಿಸಿದ್ದು. ಇವುಗಳಿಗೆ ತಿದ್ದುಪಡಿಯಲ್ಲದೆ ಜನತಾ ಪ್ರಾತಿನಿಧ್ಯಕ್ಕೆ ಕಾಯ್ದೆಯಲ್ಲೂ ಬದಲಾವಣೆ ತರಬೇಕು. ಈಗ ಗ್ರಾಮ ಪಂಚಾಯಿತಿಯಿಂದ ಹಿಡಿದು ಜಿಲ್ಲಾ ಪಂಚಾಯಿತಿವರೆಗೆ ರಾಜ್ಯ ಚುನಾವಣೆ ಆಯೋಗ ಚುನಾವಣೆ ನಡೆಸುತ್ತಿದೆ. ಅದೂ ಕೂಡ ಕೇಂದ್ರ ಚುನಾವಣೆ ಆಯೋಗ ಸಿದ್ಧಪಡಿಸಿದ ಮತದಾರರ ಪಟ್ಟಿಯನ್ನು ಬಳಸಬೇಕು. ಒಂದೇ ಬಾರಿ ಚುನಾವಣೆ ನಡೆಸಿದಾಗ ರಾಷ್ಟ್ರೀಯ ಪಕ್ಷಗಳಿಗೆ ಅನುಕೂಲ. ಪ್ರಾದೇಶಿಕ ಪಕ್ಷಗಳಿಗೆ ಅಡ್ಡಿಯಾಗಲಿದೆ ಎಂಬ ಅಭಿಪ್ರಾಯವೂ ಇದೆ. ಇದರ ಬಗ್ಗೆ ಮುಕ್ತ ಚರ್ಚೆ ನಡೆಯಬೇಕು. ಲೋಕಸಭೆ ಕ್ಷೇತ್ರಗಳ ಪುನರ್ ವಿಂಗಡಣೆ ನಡೆದಾಗ ಇದರ ಬಗ್ಗೆ ಚಿಂತನೆ ನಡೆಸಿದ್ದರೆ ಅನುಕೂಲವಾಗುತ್ತಿತ್ತು.

**ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:06.03.2021**

## 13.If followed well parliamentary process can Improve quality of legislation

The second half of Parliament's budget session began yesterday. The priority will be to complete unfinished tasks related to the Budget and to give effect to government proposals. In addition, the government indicated it has an ambitious legislative agenda and plans to introduce bills covering a wide spectrum of subjects. The current session is taking place in the backdrop of farmers persisting with their agitation against the three central farm laws, which were passed amidst controversy last September.

The events leading to the passage of the laws and their fallout highlight the importance of parliamentary debate. Parliament represents diverse interests and ideally legislation that goes through its scrutiny should cover all angles. The process lowers the probability of poorly designed laws and also provides an outlet for counterviews. It's a safety valve meant to avoid a situation such as the one where the government offered to negotiate clauses of the farm laws and even temporarily suspend its operation during negotiations with representatives of agitating farmers. It's the duty of elected representatives to scrutinise legislation in detail and seek explanations from the bureaucracy. Parliamentary standing committees carry out this function all the time.

In the current session, government plans to table important economic legislation. Among them is a bill to establish a new development financial institution. Also on the agenda is a bill to regulate cryptoassets and introduce official digital currency. Getting the design right and anticipating consequences are essential if these legislations are to have an impact. These bills deserve an informed debate in Parliament and a thorough scrutiny through a parliamentary committee. Introducing laws in haste can not only undermine good intentions, it can also mask the extent of support they may draw from the silent majority. Only Parliament can offset these risks.

The government needs to take the initiative and reach out to the opposition. Opposition too must recognise the dignity of the institution of Parliament. The country benefits if Parliament functions smoothly and an opportunity is provided for meaningful debate. In this context, the idea of truncating the current session on account of elections to five assemblies makes no sense. The Parliament represents a much wider base than

the states and Union territory headed for elections. It should continue to function and people deserve a full session. India's Parliament can do wonders if parliamentarians give it a chance.

**Courtsey:Times of India, Dated:09.03.2021**

## 14.ರಾಜಕಾರಣಕ್ಕೆ ಒಂದು ರಾಷ್ಟ್ರ ಒಂದು ಚುನಾವಣೆ ಚರ್ಚೆ ಬಲಿ

'ಒಂದು ರಾಷ್ಟ್ರ ಒಂದು ಚುನಾವಣೆ' ವಿಷಯ ರಾಜ್ಯ ವಿಧಾನಮಂಡಲದಲ್ಲಿ ಎರಡು ದಿನ ದೊಡ್ಡ ಮಟ್ಟದಲ್ಲೇ ಸದ್ದು ಮಾಡಿತ್ತಾದರೂ ಮೂಲ ಉದ್ದೇಶ ಸದ್ಯಕ್ಕೆ ಸಾಕಾರಗೊಳ್ಳಲಿಲ್ಲ. ಆದರೆ, ವಿಧಾನಸಭೆಯಲ್ಲಿ ವಿಷಯ ಮಂಡನೆ ಮೂಲಕ ಸದನದ ಕಡತಕ್ಕೆ ಸೇರಿಸುವ ಆಡಳಿತಾರೂಢ ಬಿಜೆಪಿಯ 'ಗುರಿ' ಈಡೇರಿತು. ಚರ್ಚೆಗೆ ನಾವು ಅವಕಾಶ ಕೊಡಲಿಲ್ಲ ಎಂಬ ಪ್ರತಿಪಕ್ಷ ಕಾಂಗ್ರೆಸ್‌ನ 'ಹಠ' ಸಾಧನೆಯಾಯಿತು. ಜೆಡಿಎಸ್ 'ಅಸಮ್ಮತಿ' ದಾಖಲಿಸಿ ಮೌನವಹಿಸಿದಂತಾಯಿತು.

ಆದರೆ, ಎರಡು ದಿನದ ವಿದ್ಯಮಾನಗಳನ್ನು ಯಾರೂ ಒಪ್ಪುವಂತಿರಲಿಲ್ಲ. ಹತ್ತು ದಿನಗಳ ಹಿಂದೆ ವಿಧಾನಸೌಧ ಬ್ಯಾಂಕ್ವೆಟ್ ಹಾಲ್‌ನಲ್ಲಿ ಸ್ಪೀಕರ್–ಸಭಾಪತಿಯವರ ಸಮ್ಮುಖದಲ್ಲಿ ನಡೆದ ಸಂಸದೀಯ ಮೌಲ್ಯಗಳ ಕುಸಿತ ಆತ್ಮಾವಲೋಕನ ಸಂವಾದದಲ್ಲಿ ವ್ಯಕ್ತವಾದ ಅಭಿಪ್ರಾಯಗಳು, ಅದೇ ಸ್ಪೀಕರ್–ಸಭಾಪತಿ ಪೀಠದ ಮುಂದೆ ಎರಡು ದಿನ ನಡೆದ ಘಟನಾವಳಿಗಳು ತದ್ವಿರುದ್ಧ, ಎರಡೂ ದಿನ ನಡೆದದ್ದು ರಾಜಕೀಯ ಮೇಲಾಟವೇ.

ಎರಡು ದಿನ ಸದನದಲ್ಲಿ ನಡೆದ 'ಪ್ರಹಸನ ಗಮನಿಸಿದರೆ 'ಒಂದು ರಾಷ್ಟ್ರ, ಒಂದು ಚುನಾವಣೆ' ವಿಷಯದ ಚರ್ಚೆಗಾಗಿ ಎರಡು ದಿನಗಳ ವಿಶೇಷ ಅಧಿವೇಶನ ನಿಗದಿಪಡಿಸುವ ವಿಚಾರದಲ್ಲಿ ಆಡಳಿತ ಹಾಗೂ ಪ್ರತಿಪಕ್ಷಗಳ ನಡುವೆ ಒಮ್ಮತ ಏರ್ಪಡದಿರುವುದು ಸ್ಪಷ್ಟ ಸಂವಿಧಾನ ಕುರಿತು. ವಿಶೇಷ ಚರ್ಚೆ, ಸಂಸದೀಯ ಮೌಲ್ಯಗಳ ಕುಸಿತ ತಡೆಯುವಿಕೆ ಆತ್ಮಾವಲೋಕನ ಸಂವಾದ ಆಯೋಜನೆ ವಿಚಾರದಲ್ಲಿ ಪ್ರತಿಪಕ್ಷಗಳ ಸಹಮತ ಹಾಗೂ ಸಹಕಾರ ಪಡೆದಿದ್ದ ಸ್ಪೀಕರ್ ವಿಶ್ವೇಶ್ವರ ಹೆಗಡೆ, ಕಾಗೇರಿ ಅವರಿಗೆ ಈ ವಿಚಾರದಲ್ಲಿ ಅದು ಸಾಧ್ಯವಾಗದಿರುವುದು ಸತ್ಯ. ನಾಲ್ಕೈದು ಬಾರಿ ಸದನ ಮುಂದೂಡಿಕೆಯಾಗಿ ಕೊನೆಗೂ ಚರ್ಚೆಯೇ ಆಗದೆ ಎರಡು ಸದನಗಳ ಕಲಾಪ ಬರ್ಖಾಸ್ತುಗೊಳ್ಳುವಂತಾಗಿದ್ದು ದುರಂತ.

**ಪ್ರತಿಷ್ಠೆ ಬೇಕಿರಲಿಲ್ಲ:** 'ಒಂದು ರಾಷ್ಟ್ರ, ಒಂದು ಚುನಾವಣೆ ವಿಚಾರ ಮಹತ್ವದ್ದು ಹಾಗೂ ಚರ್ಚಾರ್ಹ. ವಿರೋಧ ಇದ್ದರೆ ಅಥವಾ ಭಿನ್ನಾಭಿಪ್ರಾಯ ಹೊಂದಿದ್ದರೆ ಸದನದಲ್ಲಿ ಚರ್ಚೆ ವೇಳೆ ವ್ಯಕ್ತಪಡಿಸಲು ಅವಕಾಶ ಇದ್ದೇ ಇತ್ತು. ಕರ್ನಾಟಕ ವಿಧಾನಸಭೆಯಲ್ಲಿ ಚರ್ಚೆ ಮಾಡಿದ ತಕ್ಷಣ ಆ ಬಗ್ಗೆ ನಿರ್ಣಯ ಅಥವಾ ಅಂತಿಮ ತೀರ್ಮಾನವೇನೂ ಆಗುತ್ತಿರಲಿಲ್ಲ. ಇದು ಆರ್.ಎಸ್.ಎಸ್ ಹಾಗೂ ಪ್ರಧಾನಿ ನರೇಂದ್ರ ಮೋದಿಯವರ ಅಜೆಂಡಾ ಎಂದು ಆರೋಪಿಸಿದ ಕಾಂಗ್ರೆಸ್ ಅದು ಹೇಗೆ ಎಂಬುದನ್ನು ತಿಳಿಸಬಹುದಿತ್ತು. ಅದು ಬಿಟ್ಟು ಎರಡೂ ದಿನ ಪ್ರತಿಭಟನೆಗೆ ಸೀಮಿತವಾಗಿದ್ದು ಯಾವ ರೀತಿಯ ನಡೆ ಎಂಬುದು ಅರ್ಥವಾಗುತ್ತಿಲ್ಲ. ಈ ವಿಚಾರದಲ್ಲಿ ಪ್ರಾರಂಭದಲ್ಲಿ ಮೌನವಹಿಸಿದ್ದ ಜೆಡಿಎಸ್ ಶಾಸಕರು, ಕಾಂಗ್ರೆಸ್ ಪ್ರತಿಭಟನೆಯಿಂದ ಜ್ಞಾನೋದಯವಾದಂತೆ ಮಧ್ಯಾಹ್ನ ಸಭಾತ್ಯಾಗ ಮಾಡಿದರು. ಏಕ ಕಾಲದ ಚುನಾವಣೆ ಪ್ರಾದೇಶಿಕ ಪಕ್ಷಗಳಿಗೆ ಮಾರಕ ಎಂಬುದು ಅವರ ವಾದ ಚರ್ಚೆ ಸಂದರ್ಭದಲ್ಲಿ ಹೇಗೆ ಮಾರಕ ಎಂಬುದಾದರೂ ಹೇಳಬಹುದಿತ್ತಾದರೂ ಅದೂ ಆಗಲಿಲ್ಲ. ರಾಜ್ಯ ವಿಧಾನಮಂಡಲದ ಉಭಯ ಸದನಗಳಲ್ಲಿ ವಿಷಯ ಎರಡೂ ದಿನ ಚರ್ಚೆಯಾಗಿದ್ದರೆ ರಾಜ್ಯದ ಜನತೆಗೂ ಸ್ಪಷ್ಟತೆ ಸಿಗುತ್ತಿತ್ತು. ಪರ ಅಥವಾ ವಿರೋಧ ಯಾಕೆ ಎಂಬುದು ಗೊತ್ತಾಗುತ್ತಿತ್ತು. ಆದರೆ, ಇದ್ಯಾವುದಕ್ಕೂ ಅವಕಾಶವೇ ಆಗಲಿಲ್ಲ.

ಈ ವಿಚಾರದಲ್ಲಿ ಬಿಜೆಪಿ, ಕಾಂಗ್ರೆಸ್ ಹಾಗೂ ಜೆಡಿಎಸ್‌ಗೆ ಪ್ರತಿಷ್ಠೆ ಬೇಕಿರಲಿಲ್ಲ. ಆಡಳಿತ ಪಕ್ಷ ಹಾಗೂ ಪ್ರತಿಪಕ್ಷಗಳು ಜವಾಬ್ದಾರಿಯಿಂದ ವರ್ತಿಸಬೇಕಿತ್ತು. ಸ್ಪೀಕರ್ ಹಾಗೂ ಸಭಾಪತಿಯವರು ಪೂರ್ವಭಾವಿಯಾಗಿ ಪ್ರತಿಪಕ್ಷ ನಾಯಕರು ಹಾಗೂ ಸಭಾನಾಯಕರ ಮುಖಾಮುಖಿ ಸಭೆ ನಡೆಸಬಹುದಿತ್ತು. ಇಲ್ಲವೇ ಕಲಾಪ ಸಲಹಾ ಸಮಿತಿಯಲ್ಲಿ ಚರ್ಚಿಸಿ ಒಮ್ಮತದ ತೀರ್ಮಾನ ಕೈಗೊಳ್ಳಬಹುದಿತ್ತು ಎಂಬ ವ್ಯಾಖ್ಯಾನಗಳು ಇವೆ.

ಗದ್ದಲ–ಪ್ರತಿಭಟನೆ ನಡುವೆಯೇ ಒಂದು ರಾಷ್ಟ್ರ ಒಂದು ಚುನಾವಣೆ ಕುರಿತು ಸ್ಪೀಕರ್ ವಿಶ್ವೇಶ್ವರ ಹೆಗಡೆ, ಕಾಗೇರಿ ಅವರು 18 ಪುಟಗಳ ಪುಸ್ತಕದ ಭಾಷಣ ಮಾಡುವಂತಾಗಿದ್ದು, ಸ್ಪೀಕರ್ ಆರ್‌ಎಸ್‌ಎಸ್ ಏಜೆಂಟ್ ಎಂಬ ಘೋಷಣೆ ಸದನಕ್ಕೆ ಗೌರವ ತರುವಂತದ್ದಂತೂ ಅಲ್ಲವೇ ಅಲ್ಲ. ಚರ್ಚೆಯಲ್ಲಿ ಪಾಲ್ಗೊಳ್ಳುವ ವಿಚಾರದಲ್ಲಿ ಕಾಂಗ್ರೆಸ್‌ನಿಂದ 19 ಶಾಸಕರ ಹೆಸರು ನೀಡಲಾಗಿತ್ತು. ಆದರೆ ಕೊನೆಯ ಕ್ಷಣದಲ್ಲಿ ಎರಡೂ ಪಕ್ಷಗಳ ಸದಸ್ಯರು ಚರ್ಚೆಯಿಂದ ದೂರ ಉಳಿದರು. ಇದೂ ಸಹ ವಿಚಿತ್ರವೇ.

ಮಾಜಿ ಸ್ಪೀಕರ್ ರಮೇಶ್‌ಕುಮಾರ್ ಅವರು ಪ್ರತಿಪಕ್ಷ ನಾಯಕ ಸಿದ್ದರಾಮಯ್ಯ ಕೆಪಿಸಿಸಿ ಅಧ್ಯಕ್ಷ ಡಿ.ಕೆ.ಶಿವಕುಮಾರ್, ಹಿರಿಯ ನಾಯಕ ಹೆಚ್.ಕೆ.ಪಾಟೀಲ್ ಜೊತೆಗೂಡಿ ಸಭೆ ನಡೆಸಿದ ನಂತರ ವಿಚಾರದಲ್ಲಿ ಸದನದ ಒಳಗೆ ಕಾಂಗ್ರೆಸ್‌ನ ಕಾರ್ಯತಂತ್ರ ಬದಲಾಗಿರಬಹುದು. ಚರ್ಚೆಯಲ್ಲಿ ಪಾಲ್ಗೊಳ್ಳಲು ಹೆಸರು ಕೊಟ್ಟಿದ್ದು ನಿಜ. ಆದರೆ, ಯಾವ ನಿಯಮಾವಳಿ ಪ್ರಕಾರ ಚರ್ಚೆಗೆ ಅವಕಾಶ ಎಂಬುದರ ಬಗ್ಗೆ ನಮಗೆ ಸ್ಪಷ್ಟನೆ ಬೇಕಿತ್ತು. ಪ್ರತಿಪಕ್ಷ ನಾಯಕರು ಎದ್ದು ನಿಂತು ಮಾತನಾಡುತ್ತಿರುವಾಗಲೇ ಸ್ಪೀಕರ್ ಅವರು ಭಾಷಣ ಆರಂಭಿಸಿಬಿಟ್ಟರು. ಹೆಚ್.ಕೆ.ಪಾಟೀಲ್ ಅವರು ಕ್ರಿಯಾಲೋಪ ಎತ್ತಿದರೂ ಲೆಕ್ಕಕ್ಕೆ ತೆಗೆದುಕೊಳ್ಳಲಿಲ್ಲ. ಹೀಗಿರುವಾಗ ಪ್ರತಿಭಟನೆ ಮಾಡದೆ ನಮಗೆ ದಾರಿ ಇರಲಿಲ್ಲ ಎಂಬುದು ಕಾಂಗ್ರೆಸ್ ವಾದ.

ಕರ್ನಾಟಕ ವಿಧಾನಸಭೆಯ ಕಾರ್ಯವಿಧಾನ ಹಾಗೂ ನಡವಳಿಕೆಗಳ ನಿಯಮ 363ರಡಿ ವಿಧಾನ ಸಭಾಧ್ಯಕ್ಷರ ವಿವೇಚನೆಯಡಿ ಅವಕಾಶ ಕೊಟ್ಟು ನಿಗದಿಪಡಿಸಿದ್ದೇನೆ ಎಂಬುದು ಸ್ಪೀಕರ್ ವಿಶ್ವೇಶ್ವರ ಹೆಗಡೆ, ಕಾಗೇರಿ ಅವರ ಸಮರ್ಥನೆ. ಆದರೆ, ಇದನ್ನು ಒಪ್ಪಲು ಕಾಂಗ್ರೆಸ್ ಸಿದ್ಧವಿರಲಿಲ್ಲ.

ಚರ್ಚೆಯಲ್ಲಿ ಪಾಲ್ಗೊಳ್ಳಲು ನಮ್ಮ ಪಕ್ಷದಿಂದ 15 ಮಂದಿ ಮಾತನಾಡಲು ಸಿದ್ಧರಿದ್ದರೂ ಕಾಂಗ್ರೆಸ್ ಪ್ರತಿಭಟನೆ ಮೂಲಕ ಅವರ ಹಕ್ಕುಗಳನ್ನೂ ಕಸಿದುಕೊಂಡಂತಾಯಿತು. ಪ್ರತಿಪಕ್ಷ ಸದನ ತಮ್ಮ ಹಿಡಿತಕ್ಕೆ ತೆಗೆದುಕೊಂಡಿದ್ದು ಯಾವ ನ್ಯಾಯ ಎಂಬ ಬಿಜೆಪಿ ನಾಯಕರ ಪ್ರಶ್ನೆಗೂ ಉತ್ತರ ಸಿಗಲಿಲ್ಲ. ಒಂದು ಹಂತದಲ್ಲಿ ಮಾಜಿ ಸ್ಪೀಕರ್ ಆಗಿ ಕೆಲಸ ಮಾಡಿದವರು ಘನತೆಗೆ ತಕ್ಕಂತೆ ಮಾತನಾಡಿ ಎಂದು ವಿಶ್ವೇಶ್ವರ ಹೆಗಡೆ, ಕಾಗೇರಿ ಅವರು ಸಿಟ್ಟಾಗಿ ಹೇಳಿದ್ದು ನಿಮ್ಮ ಕೃಪೆಯಿಂದ ನನ್ನ ಘನತೆ ಹೆಚ್ಚಿಸಿಕೊಳ್ಳಬೇಕಾಗಿಲ್ಲ ಎಂದು ರಮೇಶ್‌ಕುಮಾರ್ ಅಷ್ಟೇ ಕೋಪದಿಂದ ಮಾತನಾಡಿದ್ದು ಅನಗತ್ಯವಾಗಿತ್ತು.

ಒಟ್ಟಾರೆ, ಇಲ್ಲಿ ಯಾರಿಗೂ ಸ್ಪಷ್ಟತೆ ಅಥವಾ ತಾರ್ಕಿಕ ಅಂತ್ಯ ಬೇಕಿರಲಿಲ್ಲ. ಕರ್ನಾಟಕದಲ್ಲಿ ಬಿಜೆಪಿಯದೇ ಸರ್ಕಾರ ಅಧಿಕಾರದಲ್ಲಿರುವುದರಿಂದ ದೇಶದಲ್ಲಿ ಮೊದಲ ಬಾರಿಗೆ ಒಂದು ರಾಷ್ಟ್ರ, ಒಂದು ಚುನಾವಣೆ ವಿಷಯ ವಿಧಾನ ಸಭೆಯಲ್ಲಿ ಮಂಡಿಸಿದಂತಾಗಿದೆ ಎಂಬ ಹಿಗ್ಗು ಆಡಳಿತಾರೂಢ ಬಿಜೆಪಿಯವರಿಗೆ. ಏನೇ ಆದರೂ ನಾವು ಚರ್ಚೆಗೆ ಅವಕಾಶ ಕೊಡಲಿಲ್ಲ ಎಂಬ ಸಂ'ತೃಪ್ತಿ' ಪ್ರತಿಪಕ್ಷ ಕಾಂಗ್ರೆಸ್‌ಗೆ, ಎರಡೂ ರಾಷ್ಟ್ರೀಯ ಪಕ್ಷಗಳ ಜಟಾಪಟಿಯಲ್ಲಿ ನಾವು ಕಳೆದುಹೋಗುವಂತಾಗುತ್ತಿದೆಯಲ್ಲಾ ಎಂಬ ಶಾಶ್ವತ ಅಸಮಾಧಾನ ಜೆಡಿಎಸ್‌ನದು. ವಿಧಾನಸಭೆಯಲ್ಲಿ ಎರಡು ದಿನವೂ ಜಟಾಪಟಿಗೆ ಕಲಾಪ ಬಲಿಯಾದರೆ, ವಿಧಾನಪರಿಷತ್‌ನಲ್ಲಿ ಎರಡು ದಿನ ಮಧ್ಯಾಹ್ನದವರೆಗೂ ಪ್ರಶ್ನೋತ್ತರ ಸೇರಿ ಇತರೆ ಕಲಾಪಗಳು ನಡೆದಿದ್ದು ಸಮಾಧಾನಕರ.

**ಆಧಾರ: ಉದಯವಾಣಿ, ದಿನಾಂಕ:10.03.2021**

## 15. ಸ್ಪೀಕರ್‌ಗಳಿಗಿದು ಕಾಲವಲ್ಲ

ಸಂಸತ್ತು ಹಾಗೂ ವಿಧಾನಮಂಡಲದ ಸದನಗಳ ಅಧ್ಯಕ್ಷರಾಗುವುದು ಒಂದು ಕಾಲದಲ್ಲಿ ಪ್ರತಿಷ್ಠೆಯ ಸಂಗತಿಯಾಗಿತ್ತು. ಆದರೆ, ಕಾಲದ ಉರುಳಿನಲ್ಲಿ ಸಿಕ್ಕಿ ರಾಜಕಾರಣವೆಂಬುದು ದಯನೀಯ ಸ್ಥಿತಿಗೆ ತಲುಪಿದೆ ನಂತರ ಸಭಾಧ್ಯಕ್ಷರ ಸ್ಥಾನವೆಂಬುದು ಯಾರಿಗೂ ಬೇಡದ ಆದರೆ, ಬಲವಂತವಾಗಿ ನಿರ್ವಹಿಸಲೇಬೇಕಾದ ಒಂದು ಹೊಣೆ. ಇದಕ್ಕೆ ಯಾವ ರಾಜ್ಯವೂ ಅಪವಾದವಿಲ್ಲ. ದೇಶದ ಸ್ಥಿತಿಯೂ ಇದೆ. ಅಷ್ಟೆ ಏಕೆ ಜಗತ್ತಿನ ವಿದ್ಯಮಾನಗಳನ್ನು ಆಧರಿಸಿ ಹೇಳುವುದಾದರೆ ಅಮೆರಿಕದ ಸಭಾಧ್ಯಕ್ಷರ ಸ್ಥಿತಿ ಕೂಡ ಭಿನ್ನವಾಗಿಯೇನೂ ಇಲ್ಲ. ಇದಕ್ಕೆಲ್ಲ ಮುಖ್ಯ ಕಾರಣ, ಸಾಮೂಹಿಕ ನಾಯಕತ್ವದ ಜಾಗದಲ್ಲಿ ವ್ಯಕ್ತಿ ಕೇಂದ್ರಿತ ರಾಜಕಾರಣ ಭುಗಿಲೆದ್ದು ನಿಂತಿರುವುದು. ಶಾಸನಸಭೆಗಳ ಒಳಗೆ ಇದಕ್ಕೆ ಕೊರಳು

ಕೊಡಬೇಕಾದವರು ಸಭಾಧ್ಯಕ್ಷರು, ಕಲಾಪವನ್ನು ಸರಿದೂಗಿಸಿಕೊಂಡು ಹೋಗುವ ಉದ್ದೇಶದಿಂದ ಎಲ್ಲರನ್ನೂ ಸಂಭಾಳಿಸಬೇಕಾದ ಅನಿವಾರ್ಯತೆಯಲ್ಲಿ ಹಲವಾರು ಬಾರಿ ನಿಷ್ಪಕ್ಷಪಾತದ ಜಾಗದಲ್ಲಿ ಪಕ್ಷಪಾತಿಯಾಗಿ ಗೊತ್ತಿಲ್ಲದೆಯೋ ಅಥವಾ ಗೊತ್ತಾಗಿಯೋ ನಡೆದುಕೊಳ್ಳುವುದು ಈಗಿನ ಕಾಲದ ವಿದ್ಯಮಾನ.

ಭಾರತದ ಸಂಸತ್ ನಡವಳಿಕೆಯಲ್ಲಿ ಪಾತ್ರಃಸ್ಮರಣೀಯರಾದ ಸಭಾಧ್ಯಕ್ಷರೆಂದರೆ ಪಿ.ಜಿ.ಮಾವಳಂಕರ್ ಹಾಗೂ ಅನಂತಶಯನ ಅಯ್ಯಂಗಾರ್. ಸದನದ ಸದಸ್ಯರ ಭಾವನೆಗಳನ್ನು ಮುಕ್ತವಾಗಿ ಆಲಿಸಿ, ಅಗತ್ಯ ಬಿದ್ದಾಗ ಬಾರು ಕೋಲನ್ನು ಬಳಸಿ, ತಂಟೆ ಎಬ್ಬಿಸುವವರಿಗೆ ಅನಾಮತ್ತಾಗಿ ಮಾತನಾಡುವ ಅವಕಾಶವನ್ನು ಕೊಟ್ಟು ಪಾಠ ಕಲಿಸಿರುವ ಈ ಸಭಾಧ್ಯಕ್ಷರ ನಡೆ ನುಡಿಗೆ ಆಧಾರವಾಗಿದ್ದದ್ದು ಲೋಕಾನುಭವದ ಜೊತೆಗೆ ಲೋಕನಿಷ್ಠೆ ಮೂಲಕ ಕಂಡುಕೊಂಡ ಲೋಕದೃಷ್ಟಿ ಇಂತಹ ಲೋಕದೃಷ್ಟಿಯನ್ನು ಜತನವಾಗಿ ಅರಗಿಸಿಕೊಳ್ಳಲು ಓದಿನ ವಿಸ್ತಾರದ ಜೊತೆಗೆ ಜ್ಞಾನದ ವಿನ್ಯಾಸವನ್ನು ಹೆಚ್ಚಿಸಿಕೊಳ್ಳಲು ವಿದ್ವಾಂಸರ ಜೊತೆಗಿನ ಒಡನಾಟ ಒಟ್ಟಾರೆ ಶಾಸನಸಭೆ ಹಾಗೂ ಸಂಸತ್ತಿನ ಕಲಾಪಗಳ ಗುಣಮಟ್ಟ ಮಾದರಿಯಾಗಿರುವಂತೆ ಮಾಡುವುದು ನಿಜ. ಕಾಲಧರ್ಮವೂ ಕೂಡಾ ಹಾಗೆಯೇ ಇತ್ತು. ಇನ್ನೊಂದರ್ಥದಲ್ಲಿ ಹೇಳುವುದಾದರೆ ಕಾಲವಾಗಲೀ ಅಥವಾ ಧರ್ಮವಾಗಲೀ ಬದಲಾಗುವುದಿಲ್ಲ. ಬದಲಾಗುವುದು ಮನುಷ್ಯ ಮಾತ್ರದವರು. ಮನುಷ್ಯನ ವರ್ತನೆಯಿಂದ ಬದಲಾಗುವ ಕಾಲ ಧರ್ಮಗಳ ಪರಿಣಾಮವೇ ಬದಲಾಗುವ ಜೀವನ ಧರ್ಮ. ಸರ್ವಾಂತರ್ಯಾಮಿ ರೋಗದಿಂದ ನರಳುವ ಮನುಷ್ಯನಿಗೆ ಸ್ವಂತಿಕೆ ಇಲ್ಲದಿದ್ದರೂ ಸ್ವಂತದ ಮೂಲಕವೇ ಬ್ರಹ್ಮಾಂಡ ಜರುಗಬೇಕು ಎಂಬ ಛಲ. ಇಂತಹ ಛಲಗಾರರ ಸಮಾಜದಿಂದಲೇ ಮೂಡಿ ಬರುವ ಚುನಾಯಿತ ಪ್ರತಿನಿಧಿಗಳ ಸಂಗಮ ಕ್ಷೇತ್ರವೇ ಶಾಸನಸಭೆ ಹಾಗೂ ಸಂಸತ್ತು. ವಸ್ತುಸ್ಥಿತಿ ಹೀಗಿರುವಾಗ ಸದನಕ್ಕೆ ಬರುವವರೆಲ್ಲರೂ ಛಲದಂಕಮಲ್ಲರೇ ಆಗಿಹೋದಾಗ ಇಂತಹವರನ್ನು ನಿಯಮಾವಳಿಯ ಹದ್ದುಬಸ್ತಿನಲ್ಲಿ ಇಡುವುದು ನಿಜಕ್ಕೂ ಸಭಾಧಕ್ಷರಾದವರಿಗೆ ದೊಡ್ಡ ಸವಾಲು.

ಕರ್ನಾಟಕದ ವಿಧಾನಸಭಾಧ್ಯಕ್ಷ ವಿಶ್ವೇಶ್ವರ ಹೆಗಡೆ, ಕಾಗೇರಿ ಅವರು ಸದನದಲ್ಲಿ ಹೊರ ಹಾಕಿದ ಒಡಲಾಳದ ಆಕ್ರೋಶದ ಮಾತುಗಳನ್ನು ಕಂಡಾಗ ವಸ್ತುಸ್ಥಿತಿಯ ದರ್ಶನಕ್ಕೆ ಅವಕಾಶ. ಕಾಗೇರಿ ಅವರ ಅಭಿಪ್ರಾಯಗಳ ಸರಿ ತಪ್ಪುಗಳ ವಿಶ್ಲೇಷಣೆ ಸಾಧುವಲ್ಲ. ಸದನದಲ್ಲಿ ಆಡುವ ಮಾತುಗಳಿಗೆ ಕಾನೂನಿನ ರಕ್ಷಣೆ ಇರುವಾಗ ಅದನ್ನು ಪ್ರಶ್ನಿಸುವುದು ಔಚಿತ್ಯಪೂರ್ಣ ನಡೆಯಾಗಬಹುದು. ಆದರೆ, ಇಂತಹ ಅಭಿಪ್ರಾಯ ವ್ಯಕ್ತಪಡಿಸಲು ಉದ್ಭವಿಸಿದ ವಾತಾವರಣದ ಮೇಲೆ ಗಮನಹರಿಸಿದಾಗ ಸಭಾಧ್ಯಕ್ಷರ ಅಧಿಕಾರ ವ್ಯಾಪ್ತಿ ಎಂಬುದು ಕಿಷ್ಕಂಧೆಯ ಸ್ವರೂಪ ಪಡೆಯುತ್ತಿರುವುದು ಗೊತ್ತಾಗುತ್ತದೆ. ವಿಧಾನಸಭಾಧ್ಯಕ್ಷರಾದವರು ಸದನದ ಸಾರ್ವಭೌಮರು. ಅವರ ಆಣತಿಯಂತೆಯೇ ಕಲಾಪ ನಡೆಯಬೇಕು. ಅವರು ನಿಂತರೆ ಉಳಿದ ಸದಸ್ಯರು ಕೂರಬೇಕು. ಸಭಾಧ್ಯಕ್ಷರು ಅಥವಾ ಸ್ಪೀಕರ್ ಎಂದು ಗುರುತಿಸಬೇಕಾದರೆ ಅಂತಹ ಸ್ಪೀಕರ್ ಅಪರೂಪಕ್ಕೆ ಮಾತನಾಡಬೇಕು. (A good Speaker is one speaks rarely) ವಿಚಿತ್ರವೆಂದರೆ ಈಗಿನ ಸ್ಪೀಕರ್‌ಗಳು ಸದಸ್ಯರಿಗಿಂತಲೂ ಹೆಚ್ಚಿನ ಪ್ರಮಾಣದಲ್ಲಿ ಮಾತನಾಡಲೇಬೇಕಾದ ಅನಿವಾರ್ಯತೆ. ಏಕೆಂದರೆ, ಪಕ್ಷಾಧಾರಿತವಾಗಿ ಅಥವಾ ನಾಯಕರ ಅಣತಿಗೆ ಆಧಾರವಾಗಿ ಸದಸ್ಯರು ಮಾತಿನ ಯುದ್ಧಕ್ಕೆ ತೊಡೆ ತಟ್ಟಿ ಧುಮುಕುವ ಪರಿಣಾಮ ಇದನ್ನು ತಹಬದಿಗೆ ತರಲು ಸ್ಪೀಕರ್ ಶಸ್ತ್ರರಹಿತವಾಗಿ ಮಧ್ಯಪ್ರವೇಶಿಸಬೇಕಾದ ಪರಿಸ್ಥಿತಿ ಇದು ನಿಜಕ್ಕೂ ಉತ್ತಮ ಸದನದ ಲಕ್ಷಣವಲ್ಲ.

ಕರ್ನಾಟಕ ವಿಧಾನಮಂಡಲದಲ್ಲಿ ಮೊದಲ ಬಾರಿಗೆ ಮಾತುಗಾರಿಕೆಗೆ ಕುಮ್ಮಕ್ಕು ನೀಡಿತು. ರೇಸಿನಲ್ಲಿ ಸೋತ ಕುದುರೆಯಂತಾಗಿದ್ದ ಕಾಂಗ್ರೆಸ್ ಮುಖಂಡರ ಅತೃಪ್ತಿ, ಮುಖ್ಯಮಂತ್ರಿ ಪಟ್ಟವನ್ನು ಅದೃಷ್ಟದಾಟದಲ್ಲಿ ವಂಚಿತರಾಗಿದ್ದ ಬಂಗಾರಪ್ಪ ಬಣದ ಶಾಸಕರ ಆಕ್ರೋಶದ ನಡುವೆ ಮೊದಲ ಬಾರಿಗೆ ವಿಧಾನಸಭೆಯಲ್ಲಿ ಎರಡಂಕಿಗಳನ್ನು ದಾಟಿ ಗಮನಾರ್ಹ ರೀತಿಯ ಸಾಧನೆ ಮಾಡಿದ್ದ ಬಿಜೆಪಿ ಶಾಸಕರ ಉತ್ಸಾಹ ಹಾಗೂ ನಿರೀಕ್ಷೆಯಿಲ್ಲದೆ ಅಧಿಕಾರ ಸೂತ್ರ ಒಲಿದುಬಂದಿದ್ದ ಜನತಾರಂಗದ ಸದಸ್ಯರ ಉಮೇದುಗಳ ಪ್ರವಾಹವನ್ನು ಸರಿದಾರಿಗೆ ತರುವ ಮಾರ್ಗವನ್ನು ಚಂದ್ರೇಗೌಡರು ಕಂಡು ಕೊಂಡದ್ದು ತಮ್ಮ ಸಂಸದೀಯ ಅನುಭವ ಹಾಗೂ ಓದಿನ ವಿಸ್ತಾರದ ಮಾತುಗಾರಿಕೆಯಿಂದ. ಇದೇ ಕಾರಣದಿಂದಾಗಿ 1983–85ರ ನಡುವಣ ವಿಧಾನಸಭೆ ಕಲಾಪ ಬೌದ್ಧಿಕ ನೆಲೆಯಲ್ಲಿ ಉತ್ತುಂಗವನ್ನು ಮುಟ್ಟಿತ್ತು. ಇದಾದ

ನಂತರ ಬಂದ ಅನುಭವಿ ರಾಜಕಾರಣಿ ಬಿ.ಜಿ.ಬಣಕಾರ್ ಅವರಿಗೆ ಚಂದ್ರೇಗೌಡರ ರೀತಿಯಲ್ಲಿ ಮಾತುಗಾರಿಕೆ ಅನಿವಾರ್ಯತೆ ಎದುರಾಗಲಿಲ್ಲ. 1989ರಲ್ಲಿ ಸ್ಪೀಕರ್ ಸ್ಥಾನಕ್ಕೆ ಬಂದ ಎಸ್.ಎಂ.ಕೃಷ್ಣ ಅವರಿಗೂ ಮಾತುಗಾರಿಕೆ ಅನಿವಾರ್ಯವಾದರೂ ಅವರು ಈ ವಿಚಾರದಲ್ಲಿ ಜಿಪುಣಾಗ್ರೇಸರ ಚಕ್ರವರ್ತಿಯಂತೆ ನಡೆದುಕೊಂಡು ಅನಿವಾರ್ಯ ಇದ್ದಾಗ ಮಾತ್ರ ಮಧ್ಯಪ್ರವೇಶಿಸಿ ಸುಗಮ ಕಲಾಪಕ್ಕೆ ಮಾರ್ಗಸೂಚಿಯಾಗುತ್ತಿದ್ದರು. ವಿ.ಎಸ್.ಕೌಜಲಗಿ ಹಾಗೂ ಎಂ.ವಿ. ವೆಂಕಟಪ್ಪ ಅವರಿಗೆ ಮಾತುಗಾರಿಕೆ ಅಷ್ಟಾಗಿ ಅನಿವಾರ್ಯವಾಗಲಿಲ್ಲ. ಆದರೆ, 1994ರಲ್ಲಿ ಸ್ಪೀಕರ್ ಸ್ಥಾನ ಏರಿದ ರಮೇಶ್ ಕುಮಾರ್ ಅವರು ತಮ್ಮ ವಾಕ್ಚಾತುರ್ಯದ ಜೊತೆಗೆ ಲೋಕಾನುಭವದ ಪಾಠಗಳನ್ನು ವಿನಿಮಯ ಮಾಡಿಕೊಳ್ಳುವ ಮೂಲಕ ಕಲಾಪಕ್ಕೆ ಹೊಸ ಬೆಡಗು ತಂದರು. ಆವೇಶಕ್ಕೆ ಒಳಗಾಗಿ ಹಲವಾರು ಬಾರಿ ಮುನ್ಸೂಚನೆ ಇಲ್ಲದೆ ಕಲಾಪದಿಂದ ನಿರ್ಗಮಿಸಿದ ನಿದರ್ಶನಗಳೂ ಇದ್ದವು. ಮುಖ್ಯಮಂತ್ರಿ ದೇವೇಗೌಡ ಹಾಗೂ ಪ್ರತಿಪಕ್ಷದ ನಾಯಕ ಬಿ.ಎಸ್.ಯಡಿಯೂರಪ್ಪ ನಡುವಣ ಆರೋಪ ಪ್ರತ್ಯಾರೋಪಗಳ ನಡುವೆ ಮಧ್ಯಪ್ರವೇಶಿಸಿದಾಗ ಉದ್ಭವಿಸಿದ ಪರಿಸ್ಥಿತಿಯಲ್ಲಿ ಸದನದಿಂದ ನಿರ್ಗಮಿಸಿ ಎರಡು ದಿನಗಳ ಕಾಲ ಸಾರ್ವಜನಿಕವಾಗಿ ಕಾಣಿಸಿಕೊಳ್ಳದೆ ಕುತೂಹಲ ಮೂಡಿಸಿದ್ದರು. 2018ರಲ್ಲಿ ಮತ್ತೆ ಸ್ಪೀಕರ್ ಆದ ಮೇಲೂ ಕೂಡ ರಮೇಶ್ ಕುಮಾರ್ ಅವರು ಹಿರಿಯಣ್ಣನಂತೆ ದಿಕ್ಕು ತಪ್ಪಿದ ರಾಜಕಾರಣದ ವ್ಯವಸ್ಥೆಯಲ್ಲಿ ಬೆಳ್ಳಿ ಕಿರಣ ಮೂಡುವಂತೆ ಮಾಡುತ್ತಿದ್ದರು. ಇನ್ನು ಸ್ಪೀಕರ್‌ಗಳಾದವರು ತಮ್ಮ ಪೂರ್ವಾಶ್ರಮದ ಪಕ್ಷಗಳ ನೇತೃತ್ವದ ಸರ್ಕಾರವನ್ನು ಉಳಿಸಲೂ ಹಾಗೂ ಉರುಳಿಸಲು ಕೈಜೋಡಿಸಿರುವ ನಿದರ್ಶನಗಳೂ ಸಾಕಷ್ಟು. ಬಿಜೆಪಿಯ ಕೆ.ಜಿ.ಬೋಪಯ್ಯನವರು ಸ್ಪೀಕರ್ ಆಗಿದ್ದಾಗ 16 ಶಾಸಕರ ಅನರ್ಹತೆಯ ಪ್ರದರ್ಶನೆ ಸುಪ್ರೀಂ ಕೋರ್ಟ್‌ನವರೆಗೆ ಹೋಗಿತ್ತು. 2006ರಲ್ಲಿ ಸ್ಪೀಕರ್ ಕೆ.ಆರ್.ಪೇಟೆ ಕೃಷ್ಣ ಅವರು ಜನತಾದಳದ ಶಾಸಕರ ಅನರ್ಹತೆ ಪ್ರಸ್ತಾಪವನ್ನು ಹಾಗೆಯೇ ಉಳಿಸಿಕೊಂಡು ಬಂದದ್ದನ್ನು ಮರೆಯುವಂತಿಲ್ಲ. ಇನ್ನು 2013ರಲ್ಲಿ ಸಭಾಧ್ಯಕ್ಷರಾದ ಕಾಗೋಡು ತಿಮ್ಮಪ್ಪ ಅವರೂ ಕೂಡ ಸಾಕಷ್ಟು ಬಿಸಿ ವಾತಾವರಣವನ್ನೇ ಎದುರಿಸಬೇಕಾಯಿತು. ತದ ನಂತರ ಬಂದ ಕೆ.ಬಿ.ಕೋಳಿವಾಡ ಅವರಿಗೆ ಹೇಳಿಕೊಳ್ಳುವಂತಹ ಸಮಸ್ಯೆಗಳು ಎದುರಾಗಲಿಲ್ಲ. ಆದರೆ, 2018ರಲ್ಲಿ ರಮೇಶ್ ಕುಮಾರ್ ಅವರಿಗೆ ಒಂದರ ನಂತರ ಒಂದರಂತೆ ಬಿಕ್ಕಟ್ಟುಗಳ ಸರಮಾಲೆಯೇ ಎದುರಾಯಿತು.

ಇದಿಷ್ಟೂ ವಿಧಾನಸಭೆಯ ಚರಿತ್ರೆಯಾದರೆ ಇನ್ನು ವಿಧಾನಪರಿಷತ್ತಿನ ಚರಿತ್ರೆ ಏನೆಂಬುದಕ್ಕೆ ಸಭಾಪತಿ ಪ್ರತಾಪಚಂದ್ರ ಶೆಟ್ಟಿ ವಿರುದ್ಧ ಮಂಡಿಸಿದ್ದ ಅವಿಶ್ವಾಸ ನಿರ್ಣಯ ಸದನದಲ್ಲಿ ಕುರುಕ್ಷೇತ್ರದ ವಾತಾವರಣವನ್ನು ಸೃಷ್ಟಿಸಿದ ನಂತರ ತಲೆದೋರಿದ ಬೆಳವಣಿಗೆಯಲ್ಲಿ ಉಪ ಸಭಾಪತಿ ಧರ್ಮೇಗೌಡರು ಆತ್ಮಹತ್ಯೆಗೆ ಒಳಗಾದ ದಾರುಣ ಪ್ರಸಂಗ ಒಂದು ಎಚ್ಚರಿಕೆಯ ಗಂಟೆ.

ಸಭಾಧ್ಯಕ್ಷರ ಸ್ಥಾನ ಒಂದು ಮುಳ್ಳಿನ ಸಿಂಹಾಸನ. ಕೂತವರನ್ನು ನೋಡಲು ಇಷ್ಟ. ಆದರೆ, ಕೂತವರಿಗೆ ಅದನ್ನು ಸಹಿಸಿಕೊಳ್ಳಲು ಕಡುಕಷ್ಟ. ಇದು ಈಗಿನ ಸಭಾಧ್ಯಕ್ಷರ ಸ್ಥಿತಿ. ಇದರ ನಿವಾರಣೆಯಾಗಬೇಕಾದರೆ ಸಮಚಿತ್ತದ ಚುನಾಯಿತ ಸದಸ್ಯರು ಹಾಗೂ ಅಷ್ಟೇ ಸಮಚಿತ್ತದ ರಾಜಕೀಯ ಪಕ್ಷಗಳ ಮುಖಂಡರು ಹಾಗೂ ಇಂತಹುದನ್ನೇ ಬಯಸುವ ಸಾರ್ವಜನಿಕರ ಲೋಕ ಅಪೇಕ್ಷಿತ. ಬೇವು ಭಿತ್ತಿ ಮಾವುನ್ನು ನಿರೀಕ್ಷಿಸುವ ರೀತಿಯಲ್ಲಿ ಗುಣಮಟ್ಟದ ಶಾಸನಸಭೆ ಹಾಗೂ ಕಲಾಪ, ಅದರಷ್ಟೆ ಮುಖ್ಯವಾದ ಸಭಾಸದರು ಹಾಗೂ ಸಭಾಧ್ಯಕ್ಷರನ್ನು ನಿರೀಕ್ಷಿಸುವುದು ಮೂರ್ಖತನದ ಪರಮಾವಧಿ.

**ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ: 10.03.2021**

## 16.INTROSPECTION BY KARNATAKA LEGISLATORS

### Improved functioning key

It is depressing to note that while being present in the House/Council, a few elected representatives often disconnect themselves from the deliberations of the House.

At the introspection meeting of Karnataka legislators convened by the Speaker of the Legislative Assembly, Chief Minister Yediyurappa lamented the declining values of the parliamentary system with the legislators placing the self over the state, unlike in the pre-independence era, when politicians sacrificed for the country.

A lofty speech indeed. Leader of the Opposition Siddaramaiah blamed the electoral system, openly talked about voters being bribed and the victory of candidates with a criminal background. As a result, the quality and commitment of legislators have declined sharply; a point sharply to by the noted educationist Gururaja Karjegi.

At this juncture, it is worth recalling the British conservative scholar Edmund Burke's speech to the voters of Bristol in 1774 in which he said: "It ought to be the happiness and glory of the elected representative to live in the strictest union, the closest correspondence and the most unreserved communication with his constituents. Their wishes ought to have great weight with him, their opinions high respect, their business unremitting attention".

In contemporary times, Burke's observations sound idealistic as modern-day elected representatives are increasingly disconnected from their constituents. Their primary concern seems to be to achieve their personal ambitions or at best to serve the interests of the party which has elected them and its supreme leader. The Interests of the constituency they represent occupay secondary importance in their scheme of things.

It is depressing to note that while being present in the House/Council, a few elected representatives often disconnect themselves from the deliberations of the House and indulge in viewing pleasure-seeking videos, as reported in the media. An attempt is made here to present factual data about the sessions held by the Karnataka Legislative Assembly from 1952 to the present along with suggestions to improve its functioning.

Available data reveals that the Assembly held sessions for a record 425 days during 1972-1978, preceded by 278 days during 1952-57, 375 days during 1957-1961 and 366 days between 1962-1966. In the 1980s and 1990s, the number days the House met came down to 200 plus, only to fall below 200 days since 2000, notwithstanding the decision taken in 2000 to hold annual sessions for not less than 60 days in a year, amounting to 300 days in a five years.

The 13th Assembly met for only 156 days from 2008-2012 while the 14th Assembly managed to hold sessions for 216 days from 2013 to February 2018.

The 15th Assembly sat for 33 days in 2018, a mere 18 days in 2019 and 31 days in 2020. In 2020, the Assembly met for seven days as part of the winter session. Currently, the Budget session is on from March 5 to 31.

Statistics apart, sessions in recent years have been marred by dharnas, walkouts and frequent adjournments obstructing meaningful transaction of legislative business and debates. The 13th Assembly witnessed a new low in parliamentary behaviour with a few members standing on the table, a member tearing his shirt and waving it, with TV channels beaming pictures of it. The last session of the 14$^{th}$ Assembly passed a slew of bills without any discussion including the Budget, with the BJP members staging a walk out.

The previous session of the Legislative Council, supposedly the House of elders, witnessed despicable behavior by some members of the ruling and Opposition Parties. The JD(S) and BJP combined to install a new Chairman and Deputy Chairman from their parties, respectively.

**Suggesstions for reform**

Keeping in mind the deterioration in the functioning, specially of the Assembly, the following suggestions can be considered: 1) The ruling and Opposition parties should commit themselves to uninterrupted conduct of 60 days sessions in a year and for extra days, to compensate for loss of man hours due to adjournments, etc; 2) The Speaker should be vested with the power to convene sessions unlike the present practice of the cabinet deciding it; 3) The question hour be completed within the stipulated time to allow transaction of the agenda fixed for the day;4) Calling Attention Motions on issues of public importance be taken up after 4 pm so as to not upset the scheduled legislative business; 5) Legislative scrutiny of Bills be mandatorily carried out; 6) Strict monitoring of attendance and performance of members in the House be done on the notice board and the legislature website; 7) Members trooping into the well of the House be suspended for the rest of the week;8) Ministers be compulsorily present in the House to furnish replies to questions raised by members; 9) Increase in salaries and allowances of the members be decided by a Commission appointed by the government and not by members themselves;10) Live telecasting of the proceedings of the House to help citizens observe the 'legislative behaviour and performance' of their elected representatives; 11) Most importantly, since Speakers have often behaved in partisan manner, the British tradition of a person elected to Speaker's post should resign from his/her party to ensure impartial behavior.

In India, often Speakership is offered to persons not accommodated as ministers. Many times, they become ministers after their term ends or are removed from office during their term.

Keeping in mind the promises made by the senior leaders at the introspection meeting, it would be worth observing how the leaders of the ruling and the Opposition parties would rein in themselves and their members to allow healthy debates and smooth conduct of the legislature in the Budget session and the monsoon session that would follow.

**Courtsey:Deccan Herald, Dated:15.03.2021.**

## 17.ರಾಜ್ಯ ವಿಧಾನ ಮಂಡಲದಲ್ಲಿ ಈ ಕುರಿತು ಚಿಂತನ ಮಂಥನ ನಡೆಯಬೇಕಾಗಿತ್ತು ಪ್ರಗತಿಗೆ ಪೂರಕ ಒಂದು ದೇಶ ಒಂದು ಚುನಾವಣೆ

ಭಾರತದ ಸಂವಿಧಾನಕ್ಕೆ ಈಗ ಎಪ್ಪತ್ತು ವರ್ಷ. ಭಿನ್ನ ಭಾಷೆ, ಸಂಸ್ಕೃತಿ, ಪರಂಪರೆ, ಹೀಗೆ ಅನೇಕ ವೈವಿಧ್ಯ ಹಾಗೂ ವಿಶಿಷ್ಟತೆಗಳ ಒಡಲು ಭಾರತ. ಬ್ರಿಟಿಷ್ ದಾಸ್ಯ ಶೃಂಖಲೆಯಿಂದ ಮುಕ್ತಗೊಂಡ ಭಾರತ ಶತಮಾನಗಳು ಕಳೆದರೂ ತನ್ನದೇ ಸಾರ್ವಕಾಲಿಕ ಮೌಲ್ಯ ಮತ್ತು ಚಿಂತನೆಗಳಿಂದ ದೇಶವನ್ನು ಮುನ್ನಡೆಸಬಲ್ಲ ವ್ಯಕ್ತಿತ್ವವನ್ನು ಹೊಂದಿರುವ ಸಂವಿಧಾನವನ್ನು ಒಪ್ಪಿಕೊಂಡಿತು. ಸಂವಿಧಾನ ಶಿಲ್ಪಿ ಡಾ। ಬಿ.ಆರ್.ಅಂಬೇಡ್ಕರ್ ಅವರ ನೇತೃತ್ವದಲ್ಲಿ ರೂಪುಗೊಂಡ ಸಂವಿಧಾನದ ಮುಂಬೆಳಕಲ್ಲಿ ಭಾರತ ಜನತಾಂತ್ರಿಕ ವ್ಯವಸ್ಥೆ ಎಪ್ಪತ್ತು ವರ್ಷಗಳ ನಂತರವೂ ತನ್ನ ಪ್ರಸ್ತುತತೆಯನ್ನು ಮೆರೆದಿದೆ. ಭಾರತಕ್ಕೆ ಸ್ವಾತಂತ್ರ್ಯ ದೊರೆಯುವುದಕ್ಕೆ ಪೂರ್ವಭಾವಿಯಾಗಿ ಇಂಗ್ಲೆಂಡ್‌ನ ಕೆಲ ಮಹಾನ್ ನಾಯಕರು ವ್ಯಕ್ತಪಡಿಸಿದ ಅನುಮಾನಗಳನ್ನು ಸುಳ್ಳು ಮಾಡುವ ರೀತಿಯಲ್ಲಿ ಭಾರತದ ಸಂವಿಧಾನ ಈಗಲೂ ತನ್ನ ಪ್ರಖರ ವ್ಯಕ್ತಿತ್ವವನ್ನು ಕಾಪಾಡಿಕೊಂಡಿದೆ.

ಭಾರತಕ್ಕೆ ಸ್ವಾತಂತ್ರ್ಯ ನೀಡಬೇಕು ಎನ್ನುವ ಚರ್ಚೆ ಬಂದಾಗಲೆಲ್ಲ ಇಂಗ್ಲೆಂಡ್‌ನ ಪ್ರಭಾವಿ ನಾಯಕರಾಗಿದ್ದ ವಿನ್‌ಸ್ಟನ್ ಚರ್ಚಿಲ್, ಈ ದೇಶದ ಭವಿಷ್ಯದ ಬಗ್ಗೆ ತಮ್ಮದೇ ಆದ ಅನುಮಾನಗಳನ್ನು

ವ್ಯಕ್ತಪಡಿಸುತ್ತಿದ್ದರು. "ಬ್ರಿಟಿಷರು ಭಾರತವನ್ನು ತೊರೆದರೆ ಅವರು ಸೃಷ್ಟಿಸಿದ ಆಡಳಿತ ವ್ಯವಸ್ಥೆ, ಅವಸಾನದ ಹಾದಿ ಹಿಡಿಯಲಿದೆ. ನ್ಯಾಯಾಂಗ, ಶಿಕ್ಷಣ, ವೈದ್ಯಕೀಯ, ರೈಲ್ವೆ ಮೂಲಭೂತ ಸೌಕರ್ಯಗಳು ಹೀಗೆ ಬ್ರಿಟಿಷ್ ಪರಿಕಲ್ಪನೆಯಲ್ಲಿ ರೂಪುಗೊಂಡ ಭಾರತದಲ್ಲಿ ಅರಾಜಕ ಪರಿಸ್ಥಿತಿ ನಿರ್ಮಾಣವಾಗಲಿದೆ. India fall back quiet rapidly through the centuries into barbarism and privations of middle age, ಎನ್ನುವ ಗಂಭೀರ ಅನುಮಾನ ಚರ್ಚಿಲ್‌ರಗಿತ್ತು. ಪ್ರತಿಯೊಬ್ಬ ಪ್ರಧಾನಿ ನಿಧನ ಹೊಂದಿದ ನಂತರ ಭಾರತದಲ್ಲಿ ಮಿಲಿಟರಿ ಆಡಳಿತ ತಲೆ ಎತ್ತಬಹುದೆನ್ನುವುದು ಚರ್ಚಿಲ್‌ರಂತಹ ಬ್ರಿಟಿಷ್ ಟೀಕಾಕಾರನ ನಿರೀಕ್ಷೆ ಆಗಿತ್ತು. ಆದರೆ, ಭಾರತದ ಜನತಾಂತ್ರಿಕ ವ್ಯವಸ್ಥೆ ಆ ಅನುಮಾನಗಳನ್ನು ಸುಳ್ಳು ಮಾಡಿತು. ತನ್ನ ವೈವಿಧ್ಯ – ವಿಶಿಷ್ಟತೆಗಳ ನಡುವೆ ಭಾರತ ತಾನು ರೂಪಿಸಿದ ಸಾಂವಿಧಾನಿಕ ಮೌಲ್ಯಗಳನ್ನು ಕಾಪಾಡಿಕೊಂಡು ಜಗತ್ತಿನ ಬೃಹತ್ ಜನತಾಂತ್ರಿಕ ರಾಷ್ಟ್ರವಾಗಿ ಆತ್ಮವಿಶ್ವಾಸದಿಂದ ಮುನ್ನಡೆದಿದೆ.

ಇಂಥ ಪ್ರಖರ ಸಂವಿಧಾನದ ಮುಂಬೆಳಕಲ್ಲಿ ಭಾರತ ಅಡಿಯಿಡುತ್ತಿದ್ದರೂ ಈ ದೇಶವನ್ನು ಮತ್ತಷ್ಟು ಶಕ್ತಿಗೊಳಿಸುವ ದಿಸೆಯಲ್ಲಿ ಅನೇಕ ಸುಧಾರಣೆಗಳು ಅಗತ್ಯವಿದೆ ಎನ್ನುವ ಅಭಿಪ್ರಾಯ ಸಾರ್ವತ್ರಿಕವಾಗಿದೆ. ಸಂವಿಧಾನ ರಚನೆಗೊಂಡ ನಂತರ ನಡೆದ ನಾಲ್ಕು ಸಾರ್ವತ್ರಿಕ ಚುನಾವಣೆಗಳಲ್ಲಿ ಲೋಕಸಭೆ ಮತ್ತು ವಿಧಾನಸಭೆಗೆ ಒಟ್ಟೊಟ್ಟಿಗೇ ಚುನಾವಣೆಗಳು ನಡೆಯುತ್ತಿದ್ದವು. ಆದರೆ ಸಂವಿಧಾನ ರಚನೆಯ ನಂತರದ ಒಂದೆರಡು ದಶಕಗಳ ಅವಧಿಯಲ್ಲಿ ಚುನಾವಣಾ ವ್ಯವಸ್ಥೆಯಲ್ಲಿ ಗಂಭೀರ ಏರು–ಪೇರುಗಳು ಘಟಿಸಿದವು. ಲೋಕಸಭೆ, ವಿಧಾನಸಭೆಗೆ ಐದು ವರ್ಷಗಳ ಅವಧಿಗೆ ಒಂದೇ ಬಾರಿ ಚುನಾವಣೆ ನಡೆಯುವ ಪರಿಪಾಠ ಕೊನೆಗೊಂಡು, ಲೋಕಸಭೆ ಚುನಾವಣೆಯ ನಂತರದ ಐದು ವರ್ಷಗಳ ಅವಧಿಯಲ್ಲಿ ಒಂದಲ್ಲ ಹಲವು ರಾಜ್ಯ ವಿಧಾನಸಭಾ ಚುನಾವಣೆಗಳು ನಡೆಯತೊಡಗಿದವು.

ಇಂಥ ಅನಾರೋಗ್ಯಕರ ಚುನಾವಣಾ ವ್ಯವಸ್ಥೆ ಸೃಷ್ಟಿಗೆ ನಾಂದಿ ಹಾಡಿದವರು ಭಾರತದ ಹಿಂದಿನ ಪ್ರಧಾನಿ ಹಾಗೂ ಕಾಂಗ್ರೆಸ್ ಅಧಿನಾಯಕಿ ಇಂದಿರಾ ಗಾಂಧಿ. 1957ರಲ್ಲಿ ಕೇರಳದಲ್ಲಿ ಇಎಂಎಸ್ ನಂಬೂದರಿಪಾಡ್ ನೇತೃತ್ವದಲ್ಲಿ ಎಡಪಂಥೀಯ ಮಾರ್ಕ್ಸಿಸ್ಟ್ ಸರಕಾರ ಅಧಿಕಾರದ ಚುಕ್ಕಾಣಿ ಹಿಡಿದಿತ್ತು. ಜವಾಹರಲಾಲ್ ನೆಹರೂ ಪ್ರಧಾನಿ ಆಗಿದ್ದರು. ಇಂದಿರಾಗಾಂಧಿ ರಾಷ್ಟ್ರೀಯ ಕಾಂಗ್ರೆಸ್ ಅಧ್ಯಕ್ಷೆ ಆಗಿದ್ದರು. ಅಪ್ಪ–ಮಗಳು ಮಾರ್ಕ್ಸಿಸ್ಟ್ ಕಮ್ಯುನಿಸ್ಟ್ ಸರಕಾರ ಉರುಳಿಸಲು ಷಡ್ಯಂತ್ರ ರೂಪಿಸಿದ್ದರು. ಸಂವಿಧಾನದ 356ನೇ ವಿಧಿಯನ್ನು ಪ್ರಯೋಗಿಸಿ ನಂಬೂದರಿಪಾಡ್ ಸರಕಾರ ವಜಾಗೊಳಿಸಿದ್ದರು. ಈ ಮೂಲಕ ಮೊಟ್ಟಮೊದಲ ಬಾರಿಗೆ ಲೋಕಸಭೆ ವಿಧಾನಸಭೆಗೆ ಒಟ್ಟಿಗೆ ಚುನಾವಣೆ ನಡೆಯುವ ಆರೋಗ್ಯಕರ ಸಂಪ್ರದಾಯದ ಮೊದಲ ಕೊಂಡಿ ಕಳಚಿಬಿತ್ತು. ಪರಿಣಾಮ 1959ರಲ್ಲಿ ಕೇರಳ ವಿಧಾನಸಭೆಗೆ ಮಧ್ಯಂತರ ಚುನಾವಣೆ ನಡೆದಿತ್ತು.

ತದನಂತರ 1967 ಸಾರ್ವತ್ರಿಕ ಚುನಾವಣೆಗಳಲ್ಲಿ ಕಾಂಗ್ರೆಸ್ ಒಂಭತ್ತು ರಾಜ್ಯಗಳಲ್ಲಿ ಅಧಿಕಾರ ಕಳೆದುಕೊಂಡಿತ್ತು. ಇವುಗಳಲ್ಲಿ ಉತ್ತರಪ್ರದೇಶ, ಬಿಹಾರ, ಮಧ್ಯಪ್ರದೇಶ, ರಾಜಸ್ಥಾನ, ಹರಿಯಾಣ ಮುಂತಾದ ರಾಜ್ಯಗಳಲ್ಲಿ ವಿವಿಧ ಪಕ್ಷಗಳ ಮೈತ್ರಿಕೂಟದ ಸರಕಾರ ಸಂಯುಕ್ತ ವಿಧಾಯಕ ದಳ ಹೆಸರಿನಲ್ಲಿ ಅಧಿಕಾರ ಹಿಡಿದವು. ಪ್ರಧಾನಿಯಾಗಿದ್ದ ಇಂದಿರಾ ಗಾಂಧಿ ಪಕ್ಷಾಂತರಕ್ಕೆ ಪ್ರಚೋದನೆ ನೀಡಿದರು. ಇದರ ಪರಿಣಾಮ ಸಂಯುಕ್ತ ವಿಧಾಯಕದಳ ನೇತೃತ್ವದ ಅನೇಕ ಸರಕಾರಗಳು ಅಧಿಕಾರ ಕಳೆದುಕೊಂಡಿದ್ದವು. ಇದು ನಾಲ್ಕೈದು ರಾಜ್ಯಗಳಿಗೆ ಅವಧಿಗೆ ಮೊದಲೇ ಚುನಾವಣೆ ನಡೆಯಲು ಕಾರಣವಾಗಿತ್ತು. ಇಂಥ ರಾಜಕೀಯ ಸ್ಥಿತ್ಯಂತರದ ಪರಿಣಾಮ ಮೊತ್ತಮೊದಲ ಬಾರಿಗೆ ಬಹುತೇಕ ರಾಜ್ಯಗಳಲ್ಲಿ ಲೋಕಸಭೆ – ವಿಧಾನಸಭೆಗೆ ಒಟ್ಟಿಗೆ ಚುನಾವಣೆ ನಡೆಯುವ ಪ್ರಕ್ರಿಯೆಯ ಕೊಂಡಿ ಕಳಚಿಹೋಗಿತ್ತು. ಜೊತೆಗೆ 1971ರಲ್ಲಿ ಲೋಕಸಭೆಗೆ ಇಂದಿರಾ ಅವರು ಮಧ್ಯಂತರ ಚುನಾವಣೆ ಘೋಷಿಸಿದ್ದರು. 1972ರಲ್ಲಿ ನಡೆಯಬೇಕಿದ್ದ ಚುನಾವಣೆ 1971ರಲ್ಲಿಯೇ ನಡೆದಿತ್ತು. ಇದು ಲೋಕಸಭೆ–ವಿಧಾನಸಭಾ ಚುನಾವಣೆಯ ಕೊಂಡಿ ಕಳಚಿಕೊಂಡ ಇನ್ನೊಂದು ಮಹತ್ವದ ಘಟನೆ. ಇದಕ್ಕೆ ಪೂರಕವಾಗಿ ಗಾಂಧೀಜಿಯವರ ಗ್ರಾಮಸ್ವರಾಜ್ ಪರಿಕಲ್ಪನೆಯನ್ನು ಸಾಕಾರಗೊಳಿಸುವ ದೃಷ್ಟಿಯಿಂದ 1957ರಲ್ಲಿ ನೇಮಕಗೊಂಡ ಬಲವಂತರಾಯ್ ಮೆಹ್ತಾ ಅವರ ನೇತೃತ್ವದ ಸಮಿತಿ ಶಿಫಾರಸ್ಸಿನಂತೆ ಜಿಲ್ಲೆ–ತಾಲ್ಲೂಕು ಮತ್ತು ಗ್ರಾಮಗಳ ಮಟ್ಟದಲ್ಲಿ ಪಂಚಾಯತ್ ವ್ಯವಸ್ಥೆಗೆ ಚುನಾವಣೆ ನಡೆಯುವ ಪ್ರಕ್ರಿಯೆ ಆರಂಭಗೊಂಡಿತ್ತು. ಲೋಕಸಭೆ–ವಿಧಾನಸಭೆ ಜೊತೆಗೆ ಪಂಚಾಯತ್ ಚುನಾವಣೆಗಳ ಅವಧಿಯೂ ಭಿನ್ನವಾಗಿತ್ತು.

ಹೀಗೆ ಒಂದೇ ಬಾರಿಗೆ ಎಲ್ಲಾ ಚುನಾವಣೆಗಳು ನಡೆಯುವ ಪ್ರಕ್ರಿಯೆ ಕೊಂಡಿ ಕಳಚಿಕೊಂಡಿತು. ಲೋಕಸಭೆ ಚುನಾವಣೆ ನಡೆದ ಐದು ವರ್ಷಗಳ ಅವಧಿಯಲ್ಲಿ ಪ್ರತಿವರ್ಷ ಒಂದಲ್ಲ ಒಂದು ಚುನಾವಣೆ ನಡೆಯುವುದು ಮಾಮೂಲಿ ಆಗಿದೆ. ಇದನ್ನು ಅನಿವಾರ್ಯವಾಗಿ ಕೇಂದ್ರ ಮತ್ತು ರಾಜ್ಯ ಸರಕಾರಗಳು ಒಪ್ಪಿಕೊಂಡು ಬಂದಿವೆ. ಮೊತ್ತಮೊದಲ ಬಾರಿಗೆ ಪ್ರಧಾನಿ ಮೋದಿಯವರು ಸದಾ ಕಾಲ ನಡೆಯುತ್ತಲೇ ಇರುವ ಅನೇಕ ಚುನಾವಣೆಗಳು ಸೃಷ್ಟಿಸಿರುವ ಸಮಸ್ಯೆ ಮತ್ತು ಸಂಕಷ್ಟಗಳ ಪರಂಪರೆಯನ್ನು ಜನತೆ ಮುಂದಿಟ್ಟು ಅದಕ್ಕೆ ಪರಿಹಾರ ಕಂಡು ಹಿಡಿಯುವ ಚಿಂತನ – ಮಂಥನಕ್ಕೆ ಚಾಲನೆ ನೀಡಿದ್ದಾರೆ. ಇದು ಸ್ವಾಗತಾರ್ಹವಾದ ಹೆಜ್ಜೆ, ಮೈಲಿಗಲ್ಲು ಎನ್ನಬಹುದಾದ ಇಂಥ ಚಿಂತನೆ ಕುರಿತು ವ್ಯಾಪಕ ಸಂವಾದ, ಸಮಾಲೋಚನೆ ನಡೆಯಬೇಕಿದೆ.

ಸದಾ ಕಾಲ ಚುನಾವಣೆಗಳನ್ನು ನಡೆಸುವುದರಿಂದ ಕೇಂದ್ರ ಮತ್ತು ರಾಜ್ಯ ಸರಕಾರಗಳು ಅನೇಕ ಸವಾಲುಗಳನ್ನು ಎದುರಿಸಬೇಕಾಗಿದೆ. ಪ್ರತಿ ವರ್ಷ ಒಂದಲ್ಲ ಒಂದು ಚುನಾವಣೆಗಳ ವ್ಯವಸ್ಥೆ ಮಾಡಲು ಚುನಾವಣಾ ಆಯೋಗ ಕೋಟ್ಯಂತರ ರೂಪಾಯಿಗಳನ್ನು ವೆಚ್ಚ ಮಾಡುತ್ತಿದೆ. ಇದು ಪ್ರತೀ ರಾಜ್ಯದ ಬೊಕ್ಕಸಕ್ಕೆ ದೊಡ್ಡ ಪ್ರಮಾಣದ ಹೊರೆ, ಇನ್ನು ಪ್ರತಿ ವರ್ಷ ಮತದಾರರ ಪಟ್ಟಿಯ ನವೀಕರಣ, ಚುನಾವಣಾ ವ್ಯವಸ್ಥೆಗೆ ಸರಕಾರ ಮತ್ತು ಅರೆ ಸರಕಾರಿ ಸಾವಿರಾರು ಸಿಬ್ಬಂದಿಯ ನೇಮಕ, ಅವರಿಗೆ ಸೂಕ್ತ ತರಬೇತಿ, ಆ ಕಾರಣದಿಂದ ಅವರ ನಿಗದಿತ ಸೇವೆ ಮಾಡುವುದು ಬಿಟ್ಟು ವರ್ಷದಲ್ಲಿ ಮೂರ್ನಾಲ್ಕು ತಿಂಗಳು ಚುನಾವಣೆ ನಡೆಸವುದರಲ್ಲಿಯೇ ಮಗ್ನರಾಗಿರಬೇಕಾಗಿರುತ್ತದೆ. ಇದು ಸರಕಾರಿ ಸಿಬ್ಬಂದಿಯ ಮೇಲೆ ಹೆಚ್ಚುವರಿ ಹೊರೆ ಮತ್ತು ಒತ್ತಡಕ್ಕೆ ಕಾರಣವಾಗಿ ಆಡಳಿತದ ಮೇಲೆ ದುಷ್ಪರಿಣಾಮ ಬೀರುತ್ತದೆ. ಚುನಾವಣೆ ಸಂದರ್ಭದಲ್ಲಿ ನೀತಿ ಸಂಹಿತೆಯನ್ನು ಜಾರಿಗೊಳಿಸುವುದರ ಪರಿಣಾಮ ಅಭಿವೃದ್ಧಿ ಪ್ರಕ್ರಿಯೆಗಳು ಸಂಪೂರ್ಣ ಸ್ಥಗಿತಗೊಳ್ಳುತ್ತವೆ. ಆಡಳಿತದಲ್ಲಿ ಅಲ್ಲೋಲ ಕಲ್ಲೋಲ ಸೃಷ್ಟಿಯಾಗುತ್ತದೆ.

ಚುನಾವಣಾ ಆಯೋಗ ಅಭ್ಯರ್ಥಿಗಳು ಚುನಾವಣೆ ಎದುರಿಸಲು ಇಂತಿಷ್ಟೇ ಹಣ ಖರ್ಚು ಮಾಡಬೇಕೆಂದು ವೆಚ್ಚದ ಮೇಲೆ ಮಿತಿಯನ್ನು ಹಾಕಿದೆ. ಆದರೆ ಈ ಮಿತಿಯ ಚೌಕಟ್ಟಿನಲ್ಲಿ ಯಾವುದೇ ಅಭ್ಯರ್ಥಿಗಳು ಚುನಾವಣಾ ವೆಚ್ಚವನ್ನು ಮಾಡುವುದಿಲ್ಲ. ವೆಚ್ಚದ ಮಿತಿಯ ನೂರು ಪಟ್ಟಿಗೂ ಹೆಚ್ಚು ಹಣ ಚುನಾವಣೆಗಳಲ್ಲಿ ಖರ್ಚಾಗುವುದು ಮಾಮೂಲಿಯಾಗಿದೆ. ಸಹಜವಾಗಿ ಪ್ರತಿ ಚುನಾವಣೆಯಲ್ಲಿ ಸಾವಿರಾರು ಕೋಟಿ ರೂಪಾಯಿ ಕಪ್ಪುಹಣ ಚಲಾವಣೆಗೆ ಬರುತ್ತಿದೆ. ಭಾರತದಾದ್ಯಂತ ಪ್ರತಿ ವರ್ಷ ಒಂದಲ್ಲ ಹಲವು ಚುನಾವಣೆಗಳು ನಡೆಯುವುದರಿಂದ ಲಕ್ಷಾಂತರ ಕೋಟಿ ರೂಪಾಯಿ ಕಪ್ಪುಹಣ ಹೊಳೆಯಂತೆ ಹರಿಯುತ್ತದೆ. 'ಒಂದು ದೇಶ, ಒಂದು ಚುನಾವಣೆ' ಸಾಕಾರಗೊಂಡರೆ ಕಪ್ಪು ಹಣದ ಚಲಾವಣೆಗೆ ಅಂಕುಶ ಹಾಕಬಹುದು. ಇದರಿಂದಾಗಿ ಪ್ರತಿ ವರ್ಷವೂ ನಡೆಯುವ ಚುನಾವಣಾ ಭ್ರಷ್ಟಾಚಾರವನ್ನು ಗಣನೀಯ ಪ್ರಮಾಣದಲ್ಲಿ ನಿಯಂತ್ರಿಸಲು ಸಾಧ್ಯವಾಗುತ್ತದೆ.

ರಾಜಕೀಯ ಪಕ್ಷಗಳು ಚುನಾವಣೆ ನಡೆಸಲು ಸಂಪನ್ಮೂಲ ಕ್ರೋಢೀಕರಣಕ್ಕೆ ನಡೆಸುವ ಕಸರತ್ತು ನಿಲ್ಲುತ್ತದೆ. ಚುನಾವಣೆಗಾಗಿ ಉದ್ಯಮಿಗಳು, ಗುತ್ತಿಗೆದಾರರು, ಕಪ್ಪುಹಣ ಉಳ್ಳವರು, ಕಾಳಸಂತೆಕೋರರಿಂದ ಸಂಪನ್ಮೂಲ ಸಂಗ್ರಹಿಸುವ ಅನಿವಾರ್ಯ ಸಂಕಟದಿಂದ ರಾಜಕೀಯ ಪಕ್ಷಗಳಿಗೆ ಮುಕ್ತಿ ದೊರೆಯುತ್ತದೆ. ಚುನಾವಣೆಯ ಸಂದರ್ಭದಲ್ಲಿ ಸಂಪನ್ಮೂಲ ಉಳ್ಳವರಿಂದ ಹಣ ಸಂಗ್ರಹಿಸಿದರೆ, ಚುನಾವಣೆಯ ನಂತರ ಅಧಿಕಾರಕ್ಕೆ ಬಂದಾಗ ಅಂತಹವರ ಋಣ ತೀರಿಸಲೇಬೇಕಾಗುತ್ತದೆ. ಅವೆಲ್ಲವನ್ನು ಈಡೇರಿಸುತ್ತಾ ಹೋದರೆ ಆಡಳಿತದಲ್ಲಿ ಪಾರದರ್ಶಕತೆ ಮತ್ತು ಪ್ರಾಮಾಣಿಕತೆಯನ್ನು ಸಾಕಾರಗೊಳಿಸಲು ಸಾಧ್ಯವೇ ಆಗುವುದಿಲ್ಲ. ಇದರಿಂದ ಸಹಜವಾಗಿ ಭ್ರಷ್ಟಾಚಾರ ವಿಜೃಂಭಿಸುತ್ತದೆ. ಪ್ರಸಕ್ತ ಹಿನ್ನೆಲೆಯಲ್ಲಿ ಒಂದು ದೇಶ, ಒಂದು ಚುನಾವಣೆ ನಡೆಸುವುದರಿಂದ ಆಡಳಿತದಲ್ಲಿ ಗುಣಾತ್ಮಕ ಬದಲಾವಣೆ ಸಾಧ್ಯ.

ಐದು ವರ್ಷದ ಅವಧಿಯಲ್ಲಿ ಒಂದೇ ಚುನಾವಣೆ ನಡೆಯುವುದರಿಂದ, ನೀತಿ ಸಂಹಿತೆಯ ನೆಪದಿಂದ ತಿಂಗಳುಗಟ್ಟಲೆ ಗಾಯಬ್ ಆಗುತ್ತಿದ್ದ ಅಭಿವೃದ್ಧಿಯ ವೇಗ ಗಣನೀಯ ಪ್ರಮಾಣದಲ್ಲಿ ಹೆಚ್ಚುತ್ತದೆ. ಜನಹಿತದ ದೃಷ್ಟಿಯಿಂದ ಸರಕಾರ ರೂಪಿಸಿದ ಕಾಯಿದೆ ಕಾನೂನುಗಳು ಯಾವುದೇ ಅಡೆತಡೆಯಿಲ್ಲದೆ ಅನುಷ್ಠಾನಗೊಳ್ಳುತ್ತವೆ. ಚುನಾವಣೆಗಳು ಒಂದರ ಹಿಂದೆ ಒಂದರಂತೆ ಬರುವುದರಿಂದ ಪ್ರತಿಯೊಂದು ರಾಜಕೀಯ ಪಕ್ಷಗಳು ಚುನಾವಣಾ ಪ್ರಣಾಳಿಕೆಗಳ ಹೆಸರಿನಲ್ಲಿ ಅಗ್ಗದ ಜನಪ್ರಿಯ ಕಾರ್ಯಕ್ರಮಗಳನ್ನು ರೂಪಿಸಿ ಮತದಾರರನ್ನು ಸೆಳೆಯುವ ಪ್ರಕ್ರಿಯೆ ಕೊನೆಗೊಳ್ಳುತ್ತದೆ. 'ಒಂದು ದೇಶ,

ಒಂದು ಚುನಾವಣೆ' ನಡೆದರೆ, ಕೇಂದ್ರ ಮತ್ತು ರಾಜ್ಯ ಸರಕಾರಗಳೆರಡೂ ಕಡೆ ಯಾವ ಪಕ್ಷದ ಸರಕಾರವನ್ನು ಆಯ್ಕೆ ಮಾಡಿಕೊಳ್ಳಬೇಕು ಎನ್ನುವ ಮುಕ್ತ ಅವಕಾಶ ಮತದಾರನಿಗಿರುತ್ತದೆ. ಕೆಲವು ಸಂದರ್ಭಗಳಲ್ಲಿ ಕೇಂದ್ರ ಹಾಗೂ ರಾಜ್ಯ ಸರಕಾರಗಳೆರಡಕ್ಕೂ ಒಂದೇ ಪಕ್ಷವನ್ನು ಆಯ್ಕೆ ಮಾಡಿಕೊಳ್ಳಬಹುದು. ಯಾವ ಪಕ್ಷ ರಾಷ್ಟ್ರೀಯ – ಅಂತರರಾಷ್ಟ್ರೀಯ ವಿಷಯಗಳನ್ನು ಸಮರ್ಥವಾಗಿ ನಿಭಾಯಿಸಬಲ್ಲದು ಅಂತಹ ಪಕ್ಷವನ್ನು ರಾಷ್ಟ್ರಮಟ್ಟದಲ್ಲಿ ಆಯ್ಕೆ ಮಾಡಿಕೊಳ್ಳಬಹುದು. ಅದೇ ರೀತಿ ನಿರ್ದಿಷ್ಟ ಭೌಗೋಳಿಕ ಪ್ರದೇಶದ ನೆಲ–ಜಲ–ಭಾಷೆ ಹಿತವನ್ನು ರಕ್ಷಿಸಬಲ್ಲ ಪ್ರಾದೇಶಿಕ ಪಕ್ಷವನ್ನು ರಾಜ್ಯ ಮಟ್ಟದಲ್ಲಿ ಆಯ್ಕೆಮಾಡಿಕೊಳ್ಳಬಹುದು. ಇಂಥ ಆಯ್ಕೆ ಮತದಾರನಿಗೆ ದೊರೆಯುತ್ತದೆ.

'ಒಂದೇ ದೇಶ, ಒಂದು ಚುನಾವಣೆ'ಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಬೇಕಾದರೆ ಸಂವಿಧಾನ ತಿದ್ದುಪಡಿ ಆಗುವುದು ಅನಿವಾರ್ಯ ಆಗಿದೆ. ಸಂವಿಧಾನದ 83ನೇ ವಿಧಿಯನ್ನು ತಿದ್ದುಪಡಿ ಮಾಡಿ ಸಂಸತ್ತಿನ ಅವಧಿ ಎಷ್ಟಿರಬೇಕು ಅನ್ನುವುದನ್ನು ನಿಗದಿಪಡಿಸಬೇಕು. ಅದೇ ರೀತಿ ರಾಜ್ಯಗಳ ಶಾಸಕಾಂಗದ ಅವಧಿ ಎಷ್ಟಿರಬೇಕು ಅನ್ನುವುದನ್ನು ನಿಗದಿಗೊಳಿಸಲು ಸಂವಿಧಾನದ 172ನೇ ವಿಧಿಯ ತಿದ್ದುಪಡಿ ಮಾಡಬೇಕು. ಸಂಸತ್ ಮತ್ತು ರಾಜ್ಯ ಶಾಸಕಾಂಗಗಳ ಅವಧಿ ನಿಖರಗೊಳಿಸಲು 1951ರ ಪ್ರಜಾಪ್ರತಿನಿಧಿ ಕಾಯಿದೆಗೆ ತಿದ್ದುಪಡಿ ತರಬೇಕು. 1951ರ ಪ್ರಜಾಪ್ರತಿನಿಧಿ ಕಾಯಿದೆಯಲ್ಲಿ ಸೆಕ್ಷನ್ 2ಕ್ಕೆ ತಿದ್ದುಪಡಿ ಮಾಡಿ, 'ಒಂದು ದೇಶ, ಒಂದು ಚುನಾವಣೆ'ಯ ಮಹತ್ವ ಏನು ಅನ್ನುವುದನ್ನು ನಿರೂಪಿಸಬೇಕು. 'ಒಂದು ರಾಜ್ಯ, ಒಂದು ಚುನಾವಣಾ ವ್ಯವಸ್ಥೆ'ಯನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸಲು ಚುನಾವಣಾ ಆಯೋಗಕ್ಕೆ ಹೆಚ್ಚು ಅಧಿಕಾರ ನೀಡಬೇಕು.

ಪ್ರಧಾನಿಯವರು ಭಾರತದ ಅಭಿವೃದ್ಧಿ ಪ್ರಕ್ರಿಯೆಗೆ ಪೂರಕವಾಗಿ ಈ ಪರಿಕಲ್ಪನೆಯನ್ನು ರಾಷ್ಟ್ರದ ಮುಂದಿಟ್ಟಿದ್ದಾರೆ. ಈ ಕುರಿತು ವಿಧಾನ ಮಂಡಲದ ಅಧಿವೇಶನದಲ್ಲಿ ಚರ್ಚೆ ನಡೆಯಬೇಕಾಗಿತ್ತು. ಸ್ಪೀಕರ್ ವಿಶ್ವೇಶ್ವರ ಹೆಗಡೆ, ಕಾಗೇರಿಯವರು ಅಧಿವೇಶನದ ಆರಂಭದ ಎರಡು ದಿನ ಇಂತಹ ಚಿಂತನ–ಮಂಥನಕ್ಕೆ ಅವಕಾಶ ನೀಡಿದ್ದರು. ಆದರೆ ಪ್ರಮುಖ ಪ್ರತಿಪಕ್ಷ ಕಾಂಗ್ರೆಸ್, ಆರೋಗ್ಯಕರ ನೆಲೆಯಲ್ಲಿ ನಡೆಯಬೇಕಾದ ಚಿಂತನ–ಮಂಥನಕ್ಕೆ ಅವಕಾಶ ನೀಡಲಿಲ್ಲ. ನಿಜಕ್ಕೂ ಇದು ದುರಂತ. ಯಾವುದೇ ಒಂದು ನಿರ್ದಿಷ್ಟ ಚಿಂತನೆಯ ಸಾಧಕ–ಭಾಧಕಗಳನ್ನು ವಿಮರ್ಶೆಯ ಓರೆಗಲ್ಲಿಗೆ ಹಚ್ಚಿ ನೋಡಬೇಕೇ ಹೊರತು ಅಂತಹ ಚಿಂತನೆಯ ಪ್ರಕ್ರಿಯೆಯನ್ನೇ ಸ್ಥಗಿತಗೊಳಿಸುವುದು ಜನತಾಂತ್ರಿಕವಾಗಿ ಒಪ್ಪುವ ನಡೆ ಅಲ್ಲ.

**ಲೇಖಕರು:– ಮಹದೇವ್ ಪ್ರಕಾಶ್,**

**ಹಿರಿಯ ಪತ್ರಕರ್ತರು,**

**ಆಧಾರ:– ವಿಜಯ ಕರ್ನಾಟಕ, ದಿನಾಂಕ:17.03.2021**

## 18. ಬಹುತ್ವ ಭಾರತದ ಆಶಯದಡಿ ಹೊಸ ವ್ಯವಸ್ಥೆ ಜಾರಿಗೆ ಬರಲಿ

ಒಂದು ದೇಶ, ಒಂದು ಚುನಾವಣೆ ಕುರಿತ ಚರ್ಚೆ ಮೊದಲು ದೆಹಲಿಯ ಸಂಸತ್ತಿನಲ್ಲಿ ಆಗಬೇಕು. ಯಾವ ಪರಿಕಲ್ಪನೆಯಲ್ಲಿ ಒಂದು ಚುನಾವಣೆ ನಡೆಸಬೇಕೆಂಬುದನ್ನು ಸ್ಪಷ್ಟಪಡಿಸಬೇಕು. ಏಕೆಂದರೆ, ಇದರ ನಡೆ ಒಂದು ಪಕ್ಷ ಒಂದು ನಾಯಕತ್ವ ಆಗುವ ಅಪಾಯವಿದೆ. ಇದನ್ನು ಮೊದಲು ನಿವಾರಣೆ ಮಾಡಬೇಕು.

ದೇಶವು ಸ್ವತಂತ್ರವಾದ ನಂತರ 1952ರಲ್ಲಿ ಚುನಾವಣೆಗಳು ಆರಂಭವಾದವು. 1957 ರಿಂದ 1967 ರವರೆವಿಗೂ ಲೋಕಸಭೆ ಹಾಗೂ ವಿಧಾನಸಭೆಗಳಿಗೆ ಒಂದೇ ಬಾರಿ ಚುನಾವಣೆಗಳು ನಡೆದಿವೆ. 1967ರ ನಂತರ ವಿವಿಧ ರಾಜ್ಯಗಳಲ್ಲಿ ಸ್ಥಳೀಯ ಪ್ರಾದೇಶಿಕ ಪಕ್ಷಗಳ ಉದಯವಾದವು. ವಿಧಾನಸಭೆಗೆ ಸ್ಪಷ್ಟವಾದ ಬಹುಮತ ಬರದೆ, ಕೆಲವು ರಾಜ್ಯಗಳಲ್ಲಿ ಸಮ್ಮಿಶ್ರ ಸರಕಾರಗಳ ರಚನೆಯಾದ ಹಿನ್ನೆಲೆಯಲ್ಲಿ ಹಾಗೂ 1969ರ ನಂತರದ ದೇಶ ರಾಜಕಾರಣದಲ್ಲಿನ ವೈಚಾರಿಕ ಸಂಘರ್ಷದ ಪರಿಣಾಮ ರಾಷ್ಟ್ರೀಯ ಕಾಂಗ್ರೆಸ್ ಪಕ್ಷವು ಇಬ್ಭಾಗವಾಯಿತು. ಇವೆಲ್ಲದರ ಒಟ್ಟಾರೆ ಪರಿಣಾಮದಿಂದ ಕೆಲವು ರಾಜ್ಯಗಳಲ್ಲಿ ಬೇರೆ ಬೇರೆ ಆಗುವಂಥ ಪರಿಸ್ಥಿತಿ ನಿರ್ಮಾಣವಾಯಿತು.

**ಕಾಂಗ್ರೆಸ್ಸೇತರ ಪಕ್ಷಗಳ ಉದಯ:**

1967ರಲ್ಲಿ ಅಕಾಲಿದಳ, ಕೇರಳ, ಪಶ್ಚಿಮ ಬಂಗಾಳದಲ್ಲಿ ಕಮ್ಯುನಿಸ್ಟ್ ಪಕ್ಷವು ಪ್ರಬಲವಾಯಿತು. ತಮಿಳುನಾಡಿನಲ್ಲಿ ದ್ರಾವಿಡ ಪಕ್ಷಗಳು ಜನ್ಮತಾಳಿದವು. 1976ರ ನಂತರ ಎಡಿಎಂಕೆ ಪಕ್ಷ ಆರಂಭವಾಯಿತು. 1980ರಲ್ಲಿ ಭಾರತೀಯ ಜನತಾ ಪಕ್ಷ ಉದಯಿಸಿತು. 1983ರ ನಂತರ ಜನತಾ ಪರಿವಾರ ಇಬ್ಭಾಗವಾಗಿ ಉತ್ತರ ಪ್ರದೇಶದಲ್ಲಿ ಸಮಾಜವಾದಿ ಪಕ್ಷ ಒರಿಸ್ಸಾದಲ್ಲಿ ಬಿಜೆಡಿ. ಬಿಹಾರದಲ್ಲಿ ಜೆಡಿಯು, ಆರ್‌ಜೆಡಿ, ಹರಿಯಾಣದಲ್ಲಿ ಲೋಕದಳ ಪಕ್ಷಗಳು ಇವುಗಳಲ್ಲಿ ಪ್ರಮುಖವಾದವು.

**ಚುನಾವಣಾ ಹಿನ್ನೆಲೆಗಳು:**

ಭಾರತ ದೇಶದಲ್ಲಿ ಬಹುತೇಕ ಚುನಾವಣೆಗಳು ಭಾವನಾತ್ಮಕ ಸಂದರ್ಭದಲ್ಲಿಯೇ ನಡೆದಿವೆ. 1952ರಿಂದ 67 ರವರೆವಿಗೂ ಸ್ವಾತಂತ್ರ್ಯ ಹೋರಾಟದ ಹಿನ್ನೆಲೆಯಲ್ಲಿ ಉತ್ತಮ ಸಂವಿಧಾನದ ಕೊಡುಗೆ ಸದ್ಭಾವನೆಯಿಂದಲೇ ದೇಶದ ಜನತೆ ಸುಭದ್ರ ಸರಕಾರವಾಗಿ ಕಾಂಗ್ರೆಸ್ ಪಕ್ಷಕ್ಕೆ ದೊಡ್ಡ ಪ್ರಮಾಣದಲ್ಲಿ ನೆಹರು ಸರಕಾರಕ್ಕೆ ಬೆಂಬಲ ನೀಡಿದ್ದರು. ಇಂದಿರಾಗಾಂಧಿಯ ಹತ್ಯೆಯ ಅನುಕಂಪ, 1989ರಲ್ಲಿ ಭ್ರಷ್ಟಾಚಾರದ ವಿರುದ್ಧದ ಹೋರಾಟದ ಹಿನ್ನೆಲೆಯಲ್ಲಿ ವಿ.ಪಿ.ಸಿಂಗ್ ಸರಕಾರ ಅಧಿಕಾರಕ್ಕೆ ಬಂದಿತ್ತು. 1991ರಲ್ಲಿ ರಾಜೀವ್ ಗಾಂಧಿ ಹತ್ಯೆಯ ಅನುಕಂಪ, 1996 ರಿಂದ 1999 ರವರೆವಿಗೂ ಸಮ್ಮಿಶ್ರ ಸರಕಾರ ಅಧಿಕಾರಕ್ಕೆ ಬಂದಿತ್ತು. ದೇವೇಗೌಡರು ತಮಗೆ ಸಿಕ್ಕ ಅವಕಾಶದಲ್ಲಿ ಯಶಸ್ವಿಯೆನಿಸಿಕೊಂಡಿದ್ದರು ವಾಜಪೇಯಿ 1 ಮತದಲ್ಲಿ ವಿಶ್ವಾಸಮತ ಸೋತಿದ್ದ ಅನುಕಂಪದಲ್ಲಿ ಮತ್ತೆ ಅಧಿಕಾರಕ್ಕೆ ಬಂದರು. ವಾಜಪೇಯಿ ಸಮ್ಮಿಶ್ರ ಸರಕಾರವನ್ನು ಚೆನ್ನಾಗಿಯೇ ನಿಭಾಯಿಸಿದ್ದರು. 2004ರ ನಂತರ ಸೋನಿಯಾಗಾಂಧಿ ನೇತೃತ್ವದಲ್ಲಿ ಸಮಾನ ಮನಸ್ಕ ಪಕ್ಷಗಳ ಯುಪಿಎ 10 ವರ್ಷಗಳ ಕಾಲ ಅಧಿಕಾರ ನಡೆಸಿತು. 2009ರಲ್ಲಿ ಗುಣಾತ್ಮಕ ಅಭಿವೃದ್ಧಿಗಾಗಿ ಮತ್ತೇ ಪ್ರಧಾನಿಯಾಗಿದ್ದ ಮನಮೋಹನ್ ಸಿಂಗ್ ಆಡಳಿತಾತ್ಮಕವಾಗಿ ಪ್ರಗತಿಪರ ಕಾರ್ಯಕ್ರಮಗಳಿಗಷ್ಟೇ ಆದ್ಯತೆ ನೀಡಿ ರಾಜಕೀಯ ನಾಯಕತ್ವಕ್ಕೆ ಒತ್ತು ನೀಡಿರಲಿಲ್ಲ. ಇದರ ಪರಿಣಾಮದಿಂದಲೇ ಮತ್ತೆ 2014 ಮತ್ತು 2019ರಲ್ಲಿ ಭಾವನಾತ್ಮಕ ವಿಚಾರಗಳಿಂದಲೇ ಬಿಜೆಪಿಯ ನರೇಂದ್ರ ಮೋದಿ ಪ್ರಧಾನಿಯಾದರು.

**ಸಂವಿಧಾನದ ಆಶಯವೇ ಬಹುತ್ವ ಭಾರತ ಬಲಿಷ್ಠ ಭಾರತ:**

ಎಪ್ಪತ್ತು ವರ್ಷಗಳ ಆಡಳಿತದಲ್ಲಿ ದೇಶ ಸಾಕಷ್ಟು ಅಭಿವೃದ್ಧಿ ಹೊಂದಿ, ಪ್ರಗತಿ ಹೊಂದುತ್ತಿರುವ ದೇಶವಾಗಿ ಮಾರ್ಪಟ್ಟಿತು. ಭಾರತದ ಸಂವಿಧಾನ ಜನಪರ, ಮಾನವೀಯ ಮೌಲ್ಯಗಳನ್ನೊಳಗೊಂಡ ದೇಶದ ಸಮಗ್ರತೆಯ ಬುನಾದಿ ಹಾಕಿಕೊಟ್ಟಿತು. ಭಾರತದ ನೆಲದ ಮಣ್ಣಿನ ಗುಣಕ್ಕೆ ಸಂವಿಧಾನ ಹೊಂದಿಕೊಂಡಿರುವುದರಿಂದ, ಸಂವಿಧಾನದ ಬದಲಾವಣೆಯನ್ನು ದೇಶದ ಜನ ಬಯಸುತ್ತಿಲ್ಲ. ಬದಲಾವಣೆಗೆ ಅವಕಾಶವೂ ಇಲ್ಲ. ಆದರೂ ಕಾಲಕ್ಕೆ ತಕ್ಕಂತೆ ತಿದ್ದುಪಡಿಗೆ ಅವಕಾಶವಿದೆ. ಬಲಿಷ್ಠ ಭಾರತ ನಿರ್ಮಾಣ ಮಾಡವ ಉದ್ದೇಶ, ಇಚ್ಛಾಶಕ್ತಿ ನಮ್ಮದಾದರೆ ಬಹುತ್ವ ಭಾರತದ ನಿಲುವು, ಗುಣಗಳನ್ನು ಒಪ್ಪಲೇ ಬೇಕಾಗುತ್ತದೆ. ಈ ಸದುದ್ದೇಶದ ಹಿನ್ನಲೆಯಲ್ಲಿ ಒಂದು ದೇಶ ಒಂದು ಚುನಾವಣೆಯ ಚರ್ಚೆಯಾಗಿ ಕಾನೂನಾಗಿ ಜಾರಿಯಾಗಬೇಕಾಗುತ್ತದೆ.

ದೇಶದ 70 ವರ್ಷಗಳ ಆಡಳಿತದ ಹಿನ್ನೆಲೆಯಲ್ಲಿ ಸಂವಿಧಾನದ ಬಹುತ್ವ ಭಾರತ ಕಲ್ಪನೆಯಲ್ಲಿ ಒಂದು ದೇಶ, ಒಂದು ಚುನಾವಣೆಯ ಚರ್ಚೆ ಆಗಬೇಕಿದೆ. ಲೋಕಸಭೆ ಮತ್ತು ವಿಧಾನಸಭೆಗೆ ಮಾತ್ರವೇ ಮಿತಿಗೊಳಿಸದೆ ಗ್ರಾಮ ಪಂಚಾಯಿತಿ, ತಾಲ್ಲೂಕು ಪಂಚಾಯಿತಿ, ಜಿಲ್ಲಾ ಪಂದಾಯಿತಿ, ಪಟ್ಟಣ ಪಂಚಾಯಿತಿ, ಪುರಸಭೆ, ನಗರಸಭೆ, ನಗರಪಾಲಿಕೆಗಳಿಗೂ ಒಂದೇ ಬಾರಿ ಚುನಾವಣೆ ನಡೆಯಬೇಕಾಗುತ್ತದೆ. ದೇಶದಲ್ಲಿ ಚುನಾವಣಾ ಸುಧಾರಣೆ ಮುಖ್ಯವಾಗಿ ಆಗಬೇಕಾಗುತ್ತದೆ. ಆಗದೇ ಹೋದರೆ ಪ್ರಜಾಪ್ರಭುತ್ವ ಗಂಡಾಂತರಕ್ಕೆ ಸಿಲುಕುವ ಅಪಾಯವಿದೆ. ಚುನಾವಣಾ ಆಯೋಗವು ರಾಜ್ಯ ಮತ್ತು ಕೇಂದ್ರ ಮಟ್ಟದಲ್ಲಿ ಕಾರ್ಯನಿರ್ವಹಿಸುತ್ತಿರುವುದು ದುಂದು ವೆಚ್ಚಕ್ಕೆ ಕಾರಣವಾಗಿದೆ. ಯಾವುದೇ ಕಾರಣಕ್ಕೂ ವಿಧಾನಸಭೆ, ಲೋಕಸಭೆ ಐದು ವರ್ಷಗಳೊಳಗೆ ವಜಾಗೊಳ್ಳಬಾರದು. ಮುಖ್ಯಮಂತ್ರಿ ಪ್ರಧಾನಮಂತ್ರಿ ಮೇಲೆ ಆಪಾದನೆ ಬಂದರೆ ಪರ್ಯಾಯ ವ್ಯವಸ್ಥೆ ಪರ್ಯಾಯ ನಾಯಕತ್ವ ಆಯ್ಕೆ ಮೂಲಕ ಸರಕಾರವನ್ನು ಉಳಿಸಿಕೊಳ್ಳಬೇಕಾಗುತ್ತದೆ.

ಪ್ರತಿ ಚುನಾವಣೆಗೊಂದು ಮತಪಟ್ಟಿ ತಯಾರಿಕೆ ಸಮಯ ವ್ಯರ್ಥ ಹಾಗೂ ಹಣ ಪೋಲಾಗುವಂತಾಗಿದೆ. ಪದೇ ಪದೇ ಚುನಾವಣೆ ನಡೆಯುತ್ತಿದ್ದರೆ ಜನಪ್ರತಿನಿಧಿಗಳು ಆಡಳಿತಕ್ಕಿಂತಲೂ ಪ್ರಚಾರದ ಕಡೆ ಗಮನಹರಿಸುವುದರಿಂದ ಆಡಳಿತ, ಅಭಿವೃದ್ಧಿ ಕುಂಠಿತವಾಗುತ್ತದೆ. ಉಪ ಚುನಾವಣೆಗಳ ಬಗ್ಗೆ ಸ್ಪಷ್ಟವಾದ ನಿಲುವು ತೆಗೆದುಕೊಳ್ಳಬೇಕಾಗುತ್ತದೆ. ಉಪ ಚುನಾವಣೆ ಸಂದರ್ಭಗಳಲ್ಲಿ ಇಡೀ ಸರಕಾರ ಚುನಾವಣಾ ಪ್ರಕಾರಕ್ಕಿಳಿಯುವುದರಿಂದ ಆಡಳಿತ ಕುಸಿಯುತ್ತದೆ. ಐದು ವರ್ಷಗಳಲ್ಲಿ ವಿವಿಧ ಚುನಾವಣೆಗಳು ನಡೆಯುತ್ತಿರುವುದರಿಂದ ಒಂದು ವರ್ಷ ಕಾಲ ನೀತಿಸಂಹಿತೆಗೊಳಪಡುತ್ತದೆ. ಇದು ಅಭಿವೃದ್ಧಿಗೆ ಕುತ್ತಾಗುತ್ತದೆ.

ಪಕ್ಷಾಂತರ ನಿಷೇಧ ಕಾಯ್ದೆಯನ್ನು ಮತ್ತಷ್ಟು ಸ್ವಚ್ಛವಾಗಿ ಕಠಿಣಗೊಳಿಸಬೇಕಾಗುತ್ತದೆ. ಚಾಪೆ ಕೆಳಗೆ ತೂರಿ ಬಂದು ರಂಗೋಲಿ ಕೆಳಗೆ ತೂರಿ ಅಧಿಕಾರ ಪಡೆದುಕೊಳ್ಳಲು ಅವಕಾಶ ಇರಬಾರದು. ಒಂದು ದೇಶ ಒಂದು ಚುನಾವಣೆಗೂ ಮುನ್ನ ದೇಶವು ವಿವಿಧ ವಿಚಾರಗಳ ಮೇಲೆ ಸ್ಪಷ್ಟ ನಿರ್ಣಯಗಳನ್ನು ತೆಗೆದುಕೊಳ್ಳಬೇಕಾಗುತ್ತದೆ. ಪ್ರತಿ ರಾಜ್ಯಕ್ಕೂ ಪ್ರತ್ಯೇಕ ಪರಂಪರೆ ಇರುವುದರಿಂದ ರಾಷ್ಟ್ರಧ್ವಜದ ಜೊತೆಗೆ ರಾಜ್ಯ ಧ್ವಜಗಳ ಬಳಕೆಗೂ ಅವಕಾಶ ಕಲ್ಪಿಸಬೇಕು. ಭಾಷೆ ವಿಚಾರದಲ್ಲಿ ಹಿಂದಿಯನ್ನು ರಾಷ್ಟ್ರ ಭಾಷೆಯನ್ನಾಗಿ ಬಿಂಬಿಸದೆ ಕರ್ನಾಟಕ ಅಧಿಕೃತ ಭಾಷೆಯನ್ನಾಗಿ ಹಿಂದಿಯನ್ನು ಗುರುತಿಸಬೇಕು. ಜೊತೆಗೆ ಇಂಗ್ಲೀಷ್‌ಗೂ ಆದ್ಯತೆ ನೀಡಬೇಕು. ನದಿಗಳ ಜೋಡಣೆಯಾಗಿ ಜಲಸಂಪನ್ಮೂಲ ಸಮನಾಗಿ ಹಂಚಿಕೆಯಾಗಬೇಕು. ಮಹಿಳಾ ಮೀಸಲಾತಿ, ಒಬಿಸಿ ಮೀಸಲಾತಿ ವಿಚಾರದಲ್ಲಿ ಸ್ಪಷ್ಟ ನಿಲುವು ಬೇಕು. ಪ್ರತಿ 15 ವರ್ಷಗಳಿಗೊಮ್ಮೆ ಕ್ಷೇತ್ರಗಳ ಪುನರ್‌ವಿಂಗಡಣೆಯಾಗಬೇಕಾಗುತ್ತದೆ.

**ಚರ್ಚೆ ಸಂಸತ್ತಿನಿಂದ ಆರಂಭವಾಗಲಿ:**

ಈ ಚರ್ಚೆ ಮೊದಲು ಸಂಸತ್ತಿನಲ್ಲಿ ಆಗಬೇಕು. ಯಾವ ಪರಿ ಕಲ್ಪನೆಯಲ್ಲಿ ಒಂದು ಚುನಾವಣೆ ನಡೆಸಬೇಕೆಂಬುದನ್ನು ಸ್ಪಷ್ಟಪಡಿಸಬೇಕು. ಏಕೆಂದರೆ, ಇದರ ನಡೆ ಒಂದು ಪಕ್ಷ ಒಂದು ನಾಯಕತ್ವ ಆಗುವ ಅಪಾಯವಿದೆ. ಇದನ್ನು ಮೊದಲು ನಿವಾರಣೆ ಮಾಡಬೇಕು. ಲೋಕಸಭೆ ಮತ್ತು ರಾಜ್ಯ ಸಭೆಗಳಲ್ಲಿ ಚರ್ಚೆ ನಡೆದು ಸ್ಪಷ್ಟವಾದ ನಿರ್ಣಯ ಕೈಗೊಂಡ ನಂತರ ಎಲ್ಲಾ ರಾಜ್ಯಗಳ ವಿಧಾನಸಭೆಗಳಲ್ಲಿ ಮಾಧ್ಯಮಗಳಲ್ಲಿ ಚರ್ಚೆಗೊಳಪಡಬೇಕು. ಪತ್ರಿಕೆಗಳಲ್ಲಿ ಲೇಖನ ಮಾಲೆ ಆರಂಭವಾಗಬೇಕು. ಅಲ್ಲಿನ ಸಲಹೆಗಳನ್ನು ತಜ್ಞರ ಅಭಿಪ್ರಾಯಗಳನ್ನು ಕ್ರೋಢೀಕರಿಸಿ ಬಹುತ್ವಭಾರತವೇ ಬಲಿಷ್ಠ ಭಾರತದ ಸಂವಿಧಾನದ ಆಶಯದಲ್ಲಿ ಒಂದು ದೇಶ ಒಂದು ಚುನಾವಣೆಯ ಕಾನೂನು ಜಾರಿಗೆ ತರಬೇಕಾಗುತ್ತದೆ.

**ಲೇಖಕರು:ವಿ.ಆರ್. ಸುದರ್ಶನ್, ಮಾಜಿ ಸಭಾಪತಿ**
**ರಾಜ್ಯ ವಿಧಾನ ಪರಿಷತ್ತು**
**ಆಧಾರ: ಉದಯವಾಣಿ, ದಿನಾಂಕ: 17.03.2021**

## 19. ರಾಷ್ಟ್ರವ್ಯಾಪಿ ವಿಚಾರ ಮಂಥನ ಅತ್ಯವಶ್ಯ

'ಒಂದು ರಾಷ್ಟ್ರ – ಒಂದು ಚುನಾವಣೆಯ' ಸೂತ್ರ ಭಾರತ ಸಂವಿಧಾನ ಅಡಿಯಿಡುತ್ತಿದ್ದ ಆ ದಿನಗಳಲ್ಲಿ 1951 ಅಕ್ಟೋಬರ್ 25 ರಿಂದ 1952 ಫೆಬ್ರವರಿ 21ರವರೆಗೆ ಕೇಂದ್ರ ರಾಜ್ಯಗಳಲ್ಲಿ ಸುಸೂತ್ರವಾಗಿ ಘಟಿಸಿತು. ಈ ಚೊಚ್ಚಲ ಪ್ರಯೋಗ ಕೇಂದ್ರದ ಲೋಕಸಭೆ ಹಾಗೂ ರಾಜ್ಯಗಳ ವಿಧಾನಸಭೆಗಳ ಅವಧಿಯನ್ನು ಐದು ವರ್ಷಗಳ ಮಿತಿಗೆ ಅಚ್ಚುಕಟ್ಟಾಗಿಸಿತ್ತು. ಬ್ರಿಟಿಷ್ ಆಳ್ವಿಕೆಯ 1935ನೇ ಸಂವಿಧಾನ ಅಂತೆಯೇ ಇಂಗ್ಲೆಂಡಿನ ಪಾರ್ಲಿಮೆಂಟ್ ವ್ಯವಸ್ಥೆಗೆ ನೇರ್ಪುಗೊಳಿಸಿ, ಈ ಪಂಚವಾರ್ಷಿಕ ಅವಧಿಯನ್ನು ಜಾರಿಗೆ ತರಲಾಯಿತು. ಅದೇ ರೀತಿ ಮೇಲ್ಮನೆ ರಾಜ್ಯಸಭೆಯನ್ನು ಶಾಶ್ವತಗೊಳಿಸಿ, ಪ್ರತಿಯೊಬ್ಬ ಸದಸ್ಯರ ಅವಧಿಯನ್ನು 6 ವರ್ಷ ಮಿತಿಗೆ ಇರಿಸಿ, ಪ್ರತೀ ಎರಡು ವರ್ಷಗಳಿಗೊಮ್ಮೆ ಸುಮಾರು ಮೂರನೇ ಒಂದಂಶ ಸದಸ್ಯರ ನಿವೃತ್ತಿಗೆ ಕದ ತೆರೆಯಲಾಯಿತು. ಅದರೊಂದಿಗೆ ಸ್ವತಂತ್ರ್ಯ ನಿರ್ಭೀತ ಚುನಾವಣೆಗಾಗಿ ರಾಷ್ಟ್ರವ್ಯಾಪಿಯಾಗಿ ಏಕೀಕೃತ ಚುನಾವಣಾ ಆಯೋಗಕ್ಕೆ 324ನೇ ವಿಧಿಯನ್ವಯ ನಮ್ಮ ರಾಜ್ಯಾಂಗ ಘಟನೆ ಜನ್ಮ ನೀಡಿತು. ವಿಶ್ವದ ಜನಸಂಖ್ಯಾತ್ಮಕ ಪ್ರಪ್ರಥಮ ಜನತಂತ್ರ ರಾಷ್ಟ್ರ ಭಾರತದ ಚುನಾವಣಾ ಕಾರ್ಯ

ಬಾಹುಳ್ಯದ ಆಳ, ಎತ್ತರದ ಅರಿವು ಹೊಂದಿಯೇ, ಈ 14ನೇ ವಿಭಾಗವನ್ನು ಸಂವಿಧಾನ ಜನಕರು ಸೃಜಿಸಿದರು. ಆ ನಿಟ್ಟಿನಲ್ಲಿ ಶೇಷನ್ ಅವರಂಥವರು ಈ ಚುನಾವಣಾ ಆಯೋಗದ ನಿಷ್ಪಕ್ಷಪಾತ, ನಿರ್ಭೀತ ಘನತೆಯನ್ನು ಮುಂದಿನ ದಿನಗಳಲ್ಲಿ ಎತ್ತಿ ಹಿಡಿಯುವಲ್ಲಿಯೂ ಪ್ರಚಲಿತ ಇತಿಹಾಸವನ್ನು ನಿರ್ಮಿಸಿದರು.

ಮುಂದೆ ಸ್ವಾತಂತ್ರ್ಯೋತ್ತರ ಭಾರತದ ಸಾಂವಿಧಾನಿಕ ಹೆಜ್ಜೆಗಳನ್ನು ಗುರುತಿಸಿದಾಗ, ವಾಸ್ತವಿಕ ರಾಜಕೀಯದ ರಂಗಸ್ಥಳ ಹೊಸದಿಲ್ಲಿ ಹಾಗೂ ಆಯಾಯ ರಾಜ್ಯಗಳಲ್ಲಿ ಸಜ್ಜುಗೊಂಡಾಗ ಸಹಜವಾಗಿ ಚುನಾವಣೆಗಳು ಕಾಲವ್ಯತ್ಯಾಸದ ರಂಗೇರಿದವು. ಅಂತಹ ಸಾಧ್ಯತೆಗಳು ನಮ್ಮ ಸಂವಿಧಾನದ ಉಲ್ಲೇಖಿತ ಸೂತ್ರಗಳ ವಿಧಿಗಳ ಒಳಹೊಕ್ಕು ಅಧ್ಯಯನ ಮಾಡಿದಾಗ ಅನಿವಾರ್ಯತೆಯ ಗರ್ಭದಿಂದಲೇ ಉದಿಸಿ ಬಂದುದೇ ಆಗಿತ್ತು ಎಂಬ ಸತ್ಯ ಗೋಚರಿಸುತ್ತದೆ. 83(2) ವಿಧಿಯ ಸ್ಪಷ್ಟ ಉಲ್ಲೇಖದಂತೆ ಅವಧಿ ಪೂರ್ವ ವಿಸರ್ಜನೆ ಆಗದಿದ್ದಲ್ಲಿ ಲೋಕ ಸಭೆಯು ಪ್ರಥಮ ಅಧಿವೇಶನದಿಂದಲೇ ಮೊದಲ್ಗೊಂಡು 5 ವರ್ಷಗಳ ಅವಧಿಗೆ ಮೀರದಂತೆ ಲೋಕಸಭೆಯ ಅವಧಿಯನ್ನು ಹೆಚ್ಚಿಸಬಹುದು. ಆದರೆ ಯಾವುದೇ ಕಾರಣಕ್ಕೆ ತುರ್ತು ಪರಿಸ್ಥಿತಿ ಘೋಷಣೆ ಸಮಾಪ್ತಿಗೊಂಡ ಬಳಿಕ ಈ ಅವಧಿಯನ್ನು 6 ತಿಂಗಳ ಬಳಿಕ ಹೆಚ್ಚಿಸುವಂತಿಲ್ಲ. ಹೀಗೆ ಈ ಒಂದೇ ವಿಧಿಯಲ್ಲಿ 1)ಅವಧಿ ಪೂರ್ವ ಲೋಕಸಭಾ ವಿಸರ್ಜನೆ ಹಾಗೂ 11) ಅವಧಿ ಹೆಚ್ಚಳದ ಅನಿವಾರ್ಯತೆಯ ಬಗೆಗೆ ಸ್ಪಷ್ಟ ಉಲ್ಲೇಖ ಗಮನಾರ್ಹ. ಹೀಗಿರುವಾಗ 368ನೇ ವಿಧಿಯನ್ನೇ ಪ್ರಯೋಗಿಸಿ, ಈ ಎರಡೂ 'ಬೆಳಕಿನ ಕಿಂಡಿ'ಗಳಿಗೆ ಹೇಗೆ ಪರಿಧಿ, ಪರದೆ ಸರಿಸಬೇಕು ಎಂಬುದೇ ಇಲ್ಲಿನ ಸಾಂವಿಧಾನಿಕ ತಿದ್ದುಪಡಿಗೆ ಸಂಬಂಧಿಸಿದ ಮೇರು ಪ್ರಶ್ನೆ.

ಇಲ್ಲಿಂದ ಮುಂದಿನ ಹಂತದಲ್ಲಿ 'ಒಂದು ರಾಷ್ಟ್ರ, ಒಂದು ಚುನಾವಣೆ'ಯ ಚಿಂತನೆಯ ಪಥದಲ್ಲಿ ಸರಿದಾಗ ಥಟ್ಟನೆ ಎದುರಾಗುವಂತಹುದು ಇಂತಹುದೇ ಸಂವಿಧಾನದ 172ನೇ ವಿಧಿಯ ವಿಧಾನಸಭಾ ಚುನಾವಣೆಯ ಉಲ್ಲೇಖ ಈ ವಿಧಿಯ ಒಂದನೇ ಉಪವಿಧಿಯ ಶಬ್ದ ಶಬ್ದವೂ 83(2)ರ ಪಡಿಯಚ್ಚು ಇಲ್ಲಿಯೂ ಅವಧಿಪೂರ್ವ ವಿಧಾನಸಭಾ ವಿಸರ್ಜನೆಗೆ ಮಧ್ಯಂತರ ಚುನಾವಣೆಗೆ ನೂತನ ವಿಧಾನಸಭಾ ವಿಸರ್ಜನೆಗೆ, ಅವಧಿಪೂರ್ವ ವಿಧಾನಸಭಾ ವಿಸರ್ಜನೆಗೆ, ಮಧ್ಯಂತರ ಚುನಾವಣೆಗೆ, ನೂತನ ವಿಧಾನಸಭಾ ಸಾಧ್ಯತೆಗೆ ನಮ್ಮ ಸಂವಿಧಾನ ಕದ ತೆರೆದಿದೆ. ಇಲ್ಲಿ 252ನೇ ವಿಧಿಯ ರಾಷ್ಟ್ರವ್ಯಾಪೀ ಜರೂರು ಪರಿಸ್ಥಿತಿಯ ಸ್ಥಿತಿಗತಿಯ ಅವಲಂಬಿತ ಮುಂದುವರಿಕೆಗೆ ಕೇಂದ್ರ ಸಂಸತ್ತೇ ಒಂದಿನಿತು ಅವಧಿಯನ್ನು ರಾಜ್ಯ ವಿಧಾನಸಭೆಗಳಿಗೆ ಹೆಚ್ಚಿಸಬಹುದು. ಇದಲ್ಲದೇ ರಾಜ್ಯ ವಿಧಾನಸಭೆಗಳೇ, ಯಾವುದೇ ಕಾರಣಕ್ಕೆ ಸ್ವಯಂ ಅವಧಿ ಹೆಚ್ಚಳಕ್ಕೆ ಅವಕಾಶ ಇಲ್ಲ ಎಂಬುದೂ ಇಲ್ಲಿನ ಸಾಂವಿಧಾನಿಕ ಒಳಮೆರುಗು ಮಾತ್ರವಲ್ಲ 356ನೇ ವಿಧಿಯ ಅನ್ವಯ ರಾಜ್ಯವೊಂದರಲ್ಲಿ ರಾಷ್ಟ್ರಪತಿ ಆಳ್ವಿಕೆ ಹೇರಿದಾಗ ವಿಧಾನಸಭಾ ವಿಸರ್ಜನೆಯ ಸಾಧ್ಯತೆಯ ದಿಡ್ಡಿ ಬಾಗಿಲು ತೆರೆದಂತಾದೀತು. ಒಂದೊಮ್ಮೆ ಯಾವುದೇ ರಾಜಕೀಯ ಪಕ್ಷ ಆಡಳಿತದ ಚುಕ್ಕಾಣಿ ಹಿಡಿಯಲು ಸಂಖ್ಯಾಬಲ ಹೊಂದದಿದ್ದಾಗ, ವಿಧಾನಸಭಾ ಸದಸ್ಯರ, 'ಒಳ–ಹೊರ ಬೆಂಬಲ'ದ ಅಥವಾ ಸಂಯುಕ್ತತೆ, ಒಕ್ಕೂಟದ ಚದುರಂಗದಾಟವೂ ಅಸಾಧ್ಯ ಎನಿಸಿದಾಗ ಪರಿಸ್ಥಿತಿ ಏನು? ಆಗ ಕೇವಲ ಮಧ್ಯಂತರ ಚುನಾವಣೆ ಇಲ್ಲವೇ 'ಸುಧೀರ್ಘ' ಎನಿಸಬಹುದಾದ 'ರಾಷ್ಟ್ರಪತಿ ಆಳ್ವಿಕೆ'ಯೇ ಮುಂದಿನ ಲೋಕಸಭಾ ಚುನಾವಣೆಯವರೆಗೆ ರಾಜ್ಯಗಳ ಪಾಲಿಗೆ ಒದಗಿ ಬರಬೇಕೆ? ಆಗ ಇಂತಹ ಡೋಲಾಯಮಾನ ರಾಜ್ಯ ವಿದ್ಯಮಾನಗಳ ಸರತಿ ಸಾಲೂ ಉದ್ಭವಿಸದೆ? ತನ್ಮೂಲಕ ಕೇಂದ್ರ – ರಾಜ್ಯಗಳ ಸೂಕ್ಷ್ಮ ಸಮತೋಲನ, ಒಕ್ಕೂಟ ವ್ಯವಸ್ಥೆ ಬಿರುಕು ಬಿಡಲಾರದೇ?

ಈ ಎಲ್ಲ ಗಹನ ಸಾಂವಿಧಾನಿಕ ಪ್ರಶ್ನೆಗಳಿಗೆ ನೂರಕ್ಕೆ ನೂರು ಪ್ರತಿಶತ: ಉತ್ತರ ಹುಡುಕುವಿಕೆ ಸುಲಭ ಸಾಧ್ಯವೇನಲ್ಲ. ವ್ಯಾಧಿಯಿಂದ ಕಟುವಾಗಿ ಔಷಧ ಎಂಬಂತೆ ಉಳಿತಾಯದ ಸಾಧ್ಯತೆ ಹೊಂದಿಸುವಲ್ಲಿ ರಾಜ್ಯಾಂಗ ವ್ಯವಸ್ಥೆಯ ಶಿಥಿಲತೆಯ 'ಅಗಾಧ ಸಾಧ್ಯತೆ'ಯೇ ಒದಗಿ ಬರಲಾರದೇ? ಈ

ರಾಷ್ಟ್ರವ್ಯಾಪಿ ವಿಚಾರ ಮಂಥನ ಇಂದಿನ ಅವಶ್ಯಕತೆ. ಅದೇ ರೀತಿ ಕೇಂದ್ರದ ಸಂಸತ್ತಿನಲ್ಲಿಯೇ ಪ್ರಾಯೋಗಿಕ ಸಾಂವಿಧಾನಿಕ ತಿದ್ದುಪಡಿಯ ಮೂಲಕವೇ ಈ ಬಗೆಯ ಚರ್ಚೆ ಶುಭಾರಂಭವಾಗಬೇಕು. ಏನಿದ್ದರೂ 28 ರಾಜ್ಯ ವಿಧಾನಸಭೆಗಳ ಅಂಗಳಕ್ಕೆ ಈ ವಿಷಯದ ಆಗಮನ ಬಹಳಷ್ಟು ಸಮಯದ ಬಳಿಕವಷ್ಟೇ. ಬಜೆಟ್ ಅಧಿವೇಶನದಂತಹ ಪ್ರಮುಖ ಭೂಮಿಕೆಯಲ್ಲಿ, ಇಂತಹ ಗಹನ ವಿಚಾರಗಳ ಲಾಭ, ಸಾಧ್ಯತೆ ಇವೆಲ್ಲದರ ಬಗೆಗೆ ಚರ್ಚೆ ಎಷ್ಟು ಸಮಂಜಸ ಎಂಬ ಆತ್ಮಾವಲೋಕನವೂ ಇಲ್ಲಿ ಪ್ರಸ್ತುತ. ಪಕ್ಷಾಂತರ ಪಿಡುಗಿಗೂ 10ನೇ ಶೆಡ್ಯೂಲಿನ ಮೂಲಕ ಹಾಕಿದ ತಡೆ ಬೇಲಿಯನ್ನೂ ಜಿಗಿಯುವ ಚಾಣಾಕ್ಷತನದ ರಾಜಕಾರಣಕ್ಕೆ ಏಕಕಾಲದ ಚುನಾವಣೆಯನ್ನು ಗೆರೆಗಳಂಚಿನ ಒಳಗೆ ತರುವ ಸಾಹಸ, ಸಾಧ್ಯತೆ ಸೂಜಿ ತೂತಿನೊಳಗೆ ಆನೆ ತುರುಕಿಸುವಂತಾದೀತೇ? ಇದೊಂದು ಭಾರತೀಯ ಚುನಾವಣಾ ರಂಗ ಮಂಚದ ಬರಲಿರುವ ದಿನಗಳ ಸ್ವಗತದ ಪ್ರಶ್ನೆ.

ಒಂದೊಮ್ಮೆ ಏಕಕಾಲದ ರಾಷ್ಟ್ರ ವ್ಯಾಪಿ ಚುನಾವಣೆಯ ಮಹಾದ್ವಾರ ಸಂವಿಧಾನಿಕ ಚೌಕಟ್ಟಿನಲ್ಲಿ ತೆರೆಯಲೇ ಬೇಕೆಂದಾದರೆ ಹಲವಾರು ಕಾಯಕಲ್ಪ ಅತ್ಯಗತ್ಯ. ಪ್ರಪ್ರಥಮವಾಗಿ ಲೋಕಸಭೆಯ 5 ವರ್ಷಗಳ ಅವಧಿಯನ್ನೇ ಆಧಾರವಾಗಿರಿಸಿ ಎಲ್ಲ ರಾಜ್ಯಗಳ ವಿಧಾನಸಭೆಯ ಅವಧಿಯನ್ನು ನಿಖರವಾಗಿ ಮಿತಿಗೊಳಿಸಬೇಕು. ಇಲ್ಲಿ ತಾತ್ಕಾಲಿಕವಾಗಿಯಾದರೂ ಸಂವಿಧಾನ ತಿದ್ದುಪಡಿಯನ್ನೇ ಆಧರಿಸಿ ಎಲ್ಲ ವಿಧಾನಸಭೆಗಳ ಮಿತಿಯನ್ನು ಒಂದಿನಿತು ಹಿರಿದುಗೊಳಿಸುವ ಅಥವಾ ಕಿರಿದುಗೊಳಿಸುವ ಹಾಗೂ ತನ್ಮೂಲಕ ಲೋಕಸಭೆಯ ಅವಧಿಗೆ ನೇರವಾಗಿ ಸೇರ್ಪುಗೊಳಿಸುವ ಪ್ರಕ್ರಿಯೆ ನಡೆಯಬೇಕು. ಎರಡನೆಯದಾಗಿ ರಾಷ್ಟ್ರವ್ಯಾಪಿ ಈ ಕೇಂದ್ರ ರಾಜ್ಯ ಜನಪ್ರತಿನಿಧಿ ಸಭೆಗಳ ಅಂದರೆ ಲೋಕಸಭೆ ಹಾಗೂ ವಿಧಾನಸಭೆಗಳ ಅವಧಿಯನ್ನು ಸಮಾನಾಂತರ ರೇಖೆಯೊಳಗೇ ತಂದ ಬಳಿಕ ಆ ತಿದ್ದುಪಡಿಯನ್ನು ಇನ್ನೊಂದು ಸಾಂವಿಧಾನಿಕ ತಿದ್ದುಪಡಿಯ ಮೂಲಕ ಸ್ಥಗಿತಗೊಳಿಸಬೇಕು. ಮೂರನೆಯದಾಗಿ ಇನ್ನೊಂದು ತಿದ್ದುಪಡಿಯ ಮೂಲಕ ಕೇಂದ್ರದ ಲೋಕಸಭೆ ಹಾಗೂ ರಾಜ್ಯಗಳ ವಿಧಾಣಸಭೆಯ ಅವಧಿಪೂರ್ವ ವಿಸರ್ಜನೆಯ ಎಲ್ಲ ಸಾಧ್ಯತೆಗಳನ್ನು ಪಟ್ಟಿ ಮಾಡಬೇಕು ಹಾಗೂ ಮನರಾವರ್ತನೆಯ ಮೂಲಕ ಅವಧಿಪೂರ್ವ ಸರಕಾರದ ಪತನ ಅಥವಾ ಅಸ್ಥಿರತೆಯ ಎಲ್ಲ ಕದಗಳಿಗೆ ಭದ್ರ ಬೀಗ ಜಡಿಯಬೇಕು. ನಾಲ್ಕನೆಯದಾಗಿ, 352ನೇ ವಿಧಿಯ ಅನ್ವಯದ ರಾಷ್ಟ್ರವ್ಯಾಪಿ ತುರ್ತು ಪರಿಸ್ಥಿತಿ, 356ನೇ ವಿಧಿಯ ಅನ್ವಯದ ರಾಷ್ಟ್ರವ್ಯಾಪಿ ತುರ್ತು ಪರಿಸ್ಥಿತಿ 356ನೇ ವಿಧಿಯ ರಾಜ್ಯಮಟ್ಟದ ರಾಷ್ಟ್ರಪತಿ ಆಳ್ವಿಕೆ ಹಾಗೂ ಈ ತನಕ ಒಮ್ಮೆಯೂ ಪ್ರಯೋಗಿಸದ ತಣ್ಣನೆ ಮಲಗಿರುವ 366ನೇ ವಿಧಿಯ ರಾಜ್ಯಮಟ್ಟದ ರಾಷ್ಟ್ರಪತಿ ಆಳ್ವಿಕೆ ಹಾಗೂ ಈ ತನಕ ಒಮ್ಮೆಯೂ ಪ್ರಯೋಗಿಸದ ತಣ್ಣನೆ ಮಲಗಿರುವ 366ನೇ 'ಆರ್ಥಿಕ ತುರ್ತು ಪರಿಸ್ಥಿತಿ'ಯ ಸಂದರ್ಭದಲ್ಲೂ ಏಕಕಾಲದಲ್ಲೇ ಕೇಂದ್ರ – ರಾಜ್ಯ ಜನಪ್ರತಿನಿಧಿ ಸಭಾ ಚುನಾವಣೆ ನಡೆಯತಕ್ಕದ್ದು ಎಂಬ ಸಾಂವಿಧಾನಿಕ ಒಕ್ಕಣೆ ತಿದ್ದುಪಡಿಯಲ್ಲಿ ನಮೂದಿಸಬೇಕು. 5ನೇಯದಾಗಿ ಸದಸ್ಯರ ದಿಢೀರ್ ರಾಜೀನಾಮೆ, ಮರು ಚುನಾವಣೆಯಲ್ಲಿ ಬಹುಮತ ಕೊರತೆಯಿಂದಾಗಿ ಲೋಕಸಭೆ, ವಿಧಾನಸಭೆಗಳ ಬಹುಮತ ನಷ್ಟ ಸರಕಾರ ಪತನದ ಸಂದರ್ಭ 'ಯಾವ ಪರಿಹಾರ'? ಎಂಬ ಸಾಂವಿಧಾನಿಕ ಪ್ರಶ್ನೆಗೆ ನಿರ್ದಿಷ್ಟ ಉತ್ತರ ಕಂಡು ಹುಡುಕಬೇಕು. ವಿಧಾನ ಸಭೆ, ಲೋಕಸಭೆ ಮತ್ತು ಸರಕಾರವನ್ನು ಒಂದಿನಿತು ಕಾಲ ವಿಸರ್ಜಿಸಿ ರಾಷ್ಟ್ರಪತಿ ಆಳ್ವಿಕೆಗೆ ನಮ್ಮ ರಾಜ್ಯಾಂಗ ಘಟನೆ ಕದವೇನೋ ತೆರೆದಿದೆ. ಆದರೆ ಇಲ್ಲಿಯೂ ಗರಿಷ್ಠ ಮಿತಿಯ ಅವಧಿಯನ್ನು ನಮೂದಿಸಬೇಕಾಗಬಹುದು. ಆದರೆ ಹೊಸದಿಲ್ಲಿಯಲ್ಲಿ ಯಾವತ್ತೂ ರಾಷ್ಟ್ರಾಧ್ಯಕ್ಷರ ಆಳ್ವಿಕೆ ನಿಷಿದ್ಧ. ಈ ಎಲ್ಲ ಸಾಂವಿಧಾನಿಕ ತಡೆಬೇಲಿಗಳನ್ನು ಸರಿಸಿ ಕಾಯಕಲ್ಪ ಹಾಗೂ ನೂತನ ರಾಷ್ಟ್ರೀಯ ರಂಗಮಂಚ ನಿರ್ಮಾಣಕ್ಕೆ ಕಷ್ಟ ಸಾಧ್ಯ; ಆದರೆ ಅಸಾಧ್ಯವೇ ಸರಿ ಎನ್ನುವಂತಯೂ ಇಲ್ಲ.

**ಲೇಖಕರು: ಡಾ:ಪಿ ಅನಂತಕೃಷ್ಣ ಭಟ್,**

**ಸಂವಿಧಾನ ತಜ್ಞರು,**

**ಆಧಾರ:ಉದಯವಾಣಿ, ದಿನಾಂಕ 20.03.2021**

## 20. ಅಪಾರ ಮಾನವ ಸಂಪನ್ಮೂಲ, ಹಣದ ಅಪವ್ಯಯ ತಡೆ ಸಾಧ್ಯ

ಏಕಕಾಲದಲ್ಲಿ ಕೇಂದ್ರರಾಜ್ಯ ಚುನಾವಣೆಗಳನ್ನು ನಡೆಸಲು ತಾನು ಸಿದ್ಧವಿರುವುದಾಗಿ ಆಯೋಗವು ಹೇಳಿದೆ. ಇದರಿಂದ ಆರ್ಥಿಕ ನಷ್ಟದ ತಡೆ, ಚುನಾವಣಾ ಭ್ರಷ್ಟಾಚಾರಕ್ಕೂ ಕಡಿವಾಣ ಬೀಳಲಿದೆ. ಅಭಿವೃದ್ಧಿಪರ ತೀರ್ಮಾನಗಳನ್ನು ಸರ್ಕಾರಗಳು ಕೈಗೊಳ್ಳಲು ಸಾಧ್ಯವಾಗಬಹುದು. ಪದೇ ಪದೇ ಬಂದೆರಗುವ ನೀತಿ ಸಂಹಿತೆ ಭೀತಿಯೂ ಇರುವುದಿಲ್ಲ.

ಈಗ ನಡೆಯುತ್ತಿರುವ ವಿಧಾನಸಭೆಯ ಅಧಿವೇಶನವು ಹೊಸದೊಂದು ವಿಪರ್ಯಾಸಕ್ಕೆ ಸಾಕ್ಷಿಯಾಗಿದೆ. ತಮ್ಮ ವಿಷಯ ಮಂಡನೆಗೆ ಸಭಾಧ್ಯಕ್ಷರು ಅನುಮತಿ ನೀಡುತ್ತಿಲ್ಲ ಎಂದು ಪ್ರತಿಪಕ್ಷಗಳು ಗೋಳಿಡುವುದು ಸಹಜವಾಗಿತ್ತು. ಆದರೆ ಮೊನ್ನೆಯ ಅಧಿವೇಶನ ಇದಕ್ಕೆ ಪರ್ಯಾಯದಂತಿತ್ತು. ಸಭಾಧ್ಯಕ್ಷರಾದ ವಿಶ್ವೇಶ್ವರ ಹೆಗಡೆ, ಕಾಗೇರಿ ಅವರು ಒಂದು ದೇಶ ಒಂದು ಚುನಾವಣೆ ಎಂಬ ವಿಷಯದ ಕುರಿತು ವಿಶೇಷ ಚರ್ಚೆಗೆ ಮುನ್ನುಡಿ ಹಾಡಿದ್ದರು. ಜೊತೆಗೆ ವಿಧಾನಸಭೆಯ ಮೂಲ ಉದ್ದೇಶವೇ ಅಭಿಪ್ರಾಯವನ್ನು ವ್ಯಕ್ತಪಡಿಸುವುದಾಗಿದೆ. ಮುಕ್ತವಾದ ಅವಕಾಶವನ್ನು ನೀಡುತ್ತಿದ್ದೇವೆ, ಸದನದ ಬಾವಿಗಿಳಿದು ಏಕೆ ಆಕ್ರೋಶವನ್ನು ವ್ಯಕ್ತಪಡಿಸದೆ, ಆಸನಗಳಲ್ಲಿ ಕುಳಿತು ನಿಮ್ಮ ಅಭಿಪ್ರಾಯ ವ್ಯಕ್ತಪಡಿಸಿ ಎಂದರೂ, ಕಾಂಗ್ರೆಸ್ ಶಾಸಕರು ಅದನ್ನು ಪುರಸ್ಕರಿಸುವ ಮನಸ್ಥಿತಿ ಹೊಂದಿರಲಿಲ್ಲ ಅವಕಾಶ ನೀಡಿದರೂ ಚರ್ಚಿಸುವುದಿಲ್ಲ, ಬೇರೆಯವರು ಚರ್ಚಿಸಲೂ ಬಿಡುವುದಿಲ್ಲ ಎಂಬ ಮೊಂಡುವಾದಕ್ಕೆ ಕಲಾಪ ಬಲಿಯಾಯಿತು.

ಒಂದು ದೇಶ–ಒಂದು ಚುನಾವಣೆ ಎಂಬುದು ಕೇವಲ ಚರ್ಚಾ ವಿಷಯವಲ್ಲ ಈ ದೇಶದ ಇಂದಿನ ಅಗತ್ಯತೆ ಎಂಬುದನ್ನು ಪ್ರಧಾನಿ ಮೋದಿಯವರು ಒತ್ತಿ ಹೇಳಿದ್ದಾರೆ. ಪ್ರಧಾನಿಗಳು ಕಳೆದ ಸರ್ಕಾರದ ಅವಧಿಯಿಂದಲೂ ಈ ವಿಷಯ ಪ್ರಸ್ತಾಪಿಸುತ್ತಿದ್ದಾರೆ. ಹಿಂದಿನ ರಾಷ್ಟ್ರಪತಿಗಳಾಗಿದ್ದ ಪ್ರಣಬ್ ಮುಖರ್ಜಿ ಹಾಗೂ ಇಂದಿನ ರಾಷ್ಟ್ರಪತಿ ರಾಮನಾಥ ಕೋವಿಂದ್ ಸಹ ಭಾರತಕ್ಕೆ ಇದು ಅವಶ್ಯಕ ಎಂದಿದ್ದು ಸ್ಮರಣೀಯ. ದೇಶದ ಅಭಿವೃದ್ಧಿ ಪಥದ ಮಾರ್ಗದರ್ಶಕ ಸಂಸ್ಥೆ ಎನಿಸಿಕೊಳ್ಳುವ ನೀತಿ ಆಯೋಗ ಭಾರತ ದೇಶಕ್ಕೆ ಅಭಿವೃದ್ಧಿಯ ದೃಷ್ಟಿಯಿಂದ ಒಂದು ಚುನಾವಣೆ ಎಂಬ ಪರಿಕಲ್ಪನೆ ಅವಶ್ಯಕವಾಗಿದೆ ಎಂದು ಹೇಳುತ್ತಾ ಕೆಲವು ಮಾರ್ಗದರ್ಶಕ ಸೂತ್ರಗಳನ್ನೂ ನೀಡಿದೆ. ಭಾರತದ ಕಾನೂನು ಆಯೋಗವು ಇದನ್ನು ಪ್ರಶಂಸಿಸಿದೆ. ಸಂಸದೀಯ ಕಮೀಟಿಯೂ ಇದರ ಅವಶ್ಯಕತೆಯನ್ನು ಒತ್ತಿ ಹೇಳಿದೆ.

### ಏನಿದು ಒಂದು ದೇಶ– ಒಂದು ಚುನಾವಣೆ ಪರಿಕಲ್ಪನೆ

ದೇಶದ 28 ರಾಜ್ಯಗಳು 9 ಕೇಂದ್ರಾಡಳಿತ ಪ್ರದೇಶಗಳು ಒಂದೇ ಸಮಯದಲ್ಲಿ ಚುನಾವಣೆಯನ್ನು ಎದುರಿಸುತ್ತಿಲ್ಲ. ಸರಾಸರಿ 2 ತಿಂಗಳಿನಲ್ಲಿ ನಾಲ್ಕೈದು ರಾಜ್ಯಗಳಲ್ಲಿ ಚುನಾವಣೆಯುಉ ಜರುಗುತ್ತಲೇ ಇರುತ್ತವೆ. ಹಾಗಾಗಿ ನೀತಿ ಆಯೋಗವು ಪ್ರಜಾಪ್ರಭುತ್ವ ವ್ಯವಸ್ಥೆ ಸದಾ ಚುನಾವಣಾ ಗುಂಗಿನಲ್ಲಿರುತ್ತದೆ ಎಂದಿದೆ. 1952ರಿಂದ ಪ್ರಾರಂಭವಾದ ಸಾರ್ವತ್ರಿಕ ಚುನಾವಣೆಗಳು 1967ರವರೆಗೆ ಲೋಕಸಭೆ ಹಾಗೂ ರಾಜ್ಯ ವಿಧಾನಸಭೆಗಳ ಚುನಾವಣೆಗಳನ್ನು ಒಟ್ಟಾಗಿಯೇ ಎದುರಿಸಿದ್ದವು. ನಂತರದಲ್ಲಿ ನಡೆದ ರಾಜಕೀಯ ಬೆಳವಣಿಗೆಗಳಿಂದ ಏರುಪೇರಾದವು. ಇದರ ಪರಿಣಾಮ ಚುನಾವಣಾ ಆಯೋಗವು ಸದಾ ಚುನಾವಣಾ ಪ್ರಕ್ರಿಯೆಯಲ್ಲಿಯೇ ಇರುವಂತಾಯಿತು. ಪ್ರಜಾಪ್ರಾತಿನಿಧ್ಯ ಕಾಯ್ದೆಯು ವಿಧಾನಸಭೆ ಹಾಗೂ ಸಂಸತ್ತಿನ ಅವಧಿಯ ಅಂತ್ಯಕ್ಕೆ 6 ತಿಂಗಳ ಮುಂಚಿತವಾಗಿ ಚುನಾವಣೆಯನ್ನು ಘೋಷಿಸುವ ಅಧಿಕಾರ ನೀಡಿದೆ, ಹಾಗೆಯೇ ಭಾರತದ ಸಂವಿಧಾನ ಅನುಚ್ಛೇದ 356 ಅವಧಿ ಮುಗಿದಿದ್ದರೂ 6 ತಿಂಗಳವರೆಗೆ ಚುನಾವಣೆ ಮುಂದೂಡುವ ಅಧಿಕಾರವನ್ನು ರಾಷ್ಟ್ರಪತಿಗಿದೆ. ಇವರೆಡೂ ಅಂಶಗಳನ್ನು ಗಮನಿಸಿದರೆ ಸಮಯದ ಹೊಂದಾಣಿಕೆಯೊಂದಿಗೆ ಏಕಕಾಲದ ಚುನಾವಣೆ ನಡೆಸಲು ಅವಕಾಶವನ್ನು ಕಲ್ಪಿಸದಂತಾಗಿದೆ.

ಒಂದು ದೇಶ–ಒಂದು ಚುನಾವಣೆ ಕೇವಲ ಏಕ ಕಾಲದಲ್ಲಿ ಚುನಾವಣೆಯನ್ನು ನಡೆಸುವುದು ಮಾತ್ರವಲ್ಲ, ಕೇಂದ್ರ ಚುನಾವಣಾ ಆಯೋಗ ಹಾಗೂ ರಾಜ್ಯ ಚುನಾವಣಾ ಆಯೋಗಗಳನ್ನು ಬೆಸೆಯುವಂಥದ್ದಾಗಿದೆ. ಈಗಿರುವ ಕಾನೂನಿನ್ವಯ ಕೇಂದ್ರ ಚುನಾವಣಾ ಆಯೋಗವು ಸಾರ್ವತ್ರಿಕ ಚುನಾವಣೆಗಳಿಗಾಗಿ ಚುನಾವಣಾ ಪಟ್ಟಿಯನ್ನು ಸಿದ್ದಗೊಳಿಸುತ್ತದೆ. ಅವುಗಳನ್ನು ಬೂತ್‌ಗಳೆಂದು ಕರೆಯಲಾಗುತ್ತದೆ. ರಾಜ್ಯ ಚುನಾವಣಾ ಆಯೋಗವು ಸ್ಥಳೀಯ ಸಂಸ್ಥೆಗಳ ಚುನಾವಣೆಗಳಿಗಾಗಿ ಮತದಾರ

ಪಟ್ಟಿಯನ್ನು ಸಿದ್ಧಪಡಿಸುತ್ತದೆ. ಅವುಗಳನ್ನು ವಾರ್ಡ್‌ಗಳೆಂದು ಕರೆಯಲಾಗುತ್ತದೆ. ಒಂದೇ ಮತದಾರರ ಎರಡೆರೆಡು ಪಟ್ಟಿಗಳು ಸಿದ್ಧಗೊಳ್ಳುತ್ತವೆ. ಕೇಂದ್ರ ಆಯೋಗವು ತಯಾರಿಸುವ ಅದೇ ಮತದಾರರ ಪಟ್ಟಿಯನ್ನು ರಾಜ್ಯ ಚುನಾವಣಾ ಆಯೋಗವು ವಾರ್ಡ್‌ಗಳಾಗಿ ತಯಾರಿಸುವುದಕ್ಕೆ ಅಪಾರ ಪ್ರಮಾಣದ ಹಣ ಹಾಗೂ ಮಾನವ ಸಂಪನ್ಮೂಲ ವ್ಯರ್ಥವಾಗುತ್ತಿದೆ. ಒಂದು ರಾಷ್ಟ್ರ–ಒಂದು ಚುನಾವಣೆಯನ್ನು ಜಾರಿಗೆ ತರುವುದಕ್ಕಾಗಿ ಭಾರತದ ಸಂವಿಧಾನದ ಕೆಲವು ಅನುಚ್ಛೇದಗಳನ್ನು ಹಾಗೂ ಪ್ರಜಾಪ್ರಾತಿನಿಧ್ಯ ಕಾಯ್ದೆಯ ಕೆಲವು ಕಲಂಗಳನ್ನು ತಿದ್ದುಪಡಿ ಮಾಡಬೇಕಾಗುತ್ತದೆ. ಇದರಿಂದ ಮಾನವ ಸಂಪನ್ಮೂಲ ಮತ್ತು ಹಣದ ಅಪವ್ಯಯ ತಪ್ಪಿಸಬಹುದಾಗಿದೆ.

**ಭಾರತದಲ್ಲಿ ಅನುಷ್ಠಾನಕ್ಕೆ ತರಲು ಸಾಧ್ಯವೇ:** ರಾಜ್ಯಗಳಲ್ಲಿ ಸರ್ಕಾರಗಳು ವಿಸರ್ಜನೆಗೊಂಡರೆ ಅಥವಾ ಅವಧಿಪೂರ್ವ ಚುನಾವಣೆ ಎದುರಾದರೆ ಅಂಥ ಸಂದರ್ಭ ಹೇಗೆ ಎದುರಿಸುವುದು ಎಂಬ ಗೊಂದಲಗಳಿಗೆ ನೀತಿ ಆಯೋಗ, ಕಾನೂನು ಆಯೋಗಗಳು ಮಾರ್ಗಸೂಚಿಗಳನ್ನು ನೀಡಿದೆ.

ಗ್ರಾಪಂನಿಂದ ಪಾರ್ಲಿಮೆಂಟಿನ ಎಲ್ಲ ಚುನಾವಣೆಗಳಿಗೂ ಅನ್ವಯವಾಗುವ ಮತದಾರರ ಒಂದೇ ಪಟ್ಟಿಯನ್ನು ತಯಾರಿಸುವುದು. ಸಂವಿಧಾನದ ತಿದ್ದುಪಡಿಯ ಮೂಲಕ ಆಯ್ಕೆಯಾದ ದಿನದಿಂದ ಮುಂದಿನ ಐದು ವರ್ಷಗಳ ಅವಧಿಯವರೆಗೆ ವಿಧಾನಸಭೆ ಅಥವಾ ಸಂಸತ್ತಿನ ಅವಧಿ ಎಂಬುದರ ಬದಲಾಗಿ ಸಂಸತ್ತು ಹಾಗೂ ವಿಧಾನಮಂಡಲಗಳ ಅವಧಿಯನ್ನು ನಿಗದಿತ ದಿನಾಂಕದಿಂದ ಐದು ವರ್ಷಗಳವರೆಗೆ ಎಂಬುದಾಗಿ ತಿದ್ದುಪಡಿಗೊಳಿಸಿ ಏಕಕಾಲದಲ್ಲಿ ಕೇಂದ್ರ ಮತ್ತು ರಾಜ್ಯಗಳ ಚುನಾವಣೆಯನ್ನು ಕೈಗೊಳ್ಳಲು ಸಾಧ್ಯವಾಗಲಿದೆ ಎಂದು ಶಿಫಾರಸ್ಸು ಮಾಡಿದೆ. ಉದಾಹರಣೆಗೆ ಈಗಿರುವ ಸಂಸತ್ತನ್ನು 17ನೇ ಸಂಸತ್ತು ಎಂದು ಘೋಷಿಸಲಾಗಿದೆ. ಒಂದು ರಾಷ್ಟ್ರ–ಒಂದು ಚುನಾವಣೆ ಜಾರಿಗೆ ಬಂದರೆ ಮುಂದಿನ 18ನೇ ಸಂಸತ್ತಿನ ಅವಧಿ 2024ರಿಂದ 2029ರವರೆಗೆ ಎಂದು ನಿರ್ಧಾರಿತವಾಗುತ್ತದೆ. ಎಲ್ಲ ರಾಜ್ಯಗಳ ವಿಧಾನಮಂಡಲಗಳ ಚುನಾವಣೆಯನ್ನು ಒಂದು ಅಥವಾ ಎರಡು ಹಂತಗಳಲ್ಲಿ ಅವಧಿ ವಿಸ್ತರಣೆ ಅಥವಾ ಅವಧಿ ಪೂರ್ವ ಚುನಾವಣೆಯಾಗಿ ಪರಿಗಣಿಸಿ ಏಕಕಾಲದಲ್ಲಿ ಕೈಗೊಳ್ಳಲಾಗುತ್ತದೆ. ಹೀಗೆ ಆಯ್ಕೆಯಾಗುವ ಸಂಸತ್ ಹಾಗೂ ವಿಧಾನಮಂಡಲಗಳ ಅವಧಿಯು 5 ವರ್ಷಗಳದ್ದಾಗಿರುತ್ತದೆ. ಮಧ್ಯದಲ್ಲಿ ಯಾವುದಾದರೂ ರಾಜ್ಯ ವಿಧಾನಸಭೆ ಅಥವಾ ಪಾರ್ಲಿಮೆಂಟ್ ವಿಸರ್ಜನೆಯಾದರೆ ಆಗ ನಡೆಯುವ ಉಪ ಚುನಾವಣೆಯು ಉಳಿದ ಅವಧಿಯವರೆಗೆ ಮಾತ್ರ ಮೀಸಲಿರಿಸಿ ಚುನಾವಣೆಯನ್ನು ಕೈಗೊಳ್ಳಲಾಗುತ್ತದೆ ಇಂಥ ಅಂಶ ಶಿಫಾರಸ್ಸಿನಲ್ಲಿದೆ.

ಏಕಕಾಲದಲ್ಲಿ ಕೇಂದ್ರ ಹಾಗೂ ರಾಜ್ಯ ಚುನಾವಣೆಗಳನ್ನು ನಡೆಸಲು ತಾನು ಸಿದ್ಧವಿರುವುದಾಗಿ ಕೇಂದ್ರ ಚುನಾವಣಾ ಆಯೋಗವು ಹೇಳಿದೆ. ಇದರಿಂದ ಆರ್ಥಿಕ ನಷ್ಟದ ತಡೆ, ಚುನಾವಣಾ ಭ್ರಷ್ಟಾಚಾರಕ್ಕೂ ಕಡಿವಾಣ ಬೀಳಲಿದೆ. ಅಭಿವೃದ್ಧಿಪರ ತೀರ್ಮಾನಗಳನ್ನು ಸರ್ಕಾರಗಳು ಸಾಧ್ಯವಾಗಬಹುದು. ಪದೇ ಪದೇ ಬಂದೆರಗುವ ನೀತಿ ಸಂಹಿತೆ ಭೀತಿಯೂ ಇರುವುದಿಲ್ಲ.

ಈ ಕುರಿತು ಸಾಧಕ ಬಾಧಕಗಳ ಬಗ್ಗೆ ಬೆಳಕು ಚೆಲ್ಲಬೇಕಾದ ಪ್ರಮುಖ ವಿರೋಧ ಪಕ್ಷಗಳು ಹಾಗೂ ಪ್ರಾದೇಶಿಕ ಪಕ್ಷಗಳು ತಮ್ಮ ಜವಾಬ್ದಾರಿಯಿಂದ ನುಣುಚಿಕೊಂಡಿರುವುದು ವಿಪರ್ಯಾಸವಾಗಿದೆ. ಕರ್ನಾಟಕ ವಿಧಾನಸಭೆಯಲ್ಲಾಗಬೇಕಾದ ಪ್ರಮುಖ ಚರ್ಚೆಯು ರಾಜಕೀಯ ಕಾರಣಕ್ಕಾಗಿ ಹಳಿ ತಪ್ಪಿದುದರಿಂದಾಗಿ ಅದರ ಬಗ್ಗೆ ಜನಾಭಿಪ್ರಾಯವನ್ನು ರೂಪಿಸುವ ಹೊಣೆ ಜನಸಾಮಾನ್ಯರ ಹೇಗಲೇರಿದೆ. ಹಾಗಾಗಿ ಸಾಹಿತಿಗಳ ಗೋಷ್ಠಿಗಳು ಶಾಲಾ–ಕಾಲೇಜುಗಳಲ್ಲಿ ನಡೆಯುವ ಚರ್ಚಾ ಸ್ಪರ್ಧೆಗಳು ಮಾಧ್ಯಮಗಳ ಚರ್ಚಾ ಸ್ಪರ್ಧೆ ಹಾಗೂ ಪ್ರಬಂಧ ಸ್ಪರ್ಧೆಗಳು ಮಾಧ್ಯಮಗಳ ಚರ್ಚಾ ವಿಷಯಗಳು ಒಂದು ರಾಷ್ಟ್ರ–ಒಂದು ಚುನಾವಣೆ ಎಂಬ ಪರಿಕಲ್ಪನೆಯ ಕುರಿತ ಅಭಿಪ್ರಾಯಗಳು ವ್ಯಕ್ತವಾಗಲಾರಭಿಸಿದರೆ ಆಗ ಹೊಮ್ಮುವ ಪರ ವಿರೋಧಿ ಜನಮತಕ್ಕೆ ನಿಜವಾದ ಮನ್ನಣೆ ದೊರೆಯಲಿದೆ.

**ಲೇಖಕರು ಪಿ. ರಾಜೀವ್,**

**ಮಾನ್ಯ ಶಾಸಕರು,**

**ಕುಡಚಿ**

**ಆಧಾರ:– ಉದಯವಾಣಿ, ದಿನಾಂಕ 19.03.2021**

## 21. ಪ್ರಜಾಪ್ರಭುತ್ವಕ್ಕೆ ಬಲ ತಂದರೆ ಚುನಾವಣೆಗೂ ಬೆಲೆ

ರಾಜಕಾರಣಿಗಳು ಭಾರತದಲ್ಲಿರಲಿ ಅಥವಾ ಅಮೇರಿಕಾದಲ್ಲಿರಲಿ ಯಾವುದೇ ಪಕ್ಷದಲ್ಲಿರಲಿ ಅವರೆಲ್ಲರ ಮೂಲಸ್ವಭಾವ ಒಂದೇ ರೀತಿಯಲ್ಲಿರುತ್ತದೆ; ಮಾನವಕುಲಕ್ಕೆ ಸಂಬಂಧಿಸಿದ ವ್ಯಾಪಕ ಸಂಗತಿಗಳಿಗಿಂತ ತಮ್ಮ ಬಗ್ಗೆಯೇ ಹೆಚ್ಚು ಗಮನವಿರುತ್ತದೆ ಎಂಬ ಭಾವನೆ ಇಂದು ಜನತೆಯಲ್ಲಿದೆ. ಪ್ರಸ್ತುತ ಜನರು ಪಾರದರ್ಶಕ ವ್ಯವಸ್ಥೆಗಾಗಿ ದನಿ ಎತ್ತುತ್ತಿದ್ದಾರೆ. ಪ್ರಜಾಪ್ರಭುತ್ವವು ಶ್ರೀಮಂತರು ಮತ್ತು ಬಲಿಷ್ಠರಿಗಾಗಿಯೇ ಇರುವ ಆಡಳಿತ ಪ್ರಕ್ರಿಯೆ ಎಂಬ ಅಪವಾದವಿದೆ. ಈ ಪರಿಸ್ಥಿತಿಗೆ ಭ್ರಷ್ಟಾಚಾರ ಮತ್ತು ಸ್ವಹಿತಾಸಕ್ತಿ ಕಾರಣ. ಈ ಹಿನ್ನೆಲೆಯಲ್ಲಿ ಒಂದು ದೇಶ–ಒಂದು ಚುನಾವಣೆಯ ಮಹತ್ವವನ್ನು ವಿಮರ್ಶಿಸೋಣ.

ನಮ್ಮಲ್ಲಿ ಪ್ರಜಾಪ್ರಭುತ್ವ ಆಳ್ವಿಕೆ ಇರಲು ಒಪ್ಪಿಗೆ ಇತ್ತಾದರೂ ಪ್ರಜಾಪ್ರಭುತ್ವದ ಸ್ವರೂಪದ ಬಗ್ಗೆ ಭಿನ್ನಾಭಿಪ್ರಾಯಗಳಿದ್ದವು. ದೀರ್ಘಕಾಲದ ಚರ್ಚೆಯ ನಂತರ ಸಂಸದೀಯ ಪ್ರಜಾಪ್ರಭುತ್ವ ಮಾದರಿಯನ್ನು ಅಳವಡಿಸಿಕೊಳ್ಳಲಾಯಿತು. ವಿಶ್ವದ ಮತ್ತೆಲ್ಲೂ ಕಂಡುಬರದ ಅಸಮಾನತೆ ಹಾಗೂ ಶ್ರೇಣೀಕೃತ ಸಮಾಜವಿರುವ ಭಾರತದಲ್ಲಿ ಸಮಾನ ಪ್ರಾತಿನಿಧ್ಯದ ಪರಿಕಲ್ಪನೆ ಬಹಳ ಮಹತ್ವವನ್ನು ಹೊಂದಿದೆ. ಒಬ್ಬ ವ್ಯಕ್ತಿ–ಒಂದು ಮತ ಪದ್ದತಿಯು ಇಲ್ಲಿ ಸಾರ್ವತ್ರಿಕ ಮತದಾನ ಪದ್ಧತಿ ಮೂಲ ಉದ್ದೇಶಕ್ಕಿಂತ ಹೆಚ್ಚಿನ ಪ್ರಾಮುಖ್ಯತೆ ಪಡೆದಿದೆ. ಜಾತಿ, ಮತ, ಪ್ರದೇಶ ಲಿಂಗಭೇದವಿಲ್ಲದೆ ಸ್ಪರ್ಧಿಸುವ ಸಾಧ್ಯತೆಯನ್ನು ಇದು ಮತ್ತಷ್ಟು ಭದ್ರಗೊಳಿಸುತ್ತದೆ. ಪ್ರಜಾಪ್ರಭುತ್ವದಲ್ಲಿ ಮುಂದುವರಿದ ರಾಷ್ಟ್ರಗಳಾದ ಅಮೇರಿಕ ಮಹಿಳೆಯರಿಗೆ ಮತ್ತು ಕಪ್ಪು ವರ್ಣೀಯರಿಗೆ ಮತದಾನದ ಹಕ್ಕು ನೀಡಲು 144 ವರ್ಷ ಮತ್ತು ಬ್ರಿಟನ್ 128 ವರ್ಷಗಳಷ್ಟು ಸಮಯ ತೆಗೆದುಕೊಂಡವು. ಆದರೆ ಭಾರತ ಪ್ರಜಾಪ್ರಭುತ್ವ ಸಂವಿಧಾನವನ್ನು ಒಪ್ಪಿಕೊಂಡ ಬೆನ್ನಲ್ಲೇ ಮಹಿಳೆಯರಿಗೆ ಮತದಾನದ ಹಕ್ಕನ್ನು ನೀಡಿತು. ಇದು ಭಾರತೀಯ ಸಂವಿಧಾನ ದೇಶದ ಜನರ ಮೇಲಿಟ್ಟಿರುವ ನಂಬಿಕೆ ಹಾಗೂ ವಿಶ್ವಾಸದ ಪ್ರತೀಕ.

ಭಾರತೀಯ ಸಂಸತ್ತು ಮತ್ತು ಶಾಸನಸಭೆಗಳು ಕಳೆದ 70 ವರ್ಷಗಳಲ್ಲಿ ಅನೇಕ ಬದಲಾವಣೆಗಳಿಗೆ ಸಾಕ್ಷಿಯಾಗಿವೆ. ಈಗಿನ ಚುನಾವಣಾ ಭ್ರಷ್ಟಾಚಾರಗಳಿಗೆ ಒಂದು ದೇಶ–ಒಂದು ಚುನಾವಣೆ ಸದ್ಯದ ಮಟ್ಟಿಗಿನ ಉತ್ತಮ ಪರಿಹಾರವೆಂಬ ನಿರೀಕ್ಷೆಯಿದೆ. ಹಾಗೆಂದು ಇದು ಎಲ್ಲದಕ್ಕೂ ರಾಮಬಾಣವಲ್ಲ. ಬಹುತೇಕ ಸಮಸ್ಯೆಗಳಿಗೆ ಉತ್ತರವಾಗಬಲ್ಲ ಸಾಧ್ಯತೆಯಷ್ಟೇ.

### ಒಂದು ದೇಶ–ಒಂದು ಚುನಾವಣೆ ಕೂಗಿನ ಹಿನ್ನೆಲೆ

1957ರಲ್ಲಿ ನೆಹರೂ ನೇತೃತ್ವದ ಕೇಂದ್ರ ಸರ್ಕಾರ ಕೇರಳದ ಇ.ಎಂ.ಎಸ್.ನಂಬೂದರಿಪ್ಪಾಡ್ ನೇತೃತ್ವದ ಕಮ್ಯುನಿಸ್ಟ್ ಸರ್ಕಾರವನ್ನು ವಜಾ ಮಾಡಿದ ದಿನದಿಂದ ಆರಂಭವಾದ ಚುನಾಯಿತ ರಾಜ್ಯ ಸರ್ಕಾರಗಳ ವಜಾ ಮಾಡುವ ಪರಿಪಾಠ 1971ರಲ್ಲಿ ಇಂದಿರಾ ಗಾಂಧಿಯವರು 1977 ಮೊರಾರ್ಜಿ ದೇಸಾಯಿ ನೇತೃತ್ವದ ಜನತಾ ಸರ್ಕಾರ ಹೀಗೆ ನಿರಂತರ ಚುನಾವಣೆ–ಉಪಚುನಾವಣೆಗಳಿಗೆ ನಾಂದಿ ಹಾಡಿತು.

### ಕಳಂಕದ ಮೂಲ ಚುನಾವಣೆ

ಚುನಾವಣೆ ಭ್ರಷ್ಟಾಚಾರ ಒಂದೆಡೆಯಾದರೆ, ಸಂತತಿಯ ಆಡಳಿತದ ವಿರುದ್ಧ ಪಾಂಚಜನ್ಯ ಮೊಳಗಿಸಿದ ಮಾಜಿ ಸಮಾಜವಾದಿಗಳು ನೆಹರೂ–ಇಂದಿರಾ ಕುಟುಂಬ ನಾಚಿ ತಲೆತಗ್ಗಿಸುವಂತೆ ಸಂತತಿಯ ಸಾಮ್ರಾಜ್ಯ ಪೋಷಿಸಿ ಬೆಳೆಯುತ್ತಿರುವುದು ಪ್ರಜಾಪ್ರಭುತ್ವಕ್ಕೆ ಮಾರಕವೆಂಬುದು ಸುಳ್ಳಲ್ಲ. ಜೊತೆಗೆ ಪಕ್ಷಾಂತರ ಇಂದು ಬಹುದೊಡ್ಡ ಪಿಡುಗಾಗಿದೆ. 1985ರಲ್ಲಿ ಜಾರಿಯಾದ ಪಕ್ಷಾಂತರ ನಿಷೇಧ ಕಾಯ್ದೆಗೆ ಹಲವಾರು ತಿದ್ದುಪಡಿಗಳಾಗಿದ್ದರೂ, ಅದರ ಮೂಲ ಉದ್ದೇಶವನ್ನು ಸಾಧಿಸಲಾಗಿಲ್ಲ, ಈ ಎಲ್ಲ ಕಳಂಕಗಳ ಮೂಲ ಚುನಾವಣೆಗಳು. ಸಂವಿಧಾನಕ್ಕೆ ತಂದ 73 ಮತ್ತು 74 ನೇ ತಿದ್ದುಪಡಿಯಿಂದಾಗಿ ದೇಶಾದ್ಯಂತ ಪಂಚಾಯ್ತಿ ಮಟ್ಟಗಳಲ್ಲೂ ಚುನಾವಣೆ ನಡೆಯಬೇಕಾಯಿತು. ಇದರಿಂದ ಗ್ರಾಮ ಪಂಚಾಯಿತಿಯಿಂದ ಲೋಕಸಭೆ ಮಟ್ಟದವರೆಗೆ ವಿವಿಧ ಹಂತಗಳಲ್ಲಿ ಚುನಾವಣೆ ನಡೆಸಬೇಕಾದ

ಅನಿವಾರ್ಯತೆ ಎದುರಾಗಿ, ಅಭಿವೃದ್ಧಿಗಾಗಿ ಮೀಸಲಿಟ್ಟ ಸರ್ಕಾರದ ಹಣ, ಸಂಪನ್ಮೂಲಗಳು ಚುನಾವಣಾ ಕಸರತ್ತುಗಳಲ್ಲೇ ಕಳೆದುಹೋಗುತ್ತಿದೆ.

**ಪಕ್ಷಗಳಿಂದ ಭ್ರಷ್ಟಾಚಾರಕ್ಕೆ ವೇದಿಕೆ**

ಚುನಾವಣಾ ಭ್ರಷ್ಟಾಚಾರಗಳಿಗೆ ಮೂಲ ವೇದಿಕೆಯೇ ರಾಜಕೀಯ ಪಕ್ಷಗಳೆಂದರೆ ತಪ್ಪಲ್ಲ. ಅಭ್ಯರ್ಥಿಯ ವೈಯಕ್ತಿಕ ಹಿನ್ನೆಲೆ, ಶೈಕ್ಷಣಿಕ ಹಿನ್ನೆಲೆ, ಸಾಮಾಜಿಕ ಮನ್ನಣೆ ಹೋರಾಟದ ಹಿನ್ನೆಲೆ, ಅರ್ಹತೆ ಇವ್ಯಾವುದು ಪರಿಗಣನೆಗೆ ಬಾರದೆ ಹೇಗಾದರೂ ಸರಿ ಒಟ್ಟಿನಲ್ಲಿ ಗೆಲ್ಲುವ ಸಾಮರ್ಥ್ಯವನ್ನೇ ಮಾನದಂಡವಾಗಿಸುವ ಪಕ್ಷದ ನೀತಿನಿರ್ಧಾರಗಳೇ ಮುಂದಿನೆಲ್ಲಾ ಭ್ರಷ್ಟಾಚಾರ, ವಾಮಮಾರ್ಗದಲ್ಲಿ ಸಂಪಾದನೆಗೆ ದಿಕ್ಸೂಚಿ.

**ದಡ್ಡರಾಗುವ ಲಂಚ ವಿರೋಧಿಗಳು**

ಪ್ರಜಾಪ್ರಭುತ್ವದ ಮೂಲ ಧರ್ಮವಾದ ಬಹುಸಂಖ್ಯಾತ ಸಮೂಹ ಪ್ರಭಾವವನ್ನು ಕಡೆಗಣಿಸುತ್ತದೆ. ಕೊಳ್ಳುವ ಶಕ್ತಿಯಿಲ್ಲದ ಬಹುಸಂಖ್ಯಾತರ ಅಭಿಪ್ರಾಯಗಳಿಗೆ ಬೆಲೆ ಬರುವುದಿಲ್ಲ. ಹಾಗಾಗಿ ಮಾರುವವರ ಮಾತು ಮುಖ್ಯವಾಗುತ್ತದೆ. ನೈತಿಕವಾದಗಳನ್ನು ಮಂಡಿಸುವ ಪ್ರಜಾಪ್ರಭುತ್ವದ ಸತ್ವವನ್ನು ಮೊಟಕುಗೊಳಿಸುತ್ತದೆ. ಲಂಚವನ್ನು ವಿರೋಧಿಸುವವರು ಸಮಾಜದಲ್ಲಿ ದಡ್ಡರಂತೆ ಪರಿಗಣಿಸಲ್ಪಡುತ್ತಾರೆ. ಎಂದು ಮ್ಯಾಥ್ಯೂ ಫ್ಲಿಂಡರ್ಸ್ ಪ್ರತಿದಾರನಾಗಲೀ, ಸಮಾಜವಾಗಲೀ ತನ್ನ ರಾಜಕೀಯ ಪ್ರತಿನಿಧಿಯ ಮೇಲಿನ ನೈತಿಕ ನಿಯಂತ್ರಣ ಕಳಕೊಳ್ಳಬೇಕಾಗುತ್ತದೆ. ಮುಕ್ತ ಮತ್ತು ನ್ಯಾಯಸಮ್ಮತ ಚುನಾವಣೆ ಸಾಂವಿಧಾನಿಕ ಜವಾಬ್ದಾರಿ ಮಾತ್ರವಲ್ಲ ಬದಲಿಗೆ ಸಂವಿಧಾನದ ಮೂಲತತ್ವವೂ ಹೌದು. ಇದರ ಸಾಕಾರಗೊಳಿಸುವ ಹೊಣೆ ಚುನಾವಣಾ ಆಯೋಗದ್ದು, ಆಯೋಗ ಜನತೆ, ರಾಜಕೀಯ ಪಕ್ಷಗಳಲ್ಲಿ ವಿಶ್ವಾಸ ಮೂಡಿಸುವ ಜವಾಬ್ದಾರಿ ಹೊಂದಿದೆ. ಜೊತೆಗೆ ಪ್ರಾಮಾಣಿಕ ನಂಬಿಕೆಯನ್ನು ಶಾಶ್ವತವಾಗಿ ಉಳಿಸಿಕೊಳ್ಳುವ ಅಗತ್ಯವಿದೆ.

**ಒಂದು ದೇಶ–ಒಂದು ಚುನಾವಣೆಯ ಅನುಕೂಲ–ಅನುಮಾನಗಳು;**

- ಒಂದು ಬಾರಿ ಚುನಾವಣಾ ಪ್ರಕ್ರಿಯೆ ಮುಗಿದು ಚುನಾಯಿತ ಸರ್ಕಾರಗಳು ಅಸ್ತಿತ್ವಕ್ಕೆ ಬಂದರೆ ಮುಂದಿನ ಐದು ವರ್ಷಗಳ ಕಾಲ ತಮ್ಮ ಆಡಳಿತ ಯಂತ್ರವನ್ನು ನಿರ್ವಿಘ್ನವಾಗಿ ಅಭಿವೃದ್ಧಿಕಾರ್ಯಗಳಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಳ್ಳಬಹುದು. ಸಂಪನ್ಮೂಲಗಳ ಕ್ರೋಢೀಕರಣ, ವಿನಿಯೋಗದಲ್ಲಿ ವ್ಯರ್ಥವಾಗುವಿಕೆ ತಡೆಯಬಹುದು.
- ದೇಶಾದ್ಯಂತ ಏಕಕಾಲದಲ್ಲಿ ಚುನಾವಣೆ ನಡೆಯುವುದರಿಂದ ಈಗಿನ ಹಾಗೆ ಚುನಾವಣಾ ಆಯೋಗ ಪದೇ ಪದೇ ಆಯಾ ರಾಜ್ಯಗಳ ಆಡಳಿತ ಯಂತ್ರದ ಸಹಕಾರ ಕೋರುವ ಪರಿಪಾಠ ಶಾಶ್ವತವಾಗಿ ನಿಲ್ಲುತ್ತದೆ. ಚುನಾವಣಾ ವ್ಯವಸ್ಥೆಗಳ ಗುಣಮಟ್ಟವೂ ಏರುಗತಿಯಲ್ಲಿರಲು ಸಾಧ್ಯ.
- ಇಡೀ ರಾಷ್ಟ್ರದ ಗಮನ ಒಂದೇ ವಿಚಾರದಲ್ಲಿ ತೊಡಗುವುದರಿಂದ ಚುನಾವಣೆಗಳಲ್ಲಿ ಪಾಲ್ಗೊಳ್ಳುವಿಕೆಯ ಗುಣಮಟ್ಟವೂ ವೃದ್ಧಿಸುತ್ತದೆ. ರಾಜಕೀಯ ಪಕ್ಷಗಳಲ್ಲೂ ಮುಂದಿನ ಆದ್ಯತೆಗಳು, ಪಕ್ಷ ಸಂಘಟನೆ ಮುಂತಾದ ಚಟುವಟಿಕೆಗಳಿಗೆ ಅವಶ್ಯ ಸಮಯ, ಸಂಪನ್ಮೂಲಗಳ ಕ್ರೋಢೀಕರಣಕ್ಕೆ ಸಹಕಾರಿಯಾಗುತ್ತದೆ.

**ಅನುಮಾನ:** ಭಾರತದ ಸಂವಿಧಾನ ರಾಜ್ಯಗಳಿಗೆ ಅವುಗಳದ್ದೇ ಆದ ಅಧಿಕಾರ ನೀಡಿದೆ. ಹೀಗಿರುವಾಗ, ವಿವಿಧ ಕಾರಣಗಳಿಂದಾಗಿ ಈಗಾಗಲೇ ಏಕಸೂತ್ರದಡಿಯಲ್ಲಿ ಒಂದು ದೇಶ–ಒಂದು ಕಾರ್ಡು, ಒಂದು ದೇಶ–ಒಂದು ತೆರಿಗೆ, ಒಂದು ದೇಶ–ಒಂದು ಕಾನೂನು ಎಂಬಂಥ ವ್ಯವಸ್ಥೆಗಳ ಪ್ರಕ್ರಿಯೆಗಳು ಜಾರಿಯಲ್ಲಿದ್ದು, ಒಂದು ದೇಶ–ಒಂದು ಚುನಾವಣೆ ಮುಂದೆ ಒಂದು ದೇಶ–ಒಂದೇ ಪಕ್ಷ, ಒಂದು ದೇಶ–ಒಬ್ಬ ನಾಯಕ ಎಂಬ ಪರಿಸ್ಥಿತಿ ಉದ್ಭವಿಸುವ ಅನುಮಾನ–ಆತಂಕಕ್ಕೆ ಎಡವಟ್ಟುಮಾಡಿಕೊಡುತ್ತದೆ.

ಒಂದು ದೇಶ–ಒಂದು ಚುನಾವಣೆಗೆ ಬೇಕಾದ ಸುಧಾರಣೆಗಳು

- ಆಸ್ಟ್ರೇಲಿಯ ಇಟಲಿ ದೇಶದಂತೆ ಮತದಾನ ಕಡ್ಡಾಯವಾಗಬೇಕು.
- ಶೇ.33 ರಷ್ಟು ಸ್ಥಾನಗಳನ್ನು ಮಹಿಳೆಯರಿಗೆ ಮೀಸಲಿಡಬೇಕು.
- ಚುನಾವಣಾ ಆಯೋಗ ಮತದಾರರಿಗೆ ಬಯೋಮೆಟ್ರಿಕ್ ಆಧಾರಿತ ಗುರುತಿನ ಚೀಟಿಯನ್ನು ನೀಡಬೇಕು
- ಸಂಸತ್ತು ರಾಜ್ಯ ಶಾಸನಸಭೆಗಳಿಗೆ ಏಕಕಾಲದಲ್ಲಿ ಚುನಾವಣೆ ನಡೆಸುವುದು.
- ಲೋಕಸಭೆ ಹಾಗೂ ರಾಜ್ಯ ಶಾಸನ ಸಭೆಗಳಿಗೆ 5 ವರ್ಷಗಳ ನಿರ್ಧಿಷ್ಟ ಅಧಿಕಾರಾವಧಿ ನಿಗದಿ.
- ರಾಷ್ಟ್ರಪತಿ, ಪ್ರಧಾನಮಂತ್ರಿ, ಕೇಂದ್ರ ಮಂತ್ರಿಗಳು, ರಾಜ್ಯಪಾಲರು, ಮುಖ್ಯಮಂತ್ರಿ, ರಾಜ್ಯ ಸರ್ಕಾರದ ಮಂತ್ರಿಗಳು, ಮೇಲ್ಮನೆ ಸದಸ್ಯರಿಗೆ ಗರಿಷ್ಠ 2 ಅವಧಿ ಅಥವಾ 10 ವರ್ಷಗಳ ನಿರ್ದಿಷ್ಟ ಅವಧಿ ನಿಗದಿಪಡಿಸುವುದು.
- ಬಹುಮತ ಕಳಕೊಂಡಾಗ ಆಡಳಿತ ಸರ್ಕಾರದ ಅವಿಶ್ವಾಸ ಮತವನ್ನು ಹಾಗೂ ಪ್ರತಿಪಕ್ಷಗಳು ವಿಶ್ವಾಸಮತವನ್ನೂ ಏಕಕಾಲದಲ್ಲಿಯೇ ಎದುರಿಸುವಂತಾಗಬೇಕು.
- ಶಾಸಕ/ಸಂಸದ ಪಕ್ಷಾಂತರ ಮಾಡಿದರೆ ಅಂಥವರನ್ನು ಅದೇ ಕ್ಷೇತ್ರಕ್ಕೆ ನಡೆಯುವ ಮರು ಚುನಾವಣೆಯಲ್ಲಿ ಸ್ಪರ್ಧಿಸದಂತೆ ನಿಷೇಧಿಸಬೇಕು. ಪಕ್ಷಾಂತರ ಕಾಯ್ದೆಗಟ್ಟಿಗೊಳಿಸಬೇಕು.
- 2 ವರ್ಷಗಳಿಗೂ ಹೆಚ್ಚು ಕ್ರಿಮಿನಲ್ ಮೊಕದ್ದಮೆ ಹೊತ್ತಿರುವ ವ್ಯಕ್ತಿಯು ಚುನಾವಣೆಯಲ್ಲಿ ಸ್ಪರ್ಧಿಸಲು ಅವಕಾಶ ಇರಬಾರದು.
- ಚುನಾವಣಾ ಅಕ್ರಮ ಪ್ರಕರಣ ಕೋರ್ಟ್‌ನಲ್ಲಿ ತೀರ್ಮಾನವಾಗಲು ಆರು ತಿಂಗಳ ಕಾಲಮಿತಿ ನಿಗದಿಪಡಿಸಬೇಕು.
- ಎರಡೆರಡು ಕ್ಷೇತ್ರದಲ್ಲಿ ಸ್ಪರ್ಧೆ ಕಡ್ಡಾಯವಾಗಿ ನಿಲ್ಲಿಸಬೇಕು.
- ಉದ್ಯಮಿಗಳು ಸರ್ಕಾರಿ ಅಧಿಕಾರಿಗಳು ರಾಜೀನಾಮೆ ನೀಡಿದ ಅಥವಾ ನಿವೃತ್ತಿಯಾದ ತಕ್ಷಣ ರಾಜಕೀಯ ಪ್ರವೇಶ ಮತ್ತು ಚುನಾವಣೆ ಸ್ಪರ್ಧೆ ಕನಿಷ್ಟ ಐದು ವರ್ಷ ನಿರ್ಬಂಧಿಸಬೇಕು.

**ಲೇಖಕರು:– ಡಾ:ಬಿ.ಎಲ್.ಶಂಕರ್**
**ಮಾಜಿ ಸಭಾಪತಿಗಳು,**
**ಕರ್ನಾಟಕ ವಿಧಾನಪರಿಷತ್ತು.**
**ಆಧಾರ:– ಉದಯವಾಣಿ ದಿನಾಂಕ:23.03.2021**

## 22. ರಾಷ್ಟ್ರವನ್ನು ಏಕತೆಯ ತತ್ತ್ವದಲ್ಲಿ ಸಂರಚಿಸುವ ಆಶಯ

ಸ್ವತಂತ್ರ ಭಾರತದಲ್ಲಿ ಚುನಾವಣೆ ಎಂಬುದು ಒಂದು ರಾಷ್ಟ್ರೀಯ ಹಬ್ಬ ದೇಶದಲ್ಲಿ ಹಂತ ಹಂತದ ಚುನಾವಣೆ ಎಂಬುದು ವಿವಿಧ ವರ್ಗಗಳಿಗೆ ಹಲವು ತೆರನಾದ ಅನುಕೂಲಗಳನ್ನು ಒದಗಿಸಿಕೊಡುವ ಒಂದು ಸಾಧನವಾಗಿ ರೂಪುಗೊಂಡಿದೆ. ಚುನಾವಣೆ ಎಷ್ಟೇ ದುಬಾರಿಯಾದರೂ ಸಮಸ್ಯೆಯಿಂದ ಕೂಡಿದ್ದರೂ ಚುನಾವಣೆ ಬೇಕೆ? ಬೇಡವೇ? ಎಂಬ ಚರ್ಚೆಗಳನ್ನು ವಿವಿಧ ದೃಷ್ಟಿಕೋನಗಳಿಂದ ನೋಡಲಾಗಿದೆ. ಯಾವುದೇ ಅಧ್ಯಯನ ಸಮೀಕ್ಷೆಗಳಿಂದ ಚುನಾವಣೆಯ ಉದ್ದ-ಅಗಲಗಳನ್ನು ಇನ್ನೂ ಸರಿಯಾಗಿ ಅರ್ಥೈಸಿಕೊಳ್ಳಲು ಸಾಧ್ಯವಾಗಿಲ್ಲ ಚುನಾವಣೆಯ ಮುನ್ನ ಮತ್ತು ಅನಂತರ ನಡೆದಿರುವ ಎಲ್ಲ ಚಟುವಟಿಕೆಗಳನ್ನು ಗಮನಿಸಿದರೆ ಕೆಲವೊಂದು ಪರಿಣಾಮಕಾಗಿ ಬದಲಾವಣೆಯನ್ನು ತರಲು ಶಕ್ತವಾಗಿದೆ ಹಾಗೂ ದೇಶದ ರಾಜಕೀಯ ಬದುಕಿಗೆ ಅತ್ಯಂತ ಅರ್ಥಪೂರ್ಣವಾದ ಕೊಡುಗೆಯನ್ನು ಇದು ನೀಡಿದೆ.

ಅತೀ ಹೆಚ್ಚು ಸಂದರ್ಭದಲ್ಲಿ ಚುನಾವಣೆಯು ಪ್ರಜಾಪ್ರಭುತ್ವವನ್ನು ಉಳಿಸಿ ಬೆಳೆಸುವ ಏಕೈಕ ಸಾಧನ ಎಂದು ಪರಿಗಣಿಸಿ ಪ್ರಜಾಪ್ರಭುತ್ವ ಉಳಿಯುವುದೇ ಚುನಾವಣೆಯಿಂದ ಎಂದು ತೀರ್ಮಾನಿಸಲಾಗಿದೆ. ನಮ್ಮ ಚುನಾವಣೆಗಳು ತಂದೊಡ್ಡಿರುವ ಪ್ರಜಾಪ್ರಭುತ್ವದ ಬಗ್ಗೆ ಹಲವಾರು ವಿಮರ್ಶೆಗಳು ಈಗಾಗಲೇ ರಾಜಕೀಯ ಸಾಂಸ್ಕೃತಿಕ, ಧಾರ್ಮಿಕ, ಶೈಕ್ಷಣಿಕ ಮತ್ತು ಅಭಿವೃದ್ಧಿ ಚುನಾವಣೆಗಳು ನಡೆದಿರುವ, ನಡೆಯುತ್ತಿರುವ ಇವತ್ತಿನ ಸಂದರ್ಭದಲ್ಲಿ ಒಂದು ರಾಷ್ಟ್ರ-ಒಂದು ಚುನಾವಣೆ ವಿಷಯವಾಗಿ ಚರ್ಚೆ ಆರಂಭಗೊಂಡು ಮೂರು ಪ್ರಮುಖ ವಿಷಯಗಳನ್ನು ಮುನ್ನೆಲೆಗೆ ತಂದಿದೆ.

ಮೊದಲನೆಯದು ವೈವಿಧ್ಯತೆಯ ಹೆಸರಲ್ಲಿ ನಾವು ಕಳೆದುಕೊಳ್ಳುತ್ತಿರುವ ಪ್ರೀತಿ ವಿಶ್ವಾಸ, ಸಮಾನತೆ, ಪರಸ್ಪರ ಗೌರವಗಳು ಮತ್ತು ಕೇವಲ ಹಕ್ಕುಗಳಿಗೆ ಕೇಂದ್ರೀಕೃತವಾದ ಹೋರಾಟಗಳು ದೇಶದಲ್ಲಿ ಆಂತರಿಕ ಬಿಕ್ಕಟ್ಟುಗಳನ್ನು ಸೃಷ್ಟಿ ಮಾಡುತ್ತಿವೆ. ಅದುದರಿಂದ ಒಂದು ಚುನಾವಣೆ ಏಕತೆಯನ್ನು ತರುವುದಾದರೆ ಎಲ್ಲರಿಗೂ ಸಮಾನವಾದ ಅಸ್ತಿತ್ವವನ್ನು ಕೊಡುವುದಾದರೆ ಈ ಪ್ರಾಜೆಕ್ಟ್ ವಿಶ್ವಕ್ಕೆ ಮಾದರಿಯಾಗುವುದರಲ್ಲಿ ಸಂದೇಹವಿಲ್ಲ. ನಮ್ಮೊಳಗಿನ ಅಸಂತೋಷ ಪರಸ್ಪರ ದ್ವೇಷ ಮತ್ತು ಅಪನಂಬಿಕೆಗಳು ಮಾಯವಾಗುವ ಒಂದು ರಾಜಕೀಯ ಸಂಸ್ಕೃತಿ ಈ ಚುನಾವಣೆಯಿಂದ ಹೊರಹೊಮ್ಮಿದರೆ ಇದಕ್ಕಿಂತಲೂ ಅತೀ ದೊಡ್ಡ ಸಂತೋಷದ ವಿಷಯ ಬೇರೇನಿದೆ. ಚುನಾವಣೆಗಳನ್ನು ತಿರಸ್ಕರಿಸುವವರು ಮತ್ತು ಇದನ್ನು ಅತ್ಯಂತ ಸರಳವಾಗಿ ಪರಿಗಣಿಸುವವರು ಈ ರಾಜಕೀಯ ಸಂಸ್ಕೃತಿಯ ಭಾಗವಾಗುತ್ತಾರೆ ಮತ್ತು ಒಳಗೊಳ್ಳುವಿಕೆಯ ಸಂಸ್ಕೃತಿಗೆ ದಾರಿಮಾಡಿಕೊಡುತ್ತಾರೆ.

ಎರಡನೆಯದು, ಚುನಾವಣೆಯ ಇಲ್ಲಿನ ತನಕದ ಪ್ರಯಾಣವನ್ನು ಪರಿಶೀಲಿಸಿದರೆ ಅದು ರಾಜಕೀಯವಾಗಿ ಸಮಾಜವನ್ನು ಡೋಲಾಯಮಾನ ಸ್ಥಿತಿಗೆ ತಂದೊಡ್ಡಿದೆ ಎಂಬ ಅಂಶ ಸ್ಪಷ್ಟವಾಗುತ್ತದೆ. ಚುನಾವಣೆಯ ಪ್ರಕ್ರಿಯೆಗಳು ಮತ್ತು ಗೆಲ್ಲುವ ಭರಾಟೆಯಲ್ಲಿ ಹಾಗೂ ಪ್ರಚಾರದ ಹೆಸರಲ್ಲಿ ಈ ದೇಶದಲ್ಲಿ ನಾವು ಹುಟ್ಟು ಹಾಕಿರುವ ಹಣ, ಜಾತಿ, ಧರ್ಮ ಮತ್ತು ರಾಜಕೀಯ ಹಿಂಸೆಗಳು ಲೆಕ್ಕಕ್ಕಿಂತಲೂ ಮಿಗಿಲಾಗಿವೆ. ಭಾರತದಲ್ಲಿ ಚುನಾವಣೆ ಯಾಕೆ ಇಷ್ಟು ಆಕರ್ಷಕವಾಗುತ್ತಿದೆ. ಇದರ ಮೂಲ ಭೂತ ಅಂಶವೇನು ಎಂಬುದನ್ನು ಗಮನಿಸಿದರೆ ಬಹುಶಃ ಜನ ಸೇವೆ ಎನ್ನುವುದಕ್ಕಿಂತಲೂ ವೈಯಕ್ತಿಕವಾಗಿ ಬಾಳುತ್ತಿರುವ ಎಲ್ಲ ಸಮುದಾಯಗಳನ್ನು ರಾಷ್ಟ್ರದ ಹೆಸರಿನಲ್ಲಿ ಒಗ್ಗೂಡುವಂತೆ ಮಾಡುವ ಬದಲು ಜನರ ನಡುವೆ ಧರ್ಮಗಳ ನಡುವೆ ವೈಷಮ್ಯವನ್ನು ಭಿತ್ತಿ ಜಾತಿಗಳನ್ನು ಅಸ್ತ್ರಗಳನ್ನಾಗಿ ಮಾಡಿಕೊಂಡು ರಾಷ್ಟ್ರ ನಿರ್ಮಾಣದ ಪ್ರಕ್ರಿಯೆಗೆ ಅತ್ಯಂತ ದೊಡ್ಡ ಅಪಾಯವನ್ನು ತಂದೊಡ್ಡಲಾಗಿದೆ. ಪ್ರತೀ ಚುನಾವಣೆಯ ಪ್ರಾರಂಭದಿಂದ ಕೊನೆಯವರೆಗೂ ಜಾತಿ, ಧರ್ಮದ ಲೆಕ್ಕಾಚಾರಗಳು ಚುನಾವಣೆಯ ಉದ್ದೇಶಗಳನ್ನು ಬಹಿರಂಗಗೊಳಿಸಿವೆ. ಆದುದರಿಂದ ದಿನಕ್ಕೊಂದು, ತಿಂಗಳಿಗೊಂದು, ವರ್ಷಕ್ಕೊಂದು ಚುನಾವಣೆಯು ರಾಷ್ಟ್ರದ ಅಡಿಗಲ್ಲಾಗಿ ಕಾರ್ಯನಿರ್ವಹಿಸಲು ಸಾಧ್ಯವಿಲ್ಲ ಎಂಬುದು ನನ್ನ ಅಭಿಪ್ರಾಯ.

ಮೂರನೆಯದು ಚಾರಿತ್ರಿಕವಾಗಿ ಭಾರತದಲ್ಲಿ ಚುನಾವಣೆಯನ್ನು ಉಳ್ಳವುವರು ಮತ್ತು ಇಲ್ಲದವರು ಎಂಬ ಪರಿಕಲ್ಪನೆಯ ಹಿನ್ನೆಲೆಯಲ್ಲಿ ಸೈದ್ಧಾಂತೀಕರಣಕ್ಕೆ ಒಳಪಡಿಸಲಾಗಿದೆ. ಅಳುವವರು ಮತ್ತು

ಅಳಿಸಿಕೊಳ್ಳುವವರು ಎಂಬ ಅರ್ಥದಂತೆ ಅಳುವವರು ಮತ್ತು ಮತದಾರರು ಎಂಬ ಎರಡು ಮತ್ತು ಅದಕ್ಕಿಂತ ಆಂತರಿಕವಾಗಿ ಹೆಚ್ಚು ವರ್ಗಗಳು ಹುಟ್ಟಿಕೊಂಡಿರುವ ಈ ದೇಶದಲ್ಲಿ ಒಳಗೊಳ್ಳುವಿಕೆಯ ರೂಪದಲ್ಲಿ ಚುನಾವಣೆಗಳು ಈ ಪರಿಸ್ಥಿತಿಯಲ್ಲಿ ಇರಲು ಸಾಧ್ಯವೇ ಇಲ್ಲ. ಈ ದೇಶದ ಅನೇಕ ಸೌಲಭ್ಯಗಳನ್ನು ಆರ್ಥಿಕವಾಗಿರುವ ಸದೃಢವಾಗಿರುವವರೇ ಪಡೆದುಕೊಂಡು ಒಂದು ಪ್ರಬಲ ವರ್ಗವಾಗಿ ಹೊರ ಹೊಮ್ಮುತ್ತಿರುವ ಕೇವಲ ಮತದಾರರಾಗಿ ತಲೆತಲಾಂತರದಿಂದ ಅವಕಾಶ ವಂಚಿತರಾಗಿರುವ ಜನರು ಬದಿಗೊತ್ತಲ್ಪಡುತ್ತಾರೆ. ತಿಂಗಳಿಗೊಮ್ಮೆ ನಡೆಯುತ್ತಿರುವ ಚುನಾವಣೆಗಳಿಂದ ಬದಿಗೊತ್ತಲ್ಪಟ್ಟಿರುವ ಜನರು ಮತ್ತೆ ಬದಿಗೊತ್ತಲ್ಪಡುತ್ತಾರೆಯೇ ಹೊರತು ಮುಖ್ಯವಾಹಿನಿಗೆ ಬರಲು ಸಾಧ್ಯವಿಲ್ಲ ಮತ್ತು ಬರುವ ರೀತಿಯ ಅವಕಾಶವನ್ನು ಯಾರು ಸೃಷ್ಟಿಸುವುದಿಲ್ಲ. ಈ ಹಿನ್ನೆಲೆಯಲ್ಲಿ ಒಂದು ದೇಶ–ಒಂದು ಚುನಾವಣೆ ದೇಶದ ಯುವಕರಿಗೆ ರಾಜಕೀಯವಾಗಿ ಒಗ್ಗೂಡಲು ವಿಶೇಷ ಎಂಬುದು ನನ್ನ ಆಶಯ.

ಭಾರತಕ್ಕೆ ಯಾವ ಮಾದರಿಯ ಪ್ರಜಾಪ್ರಭುತ್ವ ಬೇಕು ಎಂದು ಕೇಳುವ ರೀತಿಯಲ್ಲೇ ಯಾವ ರೀತಿಯ ಚುನಾವಣೆ ಬೇಕು ಎಂದು ಕೇಳುವ ರೀತಿಯಲ್ಲೇ ಯಾವ ರೀತಿಯ ಚುನಾವಣೆ ಬೇಕು ಎಂದು ಕೇಳುವುದೂ ಅಷ್ಟೇ ಮುಖ್ಯ ಸ್ವಾತಂತ್ರ್ಯಾನಂತರ ಸುಮಾರು 60ರ ದಶಕರವರೆಗೂ ಕೇಂದ್ರ ಮತ್ತು ರಾಜ್ಯ ಸರ್ಕಾರಗಳಿಗೆ ಒಂದೇ ಕಾಲದಲ್ಲಿ ಚುನಾವಣೆಗಳೂ ನಡೆದಿವೆ. ಅನಿವಾರ್ಯ ರಾಜಕೀಯ ಕಾರಣಗಳಿಂದ ಅನಂತರದ ಕಾಲದಲ್ಲಿ ಚುನಾವಣೆಗಳು ಬೇರೆ ಬೇರೆ ಕಾಲದಲ್ಲಿ ನಡೆದಿವೆ ಮತ್ತು ಅದರಿಂದ ದೇಶಕ್ಕೆ ಸಾಕಷ್ಟು ನಷ್ಟಗಳು ಸಂಭವಿಸಿವೆ. ಪ್ರತಿಯೊಂದು ಚುನಾವಣೆಗೂ ರಾಜ್ಯ ಅಥವಾ ಕೇಂದ್ರ ಸರ್ಕಾರ ಖರ್ಚು ಮಾಡುವ ಹಣದ ಮೊತ್ತವನ್ನು ಅದೆಷ್ಟೋ ಕಾಲದ ರಾಜ್ಯದ ಬಜೆಟ್ ಮೊತ್ತಕ್ಕೆ ಸರಿದೂಗಿಸಬಹುದಾಗಿದೆ. ಬೇರೆ ಬೇರೆ ಕಾಲದಲ್ಲಿ ಚುನಾವಣೆಗಳು ನಡೆದರೆ ದೇಶದ ಅಭಿವೃದ್ಧಿಗೆ ಉಂಟಾಗಬಹುದಾದ ಅಪಾಯಗಳನ್ನು ನಾವು ಕಂಡುಕೊಂಡಿದ್ದೇವೆ. ಪ್ರಾಥಮಿಕ, ಪ್ರೌಢ ಶಿಕ್ಷಣಗಳಿಗೆ ಹೂಡಿಕೆ ಮಾಡಬೇಕಾಗಿರುವ ಹಣವನ್ನು ನಿರಂತರ ನಡೆಯುವ ಚುನಾವಣೆಗಳಿಗೆ ಹೂಡಿಕೆ ಮಾಡಿದರೆ ರಾಷ್ಟ್ರದ ಶಕ್ತಿಯನ್ನು ಭವಿಷ್ಯದ ಜನತೆಯನ್ನು ವೈಚಾರಿಕತೆಯಿಂದ ಬೆಳೆಸಲು ಸಾಧ್ಯವಿಲ್ಲ.

ಒಂದು ಚುನಾವಣೆ, ಒಂದು ರಾಷ್ಟ್ರವನ್ನು ವ್ಯಾಖ್ಯಾನಿಸುವಲ್ಲಿ ಸಹಕಾರಿಯಾಗುತ್ತದೆಯೇ? ಅಭಿವೃದ್ಧಿಯು ಒಂದರ್ಥದಲ್ಲಿ ಎಲ್ಲರನ್ನು ಒಳಗೊಳ್ಳುವಂತೆ ಮಾಡಿದರೆ ಎಲ್ಲರನ್ನೂ ಭಾಗವಹಿಸುವಂತೆ ಮಾಡಿದರೆ ಒಂದು ರಾಷ್ಟ್ರ ಎಂಬ ಪರಿಕಲ್ಪನೆ ಕೇವಲ ಪರಿಕಲ್ಪನೆಯಾಗಿರದೆ ಹೃದಯಾಂತರಾಳದಲ್ಲಿ ಬೇರೂರಿ ಪ್ರಶ್ನಾತೀತ ರಾಷ್ಟ್ರೀಯತೆಯ ಮೇಲೆ ಕಟ್ಟುವ ರಾಷ್ಟ್ರವಾಗಿ ಭಾರತ ಹೊಸತನವನ್ನು ಕಂಡುಕೊಳ್ಳುವಲ್ಲಿ ಸಂದೇಹವಿಲ್ಲ.

ಇಲ್ಲಿಯ ತನಕದ ಚುನಾವಣೆ ಪೂರ್ವದ ಮತ್ತು ಆನಂತರದ ಬೆಳವಣಿಗೆಗಳು ಚುನಾವಣೆಯ ಕುರಿತ ಆಸಕ್ತಿಯನ್ನು ಕೆರಳಿಸದೆ ಚುನಾವಣೆಯೇ ಬೇಡ ಎಂಬ ತೀರ್ಮಾನಕ್ಕೆ ಬಂದಂಥ ಜನರಿರುವ ಅದೆಷ್ಟೋ ಕ್ಷೇತ್ರಗಳು ಇವೆ. ಚುನಾವಣೆಯನ್ನು ಬಹಿಷ್ಕರಿಸಿ ಪ್ರತಿಭಟಿಸುವವರ ಜೊತೆಗೆ ಚುನಾವಣೆಯ ಬಗ್ಗೆ ಒಂದಿಷ್ಟು ಆಸಕ್ತಿ ತೋರದೆ ಮತ ಚಲಾವಣೆಯನ್ನು ಮಾಡದೆ ವಿಶಿಷ್ಟ ರೀತಿಯಲ್ಲಿ ಪ್ರತಿಭಟಿಸುವ ಜನರೂ ಇದ್ದಾರೆ. ಬಹುಶಃ ಚುನಾವಣೆಗಳು ಇತ್ತೀಚಿನ ದಿನಗಳವರೆಗೂ ನೀಡಿರುವ ಕುಖ್ಯಾತ ಕೊಡುಗೆಗಳನ್ನು ಗಮನಿಸಿದರೆ ಚುರುಕು ಬುದ್ದಿಯ ಯುವಕರು ಆಕರ್ಷಿತರಾಗುವ ಬದಲು ದ್ವೇಷ ಸಾಧಿಸುವಂಥ ಜನರಾಗುತ್ತಿದ್ದಾರೆ. ಜನರಾಗಬಹುದು. ಇವನ್ನೆಲ್ಲ ತಪ್ಪಿಸುವ ಉದ್ದೇಶದಿಂದ ಒಂದು ರಾಷ್ಟ್ರ–ಒಂದು ಚುನಾವಣೆ ಅತ್ಯಂತ ಪ್ರಸ್ತುತ ಅನಿವಾರ್ಯ.

ನಮ್ಮ ಚುನಾವಣೆಗಳು ಈ ದೇಶದ ಚರಿತ್ರೆಯಾಗಬೇಕು. ಈ ದೇಶದ ಸಂಸ್ಕೃತಿಯಾಗಬೇಕು. ಧಾರ್ಮಿಕ ನಂಬಿಕೆಗಳಂತೆ ಇರಬೇಕು. ಈ ದೇಶದ ಪ್ರಮುಖ ಮೌಲ್ಯಗಳಾಗಬೇಕು. ಪ್ರೀತಿ ವಿಶ್ವಾಸದ ದ್ಯೋತಕವಾಗಬೇಕು. ಎಲ್ಲಕ್ಕಿಂತ ಮಿಗಿಲಾಗಿ ಚುನಾವಣೆಯು ಈ ದೇಶದ ವ್ಯಕ್ತಿಯ ಪ್ರತಿಯೊಬ್ಬನ ಕರ್ತವ್ಯದ ಭಾಗವಾಗಬೇಕು ಎನ್ನುವ ಆಶಯಗಳನ್ನು ಒಂದು ರಾಷ್ಟ್ರ–ಒಂದು ಚುನಾವಣೆ ಎಂಬ ಪರಿಕಲ್ಪನೆ ಒಳಗೊಂಡಿದೆ ಎಂಬುದು ಸಾಬೀತಾಗಿರುವುದರಿಂದಲೇ ಯುವಜನರ ಪರವಾಗಿ, ಅವರ ಭವಿಷ್ಯದ ಹಿತದೃಷ್ಟಿಯಿಂದ ಈ ರಾಷ್ಟ್ರದ ಹಿತದೃಷ್ಟಿಯಿಂದ ಒಬ್ಬ ಮತದಾರನಾಗಿ ಈ ಪರಿಕಲ್ಪನೆಯೊಡನೆ ನಾನಿದ್ದೇನೆ.

ಡಿಜಿಟಲ್ ಇಂಡಿಯಾದ ಪ್ರಾಜೆಕ್ಟ್‌ನ ಒಳಗಡೆ ಈ ಒಂದು ರಾಷ್ಟ್ರ–ಒಂದು ಚುನಾವಣೆಯನ್ನು ತರಬಹುದಾದರೆ ಒಂದು ನಿರ್ದಿಷ್ಟ ಸಮಯದೊಳಗೆ ಮನೆಯಿಂದಲೇ ಅಥವಾ ಕಾರ್ಯನಿರ್ವಹಿಸುವ ಕ್ಷೇತ್ರದಿಂದಲೇ ಮತ ಹಾಕುವ ಹೊಸ ಡಿಜಿಟಲ್ ವ್ಯವಸ್ಥೆಯನ್ನು ಪರಿಚಯಿಸಿದರೆ ಇನ್ನುಳಿದ ಎಲ್ಲ ಸಮಸ್ಯೆಗಳನ್ನು ಪರಿಹರಿಸಬಹುದು. ಮೊಬೈಲ್ ಫೋನ್‌ನಲ್ಲಿ ಪ್ರಪಂಚ ಸೃಷ್ಟಿಸುತ್ತಿರುವ ನಮಗೆ ಒಂದು ರಾಷ್ಟ್ರ–ಒಂದು ಚುನಾವಣೆ ಅನಗತ್ಯ ಚರ್ಚೆಗೆ ಒಳಗಾಗುವುದು ಬೇಡ ಎಂಬುದು ನನ್ನ ಆಶಯ. ನನ್ನ ಭಾರತ ನನ್ನ ಹಕ್ಕು ಎಂಬಂತೆ ಅತ್ಯಂತ ಪಾರದರ್ಶಕತೆಯಿಂದ ಮತದಾನ ಮಾಡೋಣ– ಒಂದು ರಾಷ್ಟ್ರ–ಒಂದು ಚುನಾವಣೆಗೆ ಬೆಂಬಲವಾಗೋಣ.

**ಲೇಖಕರು:– ಪ್ರೋ.ಪಿ.ಎಲ್.ಧರ್ಮ,**
**ಪ್ರಾಧ್ಯಾಪಕರು, ರಾಜ್ಯ ಶಾಸ್ತ್ರ ವಿಭಾಗ,**
**ಮಂಗಳೂರು ವಿಶ್ವವಿದ್ಯಾಲಯ.**
**ಆಧಾರ:–ಉದಯವಾಣಿ ದಿನಾಂಕ: 24.03.2021**

## 23. ಒಂದು ರಾಷ್ಟ್ರ ಒಂದು ಎಲೆಕ್ಷನ್; ಬದಲಾವಣೆಗೆ ನಾಂದಿ

ರಾಷ್ಟ್ರದ ಹಿತಾಸಕ್ತಿಯ ಹಿನ್ನೆಲೆಯಲ್ಲಿ ಕೆಲವೊಮ್ಮೆ ಅನವಶ್ಯಕ ಚರ್ಚೆಗಳು ಕಾಲಹರಣಕ್ಕೆ ಕಾರಣವಾಗುತ್ತದೆ. ಒಂದು ರಾಷ್ಟ್ರ ಒಂದು ಚುನಾವಣೆ ಈ ಚರ್ಚೆಗಳಿಂದ ಹೊರತಾಗಿರಬೇಕಾದ್ದು ಹಾಗೆಂದಾಕ್ಷಣ ಇದು ಪ್ರಜಾಪ್ರಭುತ್ವಿಕ ವಿರೋಧಿ ನಿಲುವಲ್ಲ.

ಲೋಕಸಭೆ ಹಾಗೂ ರಾಜ್ಯಗಳ ವಿಧಾನಸಭೆಗಳ ಚುನಾವಣೆಗಳನ್ನು ಏಕಕಾಲಿಕವಾಗಿ ನಡೆಸಬೇಕೆಂಬ ಚರ್ಚೆ ಹೊಸತೇನಲ್ಲ 1967ರವರೆಗೆ ಭಾರತದಲ್ಲಿ ಚುನಾವಣೆಗಳು ಇದೇ ದಿಸೆಯಲ್ಲಿ ನಡೆದಿದ್ದವು. 1968–69ರ ಕಾಲದಲ್ಲಿ ಕೆಲವು ವಿಧಾನಸಭೆಗಳ ವಿಸರ್ಜನೆಯಿಂದ 1970ರಲ್ಲಿ ಲೋಕಸಭೆಯ ವಿಸರ್ಜನೆ ಈ ವ್ಯವಸ್ಥೆಯ ದಿಕ್ಕನ್ನು ಬದಲಿಸಿತು.

ಚುನಾವಣಾ ಆಯೋಗದ 1983ರ ವಾರ್ಷಿಕ ವರದಿ 2014 ಬಿಜೆಪಿ ಚುನಾವಣಾ ಪ್ರಣಾಳಿಕೆ, 2016ರಲ್ಲಿ ಮೋದಿ ಹೇಳಿಕೆ, 2017ರಲ್ಲಿ ನೀತಿ ಆಯೋಗದ ವರ್ಕಿಂಗ್ ಎಲ್ಲವೂ ಈ ಬಗ್ಗೆ ತಮ್ಮ ತಿಳುವಳಿಕೆಯನ್ನು ಪ್ರಕಟಿಸಿವೆ. ಈ ಚರ್ಚೆಯಲ್ಲಿರುವುದು ಕೇವಲ ಮೂರು ಅಂಶಗಳು. ಒಂದು ಈ ರೀತಿಯ ಬದಲಾವಣೆಯು (Procedural) ಪ್ರಕ್ರಿಯಾತ್ಮಕ ಪ್ರಜಾಪ್ರಭುತ್ವಕ್ಕೆ ಮಹತ್ವ ನೀಡುತ್ತದೆ. ಎರಡನೆಯದು ಈ ಮೂಲಕ ಅಸ್ತಿತ್ವಸೂಚಕ (Substantive) ಪ್ರಜಾಪ್ರಭುತ್ವಕ್ಕೆ ಧಕ್ಕೆಯಾಗುತ್ತದೆ. ಮೂರನೆಯದಾಗಿ ಈ ಮೂಲಕ ಏಕಪಕ್ಷ ಹಾಗೂ ಏಕ ವ್ಯಕ್ತಿಯ ಆಡಳಿತ ಮತ್ತೊಮ್ಮೆ ಅಪಥ್ಯ ಸಾಧಿಸುತ್ತದೆ ಎಂಬುದು.

ಮೊದಲಿಗೆ ಭಾರತದಲ್ಲಿ ಉಳಿಗಮಾನ್ಯ ರಾಜಕೀಯ ವ್ಯವಸ್ಥೆ ಸುಧಾರಿಸುವ ಹಂತದಲ್ಲಿ ಚುನಾವಣೆಗಳು ಈ ಪ್ರಕ್ರಿಯಾತ್ಮಕ ಪ್ರಜಾಪ್ರಭುತ್ವದ ತಳಹದಿಯಾಗಿದೆ. ಇದು ಅವಶ್ಯಕ. ಆದೆ, ಇದೇ ಪ್ರಜಾಪ್ರಭುತ್ವವಲ್ಲ, ಮರಗಳಿದ್ದರೆ ಕಾಡು. ಆದರೆ ಮರವೇ ಕಾಡಲ್ಲ ಎಂಬಂತೆ ಚುನಾವಣೆಗಳು ಪ್ರಜಾಪ್ರಭುತ್ವದ ಆರೋಗ್ಯ ಸೂಚಕಗಳು. ಪ್ರತಿ ಐದು ವರ್ಷಗಳಿಗೊಮ್ಮೆ ಇದು ನಡೆದರೆ ಮತದ ಹಕ್ಕನ್ನು ಚಲಾಯಿಸುವ ಜನತೆಯ ವೈಚಾರಿಕತೆ ಇದರಿಂದ ಪ್ರತಿಬಿಂಬಿಸಲ್ಪಡುತ್ತದೆ. ಪ್ರಜಾಪ್ರಭುತ್ವದ ಉಳಿವಿಕೆಗೆ ಇದು ಮೂಲ ಮಂತ್ರವಾಗುತ್ತದೆ.

ಎರಡನೆಯದಾಗಿ ಆಸ್ತಿತ್ವಸೂಚಕ (Substantive) ಪ್ರಜಾಪ್ರಭುತ್ವಕ್ಕೆ ಧಕ್ಕೆಯಾಗುವುದು. ಇಲ್ಲಿ ವಿಧಾನ ಹಾಗೂ ಲೋಕಸಭೆಗಳ ಕಾಲಮಿತಿಯನ್ನು ಐದು ವರ್ಷಗಳಿಗೆ ಶಾಶ್ವತವಾಗಿ ಮಾಡಿ, ಈ

ಕಾಲದಲ್ಲಿ ಅಸ್ತಿತ್ವದಲ್ಲಿನ ಸರ್ಕಾರಗಳು ವಿಶ್ವಾಸಮತದಲ್ಲಿ ಸೋತರೆ, ಪಕ್ಷಾಂತರ, ಸಂವಿಧಾನಿಕ ಕಾರ್ಯಗಳ ಕುಸಿಯುವಿಕೆ ಹಾಗೂ ಇನ್ನಿತರ ಕಾರಣಗಳಿಂದ ಕಾಲಾವಧಿ ಪೂರ್ಣಗೊಳಿಸದ ಸಂದರ್ಭದಲ್ಲಿ ರಾಜ್ಯವನ್ನು ರಾಷ್ಟ್ರಾಧ್ಯಕ್ಷರ ಆಡಳಿತ, ರಾಜ್ಯಪಾಲರ ಆಡಳಿತದ ಅಡಿಯಲ್ಲಿ ತರುವ ವ್ಯವಸ್ಥೆ ಪ್ರಜಾಪ್ರಭುತ್ವ ವಿರೋಧಿ ಎಂಬುದು ಈ ಚರ್ಚೆ ಮಾಡುವ ಬುದ್ದಿವಂತರು ಈಗಾಗಲೇ ಈ ನಿಟ್ಟಿನಲ್ಲಿ ಆದ ಹಲವಾರು ಸರ್ಕಾರದ ಅಪ್ರತಿನಿಧಿತ್ವತೆ ಬಗ್ಗೆ ಏನು ಮಾಡಿದ್ದಾರೆ. ಬೊಮ್ಮಾಯಿ ಕೇಸ್‌ನಲ್ಲಿ ಈ ವಿಚಿತ್ರ ಬೆಳವಣಿಗೆಗೆ ಪರಿಹಾರ ಇದೆ ಎಂದುಕೊಂಡವರಿಗೂ ಇದೂ ತಿಳಿಯಲಾರದ ಒಗಟಾಗಿದೆ.

ಇಲ್ಲಿ ಡಾ:ಬಿ.ಆರ್.ಅಂಬೇಡ್ಕರ್ ಅವರು ಹೇಳಿದಂತೆ ಸಂವಿಧಾನದ ತಪ್ಪಿಲ್ಲ. ಅದನ್ನು ತಪ್ಪಾಗಿಸುವಂತೆ ನಡೆದುಕೊಳ್ಳುವ ರಾಜಕಾರಣಿಗಳ ಜಾಣತನಕ್ಕೆ ವೈಚಾರಿಕತೆ ಹೊಂದಿರುವ ಮತದಾರನ ಪ್ರತಿಕ್ರಿಯೆಯಾದರೂ ಏನು? ಇಂತಹ ಅಸಹಾಯಕ ಪರಿಸ್ಥಿತಿಯಲ್ಲಿ ಹಣ ಮತ್ತಿತರ ಆಮಿಷಕ್ಕೆ ಬಲಿ ಬಿದ್ದು ಮತಗಳನ್ನೇ ಮಾರಿಕೊಳ್ಳುವ ಈ ಜನತೆಗೆ ಪಕ್ಷಗಳಿಗೆ ಇದರಿಂದ ಮುಕ್ತಿ ಬೇಡವೇ? ಅಥವಾ ಅಸ್ತಿತ್ವ ಸೂಚಕ ಪ್ರಜಾಪ್ರಭುತ್ವದ ಹೆಸರಿನಲ್ಲಿ ಪ್ರಜಾಪ್ರಭುತ್ವದ ಬುನಾದಿಯನ್ನೇ ಭ್ರಷ್ಟಗೊಳಿಸುವುದೇ ಸರಿಯೇ ? ಚಿಂತಿಸಿ.

ಇನ್ನು ಮೂರನೇಯದಾಗಿ ಏಕಪಕ್ಷ–ಏಕವ್ಯಕ್ತಿಯ ಪ್ರಜಾಪ್ರಭುತ್ವದ ಬಗ್ಗೆ ಭಯ ಹುಟ್ಟಿಸುವ ನಾಯಕರು ಅಧಿಕಾರದಲ್ಲಿ ಅದರ ಚಲಾವಣೆಯಲ್ಲಿ ಅಡೆತಡೆ ಸಮ ತೂಕ (ಚೆಕ್ ಆ್ಯಂಡ್ ಬ್ಯಾಲೆನ್ಸ್) ಬಗ್ಗೆ ಓದಿಕೊಳ್ಳಬೇಕು. ಮಾಂಟೆಸ್ಕ್ ಇದನ್ನೇ ತನ್ನ ಥಿಯರಿ ಆಫ್ ಸೆಪರೇಷನ್ ಆಫ್ ಪವರ್ಸ್‌ನಲ್ಲಿ ಹೇಳಿ–ಯಾವ ವ್ಯಕ್ತಿಯೂ ಏಕಪಕ್ಷವಾಗಿ ವ್ಯಕ್ತಿಯಾಗಿ ಪ್ರಜಾಪ್ರಭುತ್ವವನ್ನು ದುರುಪಯೋಗಪಡಿಸದಂತೆ ಪ್ರಜಾಪ್ರಭುತ್ವದ ಸರ್ವಾಧಿಕಾರವನ್ನು ಜನತೆಗೆ ಸಮರ್ಪಿಸಲಾಗಿದೆ ಹಾಗೂ ಅಧಿಕಾರ ವಿಭಜನೆ ಮಾಡಲಾಗಿದೆ ಎಂದಿದ್ದಾರೆ. ಹೀಗಾಗಿ ನಮ್ಮ ಒಳಿತಿಗಾಗಿ ನಾವು ಬದಲಾವಣೆ ತಂದುಕೊಳ್ಳಬೇಕು.

ಯಾವುದೇ ಬದಲಾವಣೆಯು ಪ್ರಯತ್ನ ಟೀಕೆಗಳಿಂದ ಮುಕ್ತಿಹೊಂದಿರಲಾರದು. ಹಾಗೆಯೇ ಈ ಒಂದು ರಾಷ್ಟ್ರ–ಒಂದು ಚುನಾವಣೆ ಕೂಗು ಕೂಡಾ ಆಗು–ಹೋಗುಗಳ ಬಗ್ಗೆ ಚಿಂತನೆ–ಚರ್ಚೆ, ಪರ ವಿರೋಧಗಳನ್ನು ಪರಾಮರ್ಶಿಸಬೇಕು. ಆದರೆ ಹಾಗೆ ಮಾಡುವುದಷ್ಟೇ ಪ್ರಜಾಪ್ರಭುತ್ವದ ತತ್ವ ಮೂಲಾರ್ಥ ಎಂದುಕೊಂಡರೆ ಅದು ತಪ್ಪಾಗುತ್ತದೆ. ಯಾವುದೇ ಚರ್ಚೆ– ಇತಿ–ಮಿತಿ ಹೊಂದಿದ್ದು, ನಿರ್ಧಾರ ತೆಗೆದುಕೊಳ್ಳಲು ಪೂರಕವಾಗಿರಬೇಕು. ಹಾಗಾಗದೆ ಪಕ್ಷದಲ್ಲಿ ಕೊನೆಯೇ ಇಲ್ಲದ ಚರ್ಚೆ ಬದಲಾವಣೆಯನ್ನು ಸಾಧಿಸಲಾಗದಂತಾಗಿಸುತ್ತದೆ.

ಈ ಮೇಲಿನ ಇಡೀ ಚರ್ಚೆಯ ಮೂಲಾಂಶ ಪ್ರಜಾಪ್ರಭುತ್ವ ತನ್ನಲ್ಲಿ ತಾನೇ ಪ್ರಾಯೋಗಿಕವಾಗಿ ಬದಲಾವಣೆಗೆ ಪೂರಕವಾಗಿ ಶ್ರಮಿಸದಿದ್ದರೆ ಅದರೊಳಗಿನ ತಪ್ಪುಗಳು ಇಡೀ ಪ್ರಜಾಪ್ರಭುತ್ವದ ಬುನಾದಿಯನ್ನೇ ನಾಶಗೊಳಿಸುತ್ತದೆ ಎಂಬುದನ್ನು ತಿಳಿಸುವುದಾಗಿದೆ. ಪ್ರಸ್ತುತದಲ್ಲಿ ಭಾರತದ ಪ್ರಜಾಪ್ತಭುತ್ವವು ಚುನಾವಣೆಗಳಿಂದ ಮಾತ್ರ (dominate) ಬಲಿಷ್ಟವಾಗಿದೆ ಎಂಬ ಭಾವನೆಯಡಿ ಅದರ ಆಂತರ್ಯದಲ್ಲಿನ ಉತ್ತಮ ಆಡಳಿತ, ಅಭಿವೃದ್ಧಿ ಜನಪರತೆ, ಆರ್ಥಿಕಾವಕಾಶಗಳು, ಸದಾವಕಾಶಗಳು ಬೆಳವಣಿಗೆ ಎಂಬ ಅಂಶಗಳು ಮಾಸಿ ಹೋಗಿವೆ. ಹಾಗಾಗಿ ಜನರ ಭಾವನೆಯಲ್ಲಿ ಪ್ರಜಾಪ್ರಭುತ್ವದ ಬಗ್ಗೆ ಬೇಸರಿಕೆ, ಬದಲಾಯಿಸಲಾಗದ ವ್ಯವಸ್ಥೆ ಭ್ರಷ್ಟತೆಯ ಆಗರ ಹಾಗೂ ಯಾವುದೇ ಬದಲಾವಣೆಯ ನಕಾರಾತ್ಮಕ ಎಂಬ ಭಾವ ಮೂಡಿದೆ. ಇದು ಸರಿಯಲ್ಲ ಪ್ರಜಾಪ್ರಭುತ್ವವೇ ಒಂದು ಪ್ರಯೋಗ ಅನ್ನೋದನ್ನು ನಾವು ಮರೆಯಬಾರದು.

ಭೂಪೇಂದ್ರ ಯಾದವ ಅಮಿತಾಬ್ ಕಾಂತ್ ಇವರೆಲ್ಲರೂ ಹೇಳುವಂತೆ ಪ್ರಜಾಪ್ರಭುತ್ವದಲ್ಲಿ ಚುನಾವಣೇಯ ಕಾರಣಕ್ಕಾಗಿಯೇ ಅಭಿವೃದ್ಧಿ ಕುಂಠಿತವಾಗುವುದು ಸರಿಯಾದ ಬೆಳವಣಿಗೆಯಲ್ಲ ಇದನ್ನು ಚರ್ಚಿಸಬೇಕಿಲ್ಲ.

ಆದರೆ, ಈ ಬದಲಾವಣೆ ಹೇಳಿದಷ್ಟು ಸುಲಭವೇ ಸಂವಿಧಾನದ 83ನೇ ವಿಧಿ, 172ನೇ ವಿಧಿ, 174 ವಿಧಿ 365ನೇ ವಿಧಿಗಳಲ್ಲಿ ಹಾಗೂ ಜನ ಪ್ರತಿನಿಧಿ ಕಾಯ್ದೆಗಳ ತಿದ್ದುಪಡಿ ತರದೆ ಈ ಬದಲಾವಣೆ ಸಾಧ್ಯವಿಲ್ಲ. ಸಂವಿಧಾನ ನಾವಿನ್ಯತೆ ಇದಕ್ಕೆ ಪೂರಕವಾಗಿದ್ದರೂ ಸವಾಲುಗಳಾಗಿ ಸಂಯುಕ್ತ ವ್ಯವಸ್ಥೆಯ ಮೇಲೆ ಇದರ ಪರಿಣಾಮವೇನು? ಐದು ವರ್ಷಗಳ ಗಡಸು ಕಾಲಾವಧಿ ತೀರ್ಮಾನ ಆಗುಹೋಗುಗಳು ಏನು? ಭಾರತದ ಜನಾದೇಶ ಯಾವುದನ್ನು ಬಯಸುತ್ತದೆ. ಈ ಬದಲಾವಣೆ ದೇಶ ಅಭಿವೃದ್ಧಿಗೆ ಸಾಧಕವೇ ? ಎಂಬೆಲ್ಲ ಚರ್ಚೆಗಳ ಸಾಧಕ–ಬಾಧಕ ಮುಕ್ತ ಚರ್ಚೆ ಅವಶ್ಯಕವೆಂಬುದನ್ನು ಎಲ್ಲರೂ ಮನಗಂಡಿರಲೇಬೇಕು.

ವ್ಯಕ್ತಿಗಿಂತ ಸಮುದಾಯ ಸಮುದಾಯಕ್ಕಿಂತ–ಹಳ್ಳಿ ನಗರ, ಹಳ್ಳಿ–ನಗರಕ್ಕಿಂತ–ರಾಜ್ಯ, ರಾಜ್ಯಕ್ಕಿಂತಾ ಮಿಗಿಲಾದದು ರಾಷ್ಟ್ರವೆಂದ ಪರಿಕಲ್ಪನೆ ಇರುವ ಭಾರತೀಯರಾದ ನಾವು ಕಾಲಹರಣ ಮಾಡುವ ಚರ್ಚೆಗಿಂತಾ ಬದಲಾವಣೆ ಒಳಿತಿಗಾಗಿ ಆಗಬಾರದೇಕೆ ಎಂಬ ವೈಜ್ಞಾನಿಕ ಮನೋಭಾವನೆಯಲ್ಲಿ ಮುಂದಾಲೋಚನೆ ಹೊಂದುವುದು ಅವಶ್ಯಕ ಮತದಾರ ಸೋಲಿಸಿರುವ ಪ್ರಜಾಪ್ರಭುತ್ವವನ್ನು ಮತದಾರನ ಮೂಲಕವೇ ಗೆಲ್ಲಿಸಬೇಕಿದೆ. ಹಾಗಾಗಿ ಈ ಬದಲಾವಣೆ ಅವರದೇ ಮತಬೇಕಿದೆ. ಸಂಯುಕ್ತತೆಯ ತತ್ವ–ಆಚರಣೆಗೆ ಧಕ್ಕೆ ಭಾರದಂತೆ ಈ ಬದಲಾವಣೆ ಬರುವುದರಿಂದ ಈ ಬದಲಾವಣೆ ಆಗಲೇಬೇಕಲ್ಲವೇ? ಅಭಿವೃದ್ಧಿಯೆಡೆಗೆ ಭಾರತ ಸಾಗಲೇಬೇಕಲ್ಲವೇ. ಭಯದ ಹೆಸರಿನಲ್ಲಿ ಬದುಕುವ ಬದಲಾವಣೆಯನ್ನೇ ಬಯಸದ ಸಮಾಜ ಏಳಿಗೆ ಕಾಣುವುದು ಸಾಧ್ಯವೇ

ಒಂದು ರಾಷ್ಟ್ರ ಒಂದು ಚುನಾವಣೆ ಬದಲಾವಣೆಗೆ ನಾಂದಿ ಎಂಬುದನ್ನು ಮರೆಯದೇ ಮುಂದೆ ಸಾಗುವುದೇ ಭಾರತದ ಭವಿಷ್ಯವೆಂದು ನಮ್ಮ ಅನಿಸಿಕೆ. ಟೀಕೆಗೆ ಅಹ್ವಾನವಿದೆ–ಮುಕ್ತ ಚರ್ಚೆಗೆ ಅವಕಾಶವಿದೆ. ಅದೇ ಪ್ರಜಾಪ್ರಭುತ್ವದ ಜೀವಾಳ. ಬನ್ನಿ ಬದಲಿಸೋಣ–ಬದಲಾವಣೆಯ ಭಾಗವಾಗೋಣ.

**ಲೇಖಕರು:–ಡಾ:ಹರೀಶ್ ರಾಮಸ್ವಾಮಿ,**
**ರಾಯಚೂರು ವಿವಿ ಕುಲಪತಿ**
**ಹಾಗೂ**
**ಡಾ:ಕಮಲಾಕ್ಷಿ ಜಿ.ತಡಸದ್,**
**ಪ್ರಾದ್ಯಾಪಕರು, ರಾಣಿಚೆನ್ನಮ್ಮ ವಿಶ್ವವಿಧ್ಯಾಲಯ, ಬೆಳಗಾವಿ.**
**ಆಧಾರ:– ಉದಯವಾಣಿ ದಿನಾಂಕ:27.03.2021**

## 24. ಶ್ವೇತಭವನಕ್ಕೆ ಕಪ್ಪು ಕಲೆ: ಟ್ರಂಪ್ ಬೆಂಬಲಿಗರ ಹೀನ ವರ್ತನೆ

ಜಗತ್ತಿನ ಅತಿ ಹಳೆಯ ಪ್ರಜಾಪ್ರಭುತ್ವ ಎನಿಸಿಕೊಂಡ ಅಮೆರಿಕದಲ್ಲಿ ಪ್ರಜಾಪ್ರಭುತ್ವ ಅಪಚಾರ ಎಸಗುವಂಥ ಘಟನೆ ನಡೆದಿದೆ. ಅಮೆರಿಕದ ಇತಿಹಾಸದಲ್ಲೇ ಕಂಡಿರದ ಲಗ್ಗೆ, ಹಿಂಸಾಚಾರ ಮತ್ತು ಅತಂಕದ ವಾತಾವರಣವನ್ನು ನಿರ್ಗಮಿತ ಅಧ್ಯಕ ಡೊನಾಲ್ಡ್ ಟ್ರಂಪ್ ಅವರ ಕರೆ ಮೇರೆಗೆ ಅವರ ಬೆಂಬಲಿಗರು ಸೃಷ್ಟಿಸಿದರು. ಸಂಸತ್ ಭವನಕ್ಕೆ ಏಕಾಏಕಿ ಸಾವಿರಾರು ಟ್ರಂಪ್ ಬೆಂಬಲಿಗರು ನುಗ್ಗಿ ದೊಂಬಿ ಮಾಡಿದರು. ರಾಷ್ಟ್ರಧ್ವಜಗಳನ್ನು ಹರಿದು ಹಾಕಿ ಕಿಟಕಿಗಳನ್ನು ಜಖಂಗೊಳಿಸಿ ಸಂಸದರ ಕಚೇರಿಗೆ ನುಗ್ಗಿದರು. ಹಿಂಸಾಚಾರವನ್ನು ತಡೆಯುವ ಯತ್ನದಲ್ಲಿ ಪೊಲೀಸರ ಗುಂಡಿಗೆ ನಾಲ್ಕು ಮಂದಿ ಮೃತರಾಗಿದ್ದಾರೆ. ಜೋ ಬೈಡನ್, ಕಮಲಾ ಹ್ಯಾರಿಸ್ ಅವರನ್ನು ನೂತನ ಅಧ್ಯಕ್ಷ ಹಾಗೂ ಉಪಾಧ್ಯಕ್ಷೆಯಾಗಿ ಸಂಸತ್ ಸದಸ್ಯರ ಎದುರು ಅಧಿಕೃತವಾಗಿ ಆಯ್ಕೆ ಮಾಡುವುದಕ್ಕಾಗಿ ರಿಪಬ್ಲಿಕನ್ ಮತ್ತು ಡೆಮಾಕ್ರಟಿಕ್ ಸಂಸದರು ಜಮಾವಣೆಯಾದ ಸಂದರ್ಭದಲ್ಲಿ ಇದು ನಡೆದಿದೆ. ಸಂಸದರನ್ನು ರಕ್ಷಿಸಲಾಗಿದೆ.

ಇದು ಅಮೆರಿಕದ ಪ್ರಜಾಪ್ರಭುತ್ವಕ್ಕೆ ಮಾತ್ರವಲ್ಲ; ಜಾಗತಿಕ ಇತಿಹಾಸದಲ್ಲೂ ಕಪ್ಪು ಚುಕ್ಕೆ ಎನಿಸುವಂಥ ಘಟನೆ. ಡೊನಾಲ್ಡ್ ಟ್ರಂಪ್ ಅವರು ತಮ್ಮ ಬೆಂಬಲಿಗರ ದುಂಡಾವರ್ತಿಯನ್ನು ಖಂಡಿಸುವ ಗೋಜಿಗೂ ಹೋಗಿಲ್ಲ. ಹಲವಾರು ದಿನಗಳಿಂದ ಈ ದೊಂಬಿಯನ್ನು ಪ್ರಚೋದಿಸುವಂತೆ ಟ್ವೀಟ್‌ಗಳನ್ನು ಮಾಡುತ್ತಿರುವ ಅವರು, ಹಿಂಸೆಯನ್ನು ಸೃಷ್ಟಿಸಲು ಕಾರಣರಾಗಿದ್ದಾರೆ. ನವೆಂಬರ್‌ನಲ್ಲಿ ನಡೆದ ಅಧ್ಯಕ್ಷ ಚುನಾವಣೆಯಲ್ಲಿ ಅವರ ಎದುರಾಳಿ ಡೆಮೊಕ್ರಾಟ್ ಪಕ್ಷದ ಜೋ ಬೈಡನ್ ಅವರು ಸ್ಪಷ್ಟ ಎಲೆಕ್ಟೋರಲ್ ಬಹುಮತಗಳನ್ನು ಪಡೆದು ಗೆದ್ದಿದ್ದರೂ, ಅದನ್ನು ಒಪ್ಪಿಕೊಳ್ಳಲು ಅವರು ಸಿದ್ಧರಿಲ್ಲ. ಕೋರ್ಟುಗಳು, ಅವರ ಮನವಿಯನ್ನು ತಿರಸ್ಕರಿಸಿದ್ದು, ಚುನಾವಣೆಯ ಸಾಚಾತನವನ್ನು ಎತ್ತಿ ಹಿಡಿದಿವೆ. ಜನಾದೇಶ ಹಾಗೂ ನ್ಯಾಯಾಂಗ ಆದೇಶಗಳು ತಮ್ಮ ವಿರುದ್ಧವಾಗಿದ್ದರೂ ಅವರು ಮೊಂಡುತನ ಬಿಟ್ಟಿಲ್ಲ. ಅಮೆರಿಕದ ಶ್ವೇತಭವನ ಜಗತ್ತಿನ ಅನೇಕ ಮಹಾ ಮುತ್ಸದ್ದಿ, ದಾರ್ಶನಿಕರೆನಿಸುವಂಥ ಅಧ್ಯಕ್ಷರನ್ನು ನೀಡಿದೆ. ವಸಾಹತುಶಾಹಿ ಹಿಡಿತದಿಂದ ಬಿಡಿಸಿ ಅಮೆರಿಕದ ಸಂವಿಧಾನವನ್ನು ರೂಪಿಸಿ ಕಾರ್ಯಗತಗೊಳಿಸಿ ಮೊದಲ ಅಧ್ಯಕ್ಷರಾದ ಜಾರ್ಜ್ ವಾಷಿಂಗ್ಟನ್, ಕರಿಯರ ಜೀತಪದ್ಧತಿಯನ್ನು ತೊಡೆದುಹಾಕಿ ಅಂತರ್ಯುದ್ಧವನ್ನು ಹತ್ತಿಕ್ಕಿ ಎಲ್ಲ ಪ್ರಜೆಗಳಿಗೆ ಸಮಾನ ಹಕ್ಕುಗಳನ್ನು ನೀಡಲು ಜೀವ ತೇಯ್ದ ಅಬ್ರಹಾಂ ಲಿಂಕನ್, ಯುದ್ಧಕಾಲದಲ್ಲಿ ದೇಶವನ್ನು ಮುನ್ನಡೆಸಿದ ಫ್ರಾಂಕಿನ್ ರೂಸ್‌ವೆಲ್ಟ್ ಮುಂತಾದವರು ಇಲ್ಲಿ ಆಗಿ ಹೋಗಿದ್ದಾರೆ. ಇಂಥ ಮುತ್ಸದ್ದಿಗಳನ್ನು ಪಡೆದ ಅಧ್ಯಕ್ಷ ಪೀಠದಲ್ಲಿ ಕುಳಿತ ಟ್ರಂಪ್ ತಮ್ಮ ಕ್ಷುಲ್ಲಕ ವರ್ತನೆ, ಚೀನಾ – ಇರಾನ್ ಮುಂತಾದ ದೇಶಗಳ ಜೊತೆ ನಿರಂತರ ಜಗಳಗಂಟತನ, ಗೋಡೆ ಕಟ್ಟುವಂಥ ತಿಕ್ಕಲುತನದ ನಿರ್ಧಾರಗಳು, ಮೆಕ್ಸಕನ್ನರು– ಕರಿಯರ ಮೇಲೆ ಸದಾ ದ್ವೇಷ ಸಾಧಿಸುವ ನಡೆ ಇತ್ಯಾದಿಗಳ ಮೂಲಕ ದೇಶ ಕಂಡ ವಿಕೃತ ಅಧ್ಯಕ್ಷರೆನಿಸಿದ್ದಾರೆ. ಶತಾಯಗತಾಯ ಅಧಿಕಾರ ಉಳಿಸಿಕೊಳ್ಳಲು ಹೊರಟ ಅವರ ಸರ್ವಾಧಿಕಾರ ಮನೋಭಾವ ಕೊನೆಗೂ ಸೋಲೊಪ್ಪುವಂತಾಗಿದೆ.

ಅಮೆರಿಕ ಶತಮಾನಗಳಿಂದ ಪ್ರಜಾಪ್ರಭುತ್ವವನ್ನು ಜತನವಾಗಿ ಕಾಯ್ದುಕೊಂಡಿದೆ. ಇಲ್ಲಿನ ಪ್ರಜಾಸತ್ತೆಯನ್ನು ಕಾಪಾಡಲು ಹೆಚ್ಚಿನ ನಿಯಂತ್ರಣಗಳು ಇವೆ. ಆದರೂ ಇಂತಹ ಘಟನೆ ನಡೆದಿದೆ ಎಂದಾದರೆ, ನಾವು ನಮ್ಮ ಪ್ರಜಾಪ್ರಭುತ್ವವನ್ನು ಕಾಪಾಡಿಕೊಳ್ಳುವಲ್ಲಿ ಎಷ್ಟು ಎಚ್ಚರವಾಗಿದ್ದರೂ ಸಾಲದು ಎಂಬುದೇ ನೀತಿಯಾಗಿ ಕಾಣಿಸುತ್ತದೆ. ಜಗತ್ತಿಗೇ ಬುದ್ಧಿ ಹೇಳುವ ದೊಡ್ಡಣ್ಣನ ಸ್ಥಾನದಲ್ಲಿರುವ ಅಮೆರಿಕದಲ್ಲಿ ಹೀಗಾದದ್ದು ಈ ದೊಡ್ಡ ದೇಶ ತಲೆತಗ್ಗಿಸಬೇಕಾದ ವಿಚಾರವೇ. ನಿರಂಕುಶ ಆಡಳಿತದ ಪ್ರವೃತ್ತಿಗಳು ತಮಗೆ ಸೋಲುಂಟಾಗಲಿದೆ ಎಂಬುದು ಗೊತ್ತಾದಾಗ ಹಿಂಸೆಯ ಹಾದಿ ಹಿಡಿಯುತ್ತವೆ. ಜನಾದೇಶವನ್ನು ಒಪ್ಪಿ ನಡೆಯುವುದರಲ್ಲಿ ಘನತೆಯಿದೆ. ಆದರೆ ಟ್ರಂಪ್ ವರ್ತನೆ ಅಮೆರಿಕಕ್ಕೆ ಒಂದು ಕಳಂಕವಾಗಿ ಉಳಿಯಲಿದೆ. ಮುಂದೆಂದೂ ಯಾವ ನಾಯಕನೂ ಇಂಥ ಗೌರವರಹಿತ ವರ್ತನೆ ತೋರಬಾರದು ಎಂಬುದನ್ನು ಕಲಿಸಿದೆ.

**ಆಧಾರ:– ಪ್ರಜಾವಾಣಿ, ದಿನಾಂಕ:27.03.2021**

* * * * *